# ಪುರಂದರದಾಸರ ಪ್ರತಿಮಾಲೋಕ

[ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಅಧ್ಯಯನ ಪ್ರಬಂಧ]

ಸಂಶೋಧಕಿ :

ಸುಪ್ರಿಯಾ ನಾಗರಹಳ್ಳಿ

ಮಾರ್ಗದರ್ಶಕರು

ಡಾ. ಎಸ್.ಎಸ್. ಅಂಗಡಿ



ಭಾಷಾನಿಕಾಯ

ಹಸ್ತಪ್ರತಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೦

# ಪುರಂದರದಾಸರ ಪ್ರತಿಮಾಲೋಕ

[ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಅಧ್ಯಯನ ಪ್ರಬಂಧ ]


ಸಂಶೋಧಕಿ :

**ಸುಪ್ರಿಯಾ ನಾಗರಹಳ್ಳಿ**





ಮಾರ್ಗದರ್ಶಕರು

**ಡಾ. ಎಸ್.ಎಸ್.ಅಂಗಡಿ**





ಭಾಷಾನಿಕಾಯ

ಹಸ್ತಪ್ರತಿ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೧೦

# ದೃಡೀಕರಣ ಪತ್ರ

ಸುಪ್ರಿಯಾ ನಾಗರಹಳ್ಳಿ ಇವರು ಪುರಂದರದಾಸರ ಪ್ರತಿಮಾಲೋಕ ಎಂಬ ಶೀರ್ಷಿಕೆಯ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗಕ್ಕೆ ಪಿ.ಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಡೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 2-8-2010

ಡಾ: ಎಸ್.ಎಸ್. ಅಂಗಡಿ
ಮಾರ್ಗದರ್ಶಕರು
ಹಸ್ತಪ್ರತಿ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
ವಿದ್ಯಾರಣ್ಯ – ೫೮೩೨೭೬

# ಪ್ರಮಾಣ ಪತ್ರ

ಪುರಂದರದಾಸರ ಪ್ರತಿಮಾಲೋಕ ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಡಾ.ಎಸ್.ಎಸ್.ಅಂಗಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗಕ್ಕೆ ಪಿ.ಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 2-8-2010

**ಸುಪ್ರಿಯಾ ನಾಗರಹಳ್ಳಿ**
ಸಂಶೋಧಕರು
ಹಸ್ತಪ್ರತಿ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩೨೭೬

# ಪರಿವಿಡಿ

## ಅಧ್ಯಾಯ–೧
## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಭಾರತಿಯ ಸಾಹಿತ್ಯವು ವೇದ ಉಪನಿಷತ್ತುಗಳು ಪುರಾಣ ಕಥನಗಳು ಹಾಗೂ ಜಾನಪದ ಸಾಹಿತ್ಯದಿಂದ ಸಮೃದ್ಧವಾಗಿದೆ. ಹಾಗೆಯೇ ಭರತ ಖಂಡದಲ್ಲಿ ಅನೇಕ ಸಾಧು ಸಂತರು, ಶರಣರು, ದಾಸರು ಜನ್ಮವೆತ್ತಿ ಭಾರತೀಯ ಸಮಾಜದ ರೀತಿ–ನೀತಿಗಳಲ್ಲಿಯ ನ್ಯೂನತೆಗಳನ್ನು ತಿದ್ದುವುದಕ್ಕಾಗಿ ಹಾಗೂ ಒಳ್ಳೆಯ ಸಮಾಜದ ನಿರ್ಮಾಣಕ್ಕಾಗಿ ಶ್ರಮಿಸಿದರು. ಸಾಮಾನ್ಯವಾಗಿ ಆಧ್ಯಾತ್ಮಿಕ ಸಾಹಿತ್ಯದ ಮೂಲ ಶಕ್ತಿ ಭಕ್ತಿಯೇ ಆಗಿದೆ. ಭಕ್ತಿಯ ಆಂದೋಲನವನ್ನು ನಡೆಸಿದ ಪ್ರಮುಖರೆಂದರೆ ತಮಿಳಿನ ಆಳ್ವಾರರು, ಹಿಂದಿಯಲ್ಲಿ ಸೂರದಾಸರು, ಬಂಗಾಳದಲ್ಲಿ ಚೈತನ್ಯರು, ಮರಾಠಿಯಲ್ಲಿ ಅನೇಕ ಅನುಬಂಧಗಳನ್ನು ರಚಿಸಿದ ಸಂತರು, ಜ್ಞಾನೇಶ್ವರರು, ರಾಜಸ್ಥಾನದ ಮೀರಾಬಾಯಿ, ತೆಲಗು ಭಾಷೆಯಲ್ಲಿ ತ್ಯಾಗರಾಜರು, ಅಣ್ಣಮಾಚಾರ್ಯರು ಹಾಗೂ ದಿಲ್ಲಿ ಮತ್ತು ಆಗ್ರಾ ಪ್ರದೇಶದ ವಾಲಿದಕ್ಕಾನಿ, ಮೀರ್ ತಾಕಿಮೀರ್ ಮುಂತಾದ ಕವಿಗಳು ಉರ್ದು ಭಾಷೆಯಲ್ಲಿ ಕಾವ್ಯ ರಚಿಸಿ ಭಾರತೀಯ ಕಾವ್ಯ ಪರಂಪರೆಯನ್ನು ಎತ್ತಿ ಹಿಡಿಯಲು ಶ್ರಮಿಸಿದರು.

ಸಾಹಿತ್ಯ ಯಾವಾಗಲೂ ದೇಶದ, ರಾಜ್ಯದ ಸಂಸ್ಕೃತಿಯನ್ನು ಬಿಂಬಿಸಲು ಸಹಕರಿಸುತ್ತಿರಬೇಕು. ಗ್ರಂಥ ಸಂಸ್ಕೃತಿ ಹಲವಾರು ಭಾಷೆ–ಸಂಪ್ರದಾಯ, ರೀತಿ–ನೀತಿಗಳನ್ನು ತಿಳಿಯುವ ಸಾಧನವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ಮಹತ್ತರವಾದದ್ದು. ಸುಮಾರು ನೂರೈವತ್ತಕ್ಕೂ ಹೆಚ್ಚು ಹರಿದಾಸರು ಅನೇಕ ಕೀರ್ತನ, ಸುಳಾದಿ, ಉಗಾಭೋಗಗಳನ್ನು ರಚಿಸಿ, ಹಾಡಿ, ತಾವು ತಿಳಿದುಕೊಂಡ ಅನುಭವ ಸತ್ವವನ್ನು ಸಾಮಾನ್ಯ ಜನರಿಗೆ ತಿಳಿಸಿ ಸಮಾಜ ಪರಿವರ್ತನೆ ಮಾಡಿದರು. ಹರಿದಾಸರು ಜನಾಂಗದ ಒಳಿತಿಗಾಗಿ ಸಂಸಾರವನ್ನು ಬಿಟ್ಟು, ಕಾಲಿಗೆ ಗೆಜ್ಜೆ ಕಟ್ಟಿ, ಕೈಯಲ್ಲಿ ತಾಳ–ತಂಬೂರಿ ಹಿಡಿದು ಸಾಮಾನ್ಯ ಜನರೊಡನೆ ಬೆರೆತು ಸಾರ್ಥಕ ಜೀವನದ ದಾರಿ ತೋರಿಸಿದರು. ವೇದ ಉಪನಿಷತ್ತುಗಳು ಮತ್ತು ಪುರಾಣ ಕಥೆಗಳಲ್ಲಿನ ಜ್ಞಾನದ ತಿರುಳನ್ನೇ ನಮಗೆ ಹಿತವಾಗುವಂತೆ ಉಣಬಡಿಸಿದರು.

ಸಂಪ್ರದಾಯಬದ್ಧ ಸಮಾಜದಲ್ಲಿ ಸಾಮಾನ್ಯ ಜನರಿಗೆ ಹಾಗೂ ಹೆಣ್ಣು ಮಕ್ಕಳಿಗೆ ಶಾಸ್ತ್ರ ತಿಳಿಯುವ ಅವಕಾಶವಿಲ್ಲದಿರುವಾಗ ದಾಸರು ಅಚ್ಚ ಕನ್ನಡದಲ್ಲಿ ಅನೇಕ ಹಾಡುಗಳನ್ನು ರಚಿಸಿ ಎಲ್ಲರಿಗೂ ತಿಳಿಯುವ ಹಾಗೆ ಸುಲಭವಾದ ಭಾಷೆಯಲ್ಲಿ ಪುರಾಣಗಳೂ ಹಾಗೂ ಉಪನಿಷತ್ತಿನ ಸಾರವನ್ನು ತಿಳಿಸಿದರು ಅವರನ್ನು ಸಾಧನೆಯ ಮಾರ್ಗಕ್ಕೆ ಹಚ್ಚಿದರು. ಈಗಿನ ಸಿ.ಡಿ, ಧ್ವನಿಸುರುಳಿಗಳು ಹಾಗೂ ಇತರ ಅನೇಕ ಮಾಧ್ಯಮಗಳು ಕಡಿಮೆ ಸಮಯದಲ್ಲಿ ಸಹಸ್ರ ಜನರನ್ನು ತಲುಪುವ ವೇಗದ ಸಂವಹನ ಸಾಧನಗಳಾಗಿವೆ. ಈ ಎಲ್ಲವುಗಳ ಅನುಕೂಲವಿರದಿದ್ದ ಆ ಕಾಲದಲ್ಲಿ ತಾವೇ ಸ್ವತಃ ಅಮೂಲ್ಯ ಸಾಹಿತ್ಯವನ್ನು ರಚಿಸಿ ದೇಶದಲ್ಲೆಲ್ಲಾ ಸಂಚರಿಸುತ್ತಾ ಕೀರ್ತನೆಗಳನ್ನು ಹಾಡುತ್ತಾ ಜ್ಞಾನ, ಭಕ್ತಿ, ವೈರಾಗ್ಯಗಳಂತಹ ರತ್ನಗಳನ್ನು ತಮ್ಮ ಮುಂದಿನ ಪೀಳಿಗೆಗೆ ಕೊಡುಗೆಯಾಗಿ ಕೊಟ್ಟರು.

ಕ್ರಿ.ಶ ೧೩ನೇ ಶತಮಾನದಲ್ಲಿ ನರಹರಿತೀರ್ಥರಿಂದ ಆರಂಭವಾದ ಕನ್ನಡ ಹರಿದಾಸ ಸಾಹಿತ್ಯವು ಮಧ್ಯದಲ್ಲಿ ಸ್ವಲ್ಪ ನಿಂತು ಹೋದರೂ ೨೦ನೇ ಶತಮಾನದವರೆಗೆ ಜೀವಂತವಾಗಿ ಬೆಳೆದು ಬಂದಿದೆ ಹಾಗೂ ಇನ್ನೂ ಬೆಳೆಯುತ್ತಿದೆ. ದಾಸ ಸಾಹಿತ್ಯದ ಬೆಳವಣಿಗೆಯಲ್ಲಿ ಪುರಂದರದಾಸರ ಕಾಲ ಉಚ್ಛ್ರಾಯ ಕಾಲ. ಪುರಂದರದಾಸರ ಸಾಹಿತ್ಯಾವಲೋಕನವನ್ನು ಮಾಡುವವರಿಗೆ ಇತಿಮಿತಿಗಳ ಕಷ್ಟ ಹೇಳತೀರದು. ಅವರ ಸಾಹಿತ್ಯ ಅಪಾರವಾದದು ಅದರ ಸ್ವಾರಸ್ಯವಂತೂ ಅಸದೃಶವಾದದ್ದು. ಪುರಂದರ ಸಾಹಿತ್ಯ, ಆಧ್ಯಾತ್ಮಿಕ ಜೀವನದ ವಿಕಾಸಕ್ಕಾಗಿರುವ ಪ್ರಮೇಯಗಳು, ಮಧ್ವ ತತ್ವಗಳು ಹಾಗೂ ಲೋಕನೀತಿ ಮುಂತಾದ ವಿಷಯಗಳನ್ನೊಳಗೊಂಡು ವಿಶಿಷ್ಟವಾಗಿರುವಂತೆಯೇ ಸಮಸ್ತ ಮಾನವ ಸಮುದಾಯದ, ಉನ್ನತಿಯನ್ನು ಸಾರಿ ಹೇಳಿರುವದರಿಂದ ಅದು ಸರ್ವಜನಾದರಣೀಯವಾಗಿದೆ.

ಎ.ಟಿ.ಪಾಟೀಲರ [೧೯೪೯] 'ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು' ಎಂಬ ಪ್ರಬಂಧವು ಹರಿದಾಸ ಸಾಹಿತ್ಯದ ಮಾತ್ರವಲ್ಲದೆ ಕನ್ನಡ ಸಾಹಿತ್ಯ ಕ್ಷೇತ್ರದ ಮೊದಲ ಸಂಶೋಧನ ಮಹಾಪ್ರಬಂಧವೆಂಬ ಐತಿಹಾಸಿಕ ಮಹತ್ವ ಹೊಂದಿದೆ. ನಂತರ ಎಚ್.ಕೆ.ವೇದವ್ಯಾಸರು [೧೯೫೫] ಧಾರವಾಡದಲ್ಲಿ ಆಗಿನ ಮುಂಬಯಿ ಸರಕಾರದವರು ಸ್ಥಾಪಿಸಿದ್ದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ 'ಕರ್ನಾಟಕದ ಹರಿದಾಸರು' ಎಂಬ ವಿಮರ್ಶಾತ್ಮಕ ಅಧ್ಯಯನವನ್ನು ಕೈಗೊಂಡರು. ೧೯೫೫ ರಿಂದ ಈಚೆ ಸುಮಾರು ಮೂವತ್ತೆಂಟು ಅಧ್ಯಯನಗಳು ದಾಸ ಸಾಹಿತ್ಯದಲ್ಲಿ ನಡೆದಿದೆ. ಪ್ರತ್ಯೇಕ ದಾಸರ ಜೀವನ ಚರಿತ್ರೆ, ಭಕ್ತಿ, ಯೋಗದರ್ಶನ ಮುಂತಾದ ವಿಷಯಗಳ ಬಗ್ಗೆ ಅಧ್ಯಯನ ಮತ್ತು ವಿಮರ್ಶೆಗಳು ನಡೆದಿವೆ.

ಪ್ರತ್ಯೇಕವಾಗಿ ಪುರಂದರದಾಸರ ಜೀವನ ಚರಿತ್ರೆ ಹಾಗೂ ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆಯ ಬಗ್ಗೆ ಅನೇಕ ವಿದ್ವಾಂಸರು ಸಂಶೋಧನೆ ಕೈಗೊಂಡಿದ್ದಾರೆ ಹಾಗೂ ಅವರ ಕೀರ್ತನೆ, ಸುಳಾದಿ, ಉಗಾಭೋಗಗಳ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ. ಅವರ ಬಗ್ಗೆ ಕೈಗೊಂಡ ಕೆಲವು ಸಂಶೋಧನಾ ಅಧ್ಯಯನಗಳು ಇಂತಿವೆ.

೧) ಶ್ರೀ. ವಿ.ಎ.ದಿವಾಣಜಿ ಯವರ 'ಪ್ರಸಾದಯೋಗ'
೨) ಶ್ರೀ. ಶಿವಕಾಂತರವರ 'ಪುರಂದರ ಮತ್ತು ಕನಕದಾಸರ ಕೀರ್ತನೆಗಳ ವಿಡಂಬನೆ'
೩) ಶ್ರೀ. ವಾಸುದೇವ ಅಗ್ನಿಹೋತ್ರಿಯವರ 'ಪುರಂದರದಾಸರು ಮತ್ತು ಶ್ರೀಮದ್ಭಾಗವತ' ಒಂದು ತೌಲನಿಕ ಅಧ್ಯಯನ.
೪) ಶ್ರೀಮತಿ. ಅಕ್ಕಮಹಾದೇವಿಯವರ 'ಪುರಂದರದಾಸ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಾಯನ '
೫) ಶ್ರೀಮತಿ. ಶೈಲಜಾ ಉಡಚಣ ಅವರ 'ಪುರಂದರದಾಸ ಮತ್ತು ಸೂರದಾಸರು' ಒಂದು ಅಧ್ಯಾಯನ.
೬) ಶ್ರೀ. ಬಸವರಾಜ ಸಬರದ ಅವರ 'ಬಸವೇಶ್ವರ ಮತ್ತು ಪುರಂದರದಾಸ'
೭) ಶ್ರೀ. ಎಚ್.ಎಸ್. ಮುರಳೀಧರ ಅವರ 'ತಂಬೂರಿ ಮೀಟಿದವ' ಪುರಂದರ ದಾಸರ ಅಭಿವ್ಯಕ್ತಿಯ ಅಧ್ಯಯನ.
ಮುಂತಾದುವುಗಳು.

ಪುರಂದರದಾಸರ ಕೃತಿಗಳ ಮೇಲೆ ನಡೆದ ಸಂಶೋಧನಾ ಪ್ರಬಂಧಗಳನ್ನು ಅಭ್ಯಾಸಿಸುವಾಗ ಅವರ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಕಂಡುಬರುವ ಭಗವಂತನ ಸ್ತುತಿ, ನವವಿಧ ಭಕ್ತಿ, ಸರ್ವಸಮರ್ಪಣಾ ಭಾವ, ನಿಷ್ಕಾಮಕರ್ಮ ಮತ್ತು ಸಾಮಾಜಿಕ ಪ್ರಜ್ಞೆ ಮುಂತಾದ ವಿಷಯಗಳು ಹೆಚ್ಚು ವಿಮರ್ಶೆಗೆ ಒಳಗಾಗಿವೆ.

ಮೇಲೆ ಉಲ್ಲೇಖಿಸಿದ ಎಲ್ಲ ಕೃತಿಗಳನ್ನು ಗಮನಿಸಿದರೆ ದಾಸ ಸಾಹಿತ್ಯದಲ್ಲಿ ಪ್ರತಿಮೆಗಳ ಕುರಿತಾಗಿ ಅಧ್ಯಯನ ನಡೆದಿಲ್ಲ ಎಂಬ ವಿಷಯ ಮನವರಿಕೆಯಾಗುತ್ತದೆ. 'ಪುರಂದರದಾಸರ ಪ್ರತಿಮಾಲೋಕ' ಎಂಬ ಈ ಸಂಶೋಧನಾ ಅಧ್ಯಯನದಲ್ಲಿ ಪುರಂದರದಾಸರ ಕೃತಿಗಳಲ್ಲಿ ಕಂಡುಬರುವ ಪ್ರತಿಮೆಗಳ ಬಗ್ಗೆ ಅಭ್ಯಸಿಸಲಾಗುವುದು. ಪ್ರತಿಮೆಗಳು ತಿಳಿಸುವ ಗೂಢಾರ್ಥಗಳು ಮತ್ತು ತತ್ವಗಳ ಮೇಲೆ ಬೆಳಕು ಚೆಲ್ಲುವ ಆಶಯವು ಇಲ್ಲಿದೆ.

ದಾಸಸಾಹಿತ್ಯ ಪರಂಪರೆಯಲ್ಲಿ ಪುರಂದರದಾಸರ ಸ್ಥಾನ ವೈಶಿಷ್ಟ್ಯಗಳನ್ನು ಗುರುತಿಸುವ ಪ್ರಯತ್ನಗಳನ್ನು ಈ ಅಧ್ಯಾಯನದಲ್ಲಿ ಸಾಕಷ್ಟು ಕಾಣಬಹುದು. ಪುರಂದರದಾಸರ ಕೃತಿಗಳಲ್ಲಿ ಬರುವ ಪ್ರತಿಮೆಗಳನ್ನು ಸಸ್ಯ ಪ್ರತಿಮೆಗಳು, ಪ್ರಾಣಿ ಪ್ರತಿಮೆಗಳು, ಸಾಮಾಜಿಕ ಹಾಗೂ ಧಾರ್ಮಿಕ ಪ್ರತಿಮೆಗಳೆಂದು ವರ್ಗೀಕರಣ ಮಾಡಿ ಅವರ ಕೃತಿಗಳಲ್ಲಿ ಕಂಡುಬರುವ ಲೋಕನೀತಿ, ಸದಾಚಾರ, ಅವರು ಪ್ರತಿಪಾದಿಸಿದ ತತ್ವಗಳು ಹಾಗೂ ಸಾಧಿಸಿದ ಆಧ್ಯಾತ್ಮಿಕ ನಿಲುವಿನ ಅವಲೋಕನದ ಹಿನ್ನಲೆಯಲ್ಲಿ ಅವರ ಸಾಹಿತ್ಯವನ್ನು ಅರಿಯುವ ಪ್ರಯತ್ನ ಹಾಗೂ ಪ್ರತಿಯೊಂದು ಕೃತಿಯನ್ನು ಪ್ರತ್ಯೇಕವಾಗಿ ಪರಿಶೀಲಿಸುವ ಕಾರ್ಯ ಕೈಗೊಳ್ಳಲಾಗಿದೆ.

ಪುರಂದರದಾಸರ ಕೃತಿಗಳು ಸಂಖ್ಯೆಯಲ್ಲಿ ಅಪಾರವಾಗಿದ್ದು ಅವುಗಳಲ್ಲಿ ಸುಮಾರು ಮೂರುನೂರಾ ಐವತ್ತರ ಹತ್ತಿರ ಕೃತಿಗಳನ್ನು ಪ್ರತ್ಯೇಕವಾಗಿ ಪ್ರತಿಮೆಗಳು ಬಿಚ್ಚುವ ಗೂಡಾರ್ಥಗಳನ್ನು ವಿವರವಾಗಿ ಅಭ್ಯಸಿಸುವ ಪ್ರಯತ್ನವು ಇದಾಗಿದೆ.

ಪುರಂದರದಾಸರ ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ ವಿಷಯಗಳಿಗೆ ಸಂಬಂಧಿಸಿದಂತೆ ಇಲ್ಲಿ ಪ್ರಸ್ತಾಪವಿದ್ದರೂ ಕೂಡ ಮುಖ್ಯವಾಗಿ ಇದು ಪ್ರತಿಮೆಗಳ ಅಧ್ಯಯನವಾಗಿದೆ. ಪ್ರಸ್ತುತ ಅವರ ಕೃತಿಗಳಲ್ಲಿ ಅಮೂರ್ತ ವಿಷಯಗಳನ್ನು ಮೂರ್ತಗೊಳಿಸುವ ಪ್ರತಿಮೆಗಳ ಬಗ್ಗೆ ಅಧ್ಯಯನ ಮಾಡುತ್ತ ಸಾಹಿತ್ಯಕ್ಕೆ ನೀಡಿದ ಅವರ ಉನ್ನತ ಕೊಡುಗೆಯನ್ನು ಕುರಿತು ಸವಿವರವಾಗಿ ವಿಶ್ಲೇಷಿಸುವುದು ಇಲ್ಲಿಯ ಮುಖ್ಯ ಉದ್ದೇಶವಾಗಿದೆ.

ಈ ಕೃತಿಯಲ್ಲಿ ಒಟ್ಟು ಒಂಬತ್ತು ಅಧ್ಯಾಯಗಳಿವೆ. ಪ್ರಸ್ತುತ ಆಧ್ಯಾಯದಲ್ಲಿ ಅಧ್ಯಾಯನದ ಉದ್ದೇಶ, ಸ್ವರೂಪ ಹಾಗೂ ವ್ಯಾಪ್ತಿಯ ಬಗ್ಗೆ ತಿಳಿಸಲಾಗಿದೆ. ಅಧ್ಯಯನಕ್ಕಾಗಿ ಪುರಂದರದಾಸರ ಕೀರ್ತನೆ, ಉಗಾಭೋಗ, ಸುಳಾದಿಗಳನ್ನು ಆಯ್ದುಕೊಳ್ಳಲಾಗಿದೆ. ಪ್ರತಿಮೆಗಳು ಕೀರ್ತನೆ, ಉಗಾಭೋಗಗಳಲ್ಲಿ ಹೇರಳವಾಗಿದ್ದು ಸುಳಾದಿಗಳಲ್ಲಿ ವಿರಳವಾಗಿವೆ.

ಎರಡನೇ ಅಧ್ಯಾಯದಲ್ಲಿ ಪ್ರತಿಮೆಗಳ ಸ್ವರೂಪ, ಲಕ್ಷಣಗಳನ್ನು ವಿವರಿಸಿಲಾಗಿದೆ. ಸಾಹಿತ್ಯ ರಚನೆಯ ಸಂದರ್ಭದಲ್ಲಿ ಪ್ರತಿಮೆ, ಸಂಕೇತಗಳಿಗೆ ಹೆಚ್ಚಿನ ಮಹತ್ವ ಕೊಡಲಾಗುತ್ತದೆ. "ತೀವ್ರವಾದ ಅನುಭವವನ್ನು ಪರಿಣಾಮಕಾರಿಯಾಗಿ ಹೇಳಬಲ್ಲ ಸಾಧನವೇ ಪ್ರತಿಮೆ". ಪ್ರತಿಮೆ ಚಿನ್ಹೆ, ಸಂಕೇತ, ಉಪಮೆ, ರೂಪಕಗಳಿಂದ

ಹೇಗೆ ಮುಂದುವರೆಯುತ್ತದೆ ಎಂಬುದನ್ನು ಇಲ್ಲಿ ವಿಮರ್ಶಿಸಲಾಗುತ್ತದೆ. ಪ್ರತಿಮೆಗಳಲ್ಲಿ ಹೋಲಿಕೆ ಮೂಲದ್ರವ್ಯವಾಗಿರುತ್ತದೆ (ಕೆಲವು ಬಾರಿ ಹೋಲಿಕೆ ಇಲ್ಲದೆಯೂ ಸಂಭವಿಸುತ್ತದೆ). ಸಂಕೇತಗಳು ರೂಪಕ ವಿಧಾನವನ್ನು ಮುಂದಕ್ಕೆ ಕೊಂಡೊಯ್ದು ಹೋಲಿಕೆಯ ವಸ್ತುವನ್ನು ಹೇಗೆ ಅರ್ಥಪೂರ್ಣವಾಗಿ ಮೂರ್ತಗೊಳಿಸುತ್ತವೆ ಎಂಬುದನ್ನು ಇಲ್ಲಿ ಅಭ್ಯಸಿಸಲಾಗುವುದು.

ಮೂರನೇಯ ಅಧ್ಯಾಯದಲ್ಲಿ ಪುರಂದರದಾಸರ ವ್ಯಕ್ತಿತ್ವ ಹಾಗೂ ಸಾಹಿತ್ಯದ ಬಗ್ಗೆ ವಿಮರ್ಶಿಸಲಾಗುವುದು ಜೊತೆಗೆ ಪುರಂದರದಾಸರ ಸಮಕಾಲೀನರಾದ ವ್ಯಾಸರಾಯರು ವಾದಿರಾಜರು, ವೈಕುಂಠದಾಸರು, ಕನಕದಾಸರು, ಗದುಗಿನ ನಾರಾಯಣಪ್ಪ ಮುಂತಾದವರ ಬಗ್ಗೆ ತಿಳಿಯಲಾಗುವುದು.

ಅಧ್ಯಾಯ ನಾಲ್ಕರಲ್ಲಿ ಪ್ರಾಣಿರೂಪಕಗಳ ಪರೀಶೀಲನೆ ಮಾಡಲಾಗಿದೆ. ಕೀರ್ತನೆಗಳ ಭಾಷೆ ಮಧ್ಯಕಾಲೀನ ಭಾಷೆ ಕರ್ನಾಟಕದ ವಿಶೇಷವಾಗಿ ಉತ್ತರ ಕರ್ನಾಟಕದ ಭಾಗದ ಹೊಸಗನ್ನಡ ಭಾಷೆ ಸರಳವೂ, ಸುಲಭವೂ ಆದ ಮಾತಿನ ರೀತಿಯಿಂದಾಗಿ ಹಾಗೂ ನಾಯಿ, ಹಂದಿ ಮುಂತಾದ ಪ್ರಾಣಿ ಪ್ರತಿಮೆಗಳಿಂದಾಗಿ ಅಮೂರ್ತ ವಿಷಯಗಳು ಜನಸಾಮಾನ್ಯರನ್ನು ನೇರವಾಗಿ ಮುಟ್ಟುವ ಕೌಶಲ್ಯವನ್ನು ಇಲ್ಲಿ ನೋಡಬಹುದು.

ಅಧ್ಯಾಯ ಐದರಲ್ಲಿ ಜಂಗಮ, ಹೊಲೆಯ, ಫಕೀರ, ತುರುಕರು, ನಾರಿ ಮುಂತಾದ ಪ್ರತಿಮೆಗಳು ಮೂಡಿಸುವ ಸಾಮಾಜಿಕ ಸಾಮರಸ್ಯವನ್ನು ಮೂರ್ತಗೊಳಿಸಲಾಗಿದೆ. ಸಮಾಜದಲ್ಲಿ ವಿವಿಧ ಮತಗಳ ನಡುವೆ ಸಾಮರಸ್ಯವಿದ್ದರೆ ಅದು ಮಾದರಿ ಸಮಾಜಕ್ಕೆ ನಾಂದಿಯಾಗುತ್ತದೆ. ಲೋಕೋದ್ಧಾರಕ್ಕಾಗಿ ಜನರ ನಡುವೆ ಸಂಚರಿಸುತ್ತಾ ತಮ್ಮ ಜೀವನವನ್ನು ಕಳೆದ ದಾಸರು ಸರ್ವಧರ್ಮಗಳ ಜನರಲ್ಲಿ ಮಾನ್ಯರಾಗಿದ್ದರು.

ಪುರಂದರದಾಸರು ತೆರೆದ ಮನಸ್ಸಿನ ಕವಿಯಾಗಿ ಒಂದು ಅಮೂಲ್ಯ ವಿಷಯ ಅಥವಾ ಒಂದು ಸತ್ಯ ಸಂಗತಿಯನ್ನು ತಿಳಿಸಲು ಸಸ್ಯ ಪ್ರತಿಮೆಗಳನ್ನು ಮಾಧ್ಯಮಗಳನ್ನಾಗಿ ಬಳಸಿಕೊಂಡರು. ಸಸ್ಯ ಪ್ರತಿಮೆಗಳು ಧ್ವನಿಸುವ ಕಾವ್ಯಾರ್ಥಗಳನ್ನು ಅಧ್ಯಾಯ ಆರರಲ್ಲಿ ವಿಶ್ಲೇಶಿಸಲಾಗುವುದು.

ವೈಷ್ಣವ ಮತದ ಆಧಾರ ಸಾಹಿತ್ಯವು ವಿಪುಲವಾಗಿದೆ. ವೇದ–ಉಪನಿಷತ್ತುಗಳು, ರಾಮಾಯಣ, ಮಹಾಭಾರತ ಮತ್ತು ಭಾಗವತ ಮುಂತಾದ ಪುರಾಣಗಳಲ್ಲಿ ಉಲ್ಲೇಖವಾದ ವಿಷಯಗಳು ಹಾಗೂ ಮಧ್ವ ತತ್ವಗಳನ್ನು ಮೂರ್ತಗೊಳಿಸಲು ದಾಸರು ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಪೌರಾಣಿಕ ಪ್ರತಿಮೆಗಳನ್ನು ಆಶ್ರಯಿಸುತ್ತಾರೆ. ಹರಿಸರ್ವೋತ್ತಮ ತತ್ವ, ಪಂಚಭೇದ, ನಾಡಿ ವಿಚಾರ ಹಾಗೂ ದಶಾವತಾರದ ವರ್ಣನೆಗಳನ್ನು ಅಧ್ಯಾಯ ಏಳರಲ್ಲಿ ಕಾಣಬಹುದಾಗಿದೆ.

ಅಧ್ಯಾಯ ಎಂಟರಲ್ಲಿ ಪ್ರತಿಮೆಗಳು ಬೀರುವ ಸಾಂಸ್ಕೃತಿಕ ಮಹತ್ವವನ್ನು ಚರ್ಚಿಸಲಾಗುವುದು. ಕೀರ್ತನೆಗಳ ದೇಶಿ ಅಭಿವ್ಯಕ್ತಿ, ಪುರಂದರದಾಸರು ಬಳಸುವ ಗಾದೆಮಾತುಗಳು, ದಾಸರ ಕಾಲದ ಉಡುಗೆ–ತೊಡುಗೆ, ಆಹಾರ ಕ್ರಮ, ವೈದ್ಯ ಪದ್ಧತಿ ಹಾಗೂ ಸಾಮಾಜಿಕ ನ್ಯೂನತೆಗಳನ್ನು ಪ್ರತಿಮೆಗಳ ಮೂಲಕ ಅಭ್ಯಾಸಿಸುವ ಪ್ರಯತ್ನ ಮಾಡಲಾಗುವುದು. ಅಧ್ಯಾಯ ಒಂಬತ್ತರಲ್ಲಿ ಈ ಮೇಲಿನ ಎಂಟೂ ಅಧ್ಯಾಯಗಳ ಒಟ್ಟು ಅಧ್ಯಯನವನ್ನೊಳಗೊಂಡಂತೆ ಕಂಡುಕೊಳ್ಳಲಾದ ಫಲಿತಗಳನ್ನು ದಾಖಲಿಸಲಾಗುತ್ತದೆ.

ಪುರಂದರದಾಸರ ಕೀರ್ತನೆಗಳನ್ನು ವರ್ಗೀಕರಣ ಮಾಡುವಾಗ ಒಂದು ಅಧ್ಯಾಯದ ಅಡಿಯಲ್ಲಿ ಕೆಲವು ವಿಷಯಗಳನ್ನು ತರುವುದು ಕಷ್ಟಸಾಧ್ಯವಾಗುತ್ತದೆ ಏಕೆಂದರೆ ಅವರ ಕೀರ್ತನೆಗಳ ಸಂಖ್ಯೆಯ ಅರ್ಧಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ವಿವಿಧ ವಿಷಯಗಳ ವಿಚಾರವನ್ನು ಅನುಭವಗಳನ್ನು ಅವರು ತಿಳಿಸುತ್ತಾರೆ. ದೇಹ, ಸಂಸಾರ ಹಾಗೂ ನಾಮಸ್ಮರಣೆಯಂತಹ ಕೆಲವು ವಿಷಯಗಳು ಹಲವಾರು ಕಡೆಯಲ್ಲಿ ಪುನರಾವರ್ತನೆಯಾಗುತ್ತವೆ. ಮಿಕ್ಕಿದೆಲ್ಲ ಕೃತಿಗಳು ಬೇರೆ ಬೇರೆ ವಿಷಯಗಳನ್ನು ಹೇಳುತ್ತವೆ. ಪುರಂದರದಾಸರ ಕೃತಿಗಳ ಇನ್ನೊಂದು ವಿಶೇಷ ಗುಣವೆಂದರೆ ಪಲ್ಲವಿಯಲ್ಲಿ ವಿಷಯವು ಕೇಂದ್ರೀಕೃತವಾಗಿದ್ದು, ವಿವರಣೆಯು ನುಡಿಗಳಲ್ಲಿರುತ್ತದೆ ಹಾಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸಂಪೂರ್ಣ ಕೀರ್ತನೆಯನ್ನು ವಿಶ್ಲೇಶಿಸುವ ಅವಶ್ಯಕತೆ ಇಲ್ಲಿ ಮೂಡುತ್ತದೆ. ಅವರ ಕೀರ್ತನೆಯ ಜಗತ್ತನ್ನು ಬಿಡಿ ಬಿಡಿ ರಚನೆಗಳ ಮೂಲಕ ಪ್ರತಿಮಾಕರಣ ಮಾಡುವ ವಿಧಾನವನ್ನು ಇಲ್ಲಿ ಮೂಡಿಸುವ ಪ್ರಯತ್ನ ಮಾಡಲಾಗುವುದು.

ಪ್ರತಿಮೆಗಳ ಕುರಿತಾಗಿ ಎಲ್ಲ ದೃಷ್ಟಿಕೊನಗಳಿಂದ ಸಂಶೋಧನೆ ನಡೆಸಿದ್ದೇನೆ ಎಂದು ಹೇಳಿದರೆ ತಪ್ಪಾಗುತ್ತದೆ, ಏಕೆಂದರೆ ಜ್ಞಾನದ ಪರಿಧಿ ದೊಡ್ಡದು. ಪುರುಂದರದಾಸರು ಕನ್ನಡ ಹರಿದಾಸ ಪರಂಪರೆಯ ಸಮರ್ಥ ಪ್ರತಿನಿಧಿ. ಅವರ ಕೀರ್ತನೆಗಳಲ್ಲಿಯ ವಿಷಯಗಳಲ್ಲಿ ಇನ್ನೂ ಹಲವಾರು ಸಂಶೋಧನೆಗಳು ನಡೆಯಬಲ್ಲ ಸತ್ವವಿದೆ.

## ಅಧ್ಯಾಯ ೨
## ಪ್ರತಿಮೆ ಸ್ವರೂಪ ಲಕ್ಷಣಗಳು

ಸಾಮಾನ್ಯವಾಗಿ ಪ್ರತಿಮೆ ಎಂದರೆ, ವಿಗ್ರಹ, ಮೂರ್ತಿ ಆಕಾರ ಹೋಲಿಕೆ ಮುಂತಾದ ಅರ್ಥಗಳಿವೆ. ಪ್ರತಿಮೆ ಕಲ್ಪನೆಯಕಣ್ಣು ಗ್ರಹಿಸುವಂತಹದು, ಇನ್ನೂ ಸರಳವಾಗಿ ಹೇಳುವುದಾದರೆ, ಪ್ರತಿಮೆ ಎನ್ನುವುದು ಶಬ್ದಗಳಿಂದಾದ ಕಾವ್ಯಚಿತ್ರ. ಪ್ರತಿಮೆ ಎನ್ನುವುದು ಕಾವ್ಯ ಸೌಂದರ್ಯ ಮತ್ತು ಧ್ವನಿ-ಶಕ್ತಿ ಎರಡೂ ಇರುವ ಅಭಿವ್ಯಕ್ತಿ. ಮೊದಲು ಪ್ರತಿಮೆಗಳನ್ನು ಉಪಮೆ, ರೂಪಕಗಳಂತೆ ಅಲಂಕಾರಗಳೆಂದು ಭಾವಿಸಲಾಗಿತ್ತು 'ಅಲಂ ಕರೋತಿ ಇತಿ ಅಲಂಕಾರಃ' ಎಂದು ಸಂಸ್ಕೃತದಲ್ಲಿ ಹೇಳಿದೆ. ಮನುಷ್ಯನು ಚೆನ್ನಾಗಿ ಕಾಣುವ ಉದ್ದೇಶದಿಂದ ಬಟ್ಟೆ-ಬರೆ, ವಸ್ತ್ರ-ಒಡವೆ ಮೊದಲಾದವುಗಳನ್ನು ಧರಿಸಿಕೊಳ್ಳುವಂತೆ, ಕವಿಯು ಕಾವ್ಯ ರಚಿಸುವಾಗ ಅರ್ಥ ಚಮತ್ಕಾರಗಳನ್ನು ಮಾಡಿದಾಗ ಕಾವ್ಯಕ್ಕೆ ಸೌಂದರ್ಯ ಬರುತ್ತದೆ.

ಮಾನಸಿಕ ಸ್ಥಿತಿಗಳನ್ನು ವರ್ಣಿಸುವಾಗ ಕವಿಗೆ ಪ್ರತಿಮೆಗಳ ಬಳಕೆಯು ಅತೀ ಪ್ರಮುಖ ವಾಗಿರುತ್ತದೆ. ಕವಿಗಳು ಅಪೂರ್ವವಾದ ಅನುಭವಗಳನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಅಭಿವ್ಯಕ್ತಗೊಳಿಸಲು ಪ್ರತಿಮೆಗಳು ಸಹಾಯಕವಾಗುತ್ತವೆಂದು ತಿಳಿದುಕೊಂಡರು. ಸಾಂಕೇತಿಕತೆಗೂ, ಪ್ರತಿಮಾ ನಿರ್ಮಿತಿಗೂ ನಡುವೆ ಕಂಡುಬಂದ ವ್ಯತ್ಯಾಸವೇನೆಂದರೆ ಪ್ರತಿಮೆಯಲ್ಲಿ ಸಂಕೇತಗಳು ಕೇವಲ ಸಾಂಪ್ರದಾಯಿಕ ಸಂಕೇತಗಳಾಗಿರದೆ ಕವಿಯ ತೀವ್ರಾನುಭವದ ಭಾವನೆಗಳಿಂದ ಸಹಯೋಗಗೊಂಡಿರುತ್ತವೆ. ಪ್ರತಿಮೆಗಳು ಓದುಗನ ಮನೋನೆಲೆಯನ್ನು ತಲುಪಲು ಸಹಾಯಕವಾಗುತ್ತವೆ.

ಧ್ವನಿ ಪೂರ್ಣವಾದ ಉಕ್ತಿವಿಶೇಷಗಳು ಕವಿಯ ತೀವ್ರ ಜೀವಾನುಭವಗಳನ್ನು ಪ್ರತಿಧ್ವನಿಸುತ್ತವೆ. ಅರ್ಥದ ಹಲವು ಸಾಧ್ಯತೆಗಳನ್ನು ಸೂಚಿಸುವ ಈ ಧ್ವನಿಶಕ್ತಿ ಕಾವ್ಯದ ಯಾವುದೇ ಅಂಶದಲ್ಲಿಯೂ ಕಂಡು ಬರಬಹುದು. ಕಾವ್ಯದ ವಸ್ತು, ಅಲಂಕಾರ, ಇವು ವ್ಯಂಜಕತ್ವವನ್ನು ಪಡೆದಾಗ ವಸ್ತು ಧ್ವನಿ, ಅಲಂಕಾರ ಧ್ವನಿ, ರಸಧ್ವನಿ ಎಂದು ಕರೆಸಿಕೊಳ್ಳುತ್ತವೆ. ಧ್ವನಿಶಕ್ತಿ ಪಡೆದಾಗ ಒಂದು ಪದ, ರೂಪಕ, ಒಂದು ವಾಕ್ಯ, ವಾಕ್ಯ ಸಮುದಾಯ ಅಥವಾ ಇಡೀ ಕೃತಿಯು ಕೆಲವೊಮ್ಮೆ ಒಂದು ಪ್ರತಿಮೆಯಾಗಬಹುದು. ಆದ್ದರಿಂದ ಧ್ವನಿತತ್ವದಂತೆ ಪ್ರತಿಮಾ ತತ್ವವೂ ಸಹ ಒಂದು ಕೃತಿಯ ಎಲ್ಲ ಅಂಶಗಳಿಗೂ ಅನ್ವಯವಾಗುವಂತಹ ತತ್ವವಾಗಿದೆ(೧).

ಕಾವ್ಯದಲ್ಲಿ ಸಾಂಕೇತಿಕತೆಯ ಸಿದ್ಧಾಂತವನ್ನು ಹೆಚ್ಚು ಬಳಸಿದವರೆಂದರೆ ಫ್ರಾನ್ಸ್ ದೇಶದ ಕವಿಗಳು. ಫ್ರೆಂಚ್‌ಕವಿ ಮಲ್ಲಾರ್ಮೆಯವರು ಈ ನಿಟ್ಟಿನಲ್ಲಿ ಪ್ರಮುಖ ಪಾತ್ರವಹಿಸಿದರು. ಮಲ್ಲಾರ್ಮೆಯ ನಂತರ ಬಂದ ಕವಿಗಳಲ್ಲಿ ಏಟ್ಸ್ ಮತ್ತು ಎಲಿಯಟ್ ಈ ವಿಧಾನವನ್ನು ಕಾವ್ಯದಲ್ಲಿ ಶಕ್ತಿಯುತವಾಗಿ ಬಳಸಿದರು ಅಮೇರಿಕದ ಕವಿ 'ಪೋ' ಕೂಡ ತನ್ನ ಕೃತಿಗಳಿಂದ ಈ ವಿಧಾನಕ್ಕೆ ಪ್ರಚೋದನೆಕೊಟ್ಟನು, ಇಂತಹ ಸಂದರ್ಭದಲ್ಲಿಯೇ, ಎಜ್ರಾಪೌಂಡ್ ಲಂಡನ್ನಿನಲ್ಲಿ ಪ್ರತಿಮಾವಾದಿಗಳೆಂಬ ಚಿಂತನಶೀಲರ ಒಂದು ಗುಂಪನ್ನು ಉದ್ಯುಕ್ತಗೊಳಿಸಿದನು. ಪ್ರತಿಮಾವಾದಿಗಳು ತಮ್ಮ ಹೆಸರಿಗೆ ಅನ್ವಯವಾಗಿ ಕಾವ್ಯದಲ್ಲಿ ಒಂದು ಅಪೂರ್ವವಾದ ಸೌಂದರ್ಯದ ಅಂಶವನ್ನು ಕಾಣಬಯಸಿದರು. ಇವರು ವಸ್ತುವಿನ ಆಯ್ಕೆಯಲ್ಲಿ ಸಂಪೂರ್ಣ ಸ್ವಾತಂತ್ರವಿರಬೇಕೆಂದು ಹಾಗೂ ಆಧುನಿಕ ಜೀವನ ಚಿತ್ರಣದಲ್ಲಿ ಕಲಾತ್ಮಕತೆ ಇರಬೇಕು'(೨) ಎಂದು ಸ್ಪಷ್ಟವಾಗಿ ತಿಳಿಸಿದ್ದರು.

ನವೋದಯ ಕಾಲದಲ್ಲಿ ತಾತ್ವಿಕ, ಆಧ್ಯಾತ್ಮಿಕ ಚಿಂತನೆಗಳು ಆರಂಭಗೊಂಡವು. ೧೯ನೇ ಶತಮಾನದ ಆದಿಯಲ್ಲಿ ಭಾರತೀಯ ಕವಿಗಳಲ್ಲಿಯೂ ಕೂಡ ಕಾವ್ಯದಲ್ಲಿ ಅಲಂಕಾರಗಳಿಗೆ ಮೀರಿದ ಧ್ವನಿಶಕ್ತಿಯನ್ನು ನಿರೂಪಿಸುವ ವಿಧಾನವಾಗಿ ಪ್ರತಿಮಾನಿರ್ಮಿತಿ ವಿಶಿಷ್ಟತೆಯನ್ನು ಪಡೆದುಕೊಂಡಿತು. ಪ್ರತಿಮೆಗಳು ಅನುಭವವೇದ್ಯವಾದವು. ಕವಿ ತನ್ನ ಅನುಭವಗಳನ್ನು ಅಭಿವ್ಯಕ್ತಿಪಡಿಸಲು ಸಂವಹನಸಾಧನಗಳಾಗಿ ಉಪಮೆ, ರೂಪಕ, ಚಿನ್ಹೆ, ಸಂಕೇತ, ಪ್ರತೀಕಗಳನ್ನು ಬಳಸಿಕೊಳುತ್ತಾನೆ. ಸಾಮಾನ್ಯವಾಗಿ ನಾವು ಮನಸ್ಸಿನ ಅಭಿಪ್ರಾಯಗಳನ್ನು ಸಹ ಇಂದ್ರಿಯಗೋಚರವಾಗುವ ಚಿನ್ಹೆ, ಸಂಕೇತಗಳನ್ನು ಉಪಯೋಗಿಸಿ ತಿಳಿಸುತ್ತೇವೆ. ಪ್ರತೀಕ ಭಾವನಾ ಪ್ರಧಾನವಾದ್ದು ಪ್ರತಿಮೆಯು ಉಪಮೆ, ರೂಪಕಗಳನ್ನೊಳಗೊಂಡು ಚಿನ್ಹೆ, ಸಂಕೇತ, ಪ್ರತೀಕದ ಮುಂದುವರೆದ ಭಾಗವಾಗಿ ಹೇಗೆ ಭಾವನೆಗಳನ್ನು ಸಾಂದ್ರಿಕರಿಸುತ್ತವೆ ಎಂದು ವಿವರವಾಗಿ ತಿಳಿಯೋಣ.

ಪ್ರಾಚೀನ ಮತ್ತು ಆಧುನಿಕ ಸಾಹಿತ್ಯದ ಬೆಳವಣಿಗೆಯೊಂದಿಗೆ ಪ್ರತಿಮೆಗಳು ಕಾವ್ಯದಲ್ಲಿ ಹೆಚ್ಚು ಬಳಕೆಯಾಗತೊಡಗಿದವು. ಭಾಷೆಯಲ್ಲಿ ಉಪಮೆ, ರೂಪಕ, ಸೂಕ್ತಿ ನುಡಿಗಳೊಂದಿಗೆ ಪ್ರತಿಮಾನಿರ್ಮಿತಿಯ ನವೀನತಮ ವಿಧಾನವೂ ಸೇರಿ ಕನ್ನಡ ಸಾಹಿತ್ಯ ಸ್ವರೂಪಕ್ಕೆ ಅತ್ಯಂತ ವಿಶಿಷ್ಟ ಬದಲಾವಣೆಯು ಉಂಟಾಯಿತು. ಭಾಷೆಯು ಹೆಚ್ಚು ಹೆಚ್ಚು ಬೆಳೆಯತೊಡಗಿದಂತೆ ಚಿನ್ಹೆ, ಸಂಕೇತ, ಪ್ರತೀಕ, ಪ್ರತಿಮೆಗಳು ಧಾರಾಳವಾಗಿ ಬಳಕೆಯಾಗತೊಡಗಿದವು. ಕಾವ್ಯದ ಭಾಷೆಯಲ್ಲಿ ಪ್ರಮುಖವಾದ ಎರಡು ಅಂಶಗಳೆಂದರೆ ಒಂದು ಕಿವಿಗೆ ಇಂಪನ್ನು ಉಂಟುಮಾಡುವ ಶಬ್ದಗಳ ಅಥವಾ ಪದಗಳ ವಿನ್ಯಾಸ, ಎರಡನೇಯದು ಆ ಪದ ವಿನ್ಯಾಸಗಳ ಮೂಲಕ ಪ್ರತೀತವಾಗುವ ಅರ್ಥದ ಸ್ವಾರಸ್ಯ. ಇವೆರಡನ್ನು ಅಲಂಕಾರಿಕರು 'ಶಬ್ದಾಲಂಕಾರ' ಮತ್ತು 'ಅರ್ಥಾಲಂಕಾರ' ಗಳೆಂದು ಕರೆದರು. ಕಾವ್ಯದಲ್ಲಿ ಬಳಕೆಯಾಗುವ ಇಂತಹ ಉಕ್ತಿ ವೈಚಿತ್ರ್ಯಗಳು ಕಾವ್ಯದ ಅರ್ಥವನ್ನು ಹೆಚ್ಚಿಸಿ ಓದುಗನ ಮನಸ್ಸಿಗೆ ಆನಂದವನ್ನುಂಟುಮಾಡುತ್ತವೆ. ಅಲಂಕಾರಗಳ ರಚನೆ ಕವಿಯ ಅನುಭವ ಸೌಂದರ್ಯದ ಅಭಿವ್ಯಕ್ತಿಯ ಪರಿಣಾಮಗಳು. ಕಾವ್ಯಾಭಿವ್ಯಕ್ತಿಯೆಲ್ಲವೂ ಒಂದಲ್ಲ ಒಂದು ಬಗೆಯ ಅಲಂಕಾರವೇ ಎಂದು ಅವುಗಳನ್ನು ಗುರುತಿಸುವ. ವಿಶ್ಲೇಶಿಸುವ ಕಾರ್ಯವು ಕಾವ್ಯಾಧ್ಯಯದಲ್ಲಿ ನಡೆದು ಬಂದಿತು.

ಕವಿಯ ಅಭಿವ್ಯಕ್ತಿಯ ಕ್ರಿಯೆಯನ್ನು ಗಮನಿಸುವುದಾದರೆ, ಕವಿಯು ತನ್ನ ಭಾವತೀವ್ರತೆಗೆ ಅಥವಾ ಅಮೂರ್ತವಾದ ಭಾವನೆಗಳಿಗೆ ಅಭಿವ್ಯಕ್ತಿಯನ್ನು ಕೊಡುವಾಗ ಆತ ಮೂರ್ತ ಪ್ರಪಂಚದ ಚಿತ್ರಗಳನ್ನೇ ಆಶ್ರಯಿಸಬೇಕಾಗುತ್ತದೆ. ಈ ಚಿತ್ರಗಳು ಕವಿಯ ಮನಸ್ಸಿನಲ್ಲಿ ಮೂಡಿದ ಅನುಭವಗಳ ಪರಿಣಾಮವೇ ಆಗಿರುತ್ತದೆ. ಕವಿಯು ತನ್ನ ಅಂತರಂಗದಿಂದ ಯಾವುದೋ ವಿಷಯವನ್ನು ಹೇಳುವಾಗ ತಟ್ಟನೆ ಗೋಚರಿಸಿದ ಅಮೂರ್ತ ಚಿತ್ರಗಳನ್ನು ತನ್ನ ಭಾವದ ಅಭಿವ್ಯಕ್ತಿಗೋಸ್ಕರ ಬಳಸುತ್ತಾನೆ ಎಂದೋ ಕಂಡ, ಕೇಳಿದ ಅಥವಾ ಸಧ್ಯಕ್ಕೆ ಕಾಣುತ್ತಿರುವ, ಕೇಳುತ್ತಿರುವ ಅಥವಾ ಅನುಭವಿಸುತ್ತಿರುವ ಸಂಗತಿಗಳಿಗೆ ಒಂದಕ್ಕೊಂದು ಸಾದೃಶ್ಯವನ್ನು ಗುರುತಿಸಿ, ಅವುಗಳನ್ನು ವ್ಯಕ್ತಪಡಿಸಲು ಉಪಮೆ, ರೂಪಕಗಳನ್ನು ಬಳಸುತ್ತಾನೆ. ಉಪಮೆ, ರೂಪಕಗಳೆರಡೂ ಅರ್ಥಾಲಂಕಾರ ಗಳೆಂದೂ, ಅರ್ಥಚಮತ್ಕಾರವನ್ನು ತೋರುವಂತಹವೆಂದೂ ಹೇಳಲಾಗುತ್ತದೆ. ಪ್ರತಿಮೆಯು ಉಪಮೆ ರೂಪಕಗಳ ನ್ನೊಳಗೊಂಡಿರುವುದರಿಂದ ಇವುಗಳ ಬಗ್ಗೆ ತಿಳಿಯುವುದು ಅವಶ್ಯಕವೆನಿಸುತ್ತದೆ.

ಉಪಮೆ: ಒಂದು ವ್ಯಕ್ತಿ ವಸ್ತು ವಿಷಯವನ್ನು ಮತ್ತೊಂದು ವ್ಯಕ್ತಿ ವಸ್ತುಗಳಿಗೆ ಇರುವ ಸಾದೃಶ್ಯವನ್ನು ಗುರುತಿಸುವುದು, ಮತ್ತು ಪರಸ್ಪರ ಅವುಗಳನ್ನು ಹೋಲಿಸಿ ನೋಡುವುದು ಇದು ಮನುಷ್ಯನ ಆಲೋಚನೆಯ ಸಹಜವಾದ ಕ್ರಿಯೆಯಾಗಿದೆ. ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಸಾದೃಶ್ಯ ಅಥವಾ ಹೋಲಿಕೆಯನ್ನು ಹೇಳುವುದಕ್ಕೆ 'ಉಪಮಾಲಂಕಾರ' ಎನ್ನಲಾಗುತ್ತದೆ. ಉದಾಹರಣೆಗೆ; ನೀಚರಿಗೆ ಮಾಡಿದ ಉಪಕಾರ ಉಪಮೇಯ, ಇದು ಸಾಧಾರಣ ವಸ್ತು, ಹಾವಿಗೆ ಹಾಲೆರೆಯುವುದು ಉಪಮಾನ, ಇದು ವಿಶೇಷ ವಸ್ತು. ಇಲ್ಲಿ ಸಾಧಾರಣ ಧರ್ಮ ಅಪಾಯ ತಪ್ಪಿದ್ದಲ್ಲ ಎಂದೂ, ಅಂತೆ ಎಂಬ ಉಪಮಾವಾಚಕವನ್ನೂ ಬಳಸಲಾಗಿದೆ.

ಉಪಮೆಯ ಬಳಕೆ ಸಹಜವಾಗಿಮೂಡುತ್ತದೆ. ಒಂದು ಮತ್ತೊಂದಕ್ಕೆ ಇರುವ 'ದೃಶ್ಯ' ವಸ್ತುಗಳ ಸಂಬಂಧವನ್ನು ನೆನಪಿನಲ್ಲಿಟ್ಟುಕೊಳ್ಳುವುದು ಮತ್ತು ಅವುಗಳನ್ನು ಕಾವ್ಯದಲ್ಲಿ ಬಳಸುವುದು ಸರ್ವೆಸಾಧಾರಣವಾದ ಸಂಗತಿಯಾಗಿದೆ. ಮನುಷ್ಯನು ಮಾತನಾಡುವಾಗಲೂ ಕೂಡ ಉಪಮೆಗಳನ್ನು ಬಳಸುವುದುಂಟು. ವ್ಯವಹಾರದಲ್ಲಿ, ಮಾತನಾಡುವಾಗ ಉಪಮೆಗಳನ್ನು ಬಳಸುವುದು ಕೇವಲ ವಿಷಯದ ಸ್ಪಷ್ಟೀಕರಣಕ್ಕಾಗಿ ಆದರೆ, ಕಾವ್ಯಗಳಲ್ಲಿ ಉಪಮೆಗಳನ್ನು ಬಳಸುವುದರ ಉದ್ದೇಶ, ವಿಷಯವನ್ನು ಸ್ಪಷ್ಟಪಡಿಸುವುದಷ್ಟೇ ಆಗಿರದೆ, ಒಂದು ಬಗೆಯ ಆಶ್ಚರ್ಯ ಹಾಗೂ ಆನಂದವನ್ನು ಉಂಟುಮಾಡುವುದಕ್ಕಾಗಿ ಆಗಿದೆ. ಸಾಹಿತ್ಯಕ ಬರಹಗಳಲ್ಲಂತೂ ಉಪಮೇಯದೇ ಪ್ರಾಧಾನ್ಯ ಅಲ್ಲಿ 'ಉಪಮೆ' ಅಲಂಕಾರ ಅಥವಾ ಸೌಂದರ್ಯದ ಅಂಶವಾಗಿ 'ಉಪಮಾಲಂಕಾರ' ಎನಿಸಿಕೊಳ್ಳುತ್ತದೆ. "ಅಲಂಕಾರಗಳಲ್ಲೆಲ್ಲಾ ಸಾಮಾನ್ಯವಾಗಿ ಉಪಮೆಗೆ ಅಗ್ರಸ್ಥಾನವನ್ನೇ ಅಲಂಕಾರಿಕರು ಕೊಟ್ಟಿದ್ದಾರೆ ಇದನ್ನು ಅಲಂಕಾರಗಳ ಶಿರೋರತ್ನವೆಂದೂ ಕಾವ್ಯದ ಸಂಪತ್ತಿನ ಸರ್ವಸ್ವವೂ ಅದೇ ಎಂದೂ ಕವಿ ವಂಶದ ಜನನಿ ಎಂದೂ ಪ್ರಶಂಶಿಸಲಾಗಿದೆ. ಅನೇಕ ಚಿತ್ರಭೂಮಿಕೆಗಳನ್ನ ತಳೆದು ಕಾವ್ಯರಂಗದಲ್ಲಿ ನರ್ತನ ಮಾಡುತ್ತಾ ರಸಿಕರನ್ನು ರಂಜಿಸುವ ನರ್ತಕಿಯೇ ಉಪಮೆ ಎಂದು ಅಪ್ಪಯ್ಯ ದೀಕ್ಷಿತರು ಕೊಂಡಾಡಿದ್ದಾರೆ. ಉಪಮೆ ಎಂಬುದು ಉಳಿದೆಲ್ಲ ಅಲಂಕಾರಗಳಿಗೆ ಬೀಜರೂಪವಾದ ಸೌಂದರ್ಯವನ್ನು ಒಳಗೊಳ್ಳುವುದೆಂದು ಭಾಮಹ ಮತ್ತು ವಾಮನರು ಹೇಳುತ್ತಾರೆ"(೩)

ಉಪಮೆ ಎನ್ನುವುದು ಎರಡು ವಸ್ತುಗಳಿಗಿರುವ ಹೋಲಿಕೆಯನ್ನು ಗುರುತಿಸುವುದು. ಉಕ್ತಿವಿಶೇಷದಲ್ಲಿ ಎರಡು ವಸ್ತುಗಳ ನಡುವೆ ಒಂದಿಲ್ಲೊಂದು ಸಾದೃಶ್ಯವು ಅತ್ಯಂತ ಸ್ಫುಟವಾಗಿ ತೋರುತ್ತಿದ್ದರೆ ಅದೇ ಉಪಮೆ. ಉದಾಹರಣೆಗೆ 'ಮುಖವು ಚಂದ್ರನಂತೆ ಕಾಂತಿಯುಕ್ತವಾಗಿದೆ'. ಇಲ್ಲಿ ನಲ್ಲೆಯ ಮುಖವನ್ನು ಚಂದ್ರನಿಗೆ ಹೋಲಿಸಿದೆ. ನಲ್ಲೆಯ ಮುಖಕ್ಕೂ, ಚಂದ್ರನಿಗೂ ಇರುವ ಹೋಲಿಕೆ ಸೌಂದರ್ಯ ಸಂಬಂಧಿಯಾದದ್ದು. ಪುರಂದರದಾಸರು ತಮ್ಮ ಕೀರ್ತನೆ ಗಳಲ್ಲಿ ಇಂತಹ ಅನೇಕ ಉಪಮೆಗಳನ್ನು ಬಳಸಿದ್ದಾರೆ.

'ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು'
'ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ'
'ಬಲೆಗೆ ಸಿಲುಕಿದ ಮೃಗದಂತೆ ಬಾಯ್ಬಿಡುತಲಿ'
'ತಲೆ ಹುಳುಕ ನಾಯಂತೆ ಬಯಲಾಸೆಗೆ ಸಿಲುಕಿದೆ'
'ಹಾಳು ಕೇರಿಯೊಳು ತಿರುಗುವ ಹಂದಿಯಂತೆ'
'ದೀಪಕೆ ಬೀಳುವ ಪತಂಗದ ಹಾಗೆ'

.................................. (೪)

ಮೊದಲೆರಡು ಉಪಮೆಯನ್ನು ಬಿಡಿಸಿ ಹೇಳುವುದಾದರೆ, ತಾವರೆ ಎಲೆ ನೀರಿನಲ್ಲಿ ಬೆಳೆದರೂ ನೀರಿಗೆ ಅಂಟದೆ ಒಂದು ಹನಿ ನೀರನ್ನು ಇಂಗಿಸಿಕೊಳ್ಳದೆ ಹೊರಗೆ ಚೆಲ್ಲುತ್ತದೆ. ಮತ್ತು ಗೇರುಹಣ್ಣಿನಲ್ಲಿ ಬೀಜ ಅಂಟಿಯೂ ಅಂಟದಂತೆ ಇರುವುದು. ಹಾಗೆ ಸಂಸಾರದಲ್ಲಿ ತುಂಬ ಮೋಹ ಬೆಳಸಿಕೊಳ್ಳದೆ ಇದ್ದೂ ಇಲ್ಲದಂತೆ ಇರಬೇಕು ಎಂದು ಪುರಂದರದಾಸರು ಹೇಳುತ್ತಾರೆ. ಇಲ್ಲಿ ಪ್ರೇಮ ಹಾಗೂ ಸಂಸಾರದ ಮೋಹ ಇವೆರಡೂ ಉಪಮಾನವಾದರೆ, ತಾಮರಸಜಲ ಹಾಗೂ ಗೇರುಹಣ್ಣಿನಲ್ಲಿ ಬೀಜ ಇವೆರಡೂ ಉಪಮೇಯಗಳಾಗುತ್ತವೆ. ಅಂತೆ ಎಂಬುದು ಉಪಮಾವಾಚಕ.

ಉಪಮೆ ಎನ್ನುವುದು ಸುಮ್ಮನೆ ಹೋಲಿಸುವುದಲ್ಲ ನಾಯಿಯು ನರಿಯಂತೆ ಎಂಬ ಉಕ್ತಿಯಲ್ಲಿ ಹೋಲಿಕೆ ಇದ್ದರೂ, ಅದು ಉಪಮಾಲಂಕಾರವಾಗುವುದಿಲ್ಲ. ಏಕೆಂದರೆ ಆ ಹೋಲಿಕೆಯಿಂದ ಅಲ್ಲಿನ ಉಕ್ತಿಗೆ ಯಾವ ವೈಚಿತ್ರವೂ ಪ್ರಾಪ್ತವಾಗುವುದಿಲ್ಲ. ಯಾವ ಹೋಲಿಕೆ ಯಲ್ಲಿ "ಹೋಲಿಸುವ ವಸ್ತುಗಳು ಪರಸ್ಪರ ಎಷ್ಟು ವಿಲಕ್ಷಣವಾಗಿದ್ದರೂ ಒಂದು ಮತ್ತೊಂದಕ್ಕೆ ಏನೂ ಸಂಬಂಧವಿಲ್ಲವೆಂದು ಹಿಂದೆ ತೋರಿದ ಎರಡು ಸಂಗತಿಗಳನ್ನು ತಟಕ್ಕನೆ ತಂದು ಸಂಘಟಿಸುವುದರ ಮೂಲಕ ಪರಿಣಾಮವಾಗಿದೆಯೋ, ಅಂಥದು ಉಪಮೆ ಎನಿಸಿಕೊಳ್ಳುತ್ತದೆ"(೫). ಒಂದು ವಸ್ತುವಿಗೆ ಮತ್ತೊಂದು ವಸ್ತುವಿನೊಡನೆ ಸಂಪೂರ್ಣವಾಗಿ ಹೋಲಿಕೆ ಇರುವುದು ಅಸಂಭವ. ಆದುದರಿಂದ ಎಷ್ಟು ಸಾಧ್ಯವೋ ಅಷ್ಟರಿಂದಲೇ ಕವಿಗಳು ಉಪಮೆಯನ್ನು ಬಳಸುತ್ತಾರೆ. ಉದಾಹರಣೆಗೆ: ಮೇಲೆ ಹೇಳಿದ ತಾಮರಸಜಲದಂತೆ ಎಂಬಲ್ಲಿ ತಾವರೆಎಲೆಯು ನೀರಿಗೆ ಅಂಟದಂತೆ ಇರುವ ದೃಶ್ಯದಿಂದ ಪ್ರೇರಿತರಾದ ಪುರಂದರದಾಸರು ಜೀವನದಲ್ಲಿ ಸಂಸಾರವೈರಾಗ್ಯಕ್ಕೆ ಅದನ್ನು ಹೋಲಿಸಿದ್ದಾರೆ.

ಇನ್ನು ಉಪಮೆ ಅರ್ಥವಿಸ್ತರತೆಯನ್ನು ಪಡೆದುಕೊಂಡು ಹೇಗೆ ಪ್ರತಿಮೆಯಾಗುತ್ತದೆ ಎಂಬುದನ್ನು ನೋಡುವ, ಉಪಮೆಯಲ್ಲಿ ಎರಡು ವಸ್ತುಗಳ 'ಸಾಮ್ಯ' ವಾಚ್ಯವಾಗಿಯೇ ಗೋಚರಿಸುತ್ತದೆ. ಇಲ್ಲಿ ಎರಡು ಸಂಗತಿಗಳ ನಡುವಿನ ಸಾದೃಶ್ಯವನ್ನು ಬುದ್ಧಿಪೂರ್ವಕವಾಗಿ ಗ್ರಹಿಸಿ ಎರಡನ್ನೂ ಜೋಡಿಸುವ ಕೆಲಸ ನಡೆಯುತ್ತದೆ. ಪ್ರತಿಮೆಯೆಂದರೆ ಅದೊಂದು ಶಬ್ದಚಿತ್ರ. ಅದು ಸಂಕ್ಷಿಪ್ತವಾಗಿರಬಹುದು ಇಲ್ಲದೆಯೂ ಇರಬಹುದು ಇದು ಅಮೂರ್ತಭಾವಗಳನ್ನು ಮೂರ್ತವಾಗಿಸುತ್ತದೆ ಅಂದರೆ ತೆರೆದು ತೋರಿಸುತ್ತದೆ. ಮೂರ್ತಭಾವಗಳನ್ನು ಝುಗ್ಗನೆ ತೆರೆದು ತೋರಿಸಿ ಅರ್ಥವಿಸ್ತಾರತೆಯನ್ನು ಹೊಂದುತ್ತದೆ. ಪ್ರತಿಮೆಯಲ್ಲಿ ಸಾದೃಶ್ಯ ಇರಬಹುದು, ಇಲ್ಲದೆಯೂ ಇರಬಹುದು, ಸಾದೃಶ್ಯ ಇದ್ದರೆ ಅದು ಉಪಮೆಯನ್ನು ಒಳಗೊಂಡಿರುತ್ತದೆ. ಉದಾಹರಣೆಗೆ ಪುರಂದರದಾಸರ ಕೀರ್ತನೆಯಲ್ಲಿ ಬರುವ ಉಪಮೆಗಳು ಹೇಗೆ ಪ್ರತಿಮೆಯಾ ಗುತ್ತವೆ ಎಂದು ತಿಳಿಯೋಣ.

ಈಸಬೇಕು ಇದ್ದು ಜಯಿಸಬೇಕು
ಹೇಸಿಗೆ ಸಂಸಾರದಲ್ಲಿ ಆಸೆಲೇಶ ಇಡದ ಹಾಗೆ ಪ।

ತಾಮರಸ ಜಲದಂತೆ
ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮ ಎನುತ ಪಾಡಿ
ಕಾಮಿತ ಕೈ ಗೊಂಬರೆಲ್ಲ ೧।

ಗೇರು ಹಣ್ಣಿನಲ್ಲಿ ಬೀಜ
ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ
ಧೀರ ಕೃಷ್ಣನ ಭಕುತರೆಲ್ಲ ೨

ಮಾಂಸದಾಸೆಗೆ ಮತ್ಸ್ಯ ಸಿಲುಕಿ
ಹಿಂಸೆ ಪಟ್ಟ ಪರಿಯಂತೆ
ಮೋಸ ಹೋಗದಹಾಗೆ ಜಗ
ದೀಶ ಪುರಂದರವಿಠಲನ ನೆನೆದು ೩ (೬)

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು, ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ, ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆ ಪಟ್ಟ ಪರಿಯಂತೆ ಎಂಬ ಮೂರೂ ಉಪಮೆಗಳು ಸೇರಿ ಇಲ್ಲಿ ಸಂಸಾರ ಎಂಬ ಪ್ರತಿಮೆ ಉದ್ಭವವಾಗಿದೆ. ತಾಮರಸ ಜಲವನ್ನು ಸಂಸಾರದಲ್ಲಿಯ ಮೋಹಕ್ಕೆ ಮತ್ತು ಗೇರು ಹಣ್ಣಿನಲ್ಲಿರುವ ಬೀಜವನ್ನು ವೈರಾಗ್ಯಕ್ಕೆ ಹಾಗೂ ಸಂಸಾರದ ಕಷ್ಟಗಳನ್ನು ಮಾಂಸದಾಸೆಗೆ ಸಿಲುಕಿದ ಮೀನಿಗೆ ಹೋಲಿಸಿದ್ದಾರೆ, ಇಲ್ಲಿ 'ಸಂಸಾರ' ಪ್ರತಿಮೆ ಉಪಮೆಗಳಲ್ಲಿರುವ ಸಾದೃಶ್ಯಭಾವದೊಂದಿಗೆ ಸಂಸಾರದಲ್ಲಿ ವೈರಾಗ್ಯವಿಟ್ಟುಕೊಂಡು ಹರಿಯ ನಾಮಸ್ಮರಣೆ ಮಾಡಬೇಕೆಂದೂ, ಯೋಗ್ಯತೆಗೆ ಮೀರಿ ಆಸೆ ಮಾಡಬಾರದೆಂದು ಮನುಷ್ಯನ ಆಶಾಭಾವವೇ ಕಷ್ಟಗಳಿಗೆ ಕಾರಣವೆಂದು ನೀತಿಯನ್ನು ತಿಳಿಸುತ್ತದೆ. ಹೀಗೆ ಉಪಮೆಗಳ ಸಹಾಯದಿಂದ ಅರ್ಥವ್ಯಾಪ್ತಿಯನ್ನು ಹೆಚ್ಚಿಸುವ ಶಕ್ತಿ ಪ್ರತಿಮೆಗಿದೆ.

ಪ್ರತಿಮೆ ಉಪಮೆಯಿಂದ ಹೇಗೆ ಭಿನ್ನ ಎಂದರೆ, ಪ್ರತಿಮೆ ಕೆಲವೊಮ್ಮೆ ದೂರದಲ್ಲಿರುವ ಎರಡು ವಸ್ತುಗಳ ಸಾದೃಶ್ಯಭಾವವಿಲ್ಲದಿದ್ದರೂ ಸಂಭವಿಸುತ್ತದೆ. "ಪ್ರತಿಮೆ ಎಂಬುದು ಮೂಲತಃ ಕವಿ ಮನಸ್ಸಿನ ಸೃಜನೆ, ಒಂದು ಮತ್ತೊಂದು ದೂರದಲ್ಲಿರುವ ಮತ್ತು ಸಂಬಂಧವಿದೆಯೆಂಬಂತೆ ತೋರದ ಎಡರು ಅಥವಾ ಹೆಚ್ಚಿನ ವಸ್ತು ಹೋಲಿಕೆಯಿಂದ ಸಂಭವಿಸುವುದಲ್ಲ ಅದು ಅದರ ಬದಲು, ದೂರದೂರದ ಆ ಎರಡು ವಸ್ತುಗಳಿರುವ ಯಾವುದೇ ಸಾದೃಶ್ಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಅವೆರಡಕ್ಕಿರುವ ಆಂತರಿಕ ಸಂಬಂಧವನ್ನು ಕವಿಯ ಪ್ರಜ್ಞೆ ಮಾತ್ರ ಗ್ರಹಿಸಿ ಅವುಗಳನ್ನು ಸಂಘಟಿಸಿದ್ದರಿಂದ, ಅದುವರೆಗೂ ಮನೋಗೋಚರವಾಗದಿದ್ದ ಹೊಸದೊಂದು ಹುಟ್ಟಿಕೊಳ್ಳುತ್ತದೆ ಇದೇ ಪ್ರತಿಮೆ. ಹೀಗೆ ಗ್ರಹಿತವಾಗುವ ಪ್ರತಿಮೆ ಗೊತ್ತಿರುವ ಎರಡು ವಸ್ತುಗಳ ಸಾದೃಶ್ಯವನ್ನು ಮೂಲಮಾನವನ್ನಾಗಿ ಉಳ್ಳ ರೂಪಕದಿಂದ ಭಿನ್ನವಾದುದು, ಪ್ರತಿಮೆ ಒಂದರ ಮೂಲಕ ಮತ್ತೊಂದನ್ನು ತೆರೆಯುವಂಥದ್ದು ಮತ್ತು ಅವೆರಡರ ಸಾಮ್ಯ ಅಜ್ಞಾತವಾದುದನ್ನು ಜ್ಞಾತವಾಗಿಸುತ್ತದೆ".(೭)

ರೂಪಕ: ರೂಪಕವು ಉಪಮಾನ ಉಪಮೇಯಗಳ ನಡುವೆ ಬೇಧವೆ ಇಲ್ಲವೇನೋ ಎಂದು ತೋರುವ ಹೋಲಿಕೆ, ಉದಾಹರಣೆಗೆ: 'ವಿದ್ವಾಂಸನಾದ ಆತನು ಸಾಕ್ಷಾತ್ ಸರಸ್ವತಿ', 'ಆ ಶಾಲೆಗೆ ಆ ವಿದ್ಯಾರ್ಥಿಯೊಂದು ರತ್ನ' ಮುಂತಾದವುಗಳು. 'ಸಾಮ್ಯವಿದ್ದಾಗ ಉಪಮೆ ಅತಿಸಾಮ್ಯವಿದ್ದಾಗ ರೂಪಕ' ಎನ್ನುವುದು ಸಾಮಾನ್ಯ ವಿವರಣೆಯಾಗಿದೆ. ರೂಪಕವು ಪದ್ಯದಂತೆ ಸಂಯೋಜಕವಾದುದು ಮತ್ತು ಕೇಂದ್ರೀಕೃತವಾದದ್ದು. ರೂಪಕ ಅಂತರ್ ದೃಷ್ಟಿಯಿಂದ ಗ್ರಹಿಸುತ್ತದೆ, ಉಪಮೆಯಲ್ಲಿ ಕಾಣಬಾರದ ಸಂಗ್ರಹ ಗುಣ ಪರಿಣಾಮದ ತೀವ್ರತೆ ಇವುಗಳಿಂದ

ರೂಪಕವು ಅಭಿವ್ಯಕ್ತಿಯ ಅತ್ಯುತ್ತಮ ಪ್ರಕಾರ ಎನಿಸಿದೆ. ರೂಪಕ ನಿರ್ಮಾಣವೆಂಬುದು ಕವಿ ಪ್ರತಿಭೆಯನ್ನು ಹೊರಸೂಸುತ್ತದೆ ಒಟ್ಟಾರೆ ಒಂದು ವಸ್ತು ವಿಷಯವನ್ನು ಸೂಚಿಸುವುದೇ ರೂಪಕ.

ಕವಿಯ ಸಾಮರ್ಥ್ಯ, ಸ್ವಂತಿಕೆ ಹಾಗೂ ಶಕ್ತಿಗಳ ಬಲದಿಂದ ರೂಪಕಗಳು ನಿರ್ಮಾಣಗೊಳ್ಳುತ್ತವೆ. ಅನೇಕ ರೂಪಕಗಳನ್ನು ಬಳಸಿ ಕಾವ್ಯಚಮತ್ಕಾರ ಮಾಡಿದ ಪುರಂದರದಾಸರ ಕೀರ್ತನೆಯೊಂದನ್ನು ಗಮನಿಸಬಹುದು.

ಅಂಜಲೇತಕೆ ಜೀವ ಅನುಗಾಲವ ಪ॥

ಕಂಜನಾಭನ ಮತವ ಕೈಗೊಂಡ ಬಳಿಕ ಅ॥

ನಾರಾಯಣ ಎಂಬ ನಾಲ್ಕು ಅಕ್ಷರದಿಂದ
ಘೋರ ದುರಿತಗಳನ್ನು ಕೊಲಿಸಲಿಬಹುದು
ಶ್ರೀ ರಾಮನಾಮವೆಂಬ ಸಿಂಗಾಣಿ ತಕ್ಕೊಂಡು
ವೈರಿ ಷಡ್ವರ್ಗವನು ವಧೆ ಮಾಡಬಹುದು ೧॥

ಶ್ರೀ ಕೇಶವ ಎಂಬ ಸಿದ್ಧ ಮಂತ್ರಗಳಿಂದ
ಬೇಕಾದ ದೋಷಗಳ ಬೇಯಿಸಬಹುದು
ವೈಕುಂಠ ಪತಿಯೆಂಬ ವಜ್ರವನೆ ತಕ್ಕೊಂಡು
ನೂಕಿ ಬಹ ಯಮಭಟರ ನುಗ್ಗು ಮಾಡಬಹುದು ೨॥

ಹರಿ ವಾಸುದೇವನೆಂಬ ಅಮೃತಪಾನವ ಮಾಡಿ
ಜರೆ ಮರಣ ಜನನ ಜಯಿಸಬಹುದು
ಹರುಷದಲಿ ಕೈ ಪಿಡಿದು ಪುರಂದರವಿಠಲನ
ಸರಸ ಸದ್ಗತಿಯನ್ನು ಸರಿಗಾಣಬಹುದು. ೩॥ (೮)

'ಶ್ರೀರಾಮನಾಮವೆಂಬ ಸಿಂಗಾಣಿ' ಎನ್ನುವುದೊಂದು ರೂಪಕ, ಸಿಂಗಾಣಿ ಎಂದರೆ ಬಿಲ್ಲು; ಕೊಂಬಿನಿಂದ ಮಾಡಿದ ಆಯುಧ ವಿಶೇಷ, ಶ್ರೀರಾಮನಾಮ ಹಾಗೂ ಬಿಲ್ಲು ಇವುಗಳ ನಡುವಿನ ಹೋಲಿಕೆ ಅಭೇದ ಎನ್ನಿಸುವಂತೆ ತೋರುತ್ತದೆ ಹಾಗೂ ಇಂತಹ ಬಿಲ್ಲಿನಿಂದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ವೈರಿ [ಅರಿ] ಷಡ್ವರ್ಗಗಳನ್ನು ಗೆಲ್ಲಬಹುದು ಮತ್ತು 'ವೈಕುಂಠಪತಿಯೆಂಬ ವಜ್ರ' ಎಂಬ ರೂಪಕದಲ್ಲಿ ವೈಕುಂಠಪತಿಯ ನಾಮ ವಜ್ರದಂತೆ ಕಠಿಣ, ಬಲಶಾಲಿ ಇಂಥ ಬಲದಿಂದ ಯಮಭಟರನ್ನು ನುಗ್ಗು ಮಾಡಬಹುದು. 'ಹರಿ ವಾಸುದೇವನೆಂಬ ಅಮೃತ' ಎಂಬ ರೂಪಕದಲ್ಲಿ ಹರಿಯ ನಾಮವು ಅಮೃತಕ್ಕೆ ಸಮಾನ ಹಾಗೂ ನಾಮಸ್ಮರಣೆ ಮಾತ್ರದಿಂದಲೇ ಅಮೃತವನ್ನು ಕುಡಿದಾಗ ಆಗುವ ಜರೆ, ಮರಣ, ಜನನಗಳ ಭಯದಿಂದ ಮುಕ್ತಿ ಹೊಂದಬಹುದು ಎನ್ನುತ್ತಾರೆ ಪುರಂದರದಾಸರು. ಇಲ್ಲಿ ಹರಿಯ ನಾಮಸ್ಮರಣೆಯ ಮಹತ್ವವನ್ನು ತಿಳಿಸುತ್ತಾ 'ಅಂಜಿಕೆ' ಎಂಬ ಭಾವಪ್ರತಿಮೆ ಜೀವನದಲ್ಲಿ ಬರುವ ಘೋರ ದುರಿತಗಳನ್ನು ವೈರಿಗಳನ್ನು ಭಯವನ್ನೂ ಮರಣವನ್ನೂ ಹೇಗೆ ಗೆಲ್ಲಬಹುದೆಂದು ವಿಸ್ತಾರವಾಗಿ ತಿಳಿಸುತ್ತದೆ. ಇಲ್ಲಿ 'ರೂಪಕಗಳನ್ನೊಳಗೊಂಡ 'ಅಂಜಿಕೆ' ಪ್ರತಿಮೆ ಅರ್ಥವಿಸ್ತಾರವನ್ನು ಹೆಚ್ಚಿಸಿ ಭಕ್ತನಿಗೆ ಭಯಮುಕ್ತನಾಗಿರಲು ಪ್ರೇರೇಪಿಸಿ ಸಾಂತ್ವನವನ್ನು ಕೊಡುತ್ತದೆ.

ಪ್ರತಿಮೆ ರೂಪಕವನ್ನೊಳಗೊಂಡಿದ್ದರೂ ಅದರಿಂದ ಹೇಗೆ ಭಿನ್ನವೆಂದರೆ ರೂಪಕದಲ್ಲಿ ಎರಡು ವಸ್ತುಗಳಿಗಿರುವ ಸಾದೃಶ್ಯವು ಮೂಲಮಾನವಾಗಿರುತ್ತದೆ ಮತ್ತು ಹೋಲಿಸಲ್ಪಡುವ ವಸ್ತುಗಳ ನಡುವೆ ಭೇದ ಉಳಿದೇ ಇಲ್ಲವೇನೋ ಎಂಬ ಭಾವ ಉಂಟಾಗುತ್ತದೆ ಆದರೆ, ಎರಡು ವಸ್ತುಗಳಿಗಿರುವ ಯಾವುದೇ ಸಾದೃಶ್ಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಅವೆರಡಕ್ಕಿರುವ ಆಂತರಿಕ ಸಂಬಂಧವನ್ನು ಕವಿಯ ಪ್ರಜ್ಞೆ ಹೊರ ತೆಗೆಯುವಂತಹದ್ದು 'ಪ್ರತಿಮೆ'.

೧. 'ಆಚಾರವಿಲ್ಲದ ನಾಲಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ'
೨. 'ನಾರಾಯಣ ನಿನ್ನ ನಾಮದ ಸ್ಮರಣೆಯ ಸಾರಾಮೃತವನ್ನ ಬಾಯಿಗೆ ಬರಲಿ'.
೩. ತೊಗಲ ಚೀಲಒಂಬತ್ತು ಹರಕು ಒಳಗೆ ಬಿಗಿದು ನರ ಎಲುಬುಗಳ ಸರಕು'
೪. 'ದುಗ್ಗಾಣಿ ಎಂಬುದು ದುರ್ಜನ ಸಂಗ ದುಗ್ಗಾಣಿ ಬಲು ಕೆಟ್ಟದಣ್ಣ' (೯)

ಇಲ್ಲಿ ನಾಲಿಗೆ ಪ್ರತಿಮೆ, ವಿಚಾರವಿಲ್ಲದೆ ಪರರ ದೂಷಿಸುವುದು ಚಾಡಿ ಹೇಳುವುದು ಮುಂತಾದವುಗಳನ್ನು ಮಾಡದೆ, ಹರಿನಾಮಸ್ಮರಣೆಯನ್ನು ಮಾಡುವಂತೆ ಬೋಧಿಸುತ್ತದೆ. ಇಲ್ಲಿ ಕವಿಯು ನಾಲಗೆಗೂ ನಾಮಸ್ಮರಣೆಗೂ ಇರುವ ಒಳ ಸಂಬಂಧವನ್ನು ಹೊರತೆಗೆದು, ನಾಲಗೆಯನ್ನು ಕೆಟ್ಟಮಾತುಗಳಿಗಾಗಿ ಉಪಯೋಗಿಸದೆ, ಕೇವಲ ಹರಿನಾಮಸ್ಮರಣೆಗಾಗಿ ಉಪಯೋಗಿಸಬೇಕೆಂದು ತಿಳಿಸಿ ಭಕ್ತಿಪ್ರಜ್ಞೆಯನ್ನು ಬೆಳೆಸುತ್ತದೆ. ಮತ್ತು ದಾಸರು ಇಲ್ಲಿ ಹರಿಯನಾಮಸ್ಮರಣೆಗೂ ಅಮೃತಕ್ಕೂ ಇರುವ ಅತ್ಯಂತ ಸೂಕ್ಷ್ಮ ಒಳಅರ್ಥವನ್ನು ತೆರೆದು ತೋರುತ್ತಾರೆ, ತೊಗಲಚೀಲ ರೂಪಕದ ಮುಖಾಂತರ 'ದೇಹ' ಪ್ರತಿಮೆಯು ಅರ್ಥವಿಸ್ತರತೆ ಯನ್ನು ಪಡೆದುಕೊಂಡು ಇದು ತ್ವಗ್ರಕ್ತ, ಮಾಂಸದ, ಹುಳುಕು ಮಲಮೂತ್ರ ಬಗೆಬಗೆ ಕಫ, ವಾತ, ಪಿತ್ತದ ಸರಕು ಎಂದು ವಿವರವಾಗಿ ಬಿಂಬಿಸುತ್ತದೆ ದುರ್ಜನರ ಸಂಗವು ಬಲು ಕೆಟ್ಟದ್ದು ಎಂಬುದನ್ನು 'ದುಗ್ಗಾಣಿ' ಪ್ರತಿಮೆಯು ತಿಳಿಸುತ್ತಾ ಹಣದ ಮದವೂ ಕೂಡ ಅಷ್ಟೇಕೆಟ್ಟದ್ದು ಎಂದು ತಿಳಿಸುತ್ತದೆ.

ಪ್ರತಿಮೆ ಈಗಾಗಲೇ ಗಮನಿಸಿದಂತೆ, ಉಪಮೆ ರೂಪಕ ಇತ್ಯಾದಿಗಳಿಗಿಂತ ಬೇರೆಯಾಗಿ ತೋರಿದರೂ ಅದು ಉಪಮೆ ಹಾಗೂ ರೂಪಕಗಳನ್ನು ತನ್ನ ರಚನೆಯಲ್ಲಿ ಒಳಗೊಳ್ಳುವ ಅಭಿವ್ಯಕ್ತಿ ವಿಶೇಷವಾಗಿದೆ.

ಪ್ರತಿಮೆ ಒಂದರ ಮೂಲಕ ಮತ್ತೊಂದನ್ನು ತೆರೆಯುವಂಥದ್ದು ಮತ್ತು ಎರಡು ವಸ್ತುಗಳ ನಡುವೆ ಇರುವ ಸಾಮ್ಯತೆಯು ಅಜ್ಞಾತವಾದುದನ್ನು ಜ್ಞಾತವಾಗಿಸುತ್ತದೆ ಕೆಲವುಬಾರಿ ಮೇಲು ನೋಟಕ್ಕೆ ಯಾವ ಸಾಮ್ಯವು ಕಾಣಿಸದಿದ್ದರೂ ಕೂಡ ಎರಡು ವಸ್ತುಗಳಲ್ಲಿರುವ ಆಂತರಿಕ ಸಾದೃಶ್ಯತೆಯಲ್ಲಿ ಭಾವಸಂಚಾರವಾಗಿ ಹೊಸತೊಂದು ಅರ್ಥಜಾಗ್ರತವಾಗುತ್ತದೆ. ಅದೇ ಭಾವಪ್ರತಿಮೆಯಾಗಿ ರೂಪುಗೊಳ್ಳುತ್ತದೆ.

'ಹುಚ್ಚು ಹಿಡಿಯಿತು ಎನಗೆ ಹುಚ್ಚು ಹಿಡಿಯಿತು ಪ।
ಅಚ್ಯುತನ ನಾಮವೆಂಬ ಮೆಚ್ಚು ಮದ್ದು ತಲೆಗೆ ಏರಿ' ಅ।

ಕಾಗದ ಬಂದಿದೆ ನಮ್ಮ ಕಮಲನಾಭನದು ಈ ಪ।
ಕಾಗದವನ್ನು ಓದಿಕೊಂಡು ಕಾಲಕಳೆಯಿರೋ' ಅ।

'ಹಣ್ಣು ಬಂದಿದೆ ಕೊಳ್ಳಿರೋ ಪ।

ಹಣ್ಣು ಎಂಬೋ ಹರಿನಾಮ ಎಂಬೋ ಶೃತಿಯ ನಿಂಬೆಯ: ॥೨॥

'ನಂದನ ತನಯ ಗೋವಿಂದನ ಭಜಿಸುದಾನಂದವಾದ ಮಿಠಾಯಿ' (೧೦)

ಪುರಂದರದಾಸರು ಮೇಲಿನ ಕೀರ್ತನೆಗಳಲ್ಲಿ 'ಹುಚ್ಚು' ಕಾಗದ, ಹಣ್ಣು' 'ಮಿಠಾಯಿ' ಎಂಬ ಉಕ್ತಿವಿಶೇಷಗಳನ್ನು ಬಳಸುತ್ತಾರೆ ಇಲ್ಲಿ ವಾಚ್ಯವಾದ ಅರ್ಥಗಳನ್ನು ಬಿಟ್ಟು ಸೂಚಿತವಾಗುವ ಬೇರೆಅರ್ಥವು ತೋರುತ್ತದೆ. ಅಂತಹ ಅರ್ಥಗಳಿಗೆ ವ್ಯಂಗಾರ್ಥ ಎಂದು ನಮ್ಮ ಅಲಂಕಾರಿಕರು ಕರೆದಿದ್ದಾರೆ. ವ್ಯಂಗಾರ್ಥವೇ ಪ್ರಧಾನವಾಗಿ ಸೂಚಿತವಾಗಿರುವ ಉಕ್ತಿ ವಿಶೇಷವನ್ನು 'ಧ್ವನ್ಯೋಕ್ತಿ' ಎಂದು ಕರೆಯಲಾಗಿದೆ. ಹರಿಯ ನಾಮಸ್ಮರಣೆಯನ್ನು ಸಿಹಿಯಾದ 'ಮಿಠಾಯಿ' 'ಹಣ್ಣು' ಎಂದು ಹೇಳುತ್ತಾರೆ ಹಾಗೂ ಹರಿನಾಮವೆಂಬ ಕಾಗದ ಸುದ್ದಿಯೊಂದನ್ನು ತರುವುದು. ಕಾಮಕ್ರೋಧ ಬಿಡಿರೆಂದು, ನೇಮ, ನಿಷ್ಠೆಯಲ್ಲಿರಿ ಎಂದು ಹೆಣ್ಣುಹೊನ್ನು ಮಣ್ಣಿನಾಸೆ ಬಿಡಿರೆಂಬೋ ಕಾಗದ ಬಂದಿದೆ ಎಂದು ತಿಳಿಸುತ್ತಾ ಕವಿಪ್ರಜ್ಞೆಯಲ್ಲಿ ಬರುವ ಅಥವಾ ಗೋಚರವಾಗುವ ವಾಸ್ತವಾಂಶಗಳನ್ನು ಓದುಗರ ಗಮನಕ್ಕೆ ಬರುವಂತೆ ಧ್ವನ್ಯೋಕ್ತಿಗಳ ಮೂಲಕ ತಿಳಿಸುವ ಕೌಶಲ್ಯ ಈ ಪ್ರತಿಮೆಗಳಿಗೆ ಇದೆ. 'ಹುಚ್ಚು' ಪ್ರತಿಮೆ ಭಗವಂತನಲ್ಲಿರಿಸಿದ ಭಕ್ತಿಯ ಭಾವತೀವ್ರತೆಯನ್ನು ತುಂಬಿಕೊಂಡಿದೆ. ಪಾಪವೆಂಬ ಅಂಗಿಯನ್ನು ಹರಿಯುವೆ, ಕ್ಲೇಶವೆಂಬ ಮುಡಿದ ಹೂ ಕಿತ್ತು ಕಿತ್ತು ಬಿಸಾಡುವೆ, ದೋಷವೆಂಬ ಗೋಡೆಯನ್ನು ಕೆರೆದು ಹಾಕುವೆ ಕಷ್ಟವೆಂಬ ಕುಂಭವನ್ನು ಒಡೆದು ಹಾಕುವೆ, ನಿಷ್ಠರನ್ನು ಕಂಡರವರ ಹಿಂದೆ ಹಿಂದೆ ತಿರುಗುವೆ, ದುಷ್ಟರನ್ನು ಕಂಡರೆ ಕಲ್ಲುಬೀಸುವೆ ಮಂದಮತಿಗಳನ್ನು ಕಂಡರೆ ಮೂಕನಾಗುವೆ, ನಿಂದೆ ಮಾಡುವವರ ಮೇಲೆ ಮಣ್ಣುಚೆಲ್ಲುವೆ, ಎಂದು ಹುಚ್ಚಿನ ಲಕ್ಷಣಗಳನ್ನು ವಿಧವಿಧವಾಗಿ ಬಣ್ಣಿಸುತ್ತಾ ಭಕ್ತಿಯಿಂದ ಹರಿನಾಮಸ್ಮರಣೆಯಿಂದ ಎಲ್ಲ ಕ್ಲೇಶಗಳೂ ಕಳೆದುಕೊಂಡು ಸುಖಹೊಂದಬಹುದೆಂಬ ವಿಶೇಷವಾದ ಅರ್ಥವನ್ನು ಹೊಂದಿಕೊಂಡು ಈ ಪ್ರತಿಮೆಗಳು ಓದುಗನ ಮನೋನೆಲೆಯನ್ನು ತಲುಪುತ್ತವೆ.

<u>ಚಿಹ್ನೆ:</u> ಚಿಹ್ನೆ ಚೆನ್ನಾಗಿ ಬಲ್ಲ ವಸ್ತುಗಳನ್ನು ಮೊಟಕಾಗಿ ಹೇಳುವ ಸಾಧನ. ಚಿಹ್ನೆ ವ್ಯಕ್ತಿಯ ಮನಸ್ಸಿನಲ್ಲಿ ಅಥವಾ ಮನುಷ್ಯನ ಅಂತರ್ದೃಷ್ಟಿಯಲ್ಲಿ ಉದ್ಭವಿಸುತ್ತದೆ ನಂತರ ಅದನ್ನು ಸಾರ್ವತ್ರಿಕವಾಗಿ ಬಳಸತೊಡಗಿದಂತೆಲ್ಲ ಒಂದು ಸಾರ್ವತ್ರಿಕ ಅರ್ಥವನ್ನು ಕೊಡುವಲ್ಲಿ ಸಫಲವಾಗುತ್ತದೆ. ಉದಾಹರಣೆಗೆ ಕಾಗದದ ಮೇಲೆ ಒಂದು ಸರಳ ರೇಖೆಯನ್ನು ಎಳೆದು ಎರಡೂ ಬಿಂದುಗಳ ಮೇಲೆ 'ಅ' 'ಬ' ಎಂಬ ಚಿಹ್ನೆಯನ್ನು ಕೊಡಬಹುದು ಅಥವಾ ಅದನ್ನು ಬದಲಾಯಿಸಿ 'ಕ' 'ಗ' ಎಂದಾದರೂ ಕೊಡಬಹುದು. ಇಲ್ಲಿ ಚಿಹ್ನೆಯಿಂದ ವಸ್ತುವಿನ ಅರ್ಥ ಬದಲಾಯಿಸುವುದಿಲ್ಲ ಚಿಹ್ನೆ ಮತ್ತು ಅದರ ವಸ್ತುಗಳ ನಡುವೆ ಸಾವಯವ ಸಂಬಂಧವಿರುವುದಿಲ್ಲ. ಗಣೀತದಲ್ಲಿ ಬರುವ +, –, ÷, × ಮುಂತಾದ ಚಿಹ್ನೆಗಳು ಬೇರೊಂದು ವಸ್ತುವಿನ ಸೂಚಕವಾಗಿ ತಾನು ಹಿಂದೆ ಸರಿದು ತನ್ನ ನಿರ್ದೇಶ್ಯವನ್ನು ಮಾತ್ರ ತೋರಿಸುತ್ತದೆ. ಗಣೀತಶಾಸ್ತ್ರದಲ್ಲಿ ಚಿಹ್ನೆಯ ಮೌಲ್ಯವು ಗಣೀತ ನಿಯಮವನ್ನು ಅವಲಂಬಿಸಿ ರುತ್ತದೆ.

ಚಿಹ್ನೆಯು ಹುಟ್ಟುವ ರೀತಿ ಯಾವುದು? ಅದು ತನ್ನಿಂದ ತಾನೇ ಅವಿರ್ಭಾವವಾದದ್ದೇ ಅಥವಾ ತರ್ಕಬದ್ಧವಾಗಿ ಯೋಚಿಸಿ ತಾತ್ಕಾಲಿಕವಾಗಿ ಸೃಷ್ಟಿಸಿದ್ದೇ? ಉದಾಹರಣೆಗೆ ಕಂಪ್ಯೂಟರ್‌ನ ಬಲಭಾಗದ ಮೇಲ್ಗಡೆ

[–] [▭] [X] ಚಿಕ್ಕದಾಗಿ [Minimise], ದೊಡ್ಡದಾಗಿ [Maximise] ಹಾಗೂ ಮುಚ್ಚುವುದು [Close] ಎಂದು ಅರ್ಥಕೊಡುವ ಚಿನ್ಹೆಗಳಿವೆ. ಈ ಚಿನ್ಹೆಗಳನ್ನು ಕಂಪ್ಯೂಟರ್ ತಂತ್ರಜ್ಞರು ಒಂದು ಅರ್ಥವನ್ನು ಹೇಳಲು ತಾತ್ಕಾಲಿಕವಾಗಿ ಸೃಷ್ಟಿಸಿದ್ದು, "ಚಿನ್ಹೆ ಅವಿರ್ಭಾವವಾಗುವುದಿಲ್ಲ ಅದರ ಕ್ಷೇತ್ರವು ತರ್ಕಜ್ಞಾನಕ್ಕೆ ಸೀಮಿತವಾದುದು. ತರ್ಕಜ್ಞಾನವು ಯಾವಾಗಲು ಸೋಪಾಧಿಕ ಗುಣಉಳ್ಳದ್ದು ಆದುದರಿಂದ ಪ್ರಜ್ಞಾಪೂರ್ವಕವಾಗಿ ಅದರ ಹಿಂದು ಮುಂದುಗಳನ್ನು ಅರ್ಥದ ಉದ್ದೇಶ ಮಿಟಟತಿಗಳನ್ನು ಮೊದಲು ಯೋಚಿಸಿಯೇ ಚಿನ್ಹೆಯನ್ನು ಸೃಷ್ಟಿಸಿರುತ್ತಾರೆ. X ಬದಲು Y ಆಗಬಹುದು, Y ಬದಲು M ಆಗಬಹುದು. ಅನೇಕ ವೇಳೆ ಬರೀಯ ಪ್ರಯೋಗಾರ್ಥವಾಗಿಯೇ ಚಿನ್ಹೆಗಳ ಸೃಷ್ಟಿಯು ತಾತ್ಕಾಲಿಕವಾಗಿ ಆಗಿರುತ್ತದೆ". (೧೧) ದಾರಿಯಲ್ಲಿಹೋಗುವಾಗ <– ಎಡಕ್ಕೆ, ಬಲಕ್ಕೆ –> ಹಾಗೂ । ನೇರವಾಗಿ ಎಂಬರ್ಥಗಳನ್ನು ತಿಳಿಸುವ ಚಿನ್ಹೆಗಳು, ಮತ್ತು ಕೆಂಪು ದೀಪ–ಅಪಾಯವಿದೆ ಎಂಬರ್ಥಗಳನ್ನು ತಿಳಿಸುವ ಚಿನ್ಹೆಯಾಗಿ ಸಾಮಾನ್ಯ ಅರ್ಥವನ್ನು ತಿಳಿಸುತ್ತವೆ, ಕೆಲವೊಂದು ಸಾರಿ ಒಂದೇ ಚಿನ್ಹೆಯು ಬೇರೆ ಬೇರೆ ಸ್ಥಳಗಳಲ್ಲಿ ಬೇರೆಬೇರೆಯಾಗಿಅರ್ಥೈಸುತ್ತದೆ. + ಎಂಬ ಚಿನ್ಹೆ ಕೂಡಿಸು ಎಂಬರ್ಥದಲ್ಲೂ ಆಸ್ಪತ್ರೆ ಎಂದು ತೋರಿಸುವಲ್ಲಿಯೂ ಹಾಗೂ ಕ್ರೈಸ್ತರಿಗೆ ದೈವತ್ವದ ಪ್ರತೀಕವಾಗಿಯೂ ಬಳಸಲ್ಪಡುತ್ತದೆ ಚಿನ್ಹೆ ಕೆಲವೊಂದು ಬಾರಿ ಸಂಕೇತವಾಗಿಯೂ ಪ್ರತೀಕವಾಗಿಯೂ ಕಾರ್ಯನಿರ್ವಹಿಸುತ್ತದೆ. ಚಿನ್ಹೆ ಹೆಚ್ಚಿನ ಅರ್ಥವನ್ನು ಪಡೆದುಕೊಂಡು ಪ್ರತಿಮೆಯಾಗಿ ಪರಿವರ್ತನೆಗೊಳ್ಳುತ್ತದೆ.

ಆದದ್ದೆಲ್ಲಾ ಒಳಿತೇ ಆಯಿತು, ನಮ್ಮ  
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು. ಪ।  
ದಂಡಿಗೆ ಬೆತ್ತ ಹಿಡಿಯುವುದಕ್ಕೆ  
ಮಂಡೆಬಾಗಿ ನಾಚುತಲಿದ್ದೆ  
ಹೆಂಡತಿ ಸಂತತಿ ಸಾವಿರವಾಗಲಿ  
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧।

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ  
ಭೂಪತಿಯೆಂದು ಗರ್ವಿಸುತ್ತಿದ್ದೆ  
ಆ ಪತ್ನೀ ಕುಲ ಸಾವಿರವಾಗಲಿ  
ಗೋಪಾಳ ಬುಟ್ಟಿ ಹಿಡಿಸಿದಳಯ್ಯ ೨।

ತುಳಸಿ ಮಾಲೆ ಹಾಕುವುದಕ್ಕೆ  
ಅರಸನೆಂದು ತಿರುಗುತಲಿದ್ದೆ  
ಸರಸಿಜಾಕ್ಷ ಪುರಂದರ ವಿಠಲನು  
ತುಳಸಿಮಾಲೆ ಹಾಕಿಸಿದನು ೩। (೧೨)

ದಂಡಿಗೆ ಬೆತ್ತ, ಗೋಪಾಳ ಬುಟ್ಟಿ. ತುಳಸಿಮಾಲೆ ಈ ಮೂರು ಹರಿದಾಸ ವೃತ್ತಿಯ ಚಿನ್ಹೆಗಳು ಇವುಗಳು ಅರ್ಥವಿಸ್ತರಣೆಗಳನ್ನು ಪಡೆದುಕೊಂಡು 'ಒಳಿತು' ಪ್ರತಿಮೆಯಾಗಿ ಮೂಡಿವೆ. ಇದು ಬಹುಶಃ ಪುರಂದರದಾಸರ ಜೀವನಕ್ಕೆ ಸಂಬಂಧಿಸಿದ ಒಂದು ಪದ ಎಂಬ ಪ್ರತೀತಿಯಿದೆ. ವ್ಯಕ್ತಿಯ ಆಂತರಿಕ ವಿಕಾಸಕ್ಕೆ ಪತ್ನಿ ಹೇಗೆ

ಸಹಾಯಕಳಾಗಬಲ್ಲಳು ಎಂಬ ವಿವರಣೆ ಇಲ್ಲಿದೆ. 'ಒಳಿತು' ಪ್ರತಿಮೆ ಪುರಂದರದಾಸರ ಬದುಕಿನಲ್ಲಿ ಒಂದು ಮಹತ್ವದ ತಿರುವಿನ ಘಟನೆಯನ್ನು ತಿಳಿಸುತ್ತದೆ. ಪುರಂದರದಾಸರಿಗೆ ಮೊದಲಲ್ಲಿ ಅದು ಅರ್ಥವಾಗದೇ ಇದ್ದರೂ ಪರಿಣಾಮದಲ್ಲಿ ಅದರಿಂದ ಹಿತವೇ ಆಯಿತು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಪುರಂದರದಾಸರು ತಮ್ಮ ಪೂರ್ವಾಶ್ರಮದಲ್ಲಿ ಭೂಪತಿಯಾಗಿದ್ದು, ಹರಿದಾಸರ ಬಗ್ಗೆ ಹೀನಾಯವಾದ ಅಭಿಪ್ರಾಯ ಇಟ್ಟುಕೊಂಡಿದ್ದು, ಈಗ ಹರಿದಾಸರಾಗಿ ಒಳಿತನ್ನು ಕಾಣಲು ಅವರ ಹೆಂಡತಿಯೇ ಕಾರಣವೆಂದು ತಿಳಿಸುತ್ತಾ ಅವಳನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

ಗೂಟನಾಮವ ಹೊಡೆದು ಗಂಡು ತಂಬಿಗೆ ಹಿಡಿದು
ಗೋಟಂಚು ಧೋತರ ಮಡಿಯನುಟ್ಟು
ದಾಟು ಕಾಲಿಡುತ ನಾ ಧರೆಯೊಳಗೆ ಬರಲೆನ್ನ
ಬೂಟಕತನ ನೋಡಿ ಭ್ರಮಿಸದಿರಿ ಜನರೆ (೧೩)

ಗೂಟನಾಮ, ಗೋಟಂಚು ಧೋತರ ಇವೆರಡು ಹರಿದಾಸ ವೃತ್ತಿಯ ಚಿನ್ಹೆಗಳು ಭಾಗವತರೂ ಹರಿದಾಸರೂ ಧರಿಸುವ ದ್ವಾದಶನಾಮಗಳು (ಊರ್ಧ್ವ ಪುಂಡ್ರ) ಮತ್ತು ದಪ್ಪವಾದ ಅಂಚುಳ್ಳ ಪಂಚೆ ಇವೆರಡೂ ಹರಿದಾಸರ ವೇಷಗಳು. ಈ ಚಿನ್ಹೆಗಳು ಪ್ರತಿಮೆಯಾಗಿ "ಹರಿದಾಸರು ವೇಷಭೂಷಣಗಳನ್ನು ಧರಿಸಿದರೆ ಮಾತ್ರ ಸಾಲದು ಒಳಗಿನ ಪರಿಕರಗಳಿಂದಲೂ ಸಜ್ಜಿತರಾಗಿ ಸಾಧನ ಶರೀರದಿಂದ ಮನೋಧರ್ಮವನ್ನು ಬದಲಿಸಿಕೊಳ್ಳಬೇಕು, ಬೂಟಕತನ ವನ್ನು ಬಿಡಬೇಕು" ಎಂಬ ಅರ್ಥವನ್ನು ತಿಳಿಸುತ್ತವೆ.

ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿ
ಪಶುವಾಹನನಾಮದೊಂದು ಮೂರುತಿ
ನೊಸಲೊಳು ಸಿರಿನಾಮ ಶಂಖ ಚಕ್ರಗದೆ
ಬಿಸಜವ ಪಿಡಿದಿಹದೊಂದು ಮೂರುತಿ
ಕುಶಲದಿ ಜಪಮಣಿಮಾಲೆ ಚತುರ್ಮುಖ
ವಸುದೆಯ ಸೃಜಿಸುವದೊಂದು ಮೂರುತಿ (೧೪)

ತ್ರಿಶೂಲ, ಡಮರುಗ, ಭಸ್ಮ, ರುದ್ರಾಕ್ಷಿ ಚಿನ್ಹೆಗಳು ರುದ್ರದೇವರನ್ನು ಸಂಕೇತಿಸಿದರೆ ಶಂಖ ಚಕ್ರಗಳು ವಿಷ್ಣುವನ್ನು ಮತ್ತು ನಾಲ್ಕುಮುಖಗಳು ಬ್ರಹ್ಮನನ್ನು ಸಂಕೇತಿಸುತ್ತವೆ. ಚಿನ್ಹೆ ಸಂಕೇತಗಳಾಗಿ 'ಅನಂತರ ಮೂರುತಿ' ಸುಳಾದಿಯಲ್ಲಿ ಹರಿಯೇ ಎಲ್ಲ ದೇವತೆಗಳಲ್ಲಿಯ ಅಂತರ್ಯಾಮಿ, ಪ್ರೇರಕ, ನಿಯಾಮಕ, ಸಾಕ್ಷಿಕ ಎಂಬುದನ್ನು ವಿವರವಾಗಿ ತಿಳಿಸುತ್ತವೆ.

ಅಂಜುವವರಿಗೆ ಅರಳಿಮರ ರಕ್ಕಸಿನಂತೆ
ಅಂಜೆನು ನಿನಗಿನ್ನು ಪುರಂದರ ವಿಠಲ (೧೫)

ಅರಳಿಮರವು ದೊಡ್ಡದಾಗಿರುವ ಚಿನ್ಹೆ. ನಿಂದಾಸ್ತುತಿ ಸುಳಾದಿಯಲ್ಲಿ ಅರಳಿಮರವೇ ಬ್ರಹ್ಮರಾಕ್ಷಸನಂತೆ ಅಂಜುವವರಿಗೆ ತೋರುವುದು ಆದರೆ ನಾನಿನ್ನ ಕಂಡು ಅಂಜೆನು ಎನ್ನುತ್ತಾರೆ ಪುರಂದರದಾಸರು.

**ಸಂಕೇತಗಳು:** ಭಾಷೆಯ ವಿಕಾಸದಲ್ಲಿ ಸಂಜ್ಞಾ ಭಾಷೆಯು ಮೊದಲು ಹುಟ್ಟಿತೆಂದೂ ತಿಳಿದುಬರುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಭಾವನೆ, ಆಶೆ,ಇಚ್ಛೆ, ಆಲೋಚನೆಗಳನ್ನು ಇನ್ನೊಬ್ಬರಿಗೆ ತಿಳಿಸಲು ಸಂಜ್ಞೆಯನ್ನು ಉಪಯೋಗಿಸುತ್ತಾನೆ. ಉದಾಹರಣೆಗೆ 'ಬಾ' ಎನ್ನಲು ಕೈ ಸನ್ನೆ 'ಸಾಕು' 'ನಿಲ್ಲು', ಎನ್ನಲು ಕೈತೋರಿಸುವುದು ಮುಂತಾದವುಗಳು ಅಂತರಂಗದ ಭಾವನೆಗಳನ್ನು ಅಭಿವ್ಯಕ್ತಿಪಡಿಸುವ ಪ್ರಯತ್ನದ ಫಲವಾಗಿ ಸಂಭವಿಸುತ್ತದೆ ಸಂಕೇತಗಳ ರಚನೆ. ಸಂಕೇತಗಳಲ್ಲಿ ಕೆಲವು ಸಹಜ, ಕೆಲವು ಕೃತಕ, ತೊಟ್ಟಿಲಲ್ಲಿ ಅಳುತ್ತಿರುವ ಮಗು ಅಳುವನ್ನು ತನ್ನ ತಾಯಿಯ ಗಮನ ಸೆಳೆಯಲು ಸಂಕೇತವಾಗಿ ಬಳಸಿಕೊಳ್ಳುತ್ತದೆ, ಇಲ್ಲಿ ಮಗುವಿನ 'ಅಳು' ಹಸಿವೆಯ ಸಂಕೇತವಾಗಿರಬಹುದು ಅಥವಾ ಇನ್ನಾವುದೋ ಸಂದೇಶವನ್ನು ತಿಳಿಸುವ ಸಾಧನವೂ ಆಗಿರಬಹುದು. 'ನಗು' ಸಂತೋಷದ ಸಂಕೇತ, 'ಅಳು' ದುಃಖದ ಸಂಕೇತ ಮೋಡ ಮುಸುಕಿದ ವಾತಾವರಣ ಮಳೆಬರುವ ಸಂಕೇತ, ಗಿಡಮರಗಳು ಚಿಗುರೊಡೆಯುವುದು, ಕೋಗಿಲೆ ಹಾಡುವುದು ವಸಂತಮಾಸದ ಆಗಮನದ ಸಂಕೇತ, ಇವೆಲ್ಲವೂ 'ಸಹಜ ಸಂಕೇತ'ಗಳಾದರೆ, ಅ.ಆ.ಇ.ಈ, A. B. C. D, ಕೂಡುವ (+), ಕಳೆಯುವ (–), ಗುಣಿಸುವ (X), ಭಾಗಿಸುವ (÷), ಚಿನ್ಹೆಗಳು, ಮನುಷ್ಯನನ್ನು ಬುದ್ಧಿಪೂರ್ವಕವಾಗಿ ಸೃಷ್ಟಿಸಿರುವ 'ಕೃತಕ ಸಂಕೇತ' ಗಳು. ಈ ಸಂಕೇತಗಳು ಭಾಷೆಯಿಂದ ಭಾಷೆಗೆ, ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತವೆ. ಸಂಕೇತಗಳ ಸೃಷ್ಟಿಯು ಭಾಷೆಯ ಬೆಳವಣಿಗೆಗೆ ಸಹಾಯಕ ವಾಗುತ್ತದೆ. ಸಹಜ ಸಂಕೇತಗಳಲ್ಲಿ ಭಾವಮಯತೆ ಇದೆ. ಇಲ್ಲಿ ಸಂಕೇತಗಳು ಅಂತರಂಗದ ಭಾವನೆಗಳನ್ನು ಇಂದ್ರಿಯ ಗೋಚರವಾಗುವಂತೆ ಮೂರ್ತಗೊಳಿಸುತ್ತವೆ. ಸಾಹಿತ್ಯದಲ್ಲಿ ಸಂಕೇತಗಳನ್ನು ಬಳಸುವ ರೂಢಿ ಬಹಳ ಹಿಂದಿನಿಂದಲೂ ಇದ್ದು ಇತ್ತೀಚೆಗೆ ಅದರ ಬಳಕೆ ಹೆಚ್ಚಾಗಿದೆ. ಬೇಂದ್ರೆಯವರ 'ಕುರುಡುಕಾಂಚಾಣ' ಕಾವ್ಯದಲ್ಲಿ ಕಾಂಚಾಣವೆಂಬ ರಾಕ್ಷಸನು, ಅಮಾನುಷ ಶಕ್ತಿ, ನಿರ್ದಯತೆ, ಹೃದಯ ಹೀನತೆ, ಬುದ್ಧಿಗೇಡಿತನ, ಪೆದ್ದತನದ ಸಂಕೇತವಾಗಿ ನಿಲ್ಲುತ್ತಾನೆ. ಪಾಶ್ಚಾತ್ಯ ಸಾಹಿತ್ಯದಲ್ಲಿ ಜನಿಸಿ ೧೮೪೯ ರಲ್ಲಿ ತನ್ನ ಪ್ರಾಯದಲ್ಲಿಯೇ ಗತಿಸಿದ ಅಮೇರಿಕನ್ ಕವಿ ಪೋ ಸಾಂಕೇತಿಕತೆಯನ್ನು ಬಳಸಲು ಮೊದಲು ಪ್ರಚೋದನೆ ಕೊಟ್ಟವನು, 'ಕನ್ನಡಕ, ದೀಪ, ಪತ್ರ' ಮುಂತಾದ ಸಂಕೇತಗಳನ್ನು ತನ್ನ ಪತ್ತೇದಾರಿ ಕಥೆಗಳಲ್ಲಿ ಬಳಸುತ್ತಾನೆ. 'ಪೋ ನ ಕತೆಗಳೂ, ಪದ್ಯಗಳೂ ಫ್ರೆಂಚ್‌ಗೆ ಅನುವಾದಿತವಾಗಿ 'ಪೋ' ನ ಕೀರ್ತಿ ಇಂಗ್ಲೆಂಡ್, ಅಮೇರಿಕಾಗಳಲ್ಲಿಗಿಂತಲೂ ಫ್ರಾನ್ಸಿನಲ್ಲಿ ಹೆಚ್ಚು ಪ್ರಚುರವಾಗಿರುವುದು ಅವನ ಸೌಂದರ್ಯ ಪ್ರಜ್ಞೆಗೂ ಸಾಕ್ಷಿಯಾಗಿದೆ' (೧೬)

ಸಂಸ್ಕೃತ ಕಾವ್ಯದಲ್ಲಿಯೂ ದೀಪ ಮೇಘ(ಮೋಡ) ಮುಂತಾದ ಸಂಕೇತಗಳನ್ನು ಬಳಸುತ್ತಾರೆ. ಕಾಳಿದಾಸನು 'ಶಾಕುಂತಲ' ನಾಟಕದಲ್ಲಿ ಉಂಗುರವನ್ನು ಪ್ರೀತಿಯ ಸಂಕೇತ ವನ್ನಾಗಿ ಹಾಗೂ ಭಾಸನು 'ಪ್ರತಿಮಾ' ನಾಟಕದಲ್ಲಿ ಎಲ್ಲ ರಾಜರ ಬಣ್ಣದ ಚಿತ್ರಗಳ ಬಗ್ಗೆ ವಿವರಣೆ ನೀಡುತ್ತಾ 'ಪ್ರತಿಮಾ' ಶಬ್ದವನ್ನು ಬಳಸುತ್ತಾನೆ. ಅಲ್ಲಿ ಚಿತ್ರ ಪ್ರತಿಮೆಗಳು ವ್ಯಕ್ತಿಗಳು ಮರಣ ಹೊಂದಿದುದನ್ನು ತಿಳಿಸುತ್ತವೆ. ಋಗ್ವೇದದಲ್ಲಿ ಬರುವ ಒಂದು ಆಧ್ಯಾತ್ಮಿಕ ಒಗಟನ್ನು ಗಮನಿಸೋಣ.

ದ್ವಾ ಸುಪರ್ಣ ಸಯುಜಾ ಸಖಾಯಾ

ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯ ಪಿಪ್ಪಲಂ ಸ್ವಾದ್ವತ್ತಿ
ಅವಶ್ನನ್ನನ್ಯೋಽಭಿಚಾಕಶೀತಿ। (೧೭)

ಮರದಲ್ಲಿನ ಹಕ್ಕಿಗಳೆರಡರಲ್ಲಿ ಒಂದು ಹಣ್ಣನ್ನು ತಿನ್ನುತ್ತದೆ ಮತ್ತೊಂದು ತಿನ್ನುತ್ತಿಲ್ಲ ಎಂಬುದು ಇದರ ತಾತ್ಪರ್ಯ. ಇಲ್ಲಿ ಜೀವಾತ್ಮ ಪರಮಾತ್ಮಗಳ ರೂಪಕದಿಂದ ಬದುಕನ್ನು ಪ್ರತಿಮಯಿಸುವ ಬಯಕೆ ಸ್ಪಷ್ಟವಾಗುತ್ತದೆ. ಇಂಥ ರಹಸ್ಯೋಕ್ತಿಗಳು ಅತ್ಯಂತ ಆಳವಾದ ಅರ್ಥವನ್ನು ಒಳಗೊಂಡಿದ್ದು, ವ್ಯಕ್ತಪಡಿಸುವವನಿಗೂ, ಸಂಬಂಧಪಟ್ಟ ದೇವತೆಗೂ, ವಿಧಿಗೂ ನಿಚ್ಚಳವಾದ ಸಂಪರ್ಕವನ್ನು ಪಡೆದುಕೊಂಡಿರುತ್ತವೆ, ಇದು ಸಾಂಕೇತಿಕತೆಯ ಮೂಲಕ ಸಾರ್ಥಕಗೊಳ್ಳುತ್ತದೆ. ಇದನ್ನೇ ಪುರಂದರದಾಸರು ಬೀದಿಯಲ್ಲಿ ಕಣಿ ಹೇಳುತ್ತಾ ಬರುವ ಬುಡುಬುಡಿಕೆಯವರ ಹಾಡಿನ ಧಾಟಿಯಲ್ಲಿ ರಚಿಸಿದ್ದಾರೆ.

ಜಯ ಜಯವದೆ ಈ ಮನೆತನಕ
ಬಿಡು ಬಿಡು ಬಿಡು ಮನ ಸಂಶಯವ
. . . . . . . . . . . . . . . . . .
. . . . . . . . . . . . . . . . . .
ಒಂದೇ ಹಕ್ಕಿ ಹಣ್ತಿಂತೈತೆ
ಮತ್ತೊಂದ್ಹಕ್ಕಿ ನೋಡುತದಪ್ಪ
ಹಣ್ತಿಂದ್ಹಕ್ಕಿ ಬಡವಾಗೈತೆ
ತಿನ್ನದ ಹಕ್ಕಿ ಬಲಿತೈತಣ್ಣ
ಸುಳ್ಳಲ್ಲ ನೀ ಕೇಳೋ ತಮ್ಮ
ದ್ವಾ ಸುಪರ್ಣಾ ಶ್ರುತಿಯಲ್ಲೈತೆ (೧೮)

ಇಲ್ಲಿ ಎರಡು ಪಕ್ಷಿಗಳು ಜೀವಾತ್ಮ ಹಾಗೂ ಪರಮಾತ್ಮನನ್ನು ಸಂಕೇತಿಸುತ್ತವೆ.

ಸಂಕೇತಗಳಲ್ಲಿ ಎರಡು ಪ್ರಕಾರಗಳಿವೆ 'ಸಾರ್ವತ್ರಿಕ ಸಂಕೇತಗಳು' ಮತ್ತು 'ವೈಯಕ್ತಿಕ ಸಂಕೇತಗಳು', ಮನುಷ್ಯನ ಅನುಭವದಿಂದ ಅವನ ಅಂತರ್ಮನಸ್ಸಿನಲ್ಲಿ ಉದ್ಭವಿಸುವ ಸಂಕೇತಗಳು ಸಾರ್ವತ್ರಿಕವಾಗುತ್ತವೆ ಉದಾಹರಣೆಗೆ ನೀರು, ಮನೆ, ಬೆಳಕು, ಹಾವು, ಸಿಂಹ, ದೇವ, ದಾನವ ಮುಂತಾದವು. ಒಬ್ಬ ವ್ಯಕ್ತಿಯು ತಾತ್ಕಾಲಿಕವಾಗಿ ಸೃಷ್ಟಿಸುವ ಸಂಕೇತಗಳು. ವೈಯಕ್ತಿಕ ಸಂಕೇತಗಳಾಗುತ್ತವೆ. ಉದಾಹರಣೆಗೆ "ಹಳದಿ ಬಣ್ಣದ ಬಟ್ಟೆ ಧರಿಸಿ ಬಂದರೆ ನಿನ್ನ ಒಪ್ಪಿಗೆಯಿದೆ ಎಂದು ಭಾವಿಸುವೆ" 'ಮನೆಯ ಮುಂದೆ ಕೆಂಪು ವಸ್ತ್ರ ಹಾಕಿರುತ್ತೇನೆ' ಎಂಬವು ತಾತ್ಕಾಲಿಕ ವೈಯಕ್ತಿಕ ಸಂಕೇತಗಳು. ಬಾಹ್ಯ ಪ್ರಪಂಚದಲ್ಲಿಯ ಒಂದು ವಸ್ತುವಿಗೂ ಕವಿಯ ಅಂತರ್ಮನಸ್ಸಿನ ಅನುಭವಕ್ಕೂ ಹೇಗೋ ಒಂದು ಆತ್ಮೀಯ ಸಂಬಂಧ ಉಂಟಾಗಿ ಆ ವಸ್ತು ಸಂಕೇತವಾಗಿ ಬೆಳೆದು ಬಿಡುತ್ತದೆ. ಒಬ್ಬರಿಗೆ 'ಸಂಕೇತ'ದಲ್ಲಿ ಒಂದು ಅರ್ಥ ಹೊಳೆದರೆ, ಇನ್ನೊಬ್ಬರಿಗೆ ಇನ್ನೂ ಬೇರೆಯಾದ ಅರ್ಥ ಹೊಳೆಯಬಹುದು, ಸಂಕೇತಗಳ ಮೂಲ ಸ್ವರೂಪವೇ ಹಾಗಿದೆ ಅವುಗಳ ಅರ್ಥದ ಸೂಚ್ಯತೆಯನ್ನು ಸಂಪೂರ್ಣವಾಗಿ ತೀರಿಸಲು ಸಾಧ್ಯವಿಲ್ಲ ಸಾಂಕೇತಿಕತೆ ಸಾಹಿತ್ಯದ ಒಂದು ಅತ್ಯಂತ ಮಹತ್ವಪೂರ್ಣವಾದ ತಂತ್ರ.

ಕೃತಿಯಲ್ಲಿ ಅನೇಕ ಅರ್ಥಗಳನ್ನು ತುಂಬುವ, ಧ್ವನಿಸುವ, ಅನಿವಾರ್ಯವಾದ ತಂತ್ರ ಚಿನ್ಹೆಯಿಂದ ಸಂಕೇತವು ಹೇಗೆ ಬೆಳೆಯುತ್ತದೆ ಎಂದರೆ, ಚಿನ್ಹೆಯು ಬೇರೊಂದು ವಸ್ತುವಿನ ಸೂಚಕಮಾತ್ರ ಸಂಕೇತ ಹಾಗೂ ಅದರ ವಸ್ತುಗಳ ನಡುವೆ ಸಾವಯವ ಸಂಬಂಧವಿರುತ್ತದೆ. ಹಗಲಿನಲ್ಲಿ ಕಾಯುವ ಸೆಕೆಯು ಸಂಜೆ ಎಲ್ಲಿಯಾದರೂ ಬೀಳುವ ಮಳೆಯ ಸಂಕೇತ, ಮರದಲ್ಲಿ ಒಡೆಯುವ ಮೊಗ್ಗು ಮುಂದೆ ಕಾಯಿಯಾಗುವ ಸಂಕೇತ, ಬಿಸಿಯು ಜ್ವರದ ಸಂಕೇತ, ಈ ಸಂದರ್ಭಗಳಲ್ಲಿ ಸಂಕೇತವು ಸಂಕೇತವಾಗಿಯೇ ಉಳಿಯುತ್ತದೆ, ಸಂಜೆಗೆ ಬೀಳುವ ಮಳೆಯು ಮದ್ಯಾಹ್ನದ ಬಿಸಿಲಿನ ಸಂಕೇತವಾಗುವುದು ಮುಂದೆ ಬಲಿಯುವ ಕಾಯಿಯು ಮೊದಲು ಕಂಡ ಮೊಗ್ಗಿನ ಸಂಕೇತವಾಗುವುದು, ಮತ್ತು ಜ್ವರವು ಬಿಸಿಯ ಸಂಕೇತವಾಗುವುದು ಸಾಧ್ಯವಿಲ್ಲ. ಏಕೆಂದರೆ ಘಟನೆಗಳನ್ನು ಕಾರ್ಯಕಾರಣ ಸಂಬಧದ ಪೂರ್ವೋತ್ತರ ಕಾಲಿಕತೆಗಳು ಬಂಧಿಸಿರುತ್ತವೆ. ಈ ಘಟನೆಗಳಲ್ಲಿ ಸಂಕೇತವು ನಿರ್ದೇಶ್ಯದ ನೇರವಾದ ಕಾರಣವೇ ಆಗಬೇಕೆಂದಿಲ್ಲ ಕಾರ್ಯ–ಕಾರಣ ಸರಪಳಿಯಲ್ಲಿ ಸಂಕೇತವು ಕಾರಣದ ಕೊಂಡಿಗಳ ಕಡೆಗೂ, ನಿರ್ದೇಶ್ಯದ ಕಾರ್ಯದ ಕೊಂಡಿಗಳ ಕಡೆಗೂ ಇದ್ದು ಅವುಗಳ ನಡುವೆ ಇನ್ನೂ ಕೆಲವು ಕೊಂಡಿಗಳಿರಬಹುದು.

೧. 'ಮಧುಕರ ವೃತ್ತಿ ಎನ್ನದು ಬಲು ಚೆನ್ನದು'
ಪದುಮನಾಭ ಪಾದ ಪದುಮ ಮಧುಪವೆಂಬ' ಪು।

೨. 'ಲಂಗೋಟಿ ಬಲು ಒಳ್ಳೆದಣ್ಣ ಒಬ್ಬರ
ಹಂಗಿಲ್ಲದಂತೆ ಆಚಾರಕ್ಕೆ ಒದಗುವ' ಪು।

೩. 'ಗಿಳಿಯು ಪಂಜರದೊಳಿಲ್ಲ ಹರಹರಿಯೆ
ಬರಿ ಪಂಜರವಾಯಿತಲ್ಲ' ಪು।

೪.'ಪಾಪೋಸು ಹೊದವಲ್ಲ ಸ್ವಾಮಿ ಎನ್ನ ಪು।

ಪಾಪೋಸು ಹೋದವಲ್ಲ
ಅಪಾರ ದಿನಗಳಿಂದ ಅರ್ಜನೆ ಮಾಡಿದ' ಅ।

೫. 'ವಿದಿತ ದೈವಗಳೆಲ್ಲ ವಿಷ್ಣುವಿನ ಹಿಂದೆ
ಇದಕೆ ನಾಘಣಿಘಣಪ ಕೈಯಾಗೆ ಪಿಡಿವೆ' (೧೯)

ದುಂಬಿಯ ಅಲೆದಾಟವನ್ನು ಹರಿದಾಸರ ವೃತ್ತಿಗೆ ಹೋಲಿಸಲಾಗಿದೆ. ಇಲ್ಲಿ ದುಂಬಿಯ ಅಲೆದಾಟವು ಹರಿದಾಸರ ಅಲೆದಾಟಕ್ಕೆ ಸಂಕೇತವಾಗಿದ್ದು ಪ್ರತಿಮೆಯಾಗಿ ಮೂಡಿ ದುಂಬಿಯ ನೆಗೆದಾಟ ಝೇಂಕಾರಗಳನ್ನು ಹರಿದಾಸರ ನರ್ತನ ಗೀತಗಳಾಗಿ ಅರ್ಥೈಸುತ್ತದೆ. 'ಮಧುಕರ ವೃತ್ತಿ' ಎನ್ನುವುದು ಧರ್ಮಶಾಸ್ತ್ರದಲ್ಲಿ ಆಧ್ಯಾತ್ಮ ನಿಷ್ಠೆಯುಳ್ಳವರಿಗೆ ವಿಹಿತವಾದ ವೃತ್ತಿ ಎಂದು ಪುರಂದರದಾಸದರು ಸೊಗಸಾಗಿ ವಿವರಿಸಿದ್ದಾರೆ. 'ಲಂಗೋಟಿ' ವೈರಾಗ್ಯದ ಸಂಕೇತವಾಗಿಯೂ 'ಗಿಳಿಯು' ಜೀವಿಯ ಸಂಕೇತವಾಗಿಯೂ ದಾಸರ ಕೀರ್ತನೆಗಳಲ್ಲಿ ಮೂಡಿ ಬಂದಿವೆ. ಪಾಪೋಸು – ಪಾಪ + ಒಸು – ಎಂದರೆ ಅಷ್ಟೂ ಪಾಪಗಳು ಎಂಬರ್ಥದಲ್ಲಿ 'ಮೆಟ್ಟು' ಅಥವಾ

'ಚಿಪ್ಪಲಿ' ಅಥವಾ 'ಪಾಪೋಸು' ಮಾನವರು ಮಾಡಿದ ಪಾಪಗಳನ್ನು ಸಂಕೇತಿಸುತ್ತವೆ. 'ಫಣಿಫಣ' ಎಂದರೆ ಹಾವಿನ ಹೆಡೆಯು ಇದು ಸತ್ಯವೆಂದು ಸಾರಲು ಮಾಡುವ ಶಪಥವನ್ನು ಸಂಕೇತಿಸುತ್ತದೆ.

**ಪ್ರತೀಕ:** ಸಂಕೇತಗಳು, ಸಾಂಕೇತಿಕ ಪ್ರಯೋಜನವನ್ನು ಮೀರಿ, ಮನುಷ್ಯರ ಭಾವಸಂಬಂಧಿಯಾದ ಅರ್ಥಗಳನ್ನು ಪಡೆದುಕೊಂಡಂತೆ, ಅವುಗಳು 'ಪ್ರತೀಕ' ವಾಗುತ್ತವೆ. ಸಂಕೇತದ ಮುಂದುವರಿದ ರೂಪವೇ ಪ್ರತೀಕ. ಪ್ರತೀಕವು ಉದ್ಭವಿಸುವುದು ಯಾವುದಾದರೂ ವ್ಯಕ್ತಿಯ ಮನಸ್ಸಿನಲ್ಲಿ. ಅದು ಅವನ ಅಂತರ್ದೃಷ್ಟಿಯಲ್ಲಿ ಒಂದು ಆಕಾರವನ್ನು ಮೂಡಿಸುತ್ತದೆ. ಅನುಭವಿಯ ಮಟ್ಟಿಗೆ ಆ ಆಕಾರವು ತರ್ಕಜ್ಞಾನವು ಕೊಡಲಾಗದ ಒಂದು ಹೊಸಜ್ಞಾನ ಎನಿಸುತ್ತದೆ. ಆ ಆಕಾರವನ್ನೇ ನಾವು ಪ್ರತೀಕವೆಂದು ಕರೆಯುತ್ತೇವೆ. ಭಾರತ ದೇಶದಲ್ಲಿ ಪುರಾಣ ಕಥಾನಕಗಳು ಮಹತ್ವದ ಪಾತ್ರ ವಹಿಸುತ್ತವೆ. ರಾಮಾಯಣದಲ್ಲಿ ಬರುವ ರಾಮನ ಪಾತ್ರವು ಸತ್ಯ, ನ್ಯಾಯ, ನಿಷ್ಠೆ, ಪಿತೃವಾಕ್ಯಪಾಲನೆ ಮುಂತಾದ ಮೌಲ್ಯಗಳಿಗೆ ಪ್ರತೀಕವಾಗಿ ನಿಲ್ಲುತ್ತದೆ. ಸೀತೆಯು ಪಾತಿವೃತ್ಯದ ಪ್ರತೀಕವಾಗಿಯೂ, ರಾವಣನು ಅನ್ಯಾಯ ಅಧರ್ಮದ ಪ್ರತೀಕವಾಗಿಯೂ ನಿಲ್ಲುತ್ತಾರೆ. ಸಾಮಾನ್ಯ ಜನರಿಗೆ ಪುರಾಣದ ಕತೆಗಳನ್ನು ಕಥೆಯ ರೂಪದಲ್ಲೋ ಪ್ರವಚನದ ರೂಪದಲ್ಲೋ ಹೇಳುವುದರಿಂದ, ಕೇಳುವ ವ್ಯಕ್ತಿಯ ಮನಸ್ಸಿನಲ್ಲಿ ಒಳ್ಳೆಯದು ಕೆಟ್ಟದ್ದುದರ ಹೀಗೆ ಮಂಥನ ನಡೆಯುತ್ತದೆ. ಯಾವ ದಾರಿಯಿಂದ ತನಗೆ ಒಳ್ಳೆಯದಾಗುವುದು ಎಂಬುದರ ಬಗ್ಗೆ ವಿವೇಚನೆ ಬೆಳೆಯುತ್ತದೆ ಹಾಗೆಯೇ ಪ್ರತೀಕಗಳು ಮನುಷ್ಯನ ಮನಸ್ಸಿನಲ್ಲಿ ಮೌಲ್ಯಗಳ ಅಚ್ಚು ಮೂಡಿಸುತ್ತವೆ.

"ಜ್ಞಾನದ ಬೆಳವಣಿಗೆಯಲ್ಲಿ ಕಲ್ಪನೆಯ ಪಾತ್ರ ಮಹತ್ತರವಾದುದು ಭಾಷೆಯ ಪ್ರಾರಂಭದ ದಿಶೆಯಲ್ಲಿ ಕೇವಲ ವಸ್ತು ಸೂಚಕ, ಸಂಕೇತವಾಗಿದ್ದರೂ ಕ್ರಮೇಣ ಅವೇ ಸಂಕೇತಗಳನ್ನು ಮನುಷ್ಯನ ಕಲ್ಪನೆಯು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವಸ್ತುಗಳನ್ನಾಗಲಿ ಕ್ರಿಯೆಗಳನ್ನಾಗಲಿ ನಿರ್ದೇಶಿಸುವುದಕ್ಕೆ ಬಳಸಲು ಪ್ರಾರಂಭಿಸಿತು, ಈ ಪರಿಕ್ರಮದಲ್ಲಿ ಸಂಕೇತಗಳ ಅರ್ಥವಿಸ್ತರಣೆಯಾಗುವುದು. ಭಾಷೆಯು ಪ್ರತೀಕಾತ್ಮಕವಾದುದು ಮಾತ್ರವಲ್ಲದೆ ಭಾಷೆಯ ಮೂಲಕವೇ ಜಗತ್ತನ್ನು ಅರಿಯುವ ಮಾನವ ಬುದ್ಧಿಗೆ ಜಗತ್ತು ಪ್ರತೀಕಾತ್ಮಕವಾಗಿ ಕಾಣಿಸಿದುದು ಸಹಜವೇ. ಪುರಾಣ ಕಲ್ಪನೆಯು ಹುಟ್ಟಿದುದು ಹೀಗೆ, ಪುರಾಣವೆಂದರೆ ವಿಸ್ತೃತ ಮತ್ತು ಸಂಕೀರ್ಣವಾಗಿ ಬೆಳೆದ ಒಂದು ಪ್ರತೀಕದ ಮೂಲಕ ಜಗತ್ತನ್ನು, ಅನುಭವವನ್ನು ನೋಡುವ ಪರಿ ಎಂಬ ಧಾಟಿಯಲ್ಲಿ ಈ ಶಾಸ್ತ್ರಗಳು ಭಾಷೆಯನ್ನು ವಿವರಿಸುತ್ತವೆ ಇದರ ಪರಿಣಾಮವು ಸಾಹಿತ್ಯದ ಮೇಲೆ ಆಯಿತು" (೨೦) ಉದಾಹರಣೆ ಲೋಹದ ದೇವರ ಪ್ರತಿಮೆಯನ್ನು ದೇವರ ಪ್ರತೀಕವೆಂದು ನಾವು ಪೂಜಿಸುತ್ತವೆ. ಆ ಪ್ರತಿಮೆಯ ಕಡೆಗೆ ಕಾಲುಚಾಚಿ ಮಲಗುವುದಾಗಲಿ, ಅಗೌರವ ತೋರಿಸುವುದಾಗಲಿ ಮಾಡುವುದಿಲ್ಲ ಹೀಗೆ "ಪ್ರತೀಕವು ತಾನು ತೋರಿಸುವ ಮೌಲ್ಯ ದೊಂದಿಗೆ ತನ್ನ ಮೌಲ್ಯವನ್ನು ಹೆಚ್ಚಿಸಿಕೊಳ್ಳುತ್ತದೆ. ನಮ್ಮ ದೇಶದ ಬಾವುಟ ನಮ್ಮ ದೇಶದ ಪ್ರತೀಕವಾಗಿದ್ದು ರಾಷ್ಟ್ರಧ್ವಜದಲ್ಲಿ ಕೇಸರಿ ಬಣ್ಣವು ತ್ಯಾಗದ ಸಂಕೇತವಾಗಿಯೂ, ಬಿಳಿ ಬಣ್ಣ ಶಾಂತಿಯ ಸಂಕೇತವಾಗಿಯೂ, ಹಸಿರು ಸಮೃದ್ಧಿಯ ಸಂಕೇತವಾಗಿಯೂ ಇಡಿಯಾಗಿ ರಾಷ್ಟ್ರಧ್ವಜವು ರಾಷ್ಟ್ರಪ್ರೇಮದ ಪ್ರತೀಕವಾಗಿ ನಿಲ್ಲುತ್ತದೆ. ಕೈಮರ ಬಿದ್ದಿರುವುದು ರೈಲು ಬರುವ ಸಂಕೇತ, ಇಲ್ಲಿ ಕೈಮರವು ಯಾವುದೇ ಮೌಲ್ಯವನ್ನು ಪಡೆದುಕೊಳ್ಳುವುದಿಲ್ಲ ಮತ್ತು ಯಾವುದೇ ಭಾವನೆಗಳ ಪ್ರಾಧಾನ್ಯತೆಯನ್ನು ಪಡೆದುಕೊಳ್ಳುವುದಿಲ್ಲ ಆದರೆ

ರಾಷ್ಟ್ರಧ್ವಜದ ಬಗ್ಗೆ ನಮ್ಮ ಪ್ರೇಮ ಹಾಗೂ ಗೌರವವು ಭಾವನಾ ಪ್ರಧಾನವಾದುದು ಹಾಗೂ ರಾಷ್ಟ್ರಧ್ವಜಕ್ಕೆ ಅದರ ನಿರ್ದೇಶ್ಯದಷ್ಟೇ ಮೌಲ್ಯವಿರುವುದರಿಮದ ಅದಕ್ಕೆ ನಾವು ಅಗೌರವತೋರುವುದಿಲ್ಲ. ಓಗೆ ಪ್ರತೀಕವು ತನ್ನ ನಿರ್ದೇಶ್ಯದ ಮೌಲ್ಯವನ್ನು ಪಡೆದು ಚಿಹ್ನೆ ಸಂಕೇತಗಳಿಗಿಂತ ಮೇಲೆರುತ್ತದೆ. ಪ್ರತೀಕವು ಯಾವುದಾದರೂ ಒಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಹುಟ್ಟಿ ಬೆಳೆದು ಮುಂದೆ ಸಮಾಜಕ್ಕೆ ರೂಢಿಯಾದಂತೆ ಎಲ್ಲರಲ್ಲಿಯೂ ಅದೇಭಾವನೆ ಬೆಳೆದು ಮೌಲಿಕವಾಗಿ ತುಂಬಿ ಭಾರ ಪೂರ್ಣವಾಗುತ್ತದೆ. ಕಾಲಕ್ರಮೇಣ ನವ್ಯಕಾವ್ಯದಲ್ಲಿ ಅನೇಕ ಪ್ರತೀಕಗಳು ಬಳಕೆಯಾಗತೊಡಗಿದವು ಕೆಲವೊಂದು ಕಥೆ, ಕಾವ್ಯಗಳು ಪೂರ್ತಿಯಾಗಿ ಒಂದು ಪ್ರತೀಕವನ್ನೇ ಆಧರಿಸಿ ಮಾಡಲ್ಪಟ್ಟವು ಆದರೆ ಕಾವ್ಯದಲ್ಲಿ ಕವಿಗಳು ಪ್ರತೀಕಗಳ ಬಗ್ಗೆ ಆಳವಾದ ಗಾಢವಾದ ಅರ್ಥಗಳಿಂದ ಸಂತೃಪ್ತಿಗೊಳಿಸಲು ಅಸಮರ್ಥರಾದರು" (೨೧).

'ಪ್ರತೀಕವಾದ'ದಲ್ಲಿ ಯಾವುದೇ ಜಡ, ಅಥವಾ ಚೈತನ್ಯವುಳ್ಳ ಪದಾರ್ಥಗಳಲ್ಲಿ ಭಾವನೆಯು ಉದ್ಭವಿಸಿದಾಗ ಮನುಷ್ಯನ ಲಕ್ಷ್ಯವು ಅದಕ್ಕೆ ರೂಪದಲ್ಲಿ ಅಥವಾ ಗುಣದಲ್ಲಿ ಸಮಾನವಿರುವ ಪ್ರತೀಕವೊಂದನ್ನು ಹುಡುಕುತ್ತದೆ. ಪ್ರತೀಕದಲ್ಲಿ ಈ ಎರಡು ವಸ್ತುಗಳಲ್ಲಿ ಮೊದಲನೇಯ ವಸ್ತುವಿನ ಮಾಧ್ಯಮದಿಂದ ಎರಡನೇ ವಸ್ತುವಿನ ಬಗ್ಗೆ ಭಾವನೆಗಳ ಅಭಿವ್ಯಕ್ತಿಪಡಿಸಲ್ಪಡುತ್ತವೆ. ಚಿಹ್ನೆಯ ಮುಂದುವರಿದ ರೂಪಗಳಾದ ಸಂಕೇತಗಳು ನಿರ್ಭಾವಗಳು, ಪ್ರತೀಕವು ಭಾವನಾ ಪ್ರಧಾನವಾದದ್ದು ಪ್ರತೀಕವು ಅರ್ಥವಿಸ್ತರಣೆಯನ್ನು ಪಡೆದುಕೊಂಡು ಭಾವನೆಗಳನ್ನು ಸಾಂದ್ರೀಕರಿಸಿ ಪ್ರತಿಮೆಯಾಗಿ ರೂಪುಗೊಳ್ಳುತ್ತದೆ.

ತಾಳಿಯ ಹರಿದು ಬಿಸಾಡೆ ಇಂಥ
ಕೀಳು ದೇವತೆಗಳ ಹೆಸರಲ್ಲಿ ಕಟ್ಟಿದ ಪ।
. . . . . . . . . . . . . . . . . .
. . . . . . . . . . . . . . . . . .
ಭಾರತದ್ಹುಣ್ಣಿಮೆಯ ದಿನ ದೇವತೆಯ ಮಾಡಿ
ಹೂರಣದಾರತಿಯನ್ನು ಬೆಳಗಿ
ಸೀರೆ ಕಳೆದು ತೊಪ್ಪಲುಡುವುದುಚಿತವಲ್ಲ
ಕೌರವ ನರಕಯುದ್ದವೆ ಕೇಳೆ ಮೂಳಿ
. . . . . . . . . . . . . . . . . . (೨೨)

'ತಾಳಿ' ಮುತ್ತೈದೆಯ ಸಂಕೇತವಾಗಿದ್ದು ಭಾವನೆಗಳನ್ನೊಳಗೋಡು 'ಪ್ರತಿಕ' ವಾಗುತ್ತದೆ. ಪುರಂದರದಾಸರು ಈ ಕೀರ್ತನೆಯಲ್ಲಿ ಮೂಢನಂಬಿಕೆಗಳನ್ನು ಕಟುವಾಗಿ ನಿಂದಿಸುತ್ತಾರೆ. 'ತಾಳಿ' ಪ್ರತೀಕವು ಭಾವನೆಗಳನ್ನು ಮೀರಿ, ಕೇವಲ ಸಂಪ್ರದಾಯ, ಪದ್ಧತಿ, ಆಚರಣೆಗಳು ಸದ್ಗತಿಯನ್ನು ಕೊಡಲಾರವೆಂದೂ ಕಡೆಗಾಲದಲ್ಲಿ ಯಮದೂತರು ಬಂದಾಗ ಇವು ಯಾವವೂ ನೆರವಿಗೆ ಬಾರದೆಂದೂ ಮುಕ್ತಿಗಾಗಿ ಹರಿಯ ಸೇವೆಯೊಂದೇ ದಾರಿಯೆಂದು ಹೇಳುತ್ತಾ ಅರ್ಥವಿಸ್ತರಣೆಯನ್ನು ಪಡೆದುಕೊಂಡು 'ಪ್ರತಿಮೆ' ಯಾಗುತ್ತದೆ.

ಗೂಡು ಸಿಕ್ಕಲಿಲ್ಲಾ ಗೂಡಿನ
ಜಾಡು ತಿಳಿಯಲಿಲ್ಲಾ ಪ।

ಜೋಡು ಹೆಂಡಿರು ಓಡಿಹೋದರು

ಗೋಡೆ ಬಿದ್ದು ಬಯಲಾಯಿತಲ್ಲ ॥೮॥ (೨೩)

'ಗೂಡು' ಶಬ್ದವು ನೆಮ್ಮದಿಯ ನೆಲೆ ಎಂಬ ಭಾವನೆಯನ್ನೊಳಗೊಂಡು 'ಪ್ರತೀಕ' ವಾಗುತ್ತದೆ. ಇಲ್ಲಿ ಹಗಲೆಲ್ಲಾ ಹಾರಾಡುವ ಹಕ್ಕಿಗಳಿಗೆ ಸಂಜೆಯ ವೇಳೆ ನೆಲೆಯಾಗುವ ಗೂಡಿನಂತೆ, ಹರಿಯೇ ಜಗತ್ತಿಗೆಲ್ಲ ನೆಲೆ ಎಂಬ ಅರ್ಥವಿದೆ. ಭಗವಂತನ ಹಿರಿಮೆಯ ಅರಿವನ್ನು ಗೂಡಿನ ಜಾಡು ಎಂದು ಕರೆದಿದ್ದಾರೆ ಪುರಂದರದಾಸರು. 'ಗೂಡು' ಪ್ರತೀಕವು ಹೆಚ್ಚಿನ ಅರ್ಥವಿಸ್ತರಣೆಯನ್ನು ಪಡೆದುಕೊಂಡು ಪ್ರತಿಮೆಯಾಗುತ್ತದೆ. ಪಾಪ-ಪುಣ್ಯಗಳೆಂಬ ಜೋಡಿ ಹೆಂಡಿರು ಓಡಿ ಹೋದ ಮೇಲೆ ಅಜ್ಞಾನವೆಂಬ ಗೋಡೆ ಬಿದ್ದು ಸ್ವರೂಪ ಜ್ಞಾನವಾಗುವುದು ಎಂಬ ಅರ್ಥವು ಇಲ್ಲಿ ಮೂಡಿ ಬರುತ್ತದೆ. ಗೂಡಿಗೆ ಇಲ್ಲಿ ನೆಮ್ಮದಿಯ ತಾಣ-ವೈಕುಂಠ ಎಂಬ ವಿಶೇಷಾರ್ಥಗಳು ಪ್ರಾಪ್ತವಾಗುತ್ತವೆ. ಈ ಅರ್ಥಗಳು ಹೊರಟಿದ್ದು ವ್ಯಂಜನಾ ವೃತ್ತಿಯ ಮೂಲಕ ವ್ಯಂಜನಾವೃತ್ತಿಯ ಮೂಲಕ ಪ್ರತೀತವಾಗುವ ಅರ್ಥವೇ 'ವ್ಯಂಗಾರ್ಥ' ಅಥವಾ ಓದುಗನ ಮನಸ್ಸು ಯಾವ ವಿಷಯದಲ್ಲಿ ನಿಲ್ಲುವಂತೆ ಮಾಡುವುದೋ ಅದೇ 'ವ್ಯಂಗಾರ್ಥ' ಅಥವಾ 'ಧ್ವನಿ' ಇದನ್ನೇ 'ಪ್ರತಿಮಾ ಧ್ವನಿ' ಎಂದು ಕರೆಯಲಾಗಿದೆ. ಪ್ರತಿಮೆಯು ಅಲಂಕಾರದ ಮೂಲಕ ವಿಶೇಷಾರ್ಥವನ್ನು ಕೊಟ್ಟರೆ ಅದನ್ನು 'ಅಲಂಕಾರ ಧ್ವನಿ' ಎನ್ನಲಾಗುತ್ತದೆ. ಉದಾಹರಣೆಗೆ;

ಜಾಲಿಯ ಮರದಂತೆ ಧರೆಯೊಳು ದುರ್ಜನರು ॥ಪ॥
ಮೂಲಾಗ್ರ ಪರಿಯಂತ ಮುಳ್ಳು ಕೂಡಿಪ್ಪಂತೆ ॥೮॥ (೨೪)

ಇಲ್ಲಿ ಉಪಮಾಲಂಕಾರದ ಮೂಲಕ ದುರ್ಜನರ ಗುಣ ಸ್ವಬಾವಗಳನ್ನು ತಿಳಿಸಲಾಗಿದೆ. ಪ್ರತಿಮೆಯು ಯಾವುದಾದರು ವಸ್ತುವಿನ ಮೂಲಕ ಅರ್ಥವನ್ನು ವಿವರಿಸಿದರೆ ಅದನ್ನು 'ವಸ್ತು ಧ್ವನಿ' ಎನ್ನಲಾಗುತ್ತದೆ.

ಉದಾಹರಣೆಗೆ:

'ದುರ್ಜನರ ಮನೆಯೊಳಿಹ ಹಾಲ ಸವಿಗಿಂತ
ಸಜ್ಜನರ ಮನೆಯೊಳಿಹ ನೀರು ಲೇಸು'. (೨೫)

ಇಲ್ಲಿ ಪುರಂದರದಾಸರು ಹಾಲು-ನೀರುಗಳ ಮೂಲಕ ಸಜ್ಜನರು ಹಾಗೂ ದುರ್ಜನರ ಸಹವಾಸದ ಪರಿಣಾಮಗಳನ್ನು ವಿವರಿಸುತ್ತಾರೆ. ವೀರ, ಕಾರುಣ್ಯ, ಶೃಂಗಾರ, ಹಾಸ್ಯ ಮುಂತಾದ ರಸಗಳ ಮೂಲಕ ಪ್ರತಿಮೆಯು ಅಭಿವ್ಯಕ್ತವಾದರೆ ಅದನ್ನು 'ರಸಧ್ವನಿ' ಎನ್ನಲಾಗುತ್ತದೆ.

'ಕಾಯಲಾರೆನೊ ಕೃಷ್ಣ ಕಂಡವರ ಬಾಗಿಲನು
ನಾಯಿಕುನ್ನಿಗಳಂತೆ ಪರರ ಪೀಡಿಸುತ' (೨೬)

ದಾಸರು ಉಪಾದಾನಕ್ಕೆ ಹೋಗಿ ಹರಿಕೀರ್ತನೆ ಹಾಡಿದರೂ ಕೆಲವರು ಪ್ರತಿಕ್ರಿಯೆ ನೀಡದಿದ್ದಾಗ ನೊಂದು ರಚಿಸಿದ ಈ ಕೀರ್ತನೆಯಲ್ಲಿ ಕಾರುಣ್ಯ ರಸವು ಎದ್ದು ಕಾಣುತ್ತದೆ. 'ಧ್ವನಿ' ಎಂದರೆ ಪ್ರಧಾನವಾದ ವ್ಯಗಾಂರ್ಥ ಅಥವಾ ಅನುಕ್ತವಾದ ಅರ್ಥವನ್ನು ಬಿಡಿಸಿ ತೋರುವುದು ಅಥವಾ ವ್ಯಂಜನಾವೃತ್ತಿಯ ಮೂಲಕ ಪ್ರತೀತವಾಗುವ ಅರ್ಥ.

**ಪ್ರತಿಮೆ:-** ಪ್ರತಿಮೆ ಎಂಬುದು ಅಭಿವ್ಯಕ್ತಿ ವಿಧಾನವನ್ನು ಸೂಚಿಸುವ ಪದ. ಆಂಗ್ಲ ಸಾಹಿತ್ಯದಲ್ಲಿ ಇದನ್ನು 'ಇಮೇಜ್' (IMAGE - ಪ್ರತಿಮೆ, ಪ್ರತಿಬಿಂಬ, ಪ್ರತೀಕ, ಕಲ್ಪನೆ) ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಇಮೇಜರಿ ಎಂದರೆ ಅದು ಉಪಮೆ ಅಥವಾ ಭಾವನೆ ಎನ್ನುವ ಅರ್ಥದಲ್ಲಿಯೂ ಬಳಸಲಾಗಿದೆ. ಪ್ರತಿಮೆ ಎಂದರೆ ಇಂದ್ರಿಯಾನುಭವವೊಂದನ್ನು ನೆನಪು ಮಾಡಿಕೊಳ್ಳುವಿಕೆ ಮತ್ತು ಆ ನೆನಪಿನಿಂದ ಮನದಲ್ಲಿ ಮೂಡಿದ ಚಿತ್ರ. ಉಪಮೆ, ರೂಪಕಗಳನ್ನು Simile, Metaphar ಎಂದು ಹೇಳುವಂತೆ ಪಾಶ್ಚಾತ್ಯ ಪ್ರತಿಮಾ ತತ್ವದ ಸಂದರ್ಭದಲ್ಲಿ ಬರುವ ಚಿಹ್ನೆ [Sign] ಯನ್ನು ಅಭಿದಾ ಎಂದು ಸಂಕೇತ [Symbol] ವನ್ನು ಲಕ್ಷಣ ಎಂದೂ, ಮತ್ತು ಪ್ರತೀಕವನ್ನು [Image] ವ್ಯಂಜನಾವೆಂದು ತಿಳಿದರೆ ಅಸಂಗತವಾಗಲಾರದು. ಏಕೆಂದರೆ ಚಿಹ್ನೆ ಸಂಕೇತ ಪ್ರತೀಕ, ಪ್ರತಿಮೆಗಳನ್ನು ಆಂಗ್ಲ ಸಾಹಿತ್ಯದಲ್ಲಿ 'ಇಮೇಜ್' ಪದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಪ್ರತಿಮೆಗೆ ಹಿಂದಿಯಲ್ಲಿ 'ಛಾಯಾ' ಎಂದೂ, ಪ್ರತಿಮಾವಾದವನ್ನು ಛಾಯಾವಾದವೆಂದೂ ಹೇಳುತ್ತಾರೆ.

'ಅಲ್ಲಿದೆ ನಮ್ಮ ಮನೆ ಇಲ್ಲಿ ಬಂದೆ ಸುಮ್ಮನೆ' ಪು। (೨೭) ಎಂಬ ಪುರಂದರದಾಸರ ಕೀರ್ತನೆಯಲ್ಲಿ 'ಮನೆ' ಎಂಬುದು ಒಂದು ಸಂಕೇತ ಮಾತ್ರವಾಗಿ ಮುಂದುವರೆದು, 'ಕದ ಬಾಗಿಲಿರಿಸಿಹ ಕಳ್ಳಮನೆ' ಎಂದು ದೇಹದ ಪ್ರತೀಕವಾಗಿ ನಿಲ್ಲುತ್ತದೆ. ಒಂಬತ್ತು ಬಾಗಿಲುಗಳಿರುವ ಈ ದೇಹವನ್ನೇ ಇಲ್ಲಿ ಮನೆಯೆಂದು ಕರೆದಿದ್ದಾರೆ. ಸ್ಥಿರವಾಗಿ ಇಲ್ಲಿಯೇ ಇರುವ ಭರವಸೆಯಿ ಲ್ಲವೆಂದೂ, ಮಾಯೆಯ ಜಾಲದಿಂದ ಕೂಡಿದ ಸುಳ್ಳು ಮನೆ ಇದಾಗಿದ್ದು ತನ್ನ ನಿಜವಾದ ಮನೆ ವೈಕುಂಠದಲ್ಲಿ ಹರಿಸಾನಿಧ್ಯದಲ್ಲಿ ಎಂಬ ಅರ್ಥವಿಸ್ತರಣೆಯನ್ನು ಪಡೆದುಕೊಂಡು 'ಮನೆ' ಪ್ರತಿಮೆ ಪುರಂದರದಾಸರಿಗೆ ಆಧ್ಯಾತ್ಮ ಜ್ಞಾನವನ್ನು ಅಭಿವ್ಯಕ್ತಿಪಡಿಸಲು ಸಾಧನವಾಗುತ್ತದೆ. ಇಲ್ಲಿ 'ಮನೆ' ಎಂಬುದಕ್ಕೆ ಪ್ರತೀತವಾದ ಅರ್ಥಗಳು ಹಿಂದಕ್ಕೆ ಸರಿದು ಶರೀರವು ಶಾಶ್ವತವಲ್ಲವೆಂದು ಜೀವಾತ್ಮನಿಗೆ ವೈಕುಂಠವೇ ಸ್ಥಿರವಾದ ಮನೆಯೆಂಬ ಅರ್ಥವು ಮೂಡುತ್ತದೆ.

**ಪ್ರತಿಮೆ, ಪಾಶ್ಚಾತ್ಯರ ದೃಷ್ಟಿಕೋನ:** ಸಾಹಿತ್ಯದಲ್ಲಿ ಪ್ರತಿಮಾ ನಿರ್ಮಿತಿಯ ಮಹತ್ವವನ್ನು ಗುರುತಿಸಿ ಅದನ್ನು ಪ್ರಚಾರಕ್ಕಾಗಿ ತಂದವರೇ ಪಾಶ್ಚಾತ್ಯ ವಿಮರ್ಶಕರು. ೧೯೧೭ನೇ ಶತಮಾನದಲ್ಲಿ ಮೊಟ್ಟ ಮೊದಲಿಗೆ ಪಾಶ್ಚಾತ್ಯ ವಿಮರ್ಶಕರು ಪ್ರತಿಮೆ ಪದವನ್ನು ಬಳಸಿದರು. ಆಗ ಇದನ್ನು ಉಪಮಾದಿಗಳಂತೆ ಒಂದು ಅಲಂಕಾರವೆಂದು ತಿಳಿಯಲಾಗಿತ್ತೇ ಹೊರತು ಇದು ಕೃತಿಯ ನೆಲೆಗಟ್ಟು ಎಂದು ಭಾವಿಸಿರಲಿಲ್ಲ. "ಸಂಕೇತಗಳ ಬಳಕೆ ಮನುಷ್ಯನ ಮೊತ್ತ ಮೊದಲ ಬುದ್ಧಿಪೂರ್ವಕ ಕ್ರಿಯೆ" ಎಂದು ಸೂಸನ್ ಕೆಲಾಂಗರ್ ಹೇಳುತ್ತಾಳೆ.

**ಲೇವಿಸ್** ಹೇಳುವಂತೆ ಕಾವ್ಯಪ್ರತಿಮೆ ಎಂದರೆ ಶಬ್ದಚಿತ್ರ ಎನ್ನುವುದು ಅತೀ ಸರಳ ನಿರೂಪಣೆ.

**ಎಜ್ರಾಪೌಂಡ್** ಹೇಳುವಂತೆ ಪ್ರತಿಮೆ ಅಪೂರ್ವವೊಂದರ ಬೌದ್ಧಿಕ ಹಾಗೂ ಭಾವುಕ ಸಂಕೀರ್ಣತೆಯನ್ನು ಹಿಡಿದಿಡುವ ಕ್ರಮವಿದು.

**ಡ.ಎ.ರಿಚರ್ಡ್** ಹೇಳುವಂತೆ ಪ್ರತಿಮೆ ಅಪೂರ್ವವಾದ ಇಂದ್ರಿಯ ಸಂಬಂಧ ಹೊಂದಿದ ಒಂದು ಮಾನಸಿಕ ಘಟನೆ.

**ಕೋಲರಿಜ್** ಪ್ರಕಾರ ಪ್ರತಿಮೆ ಕವಿಯ ಪ್ರಜ್ಞೆಯ ತಳಾತಳದಿಂದ ಬಂದುದೇ ಹೊರತು ಬುದ್ಧಿಪೂರ್ವಕವಾಗಿ ನಡೆದುದಲ್ಲ.

ಕಾವ್ಯವನ್ನು ರಚಿಸುವಾಗ ಕವಿಯ ಅನುಭವಕ್ಕೆ ಬರುವ ವಿಚಾರಧಾರೆಗಳನ್ನು, ಅನುಭವಗಳ ಪ್ರವಾಹವನ್ನು 'ಪ್ರತಿಮಾ ತಂತ್ರ' ದಲ್ಲಿ ಜೋಡಿಸುವ ಕಲಾಕೌಶಲತೆಯು ಇರಬೇಕಾಗುತ್ತದೆ. ಕಾವ್ಯದಲ್ಲಿ ಶಬ್ದಚಿತ್ರಗಳ ನಿರ್ಮಾಣ ಒಂದು ರೀತಿಯ ಆಕರ್ಷಣೆಯೇ ಆಗಿದೆ.

೧೯೧೨ರಲ್ಲಿ ಕಾವ್ಯದಲ್ಲಿ ಪ್ರತಿಮಾ ನಿರ್ಮಿತಿಯನ್ನು ಸೂತ್ರೀಕರಿಸಿದವರು ಎಜ್ರಾಪೌಂಡ್ ಮತ್ತು ಅವನ ಸಂಗಡಿಗರು. ಪ್ರತಿಮೆಗಳು ಪದ್ಯದಂತೆ ಗದ್ಯದಲ್ಲಿಯೂ ಕೂಡ ಇರುತ್ತವೆ, ಗದ್ಯದಲ್ಲಾಗಲಿ, ಪದ್ಯದಲ್ಲಾಗಲಿ ಪ್ರತಿಮೆ ತಾನೇ ತಾನಾಗಿ ಮೈದೋರುತ್ತದೆ.

**ಪ್ರತಿಮೆ ಭಾರತೀಯರ ದೃಷ್ಟಿಕೋನ:** ಪ್ರತಿಮೆ ಎಂಬುದು ಮೂಲಾನುಭವಕ್ಕೆ ನಾವು ನೀಡುವ ಆಕಾರವಲ್ಲ ಅದು ಮೂಲಾನುಭವವು. ತನಗೆ ಅನಿವಾರ್ಯವೂ ಅವಶ್ಯಕವೂ ಆಗಿರುವ ಸಹಜಧರ್ಮದ ಪ್ರೇರಣ ಶಕ್ತಿಯಿಂದ ಪಡೆಯುವ ರೂಪಧಾರಣೆ ಅದೊಂದು ಅವತರಣ ಕ್ರಿಯೆ' [ತಪೋನಂದನ:ಕುವೆಂಪು:ಪು–೧೭] ಎಂದು ಕುವೆಂಪು ಅವರು ಹೇಳುತ್ತಾರೆ. ಜಿ.ಎಸ್. ಶಿವರುದ್ರಪ್ಪನವರು 'ಪ್ರತಿಮೆ ಎಂದರೆ ಮೂಲತಃ ಒಂದು ಚಿತ್ರ ಎಂದಾಯಿತು ಮನಸ್ಸು ತಾನು ಪಡೆದ ಪೂರ್ವಾನುಭವಗಳನ್ನು ನೆನಪಿನ ಬಲದಿಂದ ತನ್ನಲ್ಲಿ ಪುನರ್ ನಿರ್ಮಿಸಿಕೊಳ್ಳುವ ಕ್ರಿಯೆಯಲ್ಲಾಗಲಿ, ಕವಿ ತಾನು ಪಡೆದ ಅನುಭವಗಳಿಗೆ ಶಬ್ದರೂಪ ವೊಂದರಲ್ಲಿ ಆಕಾರಕೊಡುವ ಕ್ರಿಯೆಯಲ್ಲಾಗಲಿ ಗೋಚಾರವಾಗುವುದು ಗುರುತಿಸಿಬಹುದಾದ ಒಂದು ಚಿತ್ರವೇ' ಎನ್ನುತ್ತಾರೆ (ಕಾವ್ಯಾರ್ಥಚಿಂತನೆ:ಪು–೧೦೧). ಬಸವರಾಜ ಸಬರದ ಅವರು ಹೇಳುವಂತೆ 'ರೂಪಾತ್ಮಕವಾದ ಶಬ್ದಚಿತ್ರಗಳನ್ನು ಪ್ರತಿಮೆ ಎನ್ನಬಹುದು. ಬುದ್ಧಿ ಮತ್ತು ಮನಸ್ಸುಗಳ ಸಂಕೀರ್ಣ ಅನುಭವದಿಂದ ಒಮ್ಮೆಲೇ ಮೂಡಿನಿಂತ ಪ್ರತಿಕ್ರಿಯೆಗಳನ್ನು ಪ್ರತಿಮೆ ಗಳೆಂದು ಕರೆಯಬಹುದು' [ಬಸವೇಶ್ವರ ಮತ್ತು ಪುರಂದರದಾಸರು ಪು: ೮೨] ಎಸ್.ಎಸ್.ಅಂಗಡಿ ಅವರು ಹೇಳುವಂತೆ, ಕಾವ್ಯಪ್ರತಿಮೆಯೆಂದರೆ ಕೇವಲ ಶಬ್ದಚಿತ್ರವಲ್ಲ ಯಾವುದು ಸಂದರ್ಭವೊಂದರ ಬೌದ್ಧಿಕ ಹಾಗೂ ಭಾವುಕ ಸಂಕೀರ್ಣತೆಯನ್ನು ತಟ್ಟನೆ ಹಿಡಿದುಕೊಡುತ್ತದೆಯೋ ಅದು ಪ್ರತಿಮೆ. [ದಾಸ ಸಾಹಿತ್ಯ ಶಬ್ದ ಶಿಲ್ಪ ಪು.೯೨.]

ಪ್ರತಿಮೆ ಒಂದು ಶಬ್ದ ಚಿತ್ರವೆಂದಾಗ ಅದರ ಸಾಧಾರಣ ರೂಪವೆಂದರೆ ಅದರ ದರ್ಶನೀಯತೆ ಎನ್ನಬಹುದು. ಪ್ರತಿಯೊಂದು ಪ್ರತಿಮೆಯಲ್ಲಿ ಅದು ಭಾವನಾಪ್ರಧಾನವಾಗಿರಲಿ ಬುದ್ಧಿ ಪ್ರಧಾನವಾಗಿರಲಿ ಸೌಂದರ್ಯದ ಎಳೆಯೊಂದು ಅಡಕವಾಗಿರುತ್ತದೆ. ಪ್ರತಿಮೆಗಳು ಕೆಲಮಟ್ಟಿಗೆ ಸಾಂಪ್ರದಾಯಿಕ ರೀತಿಯಲ್ಲೇ ಇದ್ದರೂ ಅವುಗಳ ಭಾವನಾಪೂರ್ಣತೆ ಯಿಂದಾಗಿ ಅಸಾಮಾನ್ಯತೆಯನ್ನು ಪಡೆಯುತ್ತವೆ ಅದಕ್ಕಾಗಿ ಉಷಾಕಿರಣ ಅವರು 'ಪ್ರತಿಮೆ ಅಪೂರ್ವವಾದ ಇಂದ್ರಿಯ ಸಂಬಂಧ ಹೊಂದಿದ ಒಂದು ಮಾನಸಿಕ ಘಟನೆ ಎನ್ನುತ್ತಾರೆ' (೨೮).

**ಪ್ರತಿಮಾ ಲಕ್ಷಣಗಳು** ಸಂಕ್ಷಿಪ್ತತೆ, ನವೀನತೆ, ಅಂತರ್‌ದರ್ಶನ, ತೀವ್ರತೆ ಮತ್ತು ಜಾಗ್ರತ ಶಕ್ತಿಗಳು ಪ್ರತಿಮೆಯ ಲಕ್ಷಣಗಳು ಲೇವಿಸ್ ಪ್ರಕಾರ ನವೀನತೆ, ಸಾಂದ್ರತೆ ಮತ್ತು ಧ್ವನಿ ಪ್ರಚುರತೆಗಳೇ ಪ್ರತಿಮೆಗಳ ಮುಖ್ಯ ಲಕ್ಷಣಗಳು. ಸಿ.ಎಮ್. ಬೌರಾ ಹೇಳುವಂತೆ ಸಂಕ್ಷಿಪ್ತತೆ, ನವನವತ್ವ ಅಪೂರ್ವತೆ, ಧ್ವನಿ ಪ್ರಚುರತೆ ಮತ್ತು ಭಾವತೀವ್ರತೆ ಇವು ಪ್ರತಿಮೆಗಳಲ್ಲಿ ಇರಬೇಕಾದ ಲಕ್ಷಣಗಳು.

**ಸಂಕ್ಷಿಪ್ತತೆ** ಪ್ರತಿಮೆಗಳು ಸಂಕ್ಷಿಪ್ತ ಶಬ್ದಗಳಲ್ಲಿ ಅಪಾರ ಅರ್ಥವನ್ನು ತಿಳಿಸುತ್ತವೆ. ಪರಿಚಿತ ಲೋಕೋಪಮೆಗಳಿಂದ ಅನುಭವದ ದ್ವಾರವನ್ನು ತೆರೆಯುವ ಕಲಾಪ್ರಜ್ಞೆ, ಗಟ್ಟಿಯಾಗಿ ಬದುಕಿಗೆ ಅಂಟಿಕೊಂಡು, ಬದುಕಿನಾಚೆಯ ನೆಲೆಗಳಿಗೆ ನುಗ್ಗಬಯಸುವ ಪ್ರತಿಮಾ ಕೌಶಲ ಅದ್ಭುತವಾಗಿದೆ. ಪುರಂದರದಾಸರು ಒಂದು ಕೀರ್ತನೆಯಲ್ಲಿ ಸಂಕ್ಷಿಪ್ತವಾದ 'ದಾರಿ' ಪ್ರತಿಮೆಯ ಮೂಲಕ ಮನುಷ್ಯನು ತನ್ನ ಜೀವನದಲ್ಲಿ ಮಾಡುವ ಸಾಧನೆಗಳಿಂದ ಯಾವ ಗತಿಯನ್ನು ಹೊಂದುತ್ತಾನೆ ಎಂದು ವಿಶದವಾಗಿ ತಿಳಿಸುತ್ತಾರೆ.

ದಾರಿ ಯಾವುದಯ್ಯ – ವೈಕುಂಠಕೆ ದಾರಿ ತೋರಿಸಯ್ಯ ।ಪ।
ದಾರಿ ಯಾವುದಯ್ಯ, ದಾರಿ ತೋರಿಸಯ್ಯ

ಧಾರ ಮೂರುತಿ ನಿನ್ನ ಪಾದ ಸೇರುವುದಕ್ಕೆ ।ಅ।

ಬಲುಭವದನುಭವದಿ ಕತ್ತಲೆಯೊಳು
ಬಲು ಅಂಜುತೆ ನಡುಗಿ
ಬಳಲುತ್ತ ತಿರುಗಿದೆ ಹಾದಿಯ ಕಾಣದೆ
ಹೊಳೆವಂಥ ದಾರಿತೋರೋ ನಾರಾಯಣ ।೧।

ಪಾಪ ಪೂರ್ವದಲ್ಲಿ ಮಾಡಿದುದಕೆ
ಲೇಪವಾಗಿದೆ ಕರ್ಮ
ಈ ಪರಿಯಿಂದಲಿ ನಿನ್ನ ನೆನೆಸಿಕೊಂಬೆ
ಶ್ರೀಪತಿ ಸಲಹೆನ್ನ ಭೂಪನಾರಾಯಣ ।೨।

ಇನ್ನು ನಾ ಜನಿಸಲಾರೆ ಭೂಮಿಯ ಮೇಲೆ
ನಿನ್ನ ದಾಸನಾದೆನೋ
ಪನ್ನಗಶಯನ ಶ್ರೀ ಪುರಂದರ ವಿಠಲ
ಇನ್ನು ಪುಟ್ಟಿಸದಿರೋ ಎನ್ನ ನಾರಾಯಣ (೨೯)

ಕೀರ್ತನೆ ಪಲ್ಲವಿಯಲ್ಲಿನ ಪ್ರಶ್ನೆಯಿಂದ ಪ್ರಾರಂಭವಾಗುತ್ತದೆ ಅನುಪಲ್ಲವಿಯಲ್ಲಿಯೂ ಅದೇ ಪ್ರಶ್ನೆ ಪುನರಾವರ್ತನೆಯಾಗುತ್ತದೆ. ಈ ಜೀವನದಲ್ಲಿ ಸರಿಯಾದ ದಾರಿಕಾಣದೇ ಕತ್ತಲೆ ಯೊಳು ಅಂಜಿದೆನೆಂದು ಮತ್ತೆ ವೈಕುಂಠಕ್ಕೆ ತೆರಳುವದಾರಿ ಕಾಣದೆ ಬಳಲಿದೆನೆಂದು ಹೇಳಿ ಹೊಳೆವದಾರಿ ತೋರಿಸಲು ನಾರಾಯಣನನ್ನು ಬೇಡುತ್ತಾರೆ. ಪೂರ್ವ ಜನ್ಮದ ಪಾಪಕರ್ಮ ಗಳಿಂದ ಈ ಜನ್ಮಪಡೆದೆನೆಂದೂ ಇನ್ನು ನಾನು ಭೂಮಿಯ ಮೇಲೆ ಜನಿಸಲಾರೆನೆಂದು ಹೇಳುತ್ತಾರೆ. ವೈಷ್ಣವ ಸಂಪ್ರದಾಯದಲ್ಲಿ "ವೈಕುಂಠವೆಂಬುದು ನಾರಾಯಣನ ನಿತ್ಯ ನಿವಾಸ ಸ್ಥಾನ. ವೈಕುಂಠವೆಂಬುದು ಅಪ್ರಾಕೃತಲೋಕ, ದಿವ್ಯ ನಿತ್ಯ, ಸನಾತನ, ಗುಣತ್ರಯ ವರ್ಜಿತ ಭೂಮಿಯಿಂದ

ಅಂತರಿಕ್ಷ, ಸ್ವರ್ಗ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳನ್ನು ಮೀರಿದ್ದಾಗಿದೆ. ಇದು ಹರಿಭಕ್ತರಲ್ಲದವರಿಗೆ ಅಪ್ರಾಪ್ಯವು ಜೀವರು ಸ್ವ ಸ್ವರೂಪದಿಂದ ಈ ಲೋಕವನ್ನು ಹೊಂದಿ ಅಲ್ಲಿ ಹರಿ ಸಾನಿಧ್ಯದಿಂದ ನಿರಂತರವಾದ ಸುಖವನ್ನು ಪಡೆಯುವರು. ಆದರೆ ವೈಕುಂಠದಲ್ಲಿರುವ ಮುಕ್ತರೂ ಹರಿಗೆ ಅಧೀನರೂ ಆಗಿರುತ್ತಾರೆ" (೩೦). ದಾಸರು ಇಲ್ಲಿ ವೈಕುಂಠಕ್ಕೆ ಹೋಗಲು ಹೊಳೆವ ದಾರಿ ತೋರಿಸಲು ಕೇಳುತ್ತಾರೆ. ಹೊಳೆವ ದಾರಿಯೆಂದರೆ [ಅರ್ಚಿರಾದಿಮಾರ್ಗ], ಸೂರ್ಯ ಕಿರಣದಂತೆ ಹೊಳೆಯುವ ದಾರಿ, ಶುಭಕರ್ಮಗಳಿಂದ ಮತ್ತು ಜ್ಞಾನದಿಂದ ದೇವಲೋಕಗಳಿಗೆ ಸಾಗಿ ಕಡೆಯಲ್ಲಿ ಮುಕ್ತಿಯನ್ನು ಕಾಣಿಸುವ ದಾರಿ. ಅನ್ಯಾಯ ಅಧರ್ಮಗಳಲ್ಲಿ ಜೀವನ ನಡೆಸುವವರು ಹೊಗೆಯಿಂದ ಕಪ್ಪಿಟ್ಟದಾರಿಯಲ್ಲಿ ಹೋಗುತ್ತಾರೆಂದೂ ಅದನ್ನು 'ಪಿತ್ರಯಾನ'ವೆಂದೂ, ವೈಕುಂಠಕ್ಕೆ ಹೋಗುವದಾರಿಯನ್ನು 'ದೇವಯಾನ' ವೆಂದೂ ಕರೆಯುತ್ತಾರೆ. ಇಲ್ಲಿ 'ದಾರಿ' ಪ್ರತಿಮೆ ಮೊದಲು 'ಸಂಕೇತ'ವಾಗಿ ನಂತರ ವಿಸ್ತೃತರೂಪವನ್ನು ಸ್ವೀಕರಿಸಿ, ಹರಿದಾಸದೀಕ್ಷೆಯೇ ವೈಕುಂಠಕ್ಕೆ ದಾರಿಯೆಂದು ತಿಳಿಸುತ್ತದೆ. 'ದಾರಿ'ಪ್ರತಿಮೆ ಗುರುಕಾರುಣ್ಯ ದಿಂದ ಹರಿಯ ಒಲುಮೆ ದೊರೆತು ಸಂಸಾರವನ್ನು ದಾಟಲು ಮಾಡಬೇಕಾದ ಸಾಧನೆಯತ್ತ ಗಮನ ಸೆಳೆಯುವ ಕಾರ್ಯಮಾಡುತ್ತದೆ.

**ನವೀನತೆ** ಉತ್ತಮ ಸಾಹಿತ್ಯ ಕೇವಲ ಭೂತಪ್ರಜ್ಞೆಯನ್ನಾಧರಿಸಿದ ಪುರಾಣವೂ ಅಲ್ಲ ಕೇವಲ ವರ್ತಮಾನಪ್ರಜ್ಞೆಯನ್ನಾಧರಿಸಿದ ಚರಿತ್ರೆಯೂ ಅಲ್ಲ ಇವೆರಡನ್ನೂ ಉಚಿತ ಪ್ರಮಾಣದಲ್ಲಿ ಒಳಗೊಂಡು ಹಿಂದಿನ, ಇಂದಿನ ಅಂಶಗಳನ್ನು 'ಪ್ರತಿಮೆ'ಯಲ್ಲಿ ಹೊಯ್ದು ತಮ್ಮ ಕೃತಿಗಳಲ್ಲಿ ಲೋಕನೀತಿಗಳನ್ನು, ಸತ್ಯ, ನ್ಯಾಯ, ಧರ್ಮ ದಂತಹ ಮೌಲ್ಯಗಳನ್ನು ತುಂಬಿಸುವುದು ಅಥವಾ ಮನದಭಾವನೆಗಳನ್ನು ಅಭಿವ್ಯಕ್ತಿಸಲು ತಮ್ಮ ಅನುಭವದ ಅಂಗಡಿಯ ಸಾಮಾನುಗಳನ್ನು ತಂದು ಕಾವ್ಯದಡುಗೆಯ ರಸಾನಂದವನ್ನು ಎಲ್ಲ ಕಾಲದಲ್ಲಿಯೂ ಅನುಭವಿಸುವಂತೆ ಮಾಡುವುದು ಒಂದು ಪ್ರತಿಮಾ ಲಕ್ಷಣವೆನ್ನಿಸಿಕೊಳ್ಳತ್ತದೆ. ಪುರಂದರದಾಸರು ವಾಕ್ಸರಣಿ ಮತ್ತು ವಸ್ತು ಅಥವಾ ಇವೆರಡರ ಹೊಸತನದ ಮೂಲಕ ಅನೇಕ ಸಂಗತಿಗಳನ್ನು ಸಾಕ್ಷಾತ್ಕರಿಸುತ್ತಾರೆ.

ಕದವ ಮುಚ್ಚಿದಳೇಕೊ ಗಯ್ಯಾಳಿ ಮೂಳಿ ಪ।

ಕದವ ಮುಚ್ಚಿದಳೆಕೋ ಚಿಲುಕ ಅಲ್ಲಾಡುತ್ತಿದೆ
ಒಳಗಿದ್ದ ಪಾಪವು ಹೋದೀತು ಹೊರಗೆಂದು ೧।

ಭಾರತ ರಾಮಾಯಣ ಪುಣ್ಯ ಕಾವ್ಯಂಗಳ
ಸಾರ ತತ್ವದ ಬಿಂದು ಸೇರಿತು ಒಳಗೆಂದು. ೨।

ಅಂದುಗೆ ಕಿರುಗೆಜ್ಜೆ ಮುಂಗಾಲಿಲಳವಟ್ಟು
ಧೀಂ ಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು ೩।

ನಂದನ ಕಂದ ಗೋವಿಂದ ಮುಕುಂದನ
ಚಂದವಾದ ಧ್ವನಿ ಹೋದೀತು ಕರ್ಣಕೆಂದು ೪।

ಹರಿಶರಣರ ಪಾದ ಸರಸಿಜಯುಗಳದ

ಪರಮ ಪಾವನವಾದ ರಜವು ಬಿದ್ದತೆಂದು ॥೩॥

ಮಂಗಳ ಮೂರುತಿ ಪುರಂದರ ವಿಠಲನ
ತುಂಗವಿಕ್ರಮ ಪದದಂಗುಳಿನೋಕಿತೆಂದು. ॥೪॥ (೩೧)

ನಿತ್ಯ ಯಾತ್ರೆಯ ಸಂದರ್ಭದಲ್ಲಿ ಒಂದುದಿನ ಯಾವಳೋ ಹೆಂಗಸು ದಾಸರು ಮನೆಯ ಮುಂದೆ ನಿಂತಂತೆಯೇ, ಮನೆಬಾಗಿಲು ಮುಚ್ಚಿಕೊಂಡು ಒಳಗೆ ಹೋದುದು ಇಲ್ಲಿನ ಸಂದರ್ಭ, ಅದೇ ಸಂದರ್ಭವನ್ನು ಉಪಯೋಗಿಸಿಕೊಂಡು ಸನ್ನಿವೇಶದ ತತ್ಕಾಲೀನ ಅಗತ್ಯಕ್ಕೆ ದಾಸರು ಸ್ಪಂದಿಸಿ ಒಂದು ಸೃಜನಶೀಲತೆಯ ಛಾಪು, ಮೂಡಿಸಿ ತಮ್ಮ ಪ್ರತಿಭೆಯನ್ನು ಮೆರೆಯುತ್ತಾರೆ.

ಆಗಲೇ ಬಾಗಿಲು ಮುಚ್ಚಿದ್ದನ್ನು ತಿಳಿಸುವಂತೆ ಹೊರಗೆ ಅಗುಳು ಅಲುಗಾಡುತ್ತದೆ. ಇಲ್ಲಿ 'ಕದ' ಪ್ರತಿಮೆ ಮನಸ್ಸಿನಲ್ಲಿ ಮುಚ್ಚುವ ಅಜ್ಞಾನದ ಬಾಗಿಲಿಗೆ ಸಂಕೇತವಾಗುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳಿಂದ ತುಂಬಿದ ಪಾಪವು ಹೊರಗೆ ಹೋದೀತೆಂದು ಕದವ ಮುಚ್ಚಿದಳೆನ್ನುತ್ತಾರೆ ದಾಸರು. ತೆರೆದ ಮನಸ್ಸಿಲ್ಲದಿದ್ದರೆ ಶಾಸ್ತ್ರಗ್ರಂಥಗಳ ಲ್ಲಿರುವ ಪಾರಮಾರ್ಥಿಕ ತತ್ವದ ಕಡೆ ಜನರ ಮನಸ್ಸು ಹರಿಯುವುದಿಲ್ಲ ದಾಸರ ಕೀರ್ತನ ನರ್ತನೆಗಳು ತಿಳಿಯದ ಜನರಿಗೆ ತ್ರಿವಿಕ್ರಮ ಅವತಾರದ ಪುರಂದರವಿಠಲನ ಕೃಪೆಯೂ ಆಗುವದಿಲ್ಲ ಎಂಬ ಅರ್ಥ ಮೂಡಿಬರುತ್ತದೆ.

<u>ಅಂತರ್‌ದರ್ಶನ:</u> ಶಬ್ದವು ಬಹಿರಂಗದ್ದು ಅನುಭವ ಅಂತರಂಗದ್ದು, ಕಂಡುಕೊಂಡ ವಸ್ತುವಿನ ಭಾವವನ್ನು 'ಪ್ರತಿಮೆ'ಯು ತನ್ನ ಅಂತರಂಗದೊಳಗೆ ತುಂಬಿಕೊಳ್ಳುತ್ತದೆ. ಕವಿಯು ತನ್ನ ವಿಚಾರಗಳನ್ನು ಒಬ್ಬ ಗಂಭೀರ ಶಸ್ತ್ರ ವೈದ್ಯನಂತೆ ಆಳವಾಗಿ ತೆರೆದು ನೋಡುತ್ತಾನೆ. ವಾಸ್ತವತೆಯನ್ನು ಇದ್ದಹಾಗೆಯೇ ಹೇಳಿದರೆ ಅಷ್ಟು ಪರಿಣಾಮಕಾರಿಯಾಗಿರುವುದಿಲ್ಲ ಅದನ್ನೇ ಪ್ರತಿಮೆಗಳ ಮೂಲಕ ಹೇಳಿದರೆ, ಹೆಚ್ಚು ಪ್ರಭಾವಶಾಲಿಯಾಗಿರುತ್ತವೆ. ಒಂದು ವಸ್ತುವನ್ನು ವಿವಿಧ ಕೋನಗಳಲ್ಲಿರಿಸಿದ ಕನ್ನಡಿಗಳಲ್ಲಿ ನೋಡುವಂತೆ ಪ್ರತಿಮೆಗಳು ವಸ್ತು ಸಂಗತಿಯ ಅನೇಕಾರ್ಥಗಳನ್ನು ಪ್ರತಿಫಲಿಸಬೇಕು ಅಂತಹ ಅರ್ಥಗಳನ್ನು ತಿಳಿಸುವ ಪುರಂದರದಾಸರ ಒಂದು ಕೀರ್ತನೆ ಹೀಗಿದೆ:

ನಾಯಿ ಬಂದದಪ್ಪ ಅಣ್ಣ ಅತ್ತಲಾಗಿರಿ ॥ಪ॥
ನಾಯಿ ಅಂದರೆ ನಾಯಿಯಲ್ಲ
ಮಾನವ ಜನ್ಮದ ಹೀನನಾಯಿ ॥ಅ॥

ಕೊಟ್ಟ ಸಾಲವ ಕೊಡದ ನಾಯಿ
ಇಟ್ಟಭಾಷೆಯ ತಪ್ಪುವ ನಾಯಿ
ಕಟ್ಟೆ ಮೇಲೆ ಕುಳಿತುಕೊಂಡು
ಅಟ್ಟಹಾಸದಿ ಬೊಗಳುವ ನಾಯಿ ॥೧॥

ಕೊಟ್ಟು ಕುದಿಯುವ ಕೆಟ್ಟನಾಯಿ
ಇಟ್ಟ ಅನ್ನವ ಹಂಗಿಪ ನಾಯಿ
ಪುಟ್ಟಿ ಮಾತೆ ಗರ್ಭದಲ್ಲಿ

ಕೆಟ್ಟ ಕೃತ್ಯವ ಮಾಳ್ಪ ನಾಯಿ ೨

ಪಟ್ಟ ಸ್ತ್ರೀಯಳ ಬಿಟ್ಟಿಹ ನಾಯಿ
ಬಿಟ್ಟ ಸ್ತ್ರೀಯಳ ಆಳುವ ನಾಯಿ
ದಿಟ್ಟ ಶ್ರೀ ಪುರಂದರ ವಿಠಲರಾಯನ ಮನ
ಮುಟ್ಟಿ ಭಜಿಸದೆ ಹೋದ ನಾಯಿ ೩ (೩೨)

ನಾಯಿ ಎಂದರೆ ಮನುಷ್ಯನಾಗಿದ್ದೂ ನಾಯಿಯ ಬಾಳನ್ನೇ ಬಾಳುತ್ತಿರುವವನು ಎಂದರ್ಥ. ಮನುಷ್ಯನು ಪ್ರಾಣಿಗಳಿಗಿಂತ ಭಿನ್ನವಾಗುವುದು ಮನುಷ್ಯತ್ವ ಹಾಗೂ ಮೌಲ್ಯಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡಾಗಲೇ, 'ಅತ್ತಲಾಗಿರಿ' ಎಂದು ಇಲ್ಲಿ ಕೆಟ್ಟ ಮನುಷ್ಯರನ್ನು ಹತ್ತಿರ ಸೇರಿಸಬಾರದು ಎಂದರ್ಥದಲ್ಲಿ ಹೇಳಲಾಗಿದೆ. ಕೊಟ್ಟ ಸಾಲವನ್ನು ಕೊಡದೆ ಇರುವ ಭಂಡತನ, ಮಾತಿನಂತೆ ನಡೆಯದೆ ಇರುವುದು, ಬೇರೆಯವರ ಬಗ್ಗೆ ಅನವಶ್ಯಕವಾಗಿ ಆಡಿಕೊಳ್ಳುವುದು, ಯಾರಿಗಾದರೂ ಏನನ್ನಾದರೂ ಕೊಡುವ ಪ್ರಸಂಗ ಬಂದರೆ ಕೊಟ್ಟು ಹಳ ಹಳಿಸುವುದು, ಅನ್ನ ಕೊಟ್ಟವರನ್ನು ಹಂಗಿಸುವುದು, ಮಾತೆ ಗರ್ಭದಲ್ಲಿ ಹುಟ್ಟಿ ಅವಳಿಗೆ ಅನ್ಯಾಯ ಮಾಡುವುದು, ಕಟ್ಟಿಕೊಂಡ ಸ್ತ್ರೀಯರನ್ನು ಬಿಟ್ಟು ಬೇರೆ ಸ್ತ್ರೀಯರ ಸಂಗ ಬಯಸುವುದು, ಇವೆಲ್ಲವು ಮಾನವರು ಮಾಡುವ ಕೆಲಸಗಳಲ್ಲ ಆದ್ದರಿಂದ ದಾಸರು ಅಂಥಹ ಕೆಲಸವನ್ನು ಮಾಡುವ ಮನುಷ್ಯನನ್ನು ಅತ್ಯಂತ ಹೀನಾಯವಾಗಿ 'ನಾಯಿ' ಎಂದು ಕರೆದಿದ್ದಾರೆ. 'ನಾಯಿ' ಪ್ರತಿಮೆ ವಿವಿಧ ಕೋನಗಳಲ್ಲಿ ಮನುಷ್ಯನ ದುರ್ಗುಣಗಳನ್ನು ತೆರೆದಿಡುತ್ತದೆ. ಪ್ರತಿಮೆ ದೂರದ ವಸ್ತುಗಳನ್ನು ಹೋಲಿಸಿ ಒಂದು ಕಡೆ ತಂದು ಆ ಎರಡೂ ವಸ್ತುಗಳ ಹಿಂದಿನ ಸಮಾನ ಸಂಬಂಧವನ್ನು ಎತ್ತಿತೋರಿಸುತ್ತದೆ. ಇಲ್ಲಿ ಹೋಲಿಕೆ ಮಾತುಗಳಲ್ಲಿ ಹೇಳಲಾಗ ದಂತಿದ್ದು ಮನಸ್ಸಿಗೆ ವೇದ್ಯವಾಗುವಂತಿರುತ್ತದೆ. ಪ್ರತಿಮೆ ಒಂದು ಸತ್ಯದ ಬೆಳಕಿನಲ್ಲಿ ಮತ್ತೊಂದು ಸತ್ಯವನ್ನು ಕಾಣುತ್ತದೆ ಮತ್ತು ಅವುಗಳ ಸಾಮ್ಯತೆ ಇದಕ್ಕೆ ಪುಷ್ಟಿ ಕೊಡುತ್ತದೆ.

ತೀವ್ರತೆ: ತೀವ್ರತೆ ಅಥವಾ ತೀಕ್ಷ್ಣತೆ ಎಂದರೆ, ಹೆಚ್ಚಿನ ಅರ್ಥವತ್ತತೆ ಕೇಳುಗನ, ಓದುಗನ ಮನಸ್ಸನ್ನು ತಟ್ಟಿ ಅವನಲ್ಲಿರುವ ಭಾವನೆಗಳನ್ನು ಪ್ರಚೋದಿಸುವ ಶಕ್ತಿ ಎನ್ನಬಹುದು. ಪ್ರತಿಮೆಗಳು ಸ್ಥಗಿತಗೊಂಡ ಅಥವಾ ಜಡವಾದ ಬದುಕಿಗೆ ಇಳಿದು ಚೈತನ್ಯವನ್ನು, ಎಚ್ಚರಗೊಳಿಸುವ ಶಕ್ತಿಯನ್ನು ಪಡೆದುಕೊಂಡಿವೆ. ಇಂತಹ ಸಮಯದಲ್ಲಿ ಪ್ರತಿಮೆಗಳು ಬೀರುವ ಪರಿಣಾಮಗಳು ತೀವ್ರ ಅಥವಾ ತೀಕ್ಷ್ಣವಾಗಿರುತ್ತದೆ. ಯಾವ ಪ್ರತಿಮೆ ಓದುಗನಲ್ಲಿ ಪರಿಣಾಮವನ್ನುಂಟು ಮಾಡುತ್ತದೆಯೋ, ಯಾವುದು ಜೀವನದಲ್ಲಿ ರೀತಿನೀತಿಗಳನ್ನು ತೋರಿಸುತ್ತದೆಯೋ, ಯಾವುದು ಒಳನೋಟಗಳನ್ನು ಕಟ್ಟಿಕೊಡುತ್ತದೆಯೋ, ಅಂತಹ ಅಭಿವ್ಯಕ್ತಿ ಪ್ರಕಾರ ಶ್ರೇಷ್ಠ ಕವಿಗಳಿಂದಲೇ ಸಾಧ್ಯ. ಕಾವ್ಯದಲ್ಲಿಯ ತೀವ್ರತೆಯನ್ನು ನಾವು ಬಸವೇಶ್ವರರ ವಚನಗಳಲ್ಲಿ ಹೆಚ್ಚು ಕಾಣುತ್ತೇವೆ. ಬಸವೇಶ್ವರರ ವಚನಗಳು ಕೇವಲ ರಸಾನಂದ ಕೊಡುವುದಕ್ಕಾಗಲಿ ಹೊಗಳಿಕೆಗಾಗಲಿ ರಚಿಸಿದ ಕಾವ್ಯವಲ್ಲ, ಪ್ರತಿಯೊಬ್ಬ ಮನುಷ್ಯನ ಆಂತರಿಕ ಸಾಧನೆಯನ್ನು ಸಾಧಿಸಲು ಕುರುಡು ಸಂಪ್ರದಾಯಗಳನ್ನು ತೊರೆದು ಸಮಾಜದಲ್ಲಿ ಭೇದ ಮುಕ್ತ ವಾತಾವರಣವನ್ನು ನಿರ್ಮಿಸಲು ವಚನ ಸಾಹಿತ್ಯದಲ್ಲಿಯ ಪ್ರತಿಮೆಗಳು

ಸಹಾಯಕವಾದವು. ಪುರಂದರದಾಸರು ಕೂಡ ತಮ್ಮ ಕೀರ್ತನೆಗಳಲ್ಲಿ ತೀವ್ರವಾಗಿ ಪರಿಣಾಮ ಬೀರುವಂತಹ ಪ್ರತಿಮೆಗಳನ್ನು ಬಳಸಿದ್ದಾರೆ ಅವುಗಳಲ್ಲಿ, ಮುಖ್ಯವಾದುವು.

'ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ, (೩೩)
'ಯಾಕೆಮೂರ್ಖನಾದ್ಯೋ ಮನುಜ ಯಾಕೆ ಮೂರ್ಖನಾದ್ಯೋ' (೩೪)
'ಬಡವ ನಿನಗೊಬ್ಬರಗೊಡವೆ ಯಾತಕೋ' (೩೫)
'ನಾರಾಯಣ ಎನಬಾರದೆ ನಿಮ್ಮ ನಾಲಿಗೆಯೊಳು ಮುಳ್ಳು ಮುರಿದಿಹುದೆ (೩೬)
'ಹೊಲೆಯ ಹೊರಗಿಹನೆ ಊರೊಳಗಿಲ್ಲವೇ?' (೩೭)

ಮುಂತಾದವುಗಳು. ಹೊಲೆತನ ಎನ್ನುವುದು ಪುರಂದರದಾಸರ ದೃಷ್ಟಿಯಲ್ಲಿ ಅಪೂರ್ಣತೆ, ಅಸಾಮರ್ಥ್ಯ, ಸಣ್ಣತನ ಮುಂತಾದ ದೈಹಿಕ – ಮಾನಸಿಕ ಕೊರತೆಗಳಿಂದ ಹುಟ್ಟಿ ಬರುವ ವಸ್ತು. ಶೀಲದ್ರೋಹ, ರಾಜದ್ರೋಹ, ಮನೆಮುರುಕುತನ, ಆಡಿದ ಮಾತಿಗೆ ತಪ್ಪುವಿಕೆ, ಸುಳ್ಳುಗಾರಿಕೆ ಮುಂತಾದ ದುರ್ಗುಣಗಳನ್ನುಳ್ಳವರೇ ಪುರಂದರದಾಸರ ದೃಷ್ಟಿಯಲ್ಲಿ ಹೊಲೆಯರು, ಇಲ್ಲಿ ನಾಲಿಗೆ, ಮೂರ್ಖ, ಬಡವ, ಹೊಲೆಯ ಮುಂತಾದ ಪ್ರತಿಮೆಗಳು ತೀವ್ರವಾದ ಪರಿಣಾಮವನ್ನು ಓದುಗನ ಮನಸ್ಸಿನಲ್ಲಿ ಮಾಡುವವು.

<u>ಜಾಗ್ರತಶಕ್ತಿ</u> ಪ್ರತಿಮೆಗಳು ಮನಸ್ಸಿನಲ್ಲಿ ಮಡುಗಟ್ಟಿದ ಭಾವನೆಗಳಿಗೆ ಚೈತನ್ಯವನ್ನು ತುಂಬಿಸುತ್ತವೆ, ತಪ್ಪುದಾರಿಯಲ್ಲಿ ನಡೆಯುತ್ತಿರುವವನನ್ನು ಎಚ್ಚರಿಸುತ್ತವೆ. ಇವು ತಮ್ಮ ಮೂಲಕ ಹೇಳುವ ಭಾವನೆ ಅನುಭವಗಳ ಮೂಲಕ ಜ್ಞಾನೋದಯವನ್ನುಂಟುಮಾಡುತ್ತವೆ. ಚಿಂತನೆಗಳ ಮೇಲೆ ಜ್ಞಾನದ ಬೆಳಕು ಚೆಲ್ಲುತ್ತವೆ. ಪ್ರತಿಮೆಗಳು ಕಾವ್ಯಗುಣವನ್ನು ಹೆಚ್ಚಿಸುವ ಕಾವ್ಯ ಸೌಂದ ರ್ಯದ ಅಂಶಕ್ಕಿಂತ ಓದುಗನ ಮನಸ್ಸಿನಲ್ಲಿ ಕವಿಯ ಅನುಭವವನ್ನು ಅಭಿವ್ಯಕ್ತಿಯನ್ನು ಜಾಗೃತಗೊಳಿಸುವ ಕಾವ್ಯಶಕ್ತಿಯನ್ನು ಹೊಂದಿರುತ್ತದೆ. ಪ್ರತಿಮೆಯ ಮೂಲಕ ಕವಿ ವಸ್ತುವಿನ ಸತ್ಯರೂಪವನ್ನು ದರ್ಶಿಸುತ್ತಾನೆ ಆದ್ದರಿಂದ ಪ್ರತಿಮೆಗಳು ಸತ್ಯದರ್ಶನದ ಮಾಧ್ಯಮಗಳು ಎನ್ನಬಹುದು.

ಕವಿಯು ಅನುಭವಗಳನ್ನು ಮನವ ಹೊಕ್ಕು ಹೃದಯ ತಟ್ಟುವ ಸುಂದರ ಪ್ರತಿಮೆಗಳಲ್ಲಿ ಪೋಣಿಸಿ ಅವುಗಳಲ್ಲಿ ಅರ್ಥಗಳನ್ನು ತುಂಬಿ ನಂಬಿಕೆ ರೀತಿನೀತಿಗಳು ಚಿಂತನೆಗಳ ಮೇಲೆ ಬೆಳಕು ಚೆಲ್ಲಿ ಭಾವವನ್ನು ಪ್ರಕಟಿಸುವ ಮೂಲಕ ತಮ್ಮ ಕೃತಿಗಳಲ್ಲಿ ಜಾಗೃತಿಯೆಂಬ ಶಕ್ತಿಯನ್ನು ತುಂಬುತ್ತಾನೆ. ಪುರಂದರದಾಸರು ತಮ್ಮ ಹೆಚ್ಚಿನ ಕೃತಿಗಳಲ್ಲಿ ಈ ಪ್ರತಿಮಾ ಲಕ್ಷಣವನ್ನು ಬಳಸಿದ್ದಾರೆ 'ಉಬ್ಬದಿರು ಉಬ್ಬದಿರು ಎಲೆ ಮಾನವ', 'ಎಚ್ಚರದಲಿ ಮಡೆಮನವೆ', ಎಚ್ಚರಿಗೆ ಭಾಗ್ಯ ಯಾರಿಗೂ ಸ್ಥಿರವಲ್ಲ', 'ಏತರ ಕಟಪಟಿ ಒಂದಿನ ಹೋಗುತಿ', 'ಕೊಬ್ಬಲಿರಬೇಡ ಮನುಜ ನೀನು 'ಛೀ ಛೀ ಎತರ ಜನ್ಮ', 'ಮಾನವ ಜನ್ಮ ದೊಡ್ಡದು ಇದನು ಹಾನಿ ಮಾಡಲಿ ಬೇಡ ಹುಚ್ಚಪ್ಪಗಳಿರಾ' (೩೮) ಮುಂತಾದ ಕೀರ್ತನೆಗಳಲ್ಲಿ ಬದುಕನ್ನು ಗಾಢವಾಗಿ ಪ್ರೀತಿಸುವ ಚಿಂತನೆ ಕಾಣುತ್ತದೆ. ಸಮಾಜಸುಧಾರಕರಾದ ದಾಸರು ಶ್ರೇಷ್ಠವಾದ ಮಾನವಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕಾದರೆ ಮೊದಲು ಈ ಜನ್ಮದ ಮಹತ್ವವನ್ನು ತಿಳಿದು ಧರ್ಮವೆಂಬ ಸಂಬಳಗಳಿಸಿರೋ ಎನ್ನುತ್ತಾರೆ. ಮನುಷ್ಯನು ಉಬ್ಬಿ–ಕೊಬ್ಬಿ ನಡೆಯದೆ ಶೀಲ ಸಂವರ್ಧನೆಯ ಕಾರ್ಯ ಮಾಡಬೇಕೆಂಬ ಆಶಯ ಅವರದು. ಈ ಭಾಗ್ಯ ಯಾರಗೂ ಸ್ಥಿರವಲ್ಲ ನಮಗೆಲ್ಲ ಸಾವು ಬಂದೇ ಬರುವುದು. ಧರ್ಮದ ದಾರಿಯಲ್ಲಿ ನಡೆಯದ ಮನುಷ್ಯನ ಜನ್ಮ ಛೀ ಛೀ ವ್ಯರ್ಥ

ಎನ್ನುತ್ತಾರೆ'. 'ಎಚ್ಚರದಲ್ಲಿ ನಡೆ ಮನವೆ' (೩೯) ಎಂಬ ಕೀರ್ತನೆಯಲ್ಲಂತೂ ಸ್ವರ್ಗ, ನರಕಗಳ ಚಿತ್ರ ಕಣ್ಣು ಮುಂದೆ ಬಿಚ್ಚಿ ತೋರಿಸುತ್ತಾರೆ. ಘೋರ ನರಕದ ಉಗ್ರ ಚಿತ್ರಣ ಚಾಗಟೆ ಹೊಡೆದಂತೆ ಮನವನ್ನು ಎಚ್ಚರಿಸುತ್ತದೆ.

ಇಲ್ಲಿ ಅನ್ನದಾನ ಮಾಡಿದರೆ ಅಲ್ಲಿ ಮೃಷ್ಟಾನ್ನ (ಸ್ವರ್ಗ)

ಇಲ್ಲಿ ಅನ್ಯಾಯ ಮಾಡಿದರೆ ಬೆನ್ನ ಚರ್ಮವ ಸೀಳಿ ತಿನಿಸುವರಲ್ಲಿ (ನರಕ)

ಇಲ್ಲಿ ತಂದೆ ತಾಯಿಗಳ ಪೂಜೆಮಾಡಿದರೆ ಅಲ್ಲಿ ದೇವೇಂದ್ರನ ಸಭೆತೋರುವರು (ಸ್ವರ್ಗ)

ಇಲ್ಲಿ ತಂದೆ ತಾಯಿಗಳ ಬಯ್ದರೆ ಅಲ್ಲಿ ಹುಲ್ಲು ದಂದೆಯ ಕಟ್ಟಿ ಸುಡುವರು (ನರಕ)

ಇಲ್ಲಿ ಆಲಯ ದಾನ ಮಾಡಿದರೆ ಅಲ್ಲಿ ವೈಕುಂಠದಲ್ಲಿರಲು ಅವಕಾಶ (ಸ್ವರ್ಗ)

ಇಲ್ಲಿ ಆಲಯ ಮುರಿದರೆ ಅಲ್ಲಿ ಶೂಲದ ಮರವನೇರಿಸಿ ಕೊಲ್ಲುವರಲ್ಲಿ (ನರಕ)

ಇಲ್ಲಿ ಅತ್ತೆ ಮಾವರ ಸೇವೆ ಮಾಡಿದರೆ ಅಲ್ಲಿ ಪತಿವ್ರತೆಯೆನ್ನುವರು (ಸ್ವರ್ಗ)

ಇಲ್ಲಿ ಅತೆ ಮಾವರ ಬಯ್ದರೆ ಅಲ್ಲಿ ಗರಗಸದಲ್ಲಿ ಕತ್ತು ಕೊಯ್ವರು (ನರಕ)

ಇಲ್ಲಿ ಗಂಡನಲ್ಲಿ ಭಕ್ತಿಯಿಟ್ಟರೆ ಅಲ್ಲಿ ಪುಂಡರೀಕಾಕ್ಷನು ಒಲಿಯುವನು (ಸ್ವರ್ಗ)

ಇಲ್ಲಿ ಗಂಡನನಿಂದಿಸಿದರೆ ಅಲ್ಲಿ ಖಂಡ ಖಂಡವಾಗಿ ಕತ್ತರಿಸುವರು (ನರಕ)

ಇಲ್ಲಿ ಮುದ್ದಿಟ್ಟು ಕೊಂದರೆ ಅಲ್ಲಿ ಒದ್ದೊದ್ದು ಹದ್ದು ಕಾಗೆಗಳಿಗೆ ಹಾಕುವರು (ನರಕ)

ಇಲ್ಲಿ ಕೆಟ್ಟ ಬುದ್ಧಿಯ ತೋರಿದರೆ ಅಲ್ಲಿ ದೊಡ್ಡ ಗುದ್ದಲಿ ಕಾಸಿ ಬೆನ್ನೊಳು ಎಳೆವರು (ನರಕ)

ಇಲ್ಲಿ ಬೇಡಿ ಬಂದವರಿಗೆ ನೀಡಿದರೆ ಯೋಚನೆಯಿಲ್ಲದೆ ಸಲಹುವರಲ್ಲಿ (ಸ್ವರ್ಗ)

ಇಲ್ಲಿ ಬೇಡಿ ಬಂದವರನ್ನು ಬಯ್ದರೆ ಅಲ್ಲಿ ನಾಲಿಗೆ ಸೀಳುವರು (ನರಕ)

ಇಲ್ಲಿ ಧರ್ಮವ ಮಾಡಿದರೆ ಅಲ್ಲಿ ಧರ್ಮ ಸಭೆಯ ತೋರುವರು (ಸ್ವರ್ಗ)

ಇಲ್ಲಿ ಕೆಟ್ಟ ಯೋಚನೆ ಮಾಡಿದರೆ ಅಲ್ಲಿ ಕ್ರಿಮಿಗಳನ್ನು ತಿನಿಸುವರು (ನರಕ)

ಇಲ್ಲಿ ಹೆಣ್ಣು ಹೊನ್ನನ್ನು ಬಯಸಿದರೆ ಅಲ್ಲಿ ಕಣ್ಣಿಗೆ ಸುಣ್ಣವ ತುಂಬುವರು (ನರಕ)

ಇಲ್ಲಿ ಒಳ್ಳೆಯ ಜ್ಞಾನವನ್ನು ಪಡೆದುಕೊಂಡರೆ ಅಲ್ಲಿ ಪುರಂದರವಿಠಲ ಪಾಲಿಪನು (ಸ್ವರ್ಗ)

ಪುರಂದರದಾಸರು ಕೆಟ್ಟ ಕರ್ಮಗಳನ್ನು ಮಾಡಿದರೆ ಕೆಟ್ಟ ಫಲ ಉಣಬೇಕಾಗುವುದೆಂದು ಉಗ್ರ ನರಕ ರೂಪವ ದರ್ಶಿಸಿ ಒಳ್ಳೆಯ ದಾರಿಯಲ್ಲಿ ನಡೆಯಲು ಪ್ರೇರೆಪಿಸುತ್ತಾರೆ "ಎಚ್ಚರದಲ್ಲಿ ನಡೆ ಮನವೆ" ಎಂಬ ಕೀರ್ತನೆಯಲ್ಲಿ 'ಎಚ್ಚರಿಕೆ'ಯ ಪ್ರತಿಮೆ ಮನುಷ್ಯನಲ್ಲಿಯ ಶೀಲವನ್ನು ಬಡಿದೆಬ್ಬಿಸುತ್ತದೆ. 'ಇಲ್ಲಿ' ಎಂಬ ಪದ ಗೆಜ್ಜೆನಾದದಂತೆ ಬಂದು ಅರ್ಥಸೌಂದರ್ಯಕ್ಕೆ ಕಾರಣವಾಗುತ್ತದೆ.

**ಪ್ರತಿಮಾ ಮಾದರಿಗಳು** ಶಬ್ದಚಿತ್ರ ಎಂಬ ಕಲ್ಪನೆಬಿಟ್ಟು ಕಾವ್ಯ ಪ್ರತಿಮೆ ಇಂದ್ರಿಯಗೋಚರ ವಲ್ಲದ, ಮನಸ್ಸಿನ ಬುದ್ಧಿಶಕ್ತಿಯ ಅರಿವಿಗೆ ಬರುವ ಭಾವವಿರಬಹುದು. ಆನೆ, ನಾಯಿ, ವೈದ್ಯ, ಜಾಲಿ, ಮರ, ಮುಂತಾದವು ಕಣ್ಣಿಗೆ ಕಾಣುವಂತಹವು, ಎಚ್ಚರ, ಚಿಂತೆ, ನಗು, ಮಾಯೆ, ಮೂರ್ಖ, ಭಾಗ್ಯ ಮುಂತಾದವು ಅನುಭವಕ್ಕೆ ಬರುವಂತಹವು. ಸಸ್ಯ ಪ್ರತಿಮೆಗಳು, ಕಲ್ಲು, ಮಣ್ಣು, ಕಬ್ಬಿಣ, ಮುಂತಾದ ಇಂತಹ ಪ್ರತಿಮಾ ಮಾದರಿಗಳನ್ನು

ಕಾವ್ಯಸೃಷ್ಟಿಯ ಕ್ರಿಯೆ ಅಥವಾ ಸಂಪೂರ್ಣ ಕಾವ್ಯ ದೃಷ್ಟಿಯಿಂದ ಪರಿಶೀಲಿಸಬೇಕಾಗಿದೆ. ಇಂದ್ರಿಯ ಗೋಚರವಾಗುವ ಪ್ರತಿಮೆಗಳು ಮಾನವಿಯ ಸಂವೇದನೆಗಳನ್ನು ಒಗ್ಗೂಡಿಸಿ ಓದುಗರಿಗೆ ಸಹಜವಾಗಿ ಸಂವಹಿಸುವ ಸಾಮರ್ಥ್ಯವನ್ನು ಉಂಟುಮಾಡುತ್ತದೆ. ಕವಿ ತನ್ನ ಕಾವ್ಯದಲ್ಲಿ ಯಾವ 'ಪ್ರತಿಮೆಗಳನ್ನು' ರೂಪಿಸುತ್ತಾನೆ ಎನ್ನುವುದು ಅವನ ಪ್ರತಿಭಾಶಕ್ತಿಯ ಮೇಲೆ ಅವಲಂಬಿತವಾಗಿರುತ್ತದೆ. ಕವಿಯ ಬುದ್ಧಿಮತ್ತೆ ಹಾಗೂ ಅವನ ಭಾವನೆಗಳ ಸಂಕೀರ್ಣತೆಗಳು ಒಗ್ಗೂಡಿ ಅವನ ಕಲ್ಪನಾ ಪ್ರಜ್ಞೆಯಲ್ಲಿ ಪ್ರತಿಮೆಯು ಒಡಮೂಡುತ್ತದೆ. ಕವಿಯ ಯಾವ ಉದ್ದೇಶದಿಂದ ಪ್ರತಿಮೆಯು ಮೂಡಿರುತ್ತದೆಯೋ ಆ ಉದ್ದೇಶವು ಪೂರೈಸಿದರೆ ಅದು ಕಾವ್ಯದ ಬೆಳವಣಿಗೆಗೆ ಸಹಾಯಕವಾಗುತ್ತದೆ, ಒಟ್ಟಿನಲ್ಲಿ ಪ್ರತಿಮೆ ಕವಿಯ ಜೀವನಾನುಭವದಿಂದ ಕೇಂದ್ರಿಕೃತವಾಗಿದ್ದು ಅನೇಕಾರ್ಥಗಳನ್ನು ಪ್ರತಿಫಲಿಸುತ್ತದೆ. ಕವಿಯು ಒಂದೇಕೃತಿಯಲ್ಲಿ ಅನೇಕ ಪ್ರತಿಮೆಗಳನ್ನು ಒಂದರ ಹಿಂದೆ ಒಂದರಂತೆ ಬಳಸಿದರೆ ಅವುಗಳನ್ನು ಸಾಲು ಪ್ರತಿಮೆಗಳು ಎನ್ನುತ್ತೇವೆ ಪುರಂದರದಾಸರ ಕೀರ್ತನೆಯೊಂದರಲ್ಲಿ ಹೀಗಿದೆ.

ಹಿಂದೆ ತಗರು ಮುಂದೆ ಭಾವಿ
ಸಂದಣಿಸುವ ಎಡಬಲದಿ ಮದ್ದಾನೆ
ಒಂದಕ್ಕೆ ಒಂದು ಸಾಧನವು ಅದರ
ಮುಂದೆ ನೋಡಿದರೆ ತಾನದ ಸೋನೆ (೪೦)

'ಜತನ ಮಾಡೋ ಜೀವನದ ಮುಂದೆ, ಮತಿ ಭ್ರಷ್ಟನಾಗಿ ನೀ ಕೆಡಬೇಡ ಮನುಜ' ಎಂಬ ಪಲ್ಲವಿಯೊಡನೆ ಶುರುವಾಗುವ ಕೀರ್ತನೆ ಮನುಷ್ಯ ಜೀವನವು ತುಂಬ ಬೆಲೆಬಾಳುವಂತಹದ್ದು ಅದನ್ನು ಜಾಗ್ರತೆಯಿಂದ ಕಾಪಾಡು ಎಂದು ತಿಳಿಸುತ್ತಾರೆ. ಇಲ್ಲಿ 'ತಗರು' ಪ್ರತಿಮೆ ಬಲವಾಗಿರುವ ಪೂರ್ವ ಜನ್ಮದ ಕರ್ಮ ನಮ್ಮನ್ನು ತಿವಿಯಲು ಬರುತ್ತದೆ ಎಂಬ ಅರ್ಥ ಕೊಡುತ್ತದೆ. ಮುಂದೆ ಬಾವಿ ಎಂದರೆ ಗತಿ ಏನೆಂದು ತಿಳಿಯದ ಹಳ್ಳ ನಮ್ಮ ಮುಂದಿನ ಭವಿಷ್ಯದ ಬಗ್ಗೆ ತಿಳಿಯದೇ ಈ ಸಂಸಾರದಲ್ಲಿ ಬೀಳುವುದು ಅಥವಾ ಅಪಾಯ ಎನ್ನುವ ಅರ್ಥದಲ್ಲಿ 'ಬಾವಿ' 'ಪ್ರತಿಮೆ' ಮೂಡಿದೆ, ಸಂದಣಿಸುವ ಎಡಬಲದ 'ಮದ್ದಾನೆ' ಎಂದರೆ ರಾಗ–ದ್ವೇಷಗಳು. ರಾಗ ಎಂದರೆ ಸಂಸಾರಿಕ ಸುಖದಲ್ಲಿ ಮತ್ತು ಕರ್ಮಗಳಲ್ಲಿ ಆಸಕ್ತಿ, ದ್ವೇಷವೂ ಕೂಡ ಒಂದು ಅವಗುಣ, ಮನಸ್ಸನ್ನು ಸಂಯಮದಲ್ಲಿಟ್ಟುಕೊಳ್ಳಲು ಬಿಡದಂತೆ ಬೆಂಬೆತ್ತುವ ಆನೆಗಳು ರಾಗ–ದ್ವೇಷಗಳು ಇಚ್ಛೆಗಳ ದಮನ ಮಾಡಲಾಗದಷ್ಟು ದೊಡ್ಡ ಆನೆಯ ರೂಪದಲ್ಲಿರುತ್ತವೆ. ಹಾಗೆಯೇ ಚಂಚಲ ಮನಸ್ಸಿನ ಜೊತೆ ಕ್ರೋಧದ ಬೀಜದಿಂದ ಹುಟ್ಟುವ ಇನ್ನೊಂದು ಮದ್ದಾನೆ ದ್ವೇಷ, ಅದರ ಮುಂದೆ ನೋಡಿದರೆ ತಾನದ ಸೋನೆ ಎಂದರೆ ಸಂಸಾರದ ಸುರಿಮಳೆ, ಮನುಷ್ಯ ತಾನು ಮಾಡುವ ಒಳ್ಳೆಯ ಕೆಟ್ಟ ಕರ್ಮಗಳಿಗನುಸಾರವಾಗಿ ಆಯಾ ಯೋನಿಗಳಲ್ಲಿ ಜನಿಸಿರುತ್ತಾನೆ. ಸುರಿಮಳೆ ಎಂದರೆ ಒಂದರ ನಂತರ ಇನ್ನೊಂದರಂತೆ ಬರುವ ಜನ್ಮಗಳು ವಿವಿಧ ಜನ್ಮಗಳಲ್ಲಿ ವಿವಿಧ ದೇಹಗಳನ್ನು ಪಡೆಯುವುದು. ಇಲ್ಲಿ ಬರುವ ಸಾಲು ಪ್ರತಿಮಗಳು ಅಹಂಕಾರವನ್ನು ಕಿತ್ತು ಬಿಸಾಡಿ ನಿನ್ನ ಹೃದಯಕಮಲದಲ್ಲಿ ಬಿಂಬರೂಪಿ ಪರಮಾತ್ಮನನ್ನು ನೋಡು ಎಂದು ತಿಳಿಸುತ್ತವೆ. ಒಂದರ ನಂತರ ಒಂದು ಬರುವ ಉಪಮಾ ರೂಪಕಗಳು ಪ್ರತಿಮೆಗಳಿಂದ ಹೆಚ್ಚಿನ ಅರ್ಥ ಸುರಿಸಿ ಅಮೂರ್ತಭಾವಗಳಿಗೆ

ಮೂರ್ತ ಸಂಗತಿಗಳಾದ 'ತಗರು', ಭಾವಿ, ಮದ್ದಾನೆಗಳನ್ನು ಸಂಕೇತವಾಗಿ ಬಳಸಿರುವುದು ಕವಿಯ ಅಂತಃ ಪ್ರಜ್ಞೆಯನ್ನು ಸೂಚಿಸುತ್ತದೆ.

ಸಮಾಜದಲ್ಲಿ ಬಡವರು–ಭಾಗ್ಯವಂತರು, ಮೇಲುಜಾತಿ–ಕೀಳುಜಾತಿ, ಒಳ್ಳೆಯವರು–ಕೆಟ್ಟವರು ಮೊದಲಾದ ಭೇದವಿರುವುದು ಸಹಜ. ಈ ಮನುಷ್ಯ–ಮನುಷ್ಯನ ನಡುವಿನ ಭೇಧವನ್ನು ತಿಳಿಸಲು, ಅಥವಾ ಸಮಾಜ ಸುಧಾರಣೆಯ ಉದ್ದೇಶವನ್ನಿಟ್ಟುಕೊಂಡು ಮೂಡಿದ ಪ್ರತಿಮೆಗಳು, ಸಮಾಜದ ನ್ಯೂನತೆಗಳನ್ನು ಎತ್ತಿ ತೋರಿಸುವ ಭಾವವನ್ನೊಳಗೊಂಡ ಪ್ರತಿಮೆಗಳು 'ಸಾಮಾಜಿಕ ಪ್ರತಿಮೆಗಳು'. ಪುರಂದರದಾಸರು 'ಆಚಾರಕ್ಕಿಂತಲೂ ವಿಚಾರ ಮುಖ್ಯ, ಮನಸ್ಸು ತಿಳಿಯಾಗಿರಬೇಕು, ಧೃಢವಾಗಿರಬೇಕು, ಹೃದಯ ಪರಿಶುದ್ಧವಾಗಿರಬೇಕು' ಎಂದವರು. ಸಮಾಜದಲ್ಲಿ ಬೇರೆ ಬೇರೆ ಪ್ರಲೋಭನೆಗೆ ಒಳಗಾಗಿ ಜನರು ದಾರಿ ತಪ್ಪುವುದು ಸುಲಭ, ಅದಕ್ಕೆ ದುರ್ಜನರನ್ನು ಪರ್ಯಂತ ಮುಳ್ಳು ಕೂಡಿಪ್ಪಂಥವರು ಎಂದಿದ್ದಾರೆ. ಅವರ ಕೃತಿಗಳಲ್ಲಿ ಸಾಮಾಜಿಕ ಪ್ರತಿಮೆಗಳ ಪ್ರವಾಹವೇ ಹರಿದಿದೆ.

ಕಲ್ಲು ಕರಗಿಸಬಹುದು ಹುರಿಗಡಲೆಯೊಳು ಅದರ
ತೈಲವನು ತೆಗೆದಾದರೂ ಉಣ್ಣಲುಬಹುದು
ಒಲ್ಲದವರ ಮನಸು ಮೆಚ್ಚಿಸಲರಿಯೆನ್ಯೆ
ಹಲ್ಲು ಕಿರಿಯುತ ಹಂಬಲಿಸಿ ಬಾಯಬಿಡುತ (೪೧)

ಇಲ್ಲಿ ಕಲ್ಲು ಎಂಬ ಪ್ರತಿಮೆ ಕಠಿಣತೆಯನ್ನು ಬಿಂಬಿಸುತ್ತದೆ. ಕಲ್ಲು ಕರಗಿಸಬಹುದು ಹುರಿಗಡಲೆಯಿಂದ ಎಣ್ಣೆಯನ್ನು ತೆಗೆಯುವುದು ಇನೂ ಕಷ್ಟ ಅಥವಾ ಆಗುವುದೇ ಇಲ್ಲ ಅದನ್ನೂ ಮಾಡಬಹುದು ಆದರೆ, ಹಲ್ಲು ಕಿರಿಯುತ ಹಂಬಲಿಸಿ ಬಾಯಿಬಿಡುತ ಒಲ್ಲದವರನ್ನು ಮೆಚ್ಚಿಸಲಾಗದು ಎನ್ನುತ್ತಾರೆ ದಾಸರು. ಹರಿಕೀರ್ತನೆಗಳು ಹಾಡಿದ ಮಾತ್ರಕ್ಕೆ ಜನರ ಮನಸ್ಸು ಪರಿವರ್ತನೆಯಾಗಲಾರದು ವಿಷಯಾಸಕ್ತರಾದವರಿಗೆ ಹರಿಭಜನೆಯ ಸ್ವಾರಸ್ಯ ತಿಳಿಯುವುದಿಲ್ಲ. ಅವರದ್ದು ಒಲ್ಲದ ಮನಸ್ಸು ಅದನ್ನು ಮೆಚ್ಚಿಸುವುದು ಬಲು ಕಷ್ಟ ಎಂಬುದು ಅವರ ಚಿಂತೆ. ಅವರದೇ ಇನ್ನೊಂದು 'ಹೊಲೆಯ' ಪ್ರತಿಮೆ ಸಾಮಾಜಿಕ ಭೇದದ ಬಗ್ಗೆ ತಿಳಿಸುತ್ತದೆ. ಅಂತಹ ಅಸಮಾನತೆಯನ್ನು ನೀಗಲು ಪೊಳ್ಳು ಸಂಪ್ರದಾಯಗಳನ್ನು ಬಿಡಬೇಕು ಎಂಬ ವಿಷಯ ಇಲ್ಲಿ ಮೂಡುತ್ತದೆ.

ಹೊಲೆಯ ಬಂದಾನೆಂದು ಒಳಗೆ ದೇವರ ಮಾಡಿ
ಘಣ ಘಣ ಘಂಟೆ ಬಾರಿಸುತ
ತನುವಿನ ಕೋಪ ಹೊಲೆಯಲ್ಲವೇನಯ್ಯ
ಮನಸ್ಸಿನ ವಂಚನೆ ಹೊಲೆಯಲ್ಲವೇನಯ್ಯ
ಇಂಥಾ ಹೊರಗಿದ್ದ ಹೊಲೆಯನ್ನು ಒಳಗೆ ತುಂಬಿಟ್ಟುಕೊಂಡರೆ
ಇದಕೇನು ಮದ್ದೋ ಪುರಂದರವಿಠಲ (೪೨)

ದಾಸರು ಆರು ಸಾಲಿನ ಉಗಾಭೋಗದಲ್ಲಿ ತನುವಿನ ಕೋಪ, ಮನಸ್ಸಿನಲ್ಲಿರುವ ವಂಚನೆ ಎರಡನ್ನೂ ಹೊಲೆಯನಿಗೆ ಹೋಲಿಸಿದ್ದಾರೆ, ಮೇಲ್ಜಾತಿಯವರು ಹೊಲೆಯ ಬಂದರೆ ಅವರನ್ನು ಮುಟ್ಟಿಸಿಕೊಲಳ್ಳುತ್ತಿರದಿದ್ದ ಕಾಲವೊಂದಿತ್ತು, ಪುರಂದರದಾಸರ ಕಾಲದಲ್ಲಿಯೂ ಅಂತಹ ಮೂಢ ಆಚರಣೆಯಿದ್ದಿರಬಹುದು, ಚಿತ್ತಶುದ್ಧಿಯೇ

ಮಡಿ ಎಂದ ಅವರು ಇಂತಹ ಮೂಡ ಸಂಪ್ರದಾಯದಿಂದ ಯಾವ ಲಾಭವೂ ಇಲ್ಲ ಮೊದಲು ಮನಸ್ಸಿನ ಕಲ್ಮಶವನ್ನು (ಕೋಪ, ವಂಚನೆ) ತೊಳೆದುಕೊಂಡು ಸ್ನಾನ ಮಾಡಿರಯ್ಯ ಜ್ಞಾನ ತೀರ್ಥದಲಿ ಎಂದಿದ್ದಾರೆ. 'ಸತ್ಯವೆಂಬುದು ಸ್ನಾನ ಉಪವಾಸ ಜಪನೇಮ', ಎನ್ನುವುದು ಅವರ ಅಭಿಪ್ರಾಯ, ಮನಸ್ಸಿನಲ್ಲಿ ಕೋಪ ತಾಪ ವಂಚನೆಗಳು ತುಂಬಿಕೊಂಡಿದ್ದು ಯಾವ ಪೂಜೆ ಮಾಡಿದರೂ ಅದು ಭಗವಂತನಿಗೆ ಸಲ್ಲದು ಎಂಬ ಅರ್ಥ ಇಲ್ಲಿ ಮೂಡಿದೆ.

ಕಾವ್ಯದಲ್ಲಿ ಧಾರ್ಮಿಕ ವಿಷಯಗಳನ್ನು ಹೇಳುವ ಸಂದರ್ಭದಲ್ಲೂ ಕವಿ ಹೇಳುವ, ತಾನು ನಂಬಿದ ನಿಲುವುಗಳನ್ನು ನೇರವಾಗಿ ಅಭಿವ್ಯಕ್ತಿಸಲು ಪ್ರತಿಮೆಗಳನ್ನು ಆಶ್ರಯಿಸುತ್ತಾನೆ. ಹೀಗೆ ಜ್ಞಾನ, ಭಕ್ತಿ, ವೈರಾಗ್ಯ ಮುಂತಾದ ವಿಷಯಗಳನ್ನು ಸದಾಚಾರ, ಸಾಧುವೃತ್ತಿ ಇವುಗಳನ್ನು ಜನರ ನಡುವೆ ಹರಡಬೇಕೆಂಬ ಉದ್ದೇಶ್ಯದಿಂದ ಪ್ರತಿಮೆಗಳು ಮೂಡಿದವು. ಇವುಗಳನ್ನು ಹೆಚ್ಚು ಹೆಚ್ಚು ರಚಿಸಿದವರೆಂದರೆ ದಾಸರು, ಶರಣರು. ಕನಕದಾಸರ ಕೀರ್ತನೆಯೊಂದರಲ್ಲಿ 'ಮಣ್ಣು' ಪ್ರತಿಮೆ ಏನು ಹೇಳುವುದು ನೋಡೋಣ;

ಮಣ್ಣಿನ ಮಹಿಮೆ ಮನುಜ ನೀನರಿಯೆ
ಷಣ್ಮಹಿಷಿಯುತ ಸರ್ವೋತ್ತಮನ ಲೀಲೆ ಪ।

ಮಣ್ಣಿನಲ್ಲಿ ದೊರಕಿದಳು ಮಾತಾಯಿ ಸೀತಾ
ಮಣ್ಣೆಳೆದ ವಾಮನ ಮಹಾಬಲಿಯ ಬೇಡಿ
ಮಣ್ಣು ಪಾವನವಾಯ್ತು ರಾಮಪದ ಸ್ಪರ್ಶದಿ
ಮಣ್ಣುಂಡ ಬಾಯಲಿ ಬ್ರಹ್ಮಾಂಡ ತೋರಿದ ಕೃಷ್ಣ ೧।

ಮಣ್ಣಿಗೆ ನಡೆಯಿತು ಮಹಾಭಾರತ ಯುದ್ಧ
ಮಣ್ಣಿಗೆ ಮಡಿದರ ಸಂಖ್ಯೆಗೆಣೆಯಿಲ್ಲ
ಮಣ್ಣಲಿ ಬಿತ್ತಿದ ಬೀಜ ಮಹಾವೃಕ್ಷವಾಗುವುದು
ಅಣ್ಣ ನಮ್ಮಾದಿ ಕೇಶವನ ಅನುಗ್ರಹದಿಂ ೨। (೪೩)

'ಮಣ್ಣು' ಪ್ರತಿಮೆ ರಾಮಾಯಣ, ಮಹಭಾರತ, ವಾಮನಾವತಾರ ಕೃಷ್ಣಾವತಾರದ ಸನ್ನಿವೇಶಗಳನ್ನು ಮುಂದೆ ಮಾಡಿ ಮಣ್ಣಿಂದಾಗುವ ಒಳಿತು ಕೆಡಕುಗಳ ಬಗ್ಗೆ ತಿಳಿಸುತ್ತದೆ. ಮಣ್ಣಿನಲ್ಲಿ ಜನಕರಾಜನಿಗೆ ಸಿಕ್ಕಿದ ಮಗುವೆ ಸೀತೆ, ವಾಮನಾವತಾರದಲ್ಲಿ ಪರಮಾತ್ಮನು ಬಲಿರಾಜನಿಗೆ ಮೂರು ಪಾದದಷ್ಟು ಭೂಮಿಯನ್ನೇ ಬೇಡಿದನು ಆಗ ಬಲಿ ಚಕ್ರವರ್ತಿಯು ದಾನಮಾಡಲು ಸಿದ್ಧನಾದಾಗ ಅವನ ಒಂದೇ ಪಾದದಿಂದ ಭೂಮಿಯು ಭಗವಂತನ ವಶವಾಯಿತು, ಎರಡನೇ ಪಾದದಿಂದ ಆಕಾಶವನ್ನು ಇನ್ನೊಂದು ಪಾದವನ್ನು ಬಲಿರಾಜನ ತಲೆಯ ಮೇಲೆ ಇಟ್ಟನೆಂದು ಭಾಗವತ ಮಹಾಪುರಾಣದಲ್ಲಿ ಬರುತ್ತದೆ. ತಾಯಿಯಶೋಧೆ ಕೃಷ್ಣನನ್ನು ಮಣ್ಣು ತಿಂದಿಯೇಕೆ? ಎಂದು ಗದರಿಸಲು ಬಾಲ ಕೃಷ್ಣ ಇಲ್ಲಮ್ಮಾ ನಾನು ಮಣ್ಣುತಿಂದಿಲ್ಲ ಬೇಕಾದರೆ ನೊಡು ಎಂದು ಬಾಯಿತೆರೆದು ತೋರಿಸುವನು ಆಗ ಯಶೋದೆಗೆ ಕೃಷ್ಣನ ಬಾಯಲ್ಲಿ ಬ್ರಹ್ಮಾಂಡವೇ ಕಾಣುವುದು. ಹೀಗೆಯೆ ರಾಜ್ಯಕ್ಕಾಗಿ ನಡೆದ ಯುದ್ಧ ಮಹಾಭಾರತಯುದ್ಧ. ಅದೇ ಮಣ್ಣನ್ನು ಬೆಳೆ ತೆಗೆಯಲು ಮರ ಬೆಳೆಸಲು ಉಪಯೋಗಿಸಿದರೆ ಸಾತ್ವಿಕ ಫಲನೀಡುವುದು ಎಂಬುದು ಇಲ್ಲಿಯ ತಾತ್ಪರ್ಯ.

ಒಟ್ಟಾರೆ, ಕವಿಯ ಮನಸ್ಸಿನಲ್ಲಿ ಹುಟ್ಟಬರುವ ಪ್ರತಿಮೆಗಳ ಕಾವ್ಯಾರ್ಥ ಧ್ವನಿತವಾದರೆ, ಅಮೂರ್ತ ಭಾವ, ಕಲ್ಪನೆಗಳನ್ನು ಉಪಮೆ ರೂಪಕಗಳಿಂದ ಮೂರ್ತಗೊಳಿಸಿದರೆ ಸೌಂದರ್ಯ ಪ್ರಜ್ಞೆಯಿಂದ ಕೂಡಿದ ವರ್ಣಮಯವಾದ ಪ್ರತಿಮೆಗಳು ಮೂಡಿ ಬರುವವು ಪ್ರತಿಮೆ ಒಂದು ವಸ್ತುವನ್ನು ಪುನರ್ ಸೃಷ್ಟಿ ಮಾಡಲಾರದಾದರೂ ಒಂದು ವಸ್ತುವಿನ ಹಿಂದಿನ ಜಿವಂತಿಕೆಯನ್ನು ದರ್ಶನ ಮಾಡುತ್ತದೆ. ಮೂರ್ತಗೊಳಿಸುವಿಕೆಯ ರೀತಿ ಬದಲಾದರೂ ಅದರಲ್ಲಿ ಪ್ರಚೋದಿತ ಗುಣ ತುಂಬಿರುತ್ತದೆ ಪ್ರತಿಮೆಗಳ ದರ್ಪಣ ದರ್ಶೀಯತೆ ಬದುಕಿನ ಸತ್ಯವನ್ನು ತಿಳಿಸುತ್ತವೆ ಮಾನವ ಸ್ವಭಾವಗಳನ್ನು ಲೋಕನೀತಿಯನ್ನು ಧಾರ್ಮಿಕ ಭಾವನೆಗಳನ್ನು ತಿಳಿಸುವ ಕಾವ್ಯಪ್ರತಿಮೆ ಒಂದು ಅಪೂರ್ವ ಅಭಿವ್ಯಕ್ತಿಯಾಗಿದೆ.

## -: ಕೊನೆ ಟಿಪ್ಪಣಿಗಳು :-

೧. ಉಷಾಕಿರಣ (೨೦೦೧) ಬಸವೇಶ್ವರ ಮತ್ತು ಪ್ರತಿಮಾನಿರ್ಮಿತಿ ಆನಂದ ಪ್ರಕಾಶನ: ಪು-೫೪

೨. ಉಷಾಕಿರಣ (೨೦೦೧) ಬಸವೇಶ್ವರ ಮತ್ತು ಪ್ರತಿಮಾನಿರ್ಮಿತಿ ಆನಂದ ಪ್ರಕಾಶನ: ಪು-೨೭

೩. ಜಿ.ಎಸ್. ಶಿವರುದ್ರಪ್ಪ (೨೦೦೫) ಕಾವ್ಯಾರ್ಥ ಚಿಂತನ: ಪು-೮೫

೪. ಸಾ.ಕೃ ರಾಮಚಂದ್ರರಾವ್ (೧೯೮೫) ಪುರಂದರ ಸಾಹಿತ್ಯದರ್ಶನ ಸಂಪುಟ (೩) ಕೀಸಂ.-೨೭, ಕಿ.ಸ-೫೧, ಕಿ.ಸಂ-೫ ಕಿ.ಸಂ.-೧೧೮.

೫. ಜಿ.ಎಸ್. ಶಿವರುದ್ರಪ್ಪ (೨೦೦೫) ಕಾವ್ಯಾರ್ಥಚಿಂತನ, – ಪು-೮೮

೬ ಸಾ.ಕೃ ರಾಮಚಂದ್ರರಾವ್ (೧೯೮೫) ಪುರಂದರ ಸಾಹಿತ್ಯದರ್ಶನ ಸಂಪುಟ. ೩, ಕೀಸಂ-೨೨

೭ ಜಿ.ಎಸ್. ಶಿವರುದ್ರಪ್ಪ (೨೦೦೫) ಕಾವ್ಯರ್ಥಚಿಂತನ,ಪು-೧೦೬

೮. ಸಾ.ಕೃ ರಾಮಚಂದ್ರರಾವ್ (೧೯೮೫) ಪುರಂದರ ಸಾಹಿತ್ಯದರ್ಶನ; ಸಂಪುಟ-೩, ಕೀಸಂ -೧೮

೯. ಸಾ.ಕೃ ರಾಮಚಂದ್ರರಾವ್ ಪುರಂದರ ಸಾಹಿತ್ಯದರ್ಶನ; ಸಂಪುಟ-೩ ಕೀಸಂ-೧೩೨, ೪,೧೨೩,೧೧೪.

೧೦. ಸಾ.ಕೃ ರಾಮಚಂದ್ರರಾವ್ (೧೯೮೫) ಪುರಂದರ ಸಾಹಿತ್ಯದರ್ಶನ; ಸಂ-೩, ಕೀಸಂ-೧೮೮, ೧೯೦, ೧೯೧, ೧೯೨

೧೧. ಎಸ್.ಎಲ್. ಭೈರಪ್ಪ (೨೦೦೫) ಸಾಹಿತ್ಯ ಮತ್ತು ಪ್ರತೀಕ ಪು-೨೨

೧೨. ಸಾ.ಕೃ ರಾಮಚಂದ್ರರಾವ್ (೧೯೮೫) ಪುರಂದರ ಸಾಹಿತ್ಯದರ್ಶನ ಸಂ-೧ ಕೀಸಂ -೧೧

೧೩. ಸಾ.ಕೃ ರಾಮಚಂದ್ರರಾವ್; ಪುರಂದರ ಸಾಹಿತ್ಯದರ್ಶನ ಸಂ-೧ ಕೀಸಂ -೨೧

೧೪. ಸಾ.ಕೃ ರಾಮಚಂದ್ರರಾವ್; ಪುರಂದರ ಸಾಹಿತ್ಯದರ್ಶನ ಸಂ-೪ ಸುಳಾದಿ-೫,

೧೫. ಸಾ.ಕೃ ರಾಮಚಂದ್ರರಾವ್; ಪುರಂದರ ಸಾಹಿತ್ಯದರ್ಶನ ಸಂಪುಟ-೪-ಸುಳಾದಿ ೧೪

೧೬ ಶ್ರೀ ಕೆ. ನರಸಿಂಹಮೂರ್ತಿ; ಪಾಶ್ಚಾತ್ಯ ಸಾಹಿತ್ಯ ವಿಚಾರ, ಪು-೧೪೪

೧೭ ಎಚ್.ವಿ. ನರಸಿಂಹ ಮೂರ್ತಿ; ಸಂಸ್ಕೃತ ಸಂಪದ ಪು-೧೫೦

೧೮. ಸಾ.ಕೃ ರಾಮಚಂದ್ರರಾವ್; ಪುರಂದರ ಸಾಹಿತ್ಯದ ದರ್ಶನ ಸಂ-೩ ಕೀ.ಸಂ-೨೧೩

೧೯. ಸಾ.ಕೃ ರಾಮಚಂದ್ರರಾವ್; ಪುರಂದರ ಸಾಹಿತ್ಯದರ್ಶನ ಸಂ-೧ ಕೀ.ಸಂ-೧೮, ೧೯, ೫೭, ೯೦, ಸಂ-೨ ಕೀ.ಸಂ-೭೮

೨೦. ಎಸ್.ಎಲ್. ಭೈರಪ್ಪ; ಸಾಹಿತ್ಯ ಮತ್ತು ಪ್ರತೀಕ ಪು-೧೨

೨೧. ಪಿ.ಪಿ. ಕೃಷ್ಣನ್‌ನಾಯರು: ನಯಿ ಕವಿತಾ ಔರ ಪ್ರತೀಕ ವಿಧಾನ (ಹಿಂದಿ) ಪು-೨೪

೨೨. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ-೧ ಕೀ.ಸಂ-೨೭

೨೩. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ-೧ ಕೀಸಂ.೪೫

೨೪. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ–೩ ಕೀ.ಸಂ೮೯

೨೫. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ: ಸಂ–೧,ಕೀ.ಸಂ–೪೫

೨೬ ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ,ಸಂ–೧ ಕೀಸಂ –೮೯

೨೭ ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ; ಸಂ–೧ ಕೀ.ಸಂ–೩೭

೨೮. ಉಪಾಕಿರಣ ವಚನಗಳಲ್ಲಿ ಪ್ರತಿಮೆಗಳು [ಪ್ರಸ್ತಾವನೆ]

೨೯. ಸಾ.ಕೃರಾಮಚಂದ್ರರಾವ್, ಪುರಂದರ ಸಾಹಿತ್ಯ ದರ್ಶನ ಸಂ–೧ ಕೀ.ಸಂ–೨೨

೩೦. ಹೆಚ್.ಕೆ. ವೇದವ್ಯಾಸಾಚಾರ್ಯ, ಕರ್ನಾಟಕದ ಹರಿದಾಸರು ಪು–೪೫೭

೩೧. ಸಾ.ಕೃರಾಮಚಂದ್ರರಾವ್; 'ಪುರಂದರ ಸಾಹಿತ್ಯ', ದರ್ಶನ. ಸಂ–೧ ಕೀಸಂ´.೪೬

೩೨. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ–೩ ಕೀಸಂ೨೦೬

೩೩ ಸಾ.ಕೃರಾಮಚಂದ್ರರಾವ್ ಪುರಂದರ ಸಾಹಿತ್ಯ ದರ್ಶನ ಸಂ–೩, ಕೀಸಂ –೧೩೨, ೩೪, ೩೫, ೩೬, ೩೭

೩೪. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ–೩ ಕೀಸಂ. ೩೪

೩೫. ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ–೩ ಕೀಸಂ –೩೫.

೩೬ ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ–೩ ಕೀಸಂ –೪೨

೩೭ ಸಾ.ಕೃರಾಮಚಂದ್ರರಾವ್; ಪುರಂದರ ಸಾಹಿತ್ಯ ದರ್ಶನ ಸಂ–೩ ಕೀಸಂ –೪೭

೩೮. ಸಾ.ಕೃ ರಾಮಚಂದ್ರರವ್. ಪುರಂದರ ಸಾಹಿತ್ಯ ದರ್ಶನ ಸಂ–೩. ಕೀಸಂ –೧೨೫, ೩೦, ೩೨, ೧೧೨, ೬೫, ೭೯, ೨೧.

೩೯. ಸಾ.ಕೃ ರಾಮಚಂದ್ರರವ್. ಪುರಂದರ ಸಾಹಿತ್ಯ ದರ್ಶನ: ಸಂ–೩. ಕೀಸಂ´–೩೦

೪೦. ಸಾ.ಕೃ ರಾಮಚಂದ್ರರವ್. ಪುರಂದರ ಸಾಹಿತ್ಯ ದರ್ಶನ: ಸಂ–೨. ಕೀಸಂ´–೧೬೧

೪೧. ಸಾ.ಕೃ ರಾಮಚಂದ್ರರವ್. ಪುರಂದರ ಸಾಹಿತ್ಯ ದರ್ಶನ: ಸಂ–೧. ಕೀಸಂ –೪೧.

೪೨. ಸಾ.ಕೃ ರಾಮಚಂದ್ರರವ್. ಪುರಂದರ ಸಾಹಿತ್ಯ ದರ್ಶನ: ಸಂ–೪. ಉ–೨೬

೪೩. ಸಂಪಾದಕ ಸುಧಾಕರ ಕನಕ ಸಾಹಿತ್ಯ ದರ್ಶನ: [೧೯೯೯] ಸಂ–೪, ಪು–೨೪೯.

# ಅಧ್ಯಾಯ ೨
## ಪುರಂದರದಾಸರ ವ್ಯಕ್ತಿತ್ವ ಮತ್ತು ಸಾಹಿತ್ಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನಸಾಹಿತ್ಯ ಹಾಗೂ ದಾಸಸಾಹಿತ್ಯ ಹೆಚ್ಚು ಜನಸಂಮುಖಿ ವಾದಂತಹವು. ಭಾರತ ದೇಶದಲ್ಲಿ ಅನೇಕ ದಾರ್ಶನಿಕರು ಮಧ್ವಮತವನ್ನು ವಿವಿಧ ನಾಮನಿರ್ದೇಶನ ಗಳಿಂದ ಒಂದೊಂದು ಕಾಲದಲ್ಲಿ ಸ್ಥಾಪಿಸಿದರು, ಹಾಗೂ ಆ ಕಾಲದಲ್ಲಿ ಆಯಾ ಧರ್ಮಗಳು ಉದಯಿಸಿದವು. ಭರತ ಖಂಡದಲ್ಲಿ ಭಾಗವತಧರ್ಮವೆಂಬುದು ಅನಾದಿ ಕಾಲದಿಂದಲೂ ಪ್ರಚಾರದಲ್ಲಿದೆ. 'ಭಗವಂತನನ್ನು ಕುರಿತು ತಿಳಿಸುವ ಧರ್ಮವೇ ಭಾಗವತ ಧರ್ಮ'. ಭಗವಂತನಿಗೆ ಎಲ್ಲ ಜೀವರೂ ಎಲ್ಲ ಕಾಲಕ್ಕೆ ದಾಸರೇ. ಜೀವರಿಗೆ ಈಶತ್ವ ಎಂದೂ ಲಭಿಸುವುದಿಲ್ಲವೆಂಬುದು ಈ ಧರ್ಮದ ಪ್ರಮುಖ ತತ್ವ.

ಹದಿಮೂರನೇ ಶತಮಾನದಲ್ಲಿ ಕರ್ನಾಟಕದಲ್ಲಿ ಉದಯಿಸಿದ ಮಧ್ವಾಚಾರ್ಯರೆಂಬ ದಾರ್ಶನಿಕರು ವೇದ, ಉಪನಿಷತ್ತು, ಬ್ರಹ್ಮಸೂತ್ರ ಹಾಗೂ ಪುರಾಣಗಳಿಗೆ ಸರಿಯಾದ ಅರ್ಥ ವಿವರಣೆ ನೀಡಿ 'ದ್ವೈತತತ್ವ'ವನ್ನು ಸ್ಥಾಪಿಸಿದರು. ಭಕ್ತಿಗೆ ಅತ್ಯುನ್ನತವಾದ ಸ್ಥಾನವನ್ನು ಅವರು ತತ್ವವಾದ (೧) ದಲ್ಲಿ ಕೊಟ್ಟಿದ್ದಾರೆ. ಹರಿದಾಸ ಸಾಹಿತ್ಯವೂ ಕೂಡ ಇತಿಹಾಸದಲ್ಲಿ ಭಕ್ತಿಯನ್ನೇ ಮೂಲ ಉದ್ದೇಶವಾಗಿ ಪಡೆದ ಪರಂಪರೆ. ಹರಿದಾಸರಲ್ಲಿ ಪ್ರಮುಖರಾದ ಪುರಂದರದಾಸರೂ ಕೂಡ ತಮ್ಮ ಕೀರ್ತನೆಗಳಿಂದ ಭಕ್ತಿಯನ್ನು ದೇಶದ ಎಲ್ಲೆಡೆ ಹರಿಸುವಲ್ಲಿ ಯಶಸ್ವಿಯಾದರು. ಹರಿದಾಸ ಸಾಹಿತ್ಯವು ಮಧ್ವಾಚಾರ್ಯರಿಂದ ಆರಂಭ ಪಡೆದುಕೊಂಡು ಮುಂದೆ ಅವರ ಶಿಷ್ಯರಾದ ನರಹರಿ ತೀರ್ಥರಿಂದಲೂ ಶ್ರೀಪಾದರಾಜರಿಂದಲೂ ಮುಂದುವರೆಯಿತು. ಮುಂದೆ ವ್ಯಾಸರಾಜರ ಕಾಲದಲ್ಲಿ ಅವರ ಪ್ರಯತ್ನದಿಂದ ಜನ ಸಾಮಾನ್ಯರ ಮನೆ ಬಾಗಿಲಿಗೆ ಸಾಹಿತ್ಯ ಸಂಗೀತಗಳು ತಲುಪುವಂತಾಯಿತು. ವ್ಯಾಸರಾಯರಿಂದಲೇ ಪ್ರೇರಣೆ ಪಡೆದ ಪುರಂದರದಾಸರು 'ಪುರಂದರವಿಠಲ' ಎಂಬ ಅಂಕಿತದಿಂದ ದಾಸ ಸಾಹಿತ್ಯದ ಮಹತ್ವದ ಪ್ರಚಾರ ಕೈಗೊಂಡರು.

### ಪುರಂದರದಾಸರ ಇತಿವೃತ್ತ ವಿಚಾರ

ಭಾರತೀಯರಲ್ಲಿ ಜೀವನ ಚರಿತ್ರೆಗಳನ್ನು, ಇತಿಹಾಸಗಳನ್ನು ಯಥಾರ್ಥವಾಗಿ ಬರೆದಿಡುವ ಬಗ್ಗೆ ಅಷ್ಟೊಂದು ಆಸಕ್ತಿಇರಲಿಲ್ಲ. ಇತಿಹಾಸ ಪರಂಪರೆಯಲ್ಲಿ ರಾಜಮಹಾರಾಜರ ವಿಷಯಗಳನ್ನು ತಿಳಿಸುವ ಶಾಸನಗಳು ನಮಗೆ ಅಲ್ಲಲ್ಲಿ ಸಿಗುತ್ತವೆ ಆದರೆ ಸಾಧು ಸಂತರ ಮಹಾಪುರುಷರ ಜೀವನಕ್ಕೆ ಸಂಬಂಧಿಸಿದ ವಿಷಯಗಳು ಬಾಯಿಂದ ಬಾಯಿಗೆ ಬಂದ ಪವಾಡಗಳು ಹಾಗೂ ಕಲ್ಪನೆಗಳಿಂದ ತುಂಬಿಹೋಗಿವೆ, ಸಂಶೋಧಕರ ದೃಷ್ಟಿಯಿಂದ ನೋಡಲು ಹೋದಾಗ ಅವರ ಇತಿಹಾಸದ ಬಗ್ಗೆ ಸಿಗುವ ಆಧಾರಗಳು ಅತ್ಯಲ್ಪ. ಪುರಂದರದಾಸರ ಜೀವನ ಚರಿತ್ರೆಯನ್ನು ತಿಳಿಯುವಾಗಲೂ ಕೂಡ ಆಧಾರ, ದಾಖಲೆಗಳು ಅತ್ಯಂತ ಕಡಿಮೆ ಸಿಗುತ್ತವೆ ಅವರ ಕೀರ್ತನೆ, ಉಗಾಭೋಗ, ಸುಳಾದಿ ಮುಂತಾದ ರಚನೆಗಳಲ್ಲಂತೂ ಅವರು ತಮ್ಮ ವೈಯಕ್ತಿಕ ವಿಷಯದ ಬಗ್ಗೆ ಹೆಚ್ಚಾಗಿ ಹೇಳಿಕೊಂಡಿಲ್ಲ. ಪುರಂದರದಾಸರ ಜೀವನ, ಕಾಲ, ದೇಶಗಳ ಬಗ್ಗೆ ತಿಳಿಯಲು ನಮಗೆ ಸಿಗುವ ಆಧಾರಗಳು ಈ ಕೆಳಗಿನಂತಿವೆ.

೧. ಬಳ್ಳಾರಿ ಜಿಲ್ಲೆಯ ಕಮಲಾಪುರದ ತಾಮ್ರ ಶಾಸನ.

೨. ಪುರಂದರದಾಸರನ್ನು ಕುರಿತು ಪ್ರಸನ್ನ ವೆಂಕಟದಾಸರ ರಚನೆ.

೩. ಪುರಂದರದಾಸರ ಜೀವನದ ಬಗ್ಗೆ ಉಲ್ಲೇಖವಿರುವ ವಿಜಯದಾಸರ ರಚನೆ.

೪. ಪುರಂದರದಾಸರ ವ್ಯಕ್ತಿತ್ವವನ್ನು ತಿಳಿಸುವ ಜಗನ್ನಾಥದಾಸರ ರಚನೆ.

೫. ಪುರಂದರದಾಸರ ಉಲ್ಲೇಖವಿರುವ, ತಾಳ್ಳಪಾಕಂ ಅಣ್ಣಮಾಚಾರ್ಯರ ಮೊಮ್ಮಗ ಚಿನ್ನತಿರುವೇಂಗಳನಾಥರು ಬರೆದ ದ್ವಿಪ ಪ್ರಬಂಧ.

೬. ಪುರಂದರದಾಸರ ಅಂತ್ಯದ ಬಗ್ಗೆ ತಿಳಿಸುವ ಮಧ್ವಪತಿದಾಸರ (ಪುರಂದರದಾಸರ ಮಗ) ರಚನೆ.

೭. ವ್ಯಾಸರಾಯರ 'ದಾಸರೆಂದರೆ ಪುರಂದರದಾಸರಯ್ಯ' ಎಂಬ ಕೀರ್ತನೆ.

೮. ಪುರಂದರದಾಸರ ಕೀರ್ತನೆಗಳಲ್ಲಿ ಬರುವ ವಿಷಯಗಳು.

ವಿ.ಎ.ದಿವಾಣಜಿಯವರು 'ಪ್ರಸಾದಯೋಗ'ದಲ್ಲಿ ಇನ್ನೂ ಕೆಲವು ಆಧಾರಗಳನ್ನು ತಿಳಿಸುತ್ತಾರೆ "ತೆಲುಗಿನಲ್ಲಿಯ 'ಅನ್ನಮಾಂಕಚರಿತಮು' ಪುರಂದರದಾಸರ ವಿಷಯದಲ್ಲಿ ಕೆಲವೊಂದು ವಿವರಗಳನ್ನು ಕೊಡುತ್ತದೆ. 'ಶ್ರೀ ಪುರಂದರದಾಸರ ಮಹಾತ್ಮ್ಯ' ಎಂಬ ಹೆಸರಿನ ಐದು ಅಧ್ಯಾಯಗಳ ಸಂಸ್ಕೃತ ಚರಿತ್ರೆಯೊಂದಿದೆ, ಸಂಸ್ಕೃತದಲ್ಲಿಯೇ ಇಂದಿರೇಶ ಕೃತ ಮೂವತ್ತೇಳು ನುಡಿಗಳ ಸ್ತೋತ್ರ ಪದವೊಂದು ಪುರಂದರದಾಸರ ಜೀವನ ಚರಿತ್ರೆಯನ್ನು ವಿವರಿಸುತ್ತದೆ. ಮರಾಠಿಯಲ್ಲಿಯ ಮಹಿಪತಿ ಕವಿ ವಿರಚಿತ 'ಭಕ್ತಿ ವಿಜಯ' ಎಂಬ ಕೃತಿಯಲ್ಲಿ ಪುರಂದರದಾಸರ ಚರಿತ್ರೆ ಇದೆ ಆದರೆ ಇವುಗಳಲ್ಲಿ ಕಂಡುಬರುವ ಪರಸ್ಪರ ವಿಸಂಗತಿಗಳಿಂದ ಯಾರಿಗೂ ವಿಸ್ಮಯವಾಗದೇ ಇರದು. ಇವುಗಳಲ್ಲಿ ಸತ್ಯ ಎಷ್ಟು?, ಅಸತ್ಯ ಎಷ್ಟು? ಎಂಬ ಸಮಸ್ಯೆ ಬೃಹದಾಕಾರವನ್ನು ತಾಳಿ ನಿಲ್ಲುತ್ತದೆ. ಈ ಆಕಾರಗಳ ಪ್ರಾಮಾಣ್ಯದ ವಿವೇಚನೆಗೆ ಅಭಾದಿತವಾದ ಪ್ರಮಾಣಗಳು ದೊರಕುವುದಿಲ್ಲ" (೨) ಎಂದು ಅಭಿಪ್ರಾಯ ಪಡುತ್ತಾರೆ.

ಪುರಂದರದಾಸರ ಹೆಸರು ಮೊಟ್ಟ ಮೊದಲು ನಮ್ಮ ಗಮನಕ್ಕೆ ಬರುವುದು ಬಳ್ಳಾರಿ ಜಿಲ್ಲೆಯ ಕಮಲಾಪುರದ ತಾಮ್ರ ಶಾಸನದಲ್ಲಿ, ಡಾ। ಪಾಂಡುರಂಗ ದೇಸಾಯಿಯವರು ಇದನ್ನು ತಾವೇ ಪತ್ತೆಮಾಡಿದುದಾಗಿ ತಿಳಿಸುತ್ತಾರೆ. "ನಾನು ಪರಿಷ್ಕರಣೆಗೊಳಿಸಿದ ಈ ಲೇಖಸವು [Kamalapur Plates of Krishndevaraya Saka 1448] ಎಪಿಗ್ರಾಫಿಕಾ ಇಂಡಿಕಾ ಪತ್ರಿಕೆಯ ೨೧ನೇಯ ಸಂಪುಟದಲ್ಲಿ [Epigraphia Indica, Vol XXI, PP 139 ff] ಪ್ರಕಟವಾಗಿದೆ. ಈ ಶಾಸನದಲ್ಲಿ ಶ್ರೀ ಪುರಂದರರಿಗೆ ಸಂಬಂಧಿಸಿದ ಕೆಲವು ಅಜ್ಞಾತ ಅಂಶಗಳು ಉಕ್ತವಾಗಿವೆ. ಈ ಶಾಸನವು ವಿಜಯನಗರದ ನರಪತಿ ಶ್ರೀಕೃಷ್ಣದೇವರಾಯನ ಆಳ್ವಿಕೆಯದು. ಇದರ ತೇದಿ ಶಾಲಿವಾಹನ ಶಕೆ ೧೪೪೭ ಪಾರ್ಥಿವ ಫಾಲ್ಗುನ ಶು-೧೨ ಇದಕ್ಕೆ ಸಮನಾವಾದ ಇಂಗ್ಲೀಷ್ ದಿನಾಂಕ ಕ್ರಿ.ಶ. ೧೫೨೬ ಫೆಬ್ರುವರಿ ೨೪" (೩) ಪುರಂದರದಾಸರು ಬದುಕಿದ್ದಾಗಲೇ ಹೊರಟ ಶಾಸನ ಇದು. ಆಗ ವಿಜಯನಗರದ ಅರಸನಾಗಿದ್ದ ಶ್ರೀಕೃಷ್ಣದೇವರಾಯನು ತುಂಗಭದ್ರಾ ತೀರದ ಹಂಪೆಯ ವಿಠಲೇಶ್ವರನ ಸನ್ನಿಧಿಯಲ್ಲಿ ರಾಜಗುರುಗಳಾದ ವ್ಯಾಸರಾಜರಿಗೆ 'ವ್ಯಾಸಸಮುದ್ರ' ವೆಂಬ ಹೆಸರಿನ ಬೆಟ್ಟಕೊಂಡ ಗ್ರಾಮವನ್ನು ಸರ್ವಮಾನ್ಯ ಎಕಭೋಗ ದತ್ತಿಯನ್ನಾಗಿ ಕೊಟ್ಟಿದ್ದನು. ಈ ದತ್ತಿಯನ್ನು

ಪಡೆದುಕೊಂಡ ವ್ಯಾಸರಾಜರು ಅದನ್ನು ಮುನ್ನೂರ ಎಂಟು ವಿದ್ವಾಂಸರಿಗೆ ವೃತ್ತಿಗಳನ್ನಾಗಿ ಹಂಚಿಕೊಟ್ಟಿದ್ದನ್ನು ಈ ಶಾಸನ ತಿಳಿಸುತ್ತದೆ. ಹೀಗೆ ವ್ಯಾಸರಾಜರಿಂದ ವೃತ್ತಿಗಳನ್ನು ಪಡೆದುಕೊಂಡ ವಿದ್ವಾಂಸರಲ್ಲಿ 'ಪುರಂದರದಾಸಜ' ರಾದ ಎಂದರೆ ಪುರಂದರದಾಸರ ಮಕ್ಕಳಾದ ಮೂವರ ಹೆಸರುಗಳಿವೆ. ಲಕ್ಷ್ಮಣದಾಸ [೧೭೫], ಹೇಬ[ವ]ಣದಾಸ [೨೯೧] ಮತ್ತು ಮಧ್ವಪತಿದಾಸ [೨೯೨] ಇವರು ಮೂವರನ್ನು ವಸಿಷ್ಟಗೋತ್ರದವರೆಂದೂ ಯಾಜುಷ ಶಾಖೆಯವರೆಂದೂ ವಿದ್ವಾಂಸರೆಂದೂ ಶಾಸನ ಹೇಳುತ್ತದೆ. ಪುರಂದರದಾಸರಿಗೆ ವೃತ್ತಿಯನ್ನೇನೂ ಒದಗಿಸಿಲ್ಲವಾದ್ದರಿಂದ ಅವರು ಆ ಸಮಯದಲ್ಲಿ ತೀರ ವಿರಕ್ತರಾಗಿದ್ದರೆಂದು ತೋರುತ್ತದೆ. ಅವರ ಮೂರು ಮಕ್ಕಳನ್ನು 'ದಾಸ' ಎಂದು ವಿಶೇಷಣ ಹಚ್ಚಿ ಕರೆದಿರುವುದರಿಂದ ಅವರಿಗೆ ಆಗಲೇ ದಾಸದೀಕ್ಷೆ ಒದಗಿರುಬಹದೆಂದು ತಿಳಿಯಬಹುದು. ವಯಸ್ಸಿಗೆ ಬಂದ ಮಕ್ಕಳಿದ್ದ ಪುರಂದರದಾಸರಿಗೆ ಆಗ ಸುಮಾರು ೪೦ ವರ್ಷ ವಯಸ್ಸಾಗಿರಬಹುದು. ಕ್ರಿ.ಶ.೧೫೨೬ ರಲ್ಲಿ ಈ ಶಾಸನ ಹೊರಟಿದೆ. ಹಾಗಾದರೆ **೪೦**ವರ್ಷ ಹಿಂದೆ ಹೋದರೆ ಪುರಂದರದಾಸರು ಹುಟ್ಟಿದ ವರುಷ ೧೪೮೫ ಆಗಬಹುದು. ವ್ಯಾಸರಾಯರಿಗೆ ಈ ಶಾಸನ ಬರೆಸಿದ ಸಮಯದಲ್ಲಿ **೮೦** ವರ್ಷ ವಯಸ್ಸು ಆಗಿತ್ತು. ಏಕೆಂದರೆ ಅವರು ತೀರಿಕೊಂಡದ್ದು ೧೫೩೯ ರಲ್ಲಿ (೪) ವಿಜಯನಗರದ ಅರಸ ಕೃಷ್ಣದೇವರಾಯನ ಆಳ್ವಿಕೆಯ ಕಾಲ ೧೫೦೯–೧೫೩೦ (೫) ಅಂದರೆ ಸುಮಾರು ೧೫೨೦ ರ ಸುಮಾರಿಗೆ ಪುರಂದರದಾಸರು ವಿಜಯನಗರಕ್ಕೆ ಬಂದಿರಬಹುದು. ವ್ಯಾಸರಾಯರು ಇವರ ಮಕ್ಕಳಿಗೆ ದತ್ತಿ ಕೊಡಬೇಕಾದರೆ ಪುರಂದರದಾಸರು ಹಂಪೆಗೆ ಬಂದು ೫–೬ ವರ್ಷಗಳಾಗಿರಬೇಕು. ಮತ್ತು ಪರಸ್ಪರ ಪ್ರೀತಿ ವಿಶ್ವಾಸ ಮೂಡಿರಬೇಕು. ಹಾಗಾಗಿ ಪುರಂದರದಾಸರು ಸುಮಾರು ೧೫೨೦ ರಲ್ಲಿ ಹಂಪಿಗೆ ಬಂದಿರಬಹುದಾದ ಸಾಧ್ಯತೆಗಳಿವೆ. ಪುರಂದರದಾಸರ ಜನ್ಮ ದಿನಾಂಕದ ಬಗ್ಗೆ ಯಾವುದೇ ಖಚಿತವಾದ ಆಧಾರಗಳು ಸಿಗುವುದಿಲ್ಲವಾದ್ದರಿಂದ ಅವರ ಜನ್ಮ ಕಾಲ ೧೪೮೦–೧೪೮೫ ಎಂದು ತಿಳಿಯಬಹುದು.

ವಿಜಯದಾಸರ ಕಾಲಕ್ಕೆ ಸ್ವಲ್ಪ ಮುಂಚೆ ಬದುಕಿ ಬಾಳಿದ ಬಾಗಲ ಕೋಟೆಯ ಪ್ರಸನ್ನ ವೆಂಕಟದಾಸರು ತಮ್ಮ ಪದವೊಂದರಲ್ಲಿ ಪುರಂದರದಾಸರ ಕುರಿತು ಹೀಗೆ ಹೇಳುತ್ತಾರೆ.

" ತಂದೆ ಪುರಂದರದಾಸರ ಸ್ಮರಿಸುವೆ ಎನ್ನ
ಮಂದ ಮತಿಗಳೆದು ಹರಿಭಟನೆನಿಸುವ ॥ಪ॥

ಗುರುವ್ಯಾಸರಾಜರ ಚರಣಾಬ್ಜ ಷಟ್ಚರಣನ
ವಿರತಿ ಭಕುತೆ ಜ್ಞಾನದಾರ್ಣವನ
ವರ ಉಪನಿಷದ್ವಾರನಿಧಿಗೆ ತಿಮಿಂಗಿಲನಹನ
ಧರೆಯ ಕವಿಕುಲ ಶಿಖಾಮಣಿಯೆನಿಪನ" ॥೧॥ (೬)

ಒಟ್ಟು ೫ ನುಡಿಗಳನ್ನೊಂಡ ಈ ಪದದಲ್ಲಿ ಅವರು ವ್ಯಾಸರಾಯರ ಶಿಷ್ಯರೆಂಬುದನ್ನು ಬಿಟ್ಟು ಅವರ ಬದುಕಿನ ವಿವರಗಳ್ಯಾವೂ ಸಿಗುವುದಿಲ್ಲ. ಅವರು ಗೀತ, ಸುಳಾದಿ, ಉಗಾಭೋಗಗಳನ್ನು ರಚಿಸಿ ಕವನಗಳ ಮಳೆಗೆರೆದರೆಂದು ಪುರಂದರದಾಸರನ್ನು ಹೊಗಳುತ್ತಾರೆ.

ವಿಜಯದಾಸರು ೧೬೮೨ ರಲ್ಲಿ ಜನಿಸಿದ್ದರೆಂದು ೧೭೫೫ ರಲ್ಲಿ ತಮ್ಮ ೭೩ನೇ ವಯಸ್ಸಿನಲ್ಲಿ ಹರಿಪಾದ ಸೇರಿದರೆಂದು ತಿಳಿಯುತ್ತದೆ. (೭) ಅವರಿಗೆ ತಮ್ಮ ೨೨ನೇ ವಯಸ್ಸಿನಲ್ಲಿ ಕಾಶಿಯಲ್ಲಿ ಶ್ರೀ ಪುರಂದರದಾಸರು 'ವಿಜಯವಿಠಲ' ಎಂಬ ಅಂಕಿತ ಪ್ರಧಾನಮಾಡಿದರೆಂದು ತಿಳಿಯುತ್ತದೆ. ಇವರು ಪುರಂದರದಾಸರ ಮೇಲೆ ಅನೇಕ ಕೀರ್ತನೆಗಳನ್ನು ರಚಿಸಿರುತ್ತಾರೆ. ಅವರ ಒಂದು ಕೀರ್ತನೆ.

"ಬೇಸರದೆ ಭಜಿಸಿರೋ ಪುರಂದರ ದಾಸರಾಯರ
ಶ್ರೀಶ ನಿಮ್ಮನ್ನು ಉದಾಸೀನ ಮಾಡದೆ
ಪೋಷಿಸುವ ಸಂತೋಷದಿಂದಲಿ ॥ಪ॥

ಪುರಂದರಗಡದ ಒಳಗೆ ಹಿರಿಯ ಸಾಹುಕಾರನೆನಿಸಿ
ಪರಿಪರಿಯ ಸೌಖ್ಯಗಳ ಸುರಿಸುತ್ತ
ಇರುತಿರಲು ನರಹರಿ ತ್ವರಿತದಿಂ ಬ್ರಾಹ್ಮಣನಾಗುತ್ತ
ಕರುಣದಲಿ ಅವರುದ್ಧರಿಸಲೋಸುಗ ಮನೆಗೆ
ಪೋಗುತ್ತ ಯಜಮಾನ ಕಂಡು
ಜರಿದು ಬ್ರಾಹ್ಮಣನ್ನೊರಗೆ ಹಾಕಲು
ಮರುದಿವಸ ಮತ್ತೋಗಿ ನಿಂತ " ॥೧॥ (೮)

ಒಟ್ಟು ೯ ನುಡಿಗಳಲ್ಲಿ ಪುರಂದರದಾಸರ ಜೀವನ ಚರಿತ್ರೆ ಇಂತಿದೆ.

ಪುರಂದರದಾಸರು ಪುರಂದರಗಡ ಎಂಬ ಊರಲ್ಲಿ ವರದಪ್ಪ ನಾಯಕರೆಂಬ ಶ್ರೀಮಂತ ವ್ಯಾಪಾರಿಗೆ ಮಗನಾಗಿ ಹುಟ್ಟಿದರು. ಶ್ರೀನಿವಾಸನಾಯಕನೆಂಬುದು ಅವರ ಹೆಸರು. ಬಾಲ್ಯದಲ್ಲಿ ರತ್ನ ಪರೀಕ್ಷೆ ಮುಂತಾದ ವಿದ್ಯೆಯನ್ನೂ ವ್ಯವಹಾರಶಾಸ್ತ್ರ ಪಾಂಡಿತ್ಯವನ್ನೂ, ಸಂಸ್ಕೃತವನ್ನೂ, ಸಂಗೀತವನ್ನೂ ಕಲಿತಿದ್ದರು. ಪ್ರೌಢವಯಸ್ಸಿಗೆ ಬರಲು ಸರಸ್ವತೀಬಾಯಿಯೆಂಬ ಶ್ರೀಮಂತ ಕನ್ನಿಕೆಯೊಡನೆ ವಿವಾಹವಾಯಿತು. ಶ್ರೀನಿವಾಸ ನಾಯಕರು ಬಹಳ ಜಿಪುಣರೆಂದು ಪ್ರಸಿದ್ಧಿ ಪಡೆದಿದ್ದರು. ಅದಕ್ಕೆ ವಿರುದ್ಧವಾಗಿ ಅವರ ಪತ್ನಿ ಭೂತದಯೆ, ದೈವಭಕ್ತಿ ಉಳ್ಳವಳೂ ಆಗಿದ್ದಳು. ಭಗವಂತನು ವೃದ್ಧ ಬ್ರಾಹ್ಮಣನಾಗಿ ಬಂದು ಶ್ರೀನಿವಾಸ ನಾಯಕರಿಗೆ, ತನ್ನ ಮಗನ ಉಪನಯನ ಮಾಡಲು ಹಣದ ಸಹಾಯ ಮಾಡೆಂದು ಬಾರಿ ಬಾರಿ ಕೇಳಿದನು, ಪ್ರಯೋಜನವಾಗಲಿಲ್ಲ. ಆಗ ಅವರ ಪತ್ನಿ ಸರಸ್ವತಿಬಾಯಿಯ ಹತ್ತಿರ ಬಂದು ಸಹಾಯಕ್ಕೆ ಅಂಗಲಾಚಿದಾಗ ತನ್ನಲ್ಲಿದ್ದ ಮೂಗುತಿಯನ್ನು ತೆಗೆದು ಕೊಟ್ಟಳು.

ಆ ವೃದ್ಧ ಬ್ರಾಹ್ಮಣನು ಅದೇ ಮೂಗುತಿಯನ್ನು ತೆಗೆದುಕೊಂಡು ಶ್ರೀನಿವಾಸನಾಯಕನ ಬಳಿ ಹೋಗಿ ಆ ಮೂಗುತಿಯ ಮೌಲ್ಯದ ಹಣ ಬೇಕೆಂದು ಕೇಳಿದನು. ಆ ಮೂಗುತಿ ತಮ್ಮ ಪತ್ನಿಯದೆಂದು ತಿಳಿದು ಆ ಬ್ರಾಹ್ಮಣನಿಗೆ ಮತ್ತೆ ಬರಲು ಹೇಳಿ ಮನೆಗೆ ಬಂದ ಶ್ರೀನಿವಾಸನಾಯಕರು ಆ ಮೂಗುತಿಯ ಬಗ್ಗೆ ಪತ್ನಿಯನ್ನು ಕೇಳಿದರು. ಜಿಪುಣನಾದ ಪತಿಗೆ ವಜ್ರದ ಮೂಗುತಿಯನ್ನು ದಾನ ಕೊಟ್ಟಿದಾಗಿ ಹೇಳಲು ಧೈರ್ಯ ಸಾಲದೆ ವಿಷ ಕುಡಿಯಲು ಪ್ರಯತ್ನಪಟ್ಟಳು. ತಕ್ಷಣ ಕೈಯಲ್ಲಿದ್ದ ಬಟ್ಟಲಲ್ಲಿ ಮೂಗುತಿ ಬಂದು ಬಿದ್ದಿತು. ಅದನ್ನು ತಂದು ಪತಿಯ ಕೈಯಲ್ಲಿಟ್ಟಳು. ಶ್ರೀನಿವಾಸನಾಯಕರು ಆಶ್ಚರ್ಯದಿಂದ ಓಡೋಡಿ ಅಂಗಡಿಗೆ ಬಂದು ಬೀಗ ತೆರೆದು ನೋಡಲಾಗಿ ಅಲ್ಲಿ ಮೂಗುತಿಯೂ ಇರಲಿಲ್ಲ ಅಲ್ಲಿಯೇ ನಿಂತಿದ್ದ ವೃದ್ಧ ಬ್ರಾಹ್ಮಣನೂ ಮಾಯವಾದನು. ಇದೊಂದು

ಪವಾಡದಂತೆ ನಡೆದು ಪತ್ನಿಯ ಬಳಿ ವಿಚಾರಿಸಲಾಗಿ ಸತ್ಯ ತಿಳಿದು ಬಂದಿತು. ಇಂತಹ ಸನ್ನಿವೇಶದಲ್ಲಿಯೇ ಅವರಿಗೆ ಮನಸ್ಸು, ಬುದ್ಧಿಗಳೆಲ್ಲಾ ತೆರೆದು ತೋರಿದ್ದು, ಅದೇ ಸನ್ನಿವೇಶದಲ್ಲಿ ಅವರ ಪತ್ನಿಯ ಮಾತುಗಳು ಮನ ಮುಟ್ಟಿ ಇವರ ಮನ ಪರಿವರ್ತನೆಯಾಗಿದ್ದು.

ಶ್ರೀ ಪುರಂದರದಾಸರು ಹುಟ್ಟಿ ವಾಸವಾಗಿದ್ದ ಊರು 'ಪುರಂದರಗಡ' ದ ಬಗ್ಗೆ ಅವರ ತಂದೆ, ತಾಯಿಯರ ಹೆಸರಿನ ಬಗ್ಗೆ ಅನೇಕ ಭಿನ್ನಾಭಿಪ್ರಾಯಗಳಿವೆ. ಪುರಂದರದಾಸರು ಹುಟ್ಟಿ ವಾಸವಾಗಿದ್ದ ಊರು ಪುರಂದರಗಡ (ಇದು ವಿಜಯದಾಸರ ಕೀರ್ತನೆಯಲ್ಲೂ ಉಲ್ಲೇಖಗೊಂಡಿದೆ). ಪುರಂದರಗಡ ಎನ್ನುವ ಊರು ಈಗಿನ ಮಹಾರಾಷ್ಟ್ರ ರಾಜ್ಯದಲ್ಲಿ ಪುಣೆಗೆ ಹದಿನೆಂಟು ಮೈಲಿ ದೂರದಲ್ಲಿಯೂ ಹಾಗೂ ಪಂಡರಾಪುರಕ್ಕೆ ಸಮೀಪದಲ್ಲಿಯೂ ಇರುವ ಒಂದು ಊರು. ಅದು ೧೬ನೇ ಶತಮಾನದಲ್ಲಿ ಚಿನ್ನ, ಬೆಳ್ಳಿ ವ್ಯಾಪಾರ ನಡೆಸಲು ಅನುಕೂಲವಾದ ದೊಡ್ಡ ವ್ಯಾಪಾರ ಕೇಂದ್ರ ಆಗಿದ್ದಿರಬಹುದು. ಆದರೆ ಅದು ಈಗ ದುರ್ಗಮ ಪ್ರದೇಶವಾಗಿದೆ. ಕೆಲವರು ಪುರಂದರದಾಸರ ಜನ್ಮಸ್ಥಳ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನಲ್ಲಿರುವ ಕ್ಷೇಮಪುರ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅಗ್ರಹಾರದ ಬ್ರಾಹ್ಮಣರು ಚಿನ್ನ, ಬೆಳ್ಳಿಗಳ ವ್ಯಾಪಾರವನ್ನು ಮಾಡುತ್ತಿದ್ದರು. ಅವರಿಗೆ ನಾಯಕ ಎಂಬ ಉಪನಾಮ ಇತ್ತು. ಆದ್ದರಿಂದ ಪುರಂದರದಾಸರೂ ಈ ಕ್ಷೇಮಪುರದವರೇ ಆಗಿರಬಹುದೆಂಬ ವಾದವನ್ನು ಡಾ.ವಾಸುದೇವ ಅಗ್ನಿಹೋತ್ರಿಯವರು ತಳ್ಳಿ ಹಾಕಿದ್ದಾರೆ. (೯) ತೀರ್ಥಹಳ್ಳಿಯ ಪ್ರಾಂತದಲ್ಲಿ ವಿಠಲಮಂದಿರ ಯಾವುದೂ ಇಲ್ಲ ಹಾಗೂ ಪುಣೆಯ ಪುರಂದರಗಡ ಪಂಡರಾಪುರಕ್ಕೆ ಹತ್ತಿರ ಇದ್ದು, ಹರಿದಾಸ ಪಂಥದ ಆದಿದೈವ ಪಾಂಡುರಂಗ ವಿಠಲನಾಗಿರುವುದರಿಂದ, ಹಾಗೂ ಅವರ ಕೀರ್ತನೆಗಳಲ್ಲಿ ಉತ್ತರ ಕನ್ನಡ ಭಾಷೆಯ ಸೊಗಡು ಇರುವುದರಿಂದ ಪ್ರಸ್ತುತದಲ್ಲಿ ಪುಣೆಯ ಹತ್ತಿರದ ಪುರಂದರಗಡವೇ ಪುರಂದರದಾಸರ ಹುಟ್ಟೂರಾಗಿರಬೇಕೆಂದು ತಿಳಿಯುವುದು ಸೂಕ್ತವೆನಿಸುತ್ತದೆ.

ಮಹಾರಾಷ್ಟ್ರದಲ್ಲಿ ಹುಟ್ಟಿದ ಪುರಂದರದಾಸರು ಅಚ್ಚಗನ್ನಡ ಕೀರ್ತನೆಗಳನ್ನು ರಚಿಸಲು ಹೇಗೆ ಸಾಧ್ಯ? ಎಂಬ ಪ್ರಶ್ನೆ ಸರಿಯಲ್ಲ. ಏಕೆಂದರೆ ಪುರಂದರದಾಸರ ಕಾಲಕ್ಕೆ ಕನ್ನಡನಾಡು, ಮಹಾರಾಷ್ಟ್ರ, ಆಂಧ್ರಪ್ರದೇಶ ಎಂದು ಈಗಿರುವಂತೆ ನಿಖರವಾದ ಗಡಿ ನಿರ್ದೇಶನವಿರಲಿಲ್ಲ. ಜನಜೀವನದಲ್ಲಿ ಆಡುಭಾಷೆಯು ಆಡಳಿತ ಗಡಿಗಳನ್ನು ಅವಲಂಬಿಸಿರಲಿಲ್ಲ. ಈಗಿನ ಮಹಾರಾಷ್ಟ್ರ ಎಂದು ಸ್ಪಷ್ಟವಾಗಿ ಕಾಣಿಸುವ ಪ್ರದೇಶದಲ್ಲಿ ಕನ್ನಡ ಮಾತು ವ್ಯವಹಾರದಲ್ಲಿದ್ದಿರಬಹುದು. ಅಷ್ಟೇ ಅಲ್ಲದೆ ಬೇರೆ ಬೇರೆ ಊರುಗಳಲ್ಲಿ ವಾಸಿಸಿದ್ದರೂ ಕವಿಗಳು ತಮ್ಮ ಮಾತೃಭಾಷೆಯಲ್ಲಿ ರಚನೆಗಳನ್ನು ಮಾಡಿದ್ದಾರೆ. ಉದಾಹರಣೆಗೆ ಪಂಪಮಹಾಕವಿಯು ಆಂಧ್ರ ಪ್ರದೇಶದ ಕರೀಮ್‌ನಗರ ಜಿಲ್ಲೆಯ ಭೋಧನದಲ್ಲಿದ್ದು, ಅಚ್ಚಕನ್ನಡದಲ್ಲಿ ಅದೂ ನೂರಾರು ಮೈಲಿದೂರದಲ್ಲಿರುವ ಬನವಾಸಿಯನ್ನು ವರ್ಣಿಸುತ್ತಾ ಮಹಾಕಾವ್ಯವನ್ನು ಬರೆದವರು. ಕೆಲವು ಕವಿಗಳು ತಮ್ಮ ಮಾತೃಭಾಷೆಯಲ್ಲದೆ ಬೇರೆ ಬೇರೆ ಭಾಷೆಗಳಲ್ಲಿಯೂ ಕೃತಿಗಳನ್ನು ರಚನೆ ಮಾಡಿರುತ್ತಾರೆ. ಅಷ್ಟೇ ಅಲ್ಲದೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಜೋಳದ ಹಡಿಗೆ ಎಂಬ ಗ್ರಾಮದಲ್ಲಿದ್ದ ಮುಸಲ್ಮಾನ ಧರ್ಮಕ್ಕೆ ಸೇರಿದ ಪಿಂಜಾರಮನೆತನದ ರಾಮದಾಸರ ಮಾತೃಭಾಷೆ ಉರ್ದು ಬೆರೆತ ಹಿಂದಿ ಭಾಷೆ ಬಡೇ ಸಾಹೇಬರೆಂದೇ ಅವರ ಪೂರ್ವಾಶ್ರಮದ

ಹೆಸರು. ಇವರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಧರ್ಮದಿಂದ ಮುಸಲ್ಮಾನರಾದರೂ ಹಿಂದೂ ಧರ್ಮದ ವೈದಿಕ ಸಂಪ್ರದಾಯದ ಕಡೆಗೆ ಅವರಿಗೆ ಒಲವಿತ್ತು. ದಾಸತ್ವವನ್ನು ಸ್ವೀಕರಿಸಿ ಕನ್ನಡ ದಾಸ ಸಾಹಿತ್ಯಕ್ಕೆ ತಮ್ಮ ಕೊಡುಗೆ ಕೊಟ್ಟರು. ಹಾಗಾಗಿ, ಸಾಹಿತ್ಯ ರಚನೆ, ದೇಶ, ಭಾಷೆ, ಮತವನ್ನು ಮೀರಿದ ಸಂಗತಿ ಎಂದರೆ ತಪ್ಪಾಗಲಾರದು. ಪುರಂದರದಾಸರನ್ನು ಹರಿದಾಸರನ್ನಾಗಿ ಪರಿವರ್ತಿಸುವಂತಹ ಈ ಘಟನೆಯಲ್ಲಿ ಬರುವ ಬ್ರಾಹ್ಮಣನು ಭಗವಂತನಾಗಿರದೆ ಸಾಮಾನ್ಯ ಬ್ರಾಹ್ಮಣನಾಗಿದ್ದು ಕಿಟಕಿಯಿಂದ ಮೂಗುತಿಯನ್ನು ಸರಸ್ವತಿಬಾಯಿಯು ಹಿಡಿದ ಬಟ್ಟಲಲ್ಲಿ ಎಸೆದಿದ್ದನು ಎಂಬುದಾಗಿ ಕೆಲವರ ಅಭಿಪ್ರಾಯ. ಅದು ಏನೇ ಇರಲಿ ಮನೆ, ಧನ, ಧಾನ್ಯ ಎಲ್ಲವನ್ನೂ ದಾನ ಮಾಡಿ ಕೈಯಲ್ಲಿ ತಾಳ ತಂಬೂರಿ ಹಿಡಿದು ಇಂದಿನ ದಿನಕ್ಕಾಗಿ ಬಯಸದೆ ನಾಳೆಗಾಗಿ ಯೋಚಿಸದೆ ಊರೂರು ಸುತ್ತುತ್ತ ಹರಿನಾಮಸ್ಮರಣೆಯನ್ನು ಮಾಡುವುದು ಸಾಮಾನ್ಯರಿಗಂತೂ ಅಸಾಧ್ಯವಾದ ಮಾತು. ಅದೂ ಸಂಸಾರದ ಜವಾಬ್ದಾರಿಯನ್ನು ತ್ಯಜಿಸದೆ ವಿರಾಗಿ ಯಾಗುವುದು ಕಷ್ಟದ ವಿಷಯ. ಇನ್ನು ಪವಾಡದಂತೆ ನಡೆದ ಯಾವುದೇ ಒಂದು ಘಟನೆಯು ಜೀವನದ ದಾರಿಯನ್ನೇ ಬದಲಿಸಿತು ಎಂದರೆ ಆಶ್ಚರ್ಯವೆನಿಸುತ್ತದೆ. ಪುರಂದರದಾಸರಿಗೆ ಪತ್ನಿ ಸರಸ್ವತಿಯಪ್ರಭಾವ ಬಹಳ ಆಗಿರಬೇಕು. ಅವರು ಜೀವಿಸಿದ್ದ ಕಾಲದಲ್ಲಿನ ಸಾಮಾಜಿಕಗತಿಯ ಪರಿಣಾಮ ಅವರ ಮನಸ್ಸಿನಲ್ಲಿ ಮೂಡಿರಬೇಕು ಅಥವಾ ಮನಸ್ಸಿನ ಯಾವುದೋ ಮೂಲೆಯಲ್ಲಿ ಆಧ್ಯಾತ್ಮದ ವಿಷಯಕ್ಕಾಗಿ ತುಡಿತವಿರಬಹುದು. ಪೂರ್ವ ಜನ್ಮದಲ್ಲಿ ಅವರು ನಾರದರಾಗಿದ್ದರು. ಅವರಂತೂ ಭಗವದ್ಭಕ್ತರು. ಅವರಿಗೆ ಯಾರ ಪ್ರಭಾವದ ಅವಶ್ಯಕತೆ ಇರಲಿಲ್ಲ ಎಂದು ಕೆಲವರಿಗೆ ಅನ್ನಿಸಿದರೆ ಅದೂ ಇರಲಿ. ಪುರಾಣ ಕಥನಗಳಲ್ಲಿ ಬರುವ ನಾರದರ ಭಕ್ತಿಯ ಬಗ್ಗೆ ಕೆಲವರ ಗೌರವ ನಂಬಿಗೆಗಳನ್ನು ಅನುಮಾನಿಸುವ, ತರ್ಕಿಸುವ, ಅವಶ್ಯಕತೆಗಿಂತ ಸಂಶೋಧನಾ ದೃಷ್ಟಿಯಿಂದ ನೋಡಿದರೆ ಹೆಚ್ಚು ಉಪಯುಕ್ತ ಎನಿಸುತ್ತದೆ.

ಪುರಂದರದಾಸರು ಸಾಮಾನ್ಯ ವ್ಯಾಪಾರಿಯಾಗಿದ್ದು, ಅವರು ದಾಸದೀಕ್ಷೆ ತೆಗೆದುಕೊಳ್ಳುವ ಮುಂಚೆ ಸುಮಾರು ೧೮ ರಿಂದ ೨೦ ವರ್ಷಗಳವರೆಗೆ ಪತ್ನಿ ಮಕ್ಕಳ ಜೊತೆ ಸಂಸಾರ ಸುಖ ಅನುಭವಿಸಿದ್ದಾರೆ. ಇಷ್ಟು ದಿನಗಳ ನಂತರ ಒಂದು ದಿನ ಇದ್ದಕಿದ್ದಂತೆ ಜ್ಞಾನೋದಯವಾಯಿ ತೆಂದರೆ ಕೇವಲ ಮೂಗುತಿಯ ಮಾಯವಾಗುವಿಕೆಯೊಂದೇ ಕಾರಣವಾಗಿರಲಿಲ್ಲ. ಅವರ ಪತ್ನಿ ಸರಸ್ವತಿ ತುಂಬು ವ್ಯಕ್ತಿತ್ವದವಳಾಗಿದ್ದಳು. ಭಕ್ತಿ ಆಧ್ಯಾತ್ಮಿಕತೆಯ ಖಣಿ ಆಗಿದ್ದು ಅವಳ ವ್ಯಕ್ತಿತ್ವದ ಪ್ರಭಾವ ಅವರ ಮೇಲಾಗಿರಬಹುದು. ಆದರೆ ಇದನ್ನು ಸಮರ್ಥಿಸಲು ಸರಸ್ವತಿ ಬಾಯಿಯ ಚರಿತ್ರೆಯ ಬಗ್ಗೆ ತಿಳಿಯುವ ಯಾವ ಆಧಾರಗಳೂ ಸಿಗದೆ ಇರುವುದು ನಮ್ಮ ದುರಾದೃಷ್ಟ ಪುರಂದರದಾಸರ ಬಗ್ಗೆ ಬರೆದ ಅನೇಕ ವಿದ್ವಾಂಸರು ಸರಸ್ವತಿಯ ಬಗ್ಗೆ ಹೆಚ್ಚು ಬರೆದಿಲ್ಲ. ಪುರಂದರದಾಸರ ಬಗ್ಗೆಯೇ ನಮಗೆ ಕಡಿಮೆ ಆಧಾರಗಳು ಸಿಗುವಾಗ ಇನ್ನು ಅವರ ಪತ್ನಿಯ ಬಗ್ಗೆ ಸಿಗುವ ಆಧಾರಗಳು ಇಲ್ಲವೇ ಇಲ್ಲ ಎನ್ನಬಹುದು. ಆದರೆ ಅತ್ಯಂತ ಸಂತೋಷದ ವಿಷಯ ಏನೆಂದರೆ ಪುರಂದರದಾಸರೇ ತಮ್ಮ ಪತ್ನಿಯನ್ನು ಕೆಳಗೆ ಕಾಣಿಸಿದ ರಚನೆಯಲ್ಲಿ ಕೊಂಡಾಡಿ ಹರಸಿದ್ದಾರೆ.

"ಆದದ್ದೆಲ್ಲ ಒಳಿತೇ ಆಯಿತು ಪ।

ಶ್ರೀಧರನ ಸೇವೆಯ ಮಾಡಲು ಸಾಧನ ಸಂಪತ್ತಾಯಿತು ॥೨॥

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ತಗ್ಗಿಸಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ "

ಜಿಪುಣತನದಲ್ಲಿ ಅಗ್ರೇಸರರಾದ ಸೀನಪ್ಪನಾಯಕರನ್ನು ವೈರಾಗ್ಯ ಮೂರ್ತಿಯನ್ನಾಗಿ ಮಾಡಿ ಅವರ ಕೀರ್ತಿಯನ್ನು ದೇಶದಲ್ಲೆಲ್ಲಾ ಬೆಳಗಿಸಿದ ಸರಸ್ವತಿ ಬಾಯಿಯು ಅಜರಾಮರಳಾಗಿದ್ದಾಳೆ.

ಶ್ರೀನಿವಾಸನಾಯಕರು ತಮ್ಮಲ್ಲಿದ್ದದ್ದನ್ನೆಲ್ಲಾ ದಾನ ಮಾಡಿ ಹಂಪೆಯಲ್ಲಿದ್ದ ವ್ಯಾಸರಾಯರ ಆಶ್ರಯಕ್ಕೆ ಬರುತ್ತಾರೆ. ಆಗ ವ್ಯಾಸರಾಯರು ಶ್ರೀನಿವಾಸನಾಯಕರಿಗೆ ದ್ವೈತ ವೇದಾಂತ ರಹಸ್ಯವನ್ನು ಭೋದಿಸಿದರು. ಅಂದಿನಿಂದ ಶ್ರೀನಿವಾಸನಾಯಕರು ಪುರಂದರದಾಸರಾದರು.

ಪುರಂದರದಾಸರ ಉಲ್ಲೇಖ ಮತ್ತೆ ನಮಗೆ ಕಾಣಸಿಗುವುದು ವಿಜಯದಾಸರ ಶಿಷ್ಯರಾದ ಪ್ರಸಿದ್ಧ ಹರಿದಾಸರಾದ ಜಗನ್ನಾಥದಾಸರ (೧೭೭೭-೧೮೦೯) ಕೀರ್ತನೆಯಲ್ಲಿ.

ದಾಸರಾಯಾ ಪುರಂದರ ದಾಸರಾಯಾ ॥ಪ॥

ದಾಸರಾಯ ಪ್ರತಿದಾಸರದಲಿ ಶ್ರೀನಿ
ವಾಸನ್ನ ತೋರೋ ದಯಾಸಾಂದ್ರ ॥ಅ॥

ವರದನಾಯಕ ಭೂಸುರನ ಮಡದಿ ಬ
ಸಿರಲಿ ಜನಿಸಿ ಬಂದು ಮೆರೆದೆ ಧರಣಿಯೊಳು ॥೧॥

ಕುಲಶಧರಾಹ್ವಯ ಪೊಳಲೊಳು ಮಡದಿ ಮಕ್ಕಳ
ಕೂಡಿ ಸುಖದಿ ಕೆಲ ಕಾಲದಲಿದ್ಯೋ ॥೨॥

ವ್ಯಾಸರಾಯರಲಿ ಭಾಸುರ ಮಂತ್ರೋಪದೇಶವ
ಕೊಂಡು ರಮೇಶನ ಒಲಿಸಿದ್ಯೋ ॥೩॥

ಮನೆ ಧನ, ಧಾನ್ಯವಾಹನ ವಸ್ತುಗಳನೆಲ್ಲಾ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ ॥೪॥

ಪ್ರಾಕೃತ ಭಾಷೆಯೊಳ್ ನೀ ಕೃತಿ ಪೇಳಿ ಆ
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದ್ಯೊ ॥೫॥

ತೀರ್ಥಕ್ಷೇತ್ರಗಳ ಮೂರ್ತಿ ಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ॥೬॥

ಪಾತಕ ವನದಿ ಪೋತನೆನಿಪ ಜಗನ್ನಾಥ
ವಿಠಲನ ಸುಪ್ರೀತಿಯಿಂದೊಲಿಸಿದೆ. ॥೭॥ (೧೦)

ಇಲ್ಲಿ ಅವರ ತಂದೆಯ ಹೆಸರು ವರದನೆಂದು ಹಾಗೂ ಅವರು ಮಡದಿ ಮಕ್ಕಳ ಜೊತೆಯಲ್ಲಿ ಸುಖದಿಂದ ಕೆಲಕಾಲ ಕಳೆದದ್ದನ್ನು ಉಲ್ಲೇಖಿಸಿದ್ದನ್ನು ಕಾಣಬಹುದು. ಧನ, ಧಾನ್ಯ ವಾಹನ ವಸ್ತುಗಳನೆಲ್ಲಾ ತೃಣವೆಂದು ಬಗೆದು ವ್ಯಾಸರಾಯರಿಂದ ಉಪದೇಶ ಪಡೆದು ಪ್ರಾಕೃತ ಭಾಷೆಯಲ್ಲಿ ಕೃತಿಗಳನ್ನು ರಚಿಸಿ ನೀ ಕೃತಾರ್ಥನಾದೆ ಎಂದು ಹೇಳುತ್ತಾರೆ. ಪುರಂದರದಾಸರು ದಂಡಿಗೆಬೆತ್ತ ಎಂದರೆ ಹರಿದಾಸರು ಬಳಸುತ್ತಿದ್ದ ತಂತೀ ವಾದ್ಯವನ್ನು ಹಿಡಿದು ಹರಿದಾಸ ದೀಕ್ಷೆಯ ಪ್ರತೀಕವಾದ ತುಳಸಿಮಾಲೆಯನ್ನು ಧರಿಸುತ್ತಿದ್ದರು ಮತ್ತು ಎಡಭುಜದಿಂದ ಬಿದರಿನ ಭಿಕ್ಷಾಪಾತ್ರೆ ಎಂದರೆ ಗೋಪಾಳ ಬುಟ್ಟಿಯನ್ನು ಇಳಿ ಬಿಟ್ಟಿರುತ್ತಿದ್ದರು. ಇದು ಎಲ್ಲಾ ಹರಿದಾಸರ ಸಾಮಾನ್ಯ ವೇಷವೂ ಕೂಡ ಆಗಿದೆ. ಜಗನ್ನಾಥದಾಸರು, ಪುರಂದರದಾಸರು ವ್ಯಾಸರಾಯರಲ್ಲಿ ಮಂತ್ರೋಪದೇಶ ಪಡೆದ ಬಗ್ಗೆ ಮೇಲಿನ ಕೀರ್ತನೆಯಲ್ಲಿ ತಿಳಿಸುತ್ತಾರೆ. ಪುರಂದರದಾಸರೇ ತಾವು ವ್ಯಾಸರಾಯರಿಂದ ಹರಿದಾಸ ದೀಕ್ಷೆ ಪಡೆದದ್ದನ್ನು ತಮ್ಮ ಸುಳಾದಿಯೊಂದರಲ್ಲಿ ಹೀಗೆ ಹೇಳಿದ್ದಾರೆ.

ವ್ಯಾಸರಾಯರ ಚರಣಕಮಲ ದರುಶನವೆನಗೆ
ಯೇಸು ಜನ್ಮದ ಸುಕೃತ ಫಲದಿ ದೊರಕಿತೊ ಎನ್ನ
ಸಾಸಿರ ಕೋಟಿ ಪಾವನ್ನವಾಯಿತು.
ಗುರು ವ್ಯಾಸರಾಯರ ವರವೆಂದೆನಿಸಿ
ವರಮಹಾ ಮಂತ್ರವುಪದೇಶವಾಗಿ
ಪುರಂದರ ವಿಠಲ ಪರನೆಂದೆನಿಸಿ
ದುರಿತಭಯಗಳೆಲ್ಲ ಪರಿಹಿಸಿದನಾಗಿ

ಅಂಕಿತವಿಲ್ಲದ ದೇಹ ನಿಷಿದ್ಧ
ಅಂಕಿತವಿಲ್ಲದ ಕಾಯ ಶೋಭಿಸದು
ಅಂಕಿತವಿಲ್ಲದೆ ಇರಬಾರದೆಂದು ಎನಗೆ
ಚಕ್ರಾಂಕಿತಮನು ಮಾಡಿಯೆನಗೆ
ಪಂಕಜನಾಭ ಪುರಂದರ ವಿಠಲನ್ನ
ಅಂಕಿತವೆನಗಿತ್ತ ಗುರುವ್ಯಾಸ ಮುನಿರಾಯ. (೧೧)

ಪುರಂದರದಾಸರು ವ್ಯಾಸರಾಜರೊಂದಿಗೆ ಹಂಪಿಯಲ್ಲಿರುವಾಗ ಅವರಿಗೆ ಕನಕದಾಸರ ಪರಿಚಯ ಸ್ನೇಹ ಒದಗಿದವು. ಇಬ್ಬರಲ್ಲೂ ಪರಸ್ಪರ ಪ್ರೀತಿ ವಿಶ್ವಾಸ ವಿದ್ದಂತೆ ತೋರುತ್ತದೆ. ಪುರಂದರದಾಸರು ಕನಕದಾಸರ ಬಗ್ಗೆ ತಮ್ಮ ಕೀರ್ತನೆಯೊಂದರಲ್ಲಿ ವರ್ಣಿಸಿದ್ದಾರೆ. ಅದು

ಕನಕದಾಸನ ಮೇಲೆ ದಯಮಾಡಲು, ವ್ಯಾಸ
ಮುನಿ ಮಠದ ಜನರೆಲ್ಲ ದೂರಿಕೊಂಬುವರೂ ಪ। (೧೨)

ಒಟ್ಟು ಏಳು ನುಡಿಗಳನ್ನು ಹೊಂದಿರುವ ಈ ಕೀರ್ತನೆಯಲ್ಲಿ ಕನಕದಾಸರು ವ್ಯಾಸರಾಜರಿಗೆ ತುಂಬಾ ಪ್ರೀತಿಪಾತ್ರರಾಗಿದ್ದರಿಂದ ಮಠದ ಪಂಡಿತರೂ, ಕುಹಕಿಗಳಾದ ಊರ ಬ್ರಾಹ್ಮಣರೂ ಕನಕನನ್ನು ಜರಿಯುತ್ತಿದ್ದರು. ಆಗ ಅವರನ್ನು ಪರೀಕ್ಷಿಸಲು ವ್ಯಾಸರಾಯರು ಎಲ್ಲಾ ಶಿಷ್ಯರಿಗೂ ಬಾಳೆ ಹಣ್ಣುಗಳನ್ನು ಕೊಟ್ಟು, ಯಾರೂ ಇಲ್ಲದ ಸ್ಥಳದಲ್ಲಿ ತಿಂದು ಬರಲು ತಿಳಿಸಿದರು. ಆಗ ಬೇರೆ ಎಲ್ಲಾ ಶಿಷ್ಯರು ಬಾಳೆ ಹಣ್ಣನ್ನು ತಿಂದು ಬಂದರು. ಆದರೆ

ಕನಕದಾಸರು ಮಾತ್ರ ದೇವರಿಲ್ಲದ ಸ್ಥಳ ಎಲ್ಲಿಯೂ ಇಲ್ಲವೆಂದು ತಿಳಿದು ಬಾಳೆಹಣ್ಣನ್ನು ತಿನ್ನದೇ ಹಾಗೇ ಬಂದರು. ಆಗ ಅಲ್ಲಿರುವ ಶಿಷ್ಯರಿಗೆಲ್ಲಾ ಕನಕದಾಸರ ಜ್ಞಾನ ಹಾಗೂ ಭಕ್ತಿಯ ಬಗ್ಗೆ ತಿಳಿಯಿತು. ಈ ಪ್ರಸಂಗದ ಉಲ್ಲೇಖವನ್ನು ಪುರಂದರದಾಸರು ಮೇಲಿನ ಕೀರ್ತನೆಯಲ್ಲಿ ತಿಳಿಸಿದ್ದಾರೆ.

"ದಾಸರೆಂದರೆ ಪುರಂದರದಾಸರಯ್ಯ" ಎಂದು ವ್ಯಾಸರಾಯರೇ ಪುರಂದರದಾಸರ ವ್ಯಕ್ತಿತ್ವವನ್ನು ಹೊಗಳಿದ್ದಾರೆ. ವ್ಯಾಸರಾಯರೊಂದಿಗೆ ಕೆಲಕಾಲ ಹಂಪೆಯಲ್ಲಿದ್ದು ನಂತರ ಪುರಂದರದಾಸರು ತಮ್ಮ ಜೀವಿತ ಕಾಲದಲ್ಲಿ ಪರ್ಯಟನೆ ಮಾಡುತ್ತಲೇ ಇದ್ದವರು. ಹರಿದಾಸರಿಗೆ ಮುಖ್ಯಧರ್ಮವಾದ ಕ್ಷೇತ್ರ ಸಂದರ್ಶನ ಮಾಡುತ್ತಾ ಪ್ರಸಿದ್ಧ ಕ್ಷೇತ್ರಗಳನ್ನು ಕುರಿತು ಅಲ್ಲಿಯ ದೇವರನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ.

ಅನೇಕ ಸಾರಿ ಅವರು ತಿರುಮಲ ವೆಂಕಟೇಶ್ವರರನ್ನು ದರ್ಶನ ಮಾಡಿಕೊಂಡಿದ್ದಾರೆ ಎನ್ನುವುದಕ್ಕೆ ಅವರು ವೆಂಕಟೇಶ್ವರ ಸ್ವಾಮಿಯ ಮೇಲೆ ರಚಿಸಿದ ಅನೇಕ ಕೀರ್ತನೆಗಳೇ ಸಾಕ್ಷಿ. ಹೀಗೆ ಒಂದು ಸಾರಿ ತಿರುಪತಿ ವೆಂಕಟರಮಣನ ದರ್ಶನಕ್ಕೆ ಬಂದಾಗ, ಪ್ರಸಿದ್ಧ ತೆಲುಗು ಕವಿ ತಾಳ್ಳಪಾಕಂ ಅಣ್ಣಮಾಚಾರ್ಯರನ್ನು ಭೇಟಿಯಾದ ಪ್ರಸಂಗವನ್ನು ಅವರ ಮೊಮ್ಮಗ ಚಿನ್ನ ತಿರುವೆಂಗಳನಾಥನು. ತನ್ನ ಅಜ್ಜನವರ ಬಗ್ಗೆ ಬರೆದ ದ್ವಿಪ ಪ್ರಬಂಧದಲ್ಲಿ ಉಲ್ಲೇಖಿಸಿದ್ದಾನೆ.

ಪುರಂದರದಾಸರ ಕಾಲ ದೇಶಗಳಿಗೂ ವಿಜಯನಗರದ ಉನ್ನತಿ ಅವನತಿಗಳೆರಡಕ್ಕೂ ನಂಟಿದೆ. ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿಯೇ ಅಲ್ಲಿಗೆ ಅವರು ಬಂದಿದ್ದರು. ಹಾಗಾಗಿ, 'ಒಡೆಯ' ಸುಳಾದಿಯಲ್ಲಿ ಪುರಂದರದಾಸರು ಕೃಷ್ಣದೇವರಾಯನ ಉಲ್ಲೇಖ ಮಾಡಿದ್ದಾರೆ.

ಒಡೆಯ ನೀನಡಿಯಿಡೆ ಹಾವಿಗೆಯವನಾನು
ಒಡೆಯ ಮೆಲ್ಲಡಿಯಿಡಲು ಕಟ್ಟಿಗೆಯವ ನಾನು
.... ............. ..
................. ....
ಕೃಷ್ಣದೇವರಾಯನರಮನೆಯ ಗಾಯಕರಾವು
ಭಟ್ಟರಾವು ವಿದ್ಯಾವಂತರಾವು
ಉತ್ತಮಾಂಗನ್ನ ತೊತ್ತಿಗರಾವು
ಪುರಂದರವಿಠಲರಾಯನ ಪೊಗಳುವರಾವು. ॥೨॥ (೧೩)

ಇದರಲ್ಲಿ ಪರಮಾತ್ಮನೇ ಒಡೆಯನೆಂದು ಒತ್ತಿಹೇಳುತ್ತಾ, ಕೃಷ್ಣದೇವರಾಯನ ಮನೆಯ ಗಾಯಕರು, ಹೊಗಳುಭಟ್ಟರು ಸೇವಕರಲ್ಲಿ ಪುರಂದರ ವಿಠಲನ ಹೊಗಳುವರ್‍ಯಾರು ಎನ್ನುತ್ತಾರೆ. ಪುರಂದರದಾಸರು ಕೀರ್ತನೆಗಳಲ್ಲಿ ಕೆಲವು ಘಟನೆಗಳನ್ನು ಉಲ್ಲೇಖಿಸುತ್ತಾರೆ.

ಮಧುಕರ ವೃತ್ತಿ ಎನ್ನದು ಅದು ಬಲು ಚೆನ್ನದು ॥ಪ॥
ಪದುಮನಾಭನ ಪಾದ ಪದುಮ ಮಧುಪವೆಂಬ ॥ಅ॥ (೧೪)

ಈ ಹಾಡಿನಲ್ಲಿ ಸಂಚಾರಿ ಗಾಯಕರಾಗಿ, ಊರೂರು ಕೇರಿ, ಕೇರಿ ಅಲೆದಾಡುತ್ತಾ ಹರಿದಾಸರು ತಮ್ಮ ವೃತ್ತಿಯಲ್ಲಿ ಸಂತೋಷ ಹೊಂದಿದಂತೆ ತಿಳಿಸುತ್ತಾರೆ.

ಅಕ್ಕಾ ಅಕಟಕಟೆನ್ನ ಗಂಡ ವೈಷ್ಣವನಾದಕಾರಣ
ರಕ್ಕ ಸಾಂತನಕನ ಭಜಿಸಿ ಬರಿದಾಯ್ತೆನ್ನ ಬದುಕು (೧೫)

ದಾಸರು ಪೂರ್ವಾಶ್ರಮದಲ್ಲಿ ಸ್ಮಾರ್ತ ಸಂಪ್ರದಾಯದವರಾಗಿದ್ದು ನಂತರ ವೈಷ್ಣವ ಸಂಪ್ರದಾಯಕ್ಕೆ ಸೇರಿ ಹರಿದಾಸದೀಕ್ಷೆ ತೆಗೆದುಕೊಂಡರೆಂದು ಅರ್ಥ ಬರುವುದು. ಅನ್ಯ ನಿಷ್ಠೆಯ ನಿಂದೆಯೂ ಇದೆ ಹಾಗೂ ಈ ಹಾಡು ಪುರಂದರದಾಸರದ್ದೇ ಎನ್ನುವ ಆಧಾರ ಇಲ್ಲವೆಂದು ಸಾ.ಕೃರಾಮಚಂದ್ರರಾಯರು ತಿಳಿಸುತ್ತಾರೆ. (ಪುರಂದರ ಸಾಹಿತ್ಯದರ್ಶನ:ಸಂ.೧) ಪುರಂದರದಾಸರು ಉಪಾದಾನಕ್ಕೆ ಹೋದಾಗ ಅಲ್ಲಿ ಭಿಕ್ಷೆ ದೊರೆಯದೆ ಹೀಗೆ ಹೇಳುತ್ತಾರೆ.

ಕಲ್ಲು ಕರಗಿಸಬಹುದು ಹುರಿಗಡಲೆಯೊಳು ಅದರ
ತೈಲವನು ತೆಗೆದಾದರುಣ್ಣಲುಬಹುದು
ಒಲ್ಲದವರ ಮನಸು ಮೆಚ್ಚಿಸಲರಿಯೆನೈ
ಹಲ್ಲು ಕಿರಿಯುತ ಹಂಬಲಿಸಿ ಬಾಯಿ ಬಿಡುತ (೧೬)

ಈ ಪರಾಶ್ರಯದ ಬದುಕು ಎಂದು ಮುಗಿವುದೋ ಕಾಣೆ ಎಂದು ಬೇಸರಿಸುತ್ತಾರೆ. 'ಮುಯ್ಯಕ್ಕೆ ಮುಯ್ಯಿ ತೀರಿತು' (೧೭) 'ನಿಮ್ಮ ಭಾಗ್ಯದೊಡ್ಡದೋ ನಮ್ಮ ಭಾಗ್ಯದೊಡ್ಡದೋ'(೧೮) 'ಗಿಳಿಯು ಪಂಜರದೊಳಿಲ್ಲ' (೧೯) ಮುಂತಾದ ಕೀರ್ತನೆಗಳಲ್ಲಿ ಬರುವ ಘಟನೆಗಳನ್ನು ಯಾವ ಆಧಾರವಿಲ್ಲದೆ ಇವೆಲ್ಲ ಅವರ ಜೀವನದಲ್ಲಿ ನಡೆದ ಘಟನೆಗಳು ಎಂದು ಸಾಧಿಸುವುದು ಕಷ್ಟವೆನಿಸುತ್ತದೆ. ಹಾಗೂ ಈ ಘಟನೆಗಳಲ್ಲಿ ಸತ್ಯ ಎಷ್ಟು ಅಸತ್ಯ ಎಷ್ಟು ಎಂಬ ಸಮಸ್ಯೆ ಬೃಹದಾಕಾರವಾಗಿ ನಿಲ್ಲುತ್ತದೆ.

ಕಮಲಾಪುರದ ತಾಮ್ರ ಶಾಸನದಲ್ಲಿ ಅವರಿಗೆ ಮೂರುಜನ ಮಕ್ಕಳಿದ್ದರೆಂದು ತಿಳಿದುಬರುತ್ತದೆ. ಕೆಲವರು ಅವರಿಗೆ ನಾಲ್ಕು ಮಕ್ಕಳಿದ್ದರೆಂದು ಅಭಿಪ್ರಾಯ ಪಡುತ್ತಾರೆ. ಕೊನೆಯ ಮಗ ಅವರ ಕಣ್ಣ ಮುಂದೆಯೇ ತೀರಿಕೊಂಡನೆಂದು ಆಗಲೇ ಅವರು 'ಗಿಳಿಯ ಪಂಜರದೊಳಿಲ್ಲ' ಎಂಬ ಕೀರ್ತನೆಯನ್ನು ರಚಿಸಿದರೆಂಬ ಪ್ರತೀತಿಯಿದೆ. ಖೇದದ ಸಂಗತಿ ಏನೆಂದರೆ ಈ ಯಾವ ಊಹೆಗಳಿಗೂ ಖಚಿತವಾದ ಆಧಾರ ಸಿಗುವುದಿಲ್ಲ.

'ಗುರುಮಧ್ವಪತಿವಿಠಲ' ಎಂಬ ಅಂಕಿತದಲ್ಲಿ ರಚನೆಗಳನ್ನು ಮಾಡಿದ ದಾಸರು ಪುರಂದರದಾಸರ ಮಕ್ಕಳೆಂದೇ ಪ್ರತೀತಿ. ಕಮಲಾಪುರದ ತಾಮ್ರ ಶಾಸನದಲ್ಲಿ ಮಧ್ವಪದಾಸರೆಂಬ ' ಶ್ರೀಪುರಂದರದಾಸಜ' ರ ಹೆಸರಿದೆ. ಅವರ ಒಂದು ರಚನೆ ಹೀಗಿದೆ.

ತೆರಳಿದರು ಹರಿಪುರಕಿಂದು ।ಪ।
ಪುರಂದರ ದಾಸರಾಯರು ದೀನಬಂಧು ।ಅ।

ರಕ್ತಾಕ್ಷಿವತ್ಸರ ಪುಷ್ಯಾಂತ ರವಿವಾರ
ಮುಕ್ತಿಗೈದಿದರು ಕೇಳಿ ಬುಧಜನರು ।೧।

ವಿರೂಪಾಕ್ಷ ಕ್ಷೇತ್ರದಿ ವಿಠಲನ್ನ ಸನ್ನಿಧಿಯಲ್ಲಿ
ಶರೀರವನಿರಿಸಿ ಅನಾಥರನು ಹರಸಿ ।೨।

ಎತ್ತುವರಾರತಿ ಪುಷ್ಪಕವೇರಿಸಿ
ಸತ್ತಿಗೆ ಪಿಡಿಯೇ ದುಂಧುಬಿಗಳು ೬॥

ಆ ಮಹಾವೈಕುಂಠನೈದುವರಿಗೆ ಹರಿ
ನಾಮದ ಸೋಪಾನ ದಯದಿಂದ ತೋರಿ ೭॥

ವರವೇದ ತುಲ್ಯ ಪದಗಳ ಸಂಖ್ಯೆಯ ಮಾಡಿ
ಗುರು ಮಧ್ವಪತಿ ವಿಠಲನ್ನ ಸ್ಮರಿಸುತಲಿ. ೮॥ (೨೦)

ಈ ಕೀರ್ತನೆ ಪುರಂದರದಾಸರ ಮರಣವನ್ನು ಕುರಿತದ್ದು. ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳ ಅಮವಾಸ್ಯೆ ಭಾನುವಾರದಂದು 'ವಿರುಪಾಕ್ಷ ಕ್ಷೇತ್ರ' ಎಂದರೆ ಹಂಪಿಯಲ್ಲಿ 'ವಿಠಲನ ಸನ್ನಿಧಿಯಲಿ' ಎಂದರೆ ವಿಜಯವಿಠಲನ ಗುಡಿಯಲ್ಲಿರಬಹುದು. ಮುಕ್ತಿಯನ್ನು ಹೊಂದಿದರು ಎಂದು ತಿಳಿಸುತ್ತದೆ. ಇದಕ್ಕೆ ಆಧಾರವಾಗಿ ಇನ್ನೊಂದು ವಿಜಯದಾಸರ ಸುಳಾದಿ ದೊರಕುತ್ತವೆ. ಅದರಲ್ಲಿ

"ಮಕ್ತ್ಯರ್ಥ ಹರಿಪಾದಾಸಕ್ತರಾಗಿ ಧ್ಯಾನಿಸುತ್ತ
ರಕ್ತಾಕ್ಷಿ ವತ್ಸರದದರ್ಕವಾದ ಇಂದುಕ್ಷಯ
ಯುಕ್ತ ಪುಷ್ಯಮಾಸದಿ ಉದ್ಯುಕ್ತವಾಗಿ ಪುಷ್ಪಕವಿ
. . . . . . . . . . . . . . . . . . . . . .
ಮುಕ್ತಿಗೆ ಸಾರಿದರು ವಿರಕ್ತಿಮಾರ್ಗವನ್ನು ಪಡೆದು.

ಪುರಂದರದಾಸರು ಮರಣಿಸಿದ ದಿನ ಇಲ್ಲಿಯೂ ಕೂಡ ರಕ್ತಾಕ್ಷಿ ಸಂವತ್ಸರ ಪುಷ್ಯಮಾಸ ಕೃಷ್ಣಪಕ್ಷ ಭಾನುವಾರವೆಂದೇ ಹೇಳಲಾಗಿದೆ. ಆದರೆ, ಹಂಪೀ ಕ್ಷೇತ್ರದ ಉಲ್ಲೇಖ ಇಲ್ಲಿ ಇರುವುದಿಲ್ಲ. ಸ್ವಾಮಿಕಣ್ಣು ಪಿಳ್ಳೆಯವರ ಗುಣಿತದಂತೆ ಇದು ಕ್ರಿ.ಶ. ೧೫೬೫ ಜನವರಿ ೨ ರಂದು ಆಗುತ್ತದೆ. (೨೧)

<u>ಪುರಂದರದಾಸರ ಪರಿಸರದ ಕೀರ್ತನಕಾರರು:</u> ಪುರಂದರದಾಸರ ಕಾಲದಲ್ಲಿ ಭಾರತ ದೇಶದಲ್ಲಿ ಅನೇಕ ಸಂತರು ಭಕ್ತಿಪಂಥವನ್ನು ಎತ್ತಿ ಹಿಡಿದರು ಅವರಲ್ಲಿ ಉತ್ತರದೇಶದಲ್ಲಿ ಸಂತ ರಾಮಾನಂದ [೧೪೦೦–೧೪೭೦], ಕಾಶಿಯ ಕಬೀರದಾಸ್ [೧೪೪೮–೧೫೧೮], ಪ್ರಯಾಗದ ತುಳಸಿದಾಸ್ [೧೫೩೨–೧೬೨೩], ಪಂಜಾಬದ ನಾನಕ್ [೧೪೬೯–೧೫೩೯], ವಿಠಲಭಕ್ತ ಭಾನುದಾಸ್ [೧೪೪೮–೧೫೧೩], ಭಾನುದಾಸರ ಮೊಮ್ಮಗ ಏಕನಾಥ್ [೧೫೪೦–೧೫೯೯], ದಾಸೋದಿಗಂಬರ [೧೫೫೧–೧೬೧೬] ಮುಂತಾದವರು ಭಕ್ತಿ ಪಂಥವನ್ನು ಪ್ರಚಾರ ಮಾಡಿದರು.

ವಿಶೇಷವಾಗಿ ಕರ್ನಾಟಕದಲ್ಲಿ ವ್ಯಾಸರಾಯರ ಶಿಷ್ಯರಾದ ವಾದಿರಾಜರು, ಕನಕದಾಸರು ವಿಜಯೀಂದ್ರ ತೀರ್ಥರು, ವೈಕುಂಠದಾಸರು ಮುಂತಾದವರು ಪುರಂದರದಾಸರ ಸಮಕಾಲೀನರು, ಗದುಗಿನ ನಾರಾಯಣಪ್ಪ ಕೂಡ ಅದೇ ಕಾಲದಲ್ಲಿ ಇದ್ದವರು, ವ್ಯಾಸರಾಯರ ಗುರುಗಳಾದ "ಶ್ರೀಪಾದರಾಜರು ಅಬ್ಬೂರಿನ ಗಿರಿಯಮ್ಮ-ಶೇಷಗಿರಿಆಚಾರ್ಯ ದಂಪತಿಗಳ ಮಗ, ಅವರ ಪೂರ್ವಾಶ್ರಮದ ಹೆಸರು ಲಕ್ಷ್ಮೀನಾರಾಯಣ, ಸ್ವರ್ಣವರ್ಣತೀರ್ಥರಿಂದ ಸಂಸ್ಥಾನದ ಅಧಿಕಾರವನ್ನು ಪಡೆದುಕೊಂಡ ಅವರು 'ಶ್ರೀರಂಗ'ದಲ್ಲಿಯೇ ಕೆಲವು ದಿನ

ಕಳೆದರು ಶ್ರೀರಂಗದ ರಂಗನಾಥಸ್ವಾಮಿ ಅವರ ಇಷ್ಟದೈವ 'ಕಂಗಳಿಂದ್ಯಾತಕೋ ಕಾವೇರಿ ರಂಗನ ನೋಡದ', ಎಂಬುದು ಅವರ ಪ್ರಸಿದ್ಧ ಕೀರ್ತನೆ. 'ರಂಗವಿಠಲ' ಎಂಬುದು ಅವರ ಅಂಕಿತ, ಕೋಲಾರ ಜಿಲ್ಲೆಯ ಮುಳಬಾಗಿಲಿನಲ್ಲಿ ಅವರು ತಮ್ಮ ಮಠವನ್ನು ಸ್ಥಾಪಿಸಿದ್ದಾರೆ". (೨೨)

**ವ್ಯಾಸರಾಯರು:**

ವ್ಯಾಸರಾಯರು ಅಬ್ಬೂರಿನಲ್ಲಿ ಬ್ರಹ್ಮಣ್ಯತೀರ್ಥರಿಂದ ಬಾಲ್ಯದಲ್ಲಿಯೇ ಸನ್ಯಾಸಪಡೆದು ಅವರ ಪೀಠಕ್ಕೆ ಉತ್ತರಾಧಿಕಾರಿಗಳಾಗಿದ್ದರು. ಇವರು ಮುಳಬಾಗಿಲಿನಲ್ಲಿಯೇ ಸ್ವಲ್ಪ ಕಾಲ ಇದ್ದು ಶ್ರೀಪಾದರಾಜರಲ್ಲಿ ಅಭ್ಯಾಸ ಮಾಡಿದರು, ಜಗತ್ತು ಕಂಡ ಅಪೂರ್ವ ಗುರುಶಿಷ್ಯ ಸಂಬಂಧ ಇವರದು, ವ್ಯಾಸರಾಜರ ಜನ್ಮ ಕ್ರಿ.ಶ. ೧೪೪೭ ರಲ್ಲಿ ಆಗಿರಬಹುದೆಂದು ಇತಿಹಾಸ ಸಂಶೋಧಕರ ಅಭಿಪ್ರಾಯ (೨೩), 'ಶ್ರೀಕೃಷ್ಣ' ಎಂಬ ಅಂಕಿತದಿಂದಲೇ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದರು. ಇವರು ವಿಜಯನಗರದ ಅರಸನಾಸದ ಕೃಷ್ಣದೇವರಾಯನಿಗೆ ಗುರುಗಳಾಗಿದ್ದು ಅವನಿಗೆ ಅವನಿಗೆ ಬಂದ ಕುಹುಯೋಗವನ್ನು ಪರಿಹರಿಸಿದರು. ಅಮಾವಾಸ್ಯೆಯ ದಿನ ಜನ್ಮನಕ್ಷತ್ರಕ್ಕೆ ಸೂರ್ಯ, ಶನಿ, ಕುಜ ಮತ್ತು ಗುರು ಗ್ರಹಗಳು ಲಗ್ನದಿಂದ ಹನ್ನೆರಡನೆಯ ಮನೆಯನ್ನು ಸಂಧಿಸುವ ದುರ್ಯೋಗಕ್ಕೆ ಕುಹಯೋಗವೆನ್ನುತ್ತಾರೆ ಈ ಯೋಗ ಯಾರಿಗೆ ಉಂಟಾಗುವುದೋ ಅವರಿಗೆ ಸರ್ವನಾಶವಾಗುವುದೆಂದು ಜ್ಯೋತಿಷ್ಯಶಾಸ್ತ್ರ ಹೇಳುತ್ತದೆ. ೦೭-೧೧-೧೫೨೩ ರಂದು ರಾಜನ ಕುಹು ಯೋಗ ನಿವಾರಿಸಿದ್ದು ಒಂದು ಐತಿಹಾಸಿಕ ಪ್ರಸಂಗವೆಂದೇ ಪಸಿದ್ಧವಾಗಿದೆ. ನರಹರಿತೀರ್ಥರ ನಂತರ ಮುಳಬಾಗಿಲಿನ ಶ್ರೀಪಾದರಾಜರು ಹಾಗೂ ಅವರ ಶಿಷ್ಯರಾದ ವ್ಯಾಸರಾಯರು ಹರಿದಾಸ ಸಾಹಿತ್ಯ ಹಾಗೂ ಹರಿದಾಸ ಪರಂಪರೆಯನ್ನು ಬೆಳೆಸುವಲ್ಲಿ ಮುಖ್ಯರು. ವ್ಯಾಸರಾಯರ ಪ್ರಮುಖ ಶಿಷ್ಯರಾದ ವಿಜಯೀಂದ್ರತೀರ್ಥರು ಪುರಂದರದಾಸರ ಸಮಕಾಲೀನರು ಆದರೆ ಅವರು ಕನ್ನಡದಲ್ಲಿ ರಚಿಸಿದ ಒಂದೇ ಒಂದು ಪದ ಸಿಕ್ಕುವುದು.

ಯೋಗಿನರವ್ಯಾಸರಾಯರೆಂಬವಿಚಿತ್ರ ಮೇಘ
ಬೇಗ ವಿಷ್ಣುಪದವ ತೋರಿಸುತ್ತಾಬಂದಿತಿಕೋ
ಮಾಯೀಮತವ ತಾರಾಮಂಡಲವ ಮುಸುಕುತ್ತ ।।ಅ।।
.... ....... ....... ..
......... .......... .

ಗುರುಗಳಾದ ವ್ಯಾಸರಾಯರಂಬ ಸ್ತುತಿ ಇರುವ ಈ ಕೀರ್ತನೆಯ ಹಸ್ತಪ್ರತಿಯಲ್ಲಿ ವಿಜಯೀಂದ್ರತೀರ್ಥರ ಹೆಸರಿರುವುದಾಗಿ ಡಾ। ಎಚ್.ಕೆ.ವೇದವ್ಯಾಸಾಚಾರ್ಯರು ತಿಳಿಸುತ್ತಾರೆ. (೨೪)

**ತಾಳ್ಳಪಾಕಂ ಅನ್ನಮಾಚಾರ್ಯರು:** ಇವರು ಒಬ್ಬ ತೆಲುಗುಕವಿ. ಇವರು ತಿರುಮಲೆಯ ವೆಂಕಟೇಶ್ವರನ ಗುಡಿಯಲ್ಲಿ ಸಂಕೀರ್ತನೆ ಸೇವೆ ಮಾಡಿಕೊಂಡು ಇದ್ದರು. ಇವರ ಅಂಕಿತ 'ವೆಂಕಟೇಶ್ವರ' ಇವರು ಸಾವಿರಾರು ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ಮಕ್ಕಳು ಮೊಮ್ಮಕ್ಕಳು ಎಲ್ಲರೂ ತಿರುಮಲೆಯಲ್ಲಿಯೇ ಇದ್ದು ಅನೇಕ ಕೀರ್ತನೆಗಳನ್ನು ರಚಿಸಿ ವೆಂಕಟರಮಣನ ಸೇವೆ ಮುಂದುವ ರೆಸಿಕೊಂಡು ಬಂದವರು. ಇವರ ಮೊಮ್ಮಗ ಚೆನ್ನ ತಿರುವೆಂಗಳನಾಥ [ಚಿನ್ನಮ್ಮ] ಇವರು ತಮ್ಮ ಅಜ್ಜ ಅನ್ನಮಾಚಾರ್ಯರನ್ನು ಕುರಿತು ನಾಲ್ಕು ದ್ವಿಪಪ್ರಬಂಧಗಳನ್ನು ರಚಿಸಿದ್ದಾರೆ. ಪ್ರಬಂಧದಲ್ಲಿ ತನ್ನ ಅಜ್ಜ ಹಾಗೂ ಪುರಂದರದಾಸರಿಗೂ ನಡೆದ ಅದರ ಒಂದು ಭೇಟಿಯನ್ನು

ಉಲ್ಲೇಖಿಸಿದ್ದಾರೆ. ಪುರಂದರದಾಸರು ಒಮ್ಮೆ ತಿರುಮಲೆಗೆ ಹೋದಾಗ ಅಲ್ಲಿ ಹಣ್ಣು ಹಣ್ಣು ಮುದುಕರಾದ ಅನ್ನಮಾಚಾ ರ್ಯರನ್ನು ಕಂಡರಂತೆ, ಹಾಗೂ ಅವರು ದೇವರ ಎದುರು ನಿಂತು ಮಾಡಿದ ಸಂಕೀರ್ತನೆಯನ್ನು ಕೇಳಿ ಭಕ್ತಿಭಾವದಿಂದ ತುಂಬಿ ಸಾಕ್ಷಾತ್ ವೆಂಕಟೇಶ್ವರನನ್ನೇ ಕಂಡಂತಾಯಿತು ಎಂದರಂತೆ, ಆಗ ಅನ್ನಮಾಚಾರ್ಯರ ಅಪೇಕ್ಷೆಯಂತೆ ಪುರಂದರದಾಸರು ಕನ್ನಡದಲ್ಲಿ ದೇವರ ನಾಮಗಳನ್ನು ಹಾಡಿದಾಗ ಅನ್ನಮಾಚಾರ್ಯರು ತುಂಬ ಸಂತೋಷದಿಂದ ಪಾಂಡುರಂಗ ವಿಠಲನೇ ಎದುರಿಗೆ ನಿಂತಿದಂತಿದೆ ಎಂದರಂತೆ (೨೫). ತಾಳ್ಳಪಾಕಂ ಅನ್ನಮಾಚಾರ್ಯರು ತಮ್ಮ ತೊಂಬತ್ತೊಂಬತ್ತನೇ ವಯಸ್ಸಿನಲ್ಲಿ ತೀರಿಕೊಂಡರು, ಅವರು ಹಾಗೂ ಅವರ ತಲೆಮಾರಿನವರು ದೇವಾಲಯದ ಊಳಿಗದಲ್ಲಿಯೇ ನೆಲೆನಿಂತಿದ್ದರಿಂದ ಅವರ ಸಂಕೀರ್ತನೆಗಳೆಲ್ಲವೂ ಸುರಕ್ಷಿತವಾಗಿ ಉಳಿದುಕೊಂಡು ಬಂದಿವೆ.

<u>ವಾದಿರಾಜರು:</u> ಕನ್ನಡ ಹರಿದಾಸ ಸಾಹಿತ್ಯದಲ್ಲಿ ವಾದಿರಾಜರದು ಪ್ರಸಿದ್ಧ ಹೆಸರು ಮತೀಯ ವಾತಾವರಣದಲ್ಲಿದ್ದರೂ, ಹರಿದಾಸರಂತೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವರು ಕನ್ನಡ, ಸಂಸ್ಕೃತ ಹಾಗೂ ತುಳುವಿನಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಇವರಿಗೆ ವಿಜಯನಗರದ ಅರಸರು 'ಪ್ರಸಂಗಾಭರಣತೀರ್ಥ' ರೆಂಬ ಬಿರುದನ್ನಿತ್ತು ಗೌರವಿಸಿದ್ದಾರೆ. ಇವರು ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು 'ಹೂವಿನಕೆರೆ' ಎಂಬ ಸ್ಥಳದಲ್ಲಿ ಜನಿಸಿದರು, ಇವರು ವಾಗೀಶತೀರ್ಥರಿಂದ ಸನ್ಯಾಸದೀಕ್ಷೆ ಪಡೆದವರು. ಮೊದಲು ವಿದ್ಯಾನಿಧಿತೀರ್ಥರಲ್ಲಿ ನಂತರ ವಾಗೀಶತೀರ್ಥರಲ್ಲಿ ತಮ್ಮ ವಿದ್ಯಾಭ್ಯಾಸ ಮುಗಿಸಿ ನಂತರ ವ್ಯಾಸರಾಜರ ಶಿಷ್ಯತ್ವವಹಿಸಿದ್ದು ಪುರಂದರದಾಸರು ರಚಿಸಿದ ವ್ಯಾಸರಾಯರ ಸುಳಾದಿಯೊಂದರಿಂದ ತಿಳಿಯುತ್ತದೆ.

ವ್ಯಾಸರಾಯರ ಚರಣಕಮಲ ದರುಷನವೆನಗೆ
ಯೇಸು ಜನ್ಮದ ಸುಕೃತಫಲದಿ ದೊರಕಿತೋ ಎನ್ನ
. . . . . . . . . . . . . . . . . . .
ಶ್ರೀನಾರಾಯಣ ಯೋಗಿಯಾದ ಶ್ರೀಪಾದರಾಯರೊಳು
ವಿಹಿತವಾದ ವಿದ್ಯಾಭ್ಯಾಸ ಮಾಡಿದೆ
ನೀನು ಧರೆಯೊಳು ವಿಜಯೀಂದ್ರ ವಾದಿರಾಜರೆಂಬೋ
ಪರಮ ಶಿಷ್ಯರ ಪಡೆದು ಮೆರೆದೆ ಕೀರ್ತಿಯ. (೨೬)

ಶ್ರೀ ವಾದಿರಾಜರ ಕೀರ್ತನೆಗಳು ಸಮಾಜಮುಖಿಯಾಗಿದ್ದವು. 'ಕುಲಮದ, ವೈಭವಮದ, ವಿದ್ಯಾಮದಗಳನ್ನಳಿದು ಹರಿದಾಸರ ಮೊರೆಯೊಕ್ಕು ಸುಖಿಯಾಗು' ಎಂಬುದು ಅವರ ಅಂತರಂಗದ ಭಾವ, ಕನ್ನಡದಲ್ಲಿ ಲಕ್ಷ್ಮೀಶೋಭಾನೆ, ಭ್ರಮರಗೀತೆ, ಸ್ವಪ್ನಗದ್ಯ, ವೈಕುಂಠ ವರ್ಣನೆ, ಗುಂಡಕ್ರಿಯೆ, ಶ್ರೀಕೃಷ್ಣಬಾಲಲೀಲೆ, ತತ್ವಸುವ್ವಾಲಿ, ಬಿರುದಿನ ಸುವ್ವಾಲಿ, ಗಜೇಂದ್ರಮೋಕ್ಷ, ಕೀಚಕವಧೆ, ಅವತಾರತ್ರಯ ಸುವ್ವಾಲಿ, ನಾರದಕೊರವಂಜಿ ಮುಂತಾದ ಕಾವ್ಯಗಳನ್ನು ರಚಿಸಿದ್ದಾರೆ. ಅವರು ಅನೇಕ ಕೀರ್ತನೆಗಳನ್ನು ಉಗಾಭೋಗಗಳನ್ನು ರಚಿಸಿ ದಾಸಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ಸಾಮಾಜಿಕ, ಚಿಂತನೆ, ಬೂಟಕತನ, ಶೋಷಣೆ, ಕುಲಮದ, ಧನಮದಗಳ ಬಗ್ಗೆ ಪ್ರಸ್ತಾಪವನ್ನು ಅವರ ಕೀರ್ತನೆಯಲ್ಲಿ ಹೆಚ್ಚು ಹೆಚ್ಚು ಕಾಣುತ್ತೇವೆ. ಯತಿಯಾದ ವಾದಿರಾಜರು ಹಣದ ಗುಣವನ್ನು ಹೇಳುತ್ತಾ, 'ಹಣವೆ ನಿನ್ನ ಗುಣವೇನು ಬಣ್ಣಿಪೆನೊ, ಹಣವಿಲ್ಲದವನೊಬ್ಬ

ತೊಣೆಮೇ ಸರಿಕಂಡ್ಯಾ' ಎಂದು ಹೂಣದ ಬಗೆ ವಾಸ್ತವದ ಅರಿವನ್ನು ಮೂಡಿಸುತ್ತಾರೆ. 'ತಾಳುವಿಕೆಗಿಂತ ತಪವು ಇಲ್ಲ, ಕೇಳಬಲ್ಲವನಿಗೆ ಹೇಳುವೆನು ಸೊಲ್ಲ', ಎಂಬ ಕೀರ್ತನೆಯಲ್ಲಿ ಮಾನವರಿಗೆ ಸಹನೆಯ ಪಾಠ ಕಲಿಸುತ್ತಾರೆ. 'ಕಷ್ಟ ಬಂದರೆ ತಾಳು ಕರಿಗೆಡದೆ ತಾಳು' ನೆಟ್ಟ ಸಸಿ ಫಲ ಬರುವ ತನಕ ಶಾಂತಿಯ ತಾಳು', ಉಕ್ಕೋ ಹಾಲಿಗೆ ನೀರು ಇಕ್ಕಿದಂದದಿ ತಾಳು', ಎಂದು ತಾಳ್ಮೆಯ ಮಿತಿಯನ್ನು ಹೆಚ್ಚಿಸಿ ಅದು ಒಂದು ತಪಸ್ಸು ಎನ್ನುತ್ತಾರೆ.

ಒಮ್ಮೆ ಧರ್ಮಸ್ಥಳದ ಜೈನ ಹೆಗ್ಗಡೆಯವರ ಸೂಚನೆಯಂತೆ 'ಕುಡುವ'ವೆಂದು ಕರೆಯುತ್ತಿದ್ದ ಕ್ಷೇತ್ರಕ್ಕೆ ಭೇಟಿ ಇತ್ತರು, ಅಲ್ಲಿ ಮಂಜುನಾಥನನ್ನು ಸ್ಥಾಪಿಸಿ ಆ ಕ್ಷೇತ್ರಕ್ಕೆ 'ಧರ್ಮಸ್ಥಳ' ಎಂದು ಹೆಸರಿಟ್ಟರು. ಅವರು ಒಮ್ಮೆ ಮೂಡುಬಿದಿರೆಯ ಜೈನ ಅರಸನ ಬಸದಿಗೆ ಭೇಟಿ ಇತ್ತಿದ್ದರು, ಉಡುಪಿಯ ಸಮೀಪದ ಎಲ್ಲೂರಿನ ಶಿವಾಲಯಕ್ಕೂ ಹೋಗಿದ್ದರು. ಶಿವನ ಪರವಾದ ಕೀರ್ತನೆಗಳನ್ನು ರಚಿಸಿದ್ದ ಇವರು ಗುಣಪಕ್ಷಪಾತ ಹಾಗೂ ಮತದಗಡಿರೇಖೆಯನ್ನು ಮೀರಿ ಸಮಾಜಮುಖಿ ಕಾರ್ಯಗಳಿಗೆ ಪ್ರಸಿದ್ಧರಾಗಿದ್ದಾರೆ. ಇವರು ಈಶ್ವರನನ್ನು ಸ್ತುತಿಸಿ ರಚಿಸಿದ ಕೀರ್ತನೆ 'ಧವಳಗಂಗೆಯ ಗಂಗಾಧರ ಮಹಾಲಿಂಗ ಮಾಧವನ ತೋರಿಸಯ್ಯ ಗುರುಕುಲೋತ್ತುಂಗ' (೨೭) ಎಂಬುದು ತುಂಬಾ ಪ್ರಸಿದ್ಧಿ ಪಡೆದಿದೆ ಕ್ರಿ.ಶ. ೧೯೦೦ ರಲ್ಲಿ ತಮ್ಮ ೧೨೦ನೇಯ ವಯಸ್ಸಿನಲ್ಲಿ ಸೋದೆಯಲ್ಲಿ ಸಶರೀರಿಗಳಾಗಿ ವೃಂದಾವನವನ್ನು ಪ್ರವೇಶಿಸಿದರು.

**ಕನಕದಾಸರು:** ಇವರು ಹಾವೇರಿ ಜಿಲ್ಲೆಯ [ಆಗಿನ ಧಾರವಾಡ ಜಿಲ್ಲೆಯ] ಶಿಗ್ಗಾವ ತಾಲ್ಲೂಕಿನ 'ಬಾಡ' ಗ್ರಾಮದಲ್ಲಿ ಜನಿಸಿದರು, ತಂದೆ ಬೀರಪ್ಪ ತಾಯಿ ಬಚ್ಚಮ್ಮ ಇಬ್ಬರೂ ದೈವ ಭಕ್ತರು. ಇವರು ಜಾತ್ಯಾ ಕುರುಬರು ಹಾಲು ಮತಸ್ಥರು. ಬೀರಪ್ಪ ಬಚ್ಚಮ್ಮರಿಬ್ಬರೂ ತಮಗೆ ಮಕ್ಕಳಾಗಲಿಲ್ಲವೆಂಬ ಕೊರಗು ಕಾಡುತ್ತಿತ್ತು ಹಾಗಾಗಿ ಈ ದಂಪತಿಗಳು ತಿರುಪತಿಗೆ ಹೋಗಿ ತಿಮ್ಮಪ್ಪನಿಗೆ ಅರ್ಚನೆ ಸಲ್ಲಿಸಿ ಹರಕೆ ಹೊತ್ತು ಬರುತ್ತಾರೆ, ಬಂದ ಕೆಲವು ದಿನಗಳಲ್ಲಿಯೇ ಒಂದು ಸುಂದರ ಗಂಡುಮಗುವಿನ ಜನನವಾಗುತ್ತದೆ, ತಿಮ್ಮಪ್ಪನ ವರ ಪ್ರಸಾದದಿಂದ ಜನಿಸಿದ ಮಗುವಿಗೆ 'ತಿಮ್ಮಪ್ಪ' ನೆಂದು ನಾಮಕರಣ ಮಾಡುತ್ತಾರೆ. ಬೀರಪ್ಪ ವಿಜಯನಗರದ ಅರಸನಾದ ಕೃಷ್ಣದೇವರಾಯನ ವಿಶ್ವಾಸಕ್ಕೆ ಪಾತ್ರನಾದುಧರಿಂದ ನಾಡಗೌಡತನವನ್ನು ದಯಪಾಲಿಸಿದ್ದನು. ತಿಮ್ಮಪ್ಪನು ಚಿಕ್ಕಂದಿನಲ್ಲಿ ಅನೇಕ ಶಾಸ್ತ್ರಗಳನ್ನೂ ಡಣ್ಣಾಯಕ ವೃತ್ತಿಗೆ ಬೇಕಾದ, ಕುಸ್ತಿ, ಕತ್ತಿವರಸೆ, ಕುದುರೆಸವಾರಿ, ಬೇಟೆ ಮುಂತಾದ ಯುದ್ಧ ಕಲೆಗಳನ್ನು ಕರಗತ ಮಾಡಿಕೊಂಡಿರುತ್ತಾನೆ. ತನ್ನ ಯೌವನಾವಸ್ಥೆಯಲ್ಲಿ ತಂದೆಯನ್ನು ಕಳೆದುಕೊಂಡು, ತಂದೆಯಿಂದ ಬಂದ ಡಣ್ಣಾಯಕತನದ ಜವಾಬ್ದಾ ರಿಯನ್ನು ಹೊರುತ್ತಾನೆ ಕೆಲವು ಸಮಯದ ನಂತರ ಇವನಿಗೆ 'ಲಕ್ಷ್ಮೀ' ಎಂಬ ಸುಶೀಲ ಕನ್ಯೆಯೊಡನೆ ವಿವಾಹವಾಗುತ್ತದೆ. ಮದುವೆಯಾಗಿ ಏಳೆಂಟು ವರ್ಷಗಳಕಾಲ ಮನಮೆಚ್ಚಿದ ಮಡದಿಯೊಂದಿಗೆ ಗೃಹಸ್ಥ ಧರ್ಮದ ಸುಖವನ್ನು ಅನುಭವಿಸುತ್ತಿರುವಾಗಲೇ 'ಮೋಹನತರಂಗಿಣಿ' ಕಾವ್ಯವನ್ನು ರಚಿಸಿದ್ದಿರಬಹು ದೆಂದು ಕೆಲವರ ಅಭಿಪ್ರಾಯ, ಸಂಭಾಷಣಾ ಸ್ವರೂಪದಲ್ಲಿರುವ ಕಥೆಗಳನ್ನೊಳ ಗೊಂಡ ಈ ಕಾವ್ಯದಲ್ಲಿ ಬರುವ 'ಸುಜ್ಞಾನ ವಧೂತಿ' ಎಂಬುವವಳು ಕವಿಯ ಹೆಂಡತಿಯೇ ಆಗಿರಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಆ ಸಮಯದಲ್ಲಿಯೇ ಬೀರಪ್ಪನಾಯಕನೆಂಬ ಮಗನು ಜನಿಸಿದನು. ಮಗನು ಅಕಾಲ ಮರಣಕ್ಕೆ ತುತ್ತಾಗಿದ್ದರಿಂದ ಅವರ ಮನಸ್ಸು ಖಿನ್ನವಾಯಿತು. ಮಗನ ವಿಯೋಗವನ್ನು ಮರೆಯು

ತ್ತಿದ್ದಂತೆಯೇ ಸ್ವಲ್ಪ ಕಾಲಾವಕಾಶದಲ್ಲಿ ತಾಯಿಯೂ ನಂತರ ಸತಿಯೂ ತೀರಿಕೊಂಡರು. ಈ ಎಲ್ಲ ಘಟನೆಗಳು ಅವರ ಮನಸ್ಸಿನ ಮೇಲೆ ಪರಿಣಾಮ ಬೀರಿದವು. ಮನಸ್ಸಿನಲ್ಲಿ ವೈರಾಗ್ಯ ಮೂಡಿತು. ಮಾನಸಿಕ ದ್ವಂದ್ವಗಳಲ್ಲಿ ದಿನಗಳನ್ನು ಕಳೆಯುತ್ತಿರುವಾಗಲೇ ಘೋರವಾದ ಯುದ್ಧ ಮಾಡುವ ಪ್ರಸಂಗ ಬಂದೊದಗಿತು. ರಣರಂಗದಲ್ಲಿ ಪರಾಕ್ರಮದಿಂದ ಹೋರಾಡಿ ಮೈತುಂಬಗಾಯಗಳಾಗಿ ಎಚ್ಚರತಪ್ಪಿ ಬಿದ್ದಾಗ ದೇವರೇ ಬಂದು ಅವರನ್ನು ರಕ್ಷಿಸಿದನೆಂದು ತಮ್ಮ ಒಂದು ಕೀರ್ತನೆಯಲ್ಲಿ ಹೀಗೆ ಹೇಳಿದ್ದಾರೆ.

ರಣದೊಳಗೆ ಅಂಗಾಂಗ ಖಂಡತುಂಡಾಗಿ ಪ್ರತಿ
ರಣವನುತ್ತರಿಸಿ ಮರಣತಾಳಿರೆ
ಪ್ರಣವಗೋಚರ ನೀನು ಗೋಚರಿಸಿಬಂದೆನ್ನ
ಹಣಕೆ ಪ್ರಾಣವ ಪ್ರಯೋಗಿಸಿದಂತರಾತ್ಮ (೨೮).

ನಂತರ ತಿರುಪತಿಗೆ ಹೋಗಿ ಬಂದರು. ಹಾಗೂ 'ಬಾಡ' ದಲ್ಲಿ ಆದಿಕೇಶವನ ಮೂರ್ತಿಯನ್ನು ಪ್ರತಿಷ್ಠಾಪನೆಗೊಳಿಸಿದರು. ಹಾಗೂ ಅಲ್ಲಿಯೇ ಇದ್ದು ಅನೇಕ ಕೀರ್ತನೆಗಳನ್ನು ರಚಿಸಿದರು, ತಾವು ಕಂಡ ಅನುಭವದ ಸತ್ಯಗಳನ್ನು ಹಾಡುಗಳನ್ನಾಗಿ ಬರೆದರು. ದೇಶ ಸಂಚಾರ ಮಾಡುತ್ತಾ ವಿಜಯನಗರಕ್ಕೆ ಬಂದು ವ್ಯಾಸರಾಯರನ್ನು ಭೇಟಿಯಾಗಿ ದಾಸದೀಕ್ಷೆಯನ್ನು ಬೇಡಿದರು ಆಗ ವ್ಯಾಸರು 'ಕನಕನಿಗೇನು ಕೋಣದ ಮಂತ್ರ' ಎಂದರಂತೆ ಆಗ ತಿಮ್ಮಪ್ಪನಾಯಕರು ಸ್ವತಃ ಯಮರಾಜನನ್ನೇ ಕೋಣನ ರೂಪದಲ್ಲಿ ಗುರುಗಳ ಮುಂದೆ ತಂದು ನಿಲ್ಲಿಸಿದರು, ಆಗ ಅವರು ಸಂತೋಷದಿಂದ 'ವ್ಯಾಸನಕೆರೆಯ'ಯ ತೂಬಿಗೆ ಅಡ್ಡಲಾಗಿ ನಿಂತ ದೊಡ್ಡ ಬಂಡೆಗಲ್ಲನ್ನು ತೆಗೆಯಿಸಲು ಹೇಳುತ್ತಾರೆ. ಆಗ ತಿಮ್ಮಪ್ಪನಾಯಕರು ಕೋಣನ ಸಹಾಯದಿಂದ ಆ ಬಂಡೆಗಲ್ಲುಗಳನ್ನು ತೆಗೆಯಿಸುತ್ತಾರೆ. ವ್ಯಾಸರಾಯರು ತಿಮ್ಮಪ್ಪನಾಯಕನ ಭಕ್ತಿಗೆ ಮೆಚ್ಚಿ ಅವರಿಗೆ ದೀಕ್ಷೆಯನ್ನು ನೀಡಿ ತಮ್ಮ ಶಿಷ್ಯರಲ್ಲಿ ಸೇರಿಸಿಕೊಳ್ಳುತ್ತಾರೆ. ಅಂದಿನಿಂದ ತಿಮ್ಮಪ್ಪನಾಯಕ ಕನಕದಾಸರಾದರು. ಪುರಂದರದಾಸರೂ, ಕನಕದಾಸರೂ ತುಂಬಾ ಅನ್ಯೋನ್ಯವಾಗಿದ್ದರೆಂದು ತಿಳಿದು ಬರುತ್ತದೆ. ಪುರಂದರದಾಸರ ರಚನೆಯೊಂದರಲ್ಲಿ ಕನಕದಾಸರ ಉಲ್ಲೇಖವಿದೆ. ಕನಕದಾಸರು ಅನೇಕ ಕೀರ್ತನೆ, ಡೊಳ್ಳಿನ ಪದಗಳನ್ನು ರಚಿಸಿ ಅನೇಕ ಪವಾಡವನ್ನು ಮಾಡಿದರೆಂದು ಪ್ರತೀತಿಯಿದೆ. ಅವರ ಕಾವ್ಯಗಳಲ್ಲಿ ರಾಮಧ್ಯಾನಚರಿತ್ರೆ, ನಳಚರಿತ್ರೆ, ಹರಿಭಕ್ತಿಸಾರ ಮತ್ತು ನೃಸಿಂಹಾಸ್ತವಗಳು ಮುಖ್ಯವಾದುವು, ಗೂಢಾರ್ಥ ತಿಳಿಸುವ 'ಮುಂಡಿಗೆ' ಪ್ರಕಾರದ ಸಾಹಿತ್ಯ ರಚನೆಗೆ ಇವರು ಪ್ರಸಿದ್ಧರು.

<u>**ವೈಕುಂಠದಾಸರು:**</u> ಶ್ರೀ ವೈಕುಂಠದಾಸರು ಬೇಲೂರಿನವರು, ಬೇಲೂರಿನಲ್ಲಿ ಜನಿಸಿ ಅಲ್ಲೇ ಬೆಳೆದು ಅಲ್ಲಿಯೇ ಲೋಕಯಾತ್ರೆಯನ್ನು ಮುಗಿಸಿದರು. ವೈಕುಂಠದಾಸರಿಗೆ 'ಕೇಶವ' ಎಂದು ಕರೆಯುತ್ತಿದ್ದರು, ತುಂಬಾ ಭಾವುಕ ವ್ಯಕ್ತಿಯಾದ ಕೇಶವೈಂಗಾರ್ಯರು ಬೆಳಗಾಗಿ ಏಳುತ್ತಲೇ ವಿಷ್ಣು ಸಮುದ್ರದಲ್ಲಿ ಸ್ನಾನ ಮಾಡಿ ಕೇಶವಸ್ವಾಮಿಯ ದೇವಸ್ಥಾನಕ್ಕೆ ಹೋಗುತ್ತಿದ್ದರು. ಇವರು ದೇವಾಲಯದ ಆವರಣದಲ್ಲಿರುವ ವಿದ್ಯಾಶಾಲೆಯಲ್ಲಿಯೇ ವಿದ್ಯಾಭ್ಯಾಸ ಮಾಡಿ ದೇವಸ್ಥಾನದಲ್ಲಿ ತೀರ್ಥಪ್ರಸಾದ ತೆಗೆದುಕೊಂಡು ಬರುತ್ತಿದ್ದರು, ಭಕ್ತಿ ವಿಶಿಷ್ಟತೆಯಿಂದ ಕೂಡಿದ ಇವರು ಪ್ರಪಂಚದ ವ್ಯವಹಾರಕ್ಕೆ 'ಜಡ' ದಂತೆ ವ್ಯವಹರಿಸುತ್ತಿದ್ದರು. ಕಾಲಾಂತರದಲ್ಲಿ 'ಸೌಮ್ಯನಾಯಕಿ' ಎಂಬ

ಕನ್ನೆಯೊಡನೆ ಇವರಿಗೆ ಮದುವೆಯಾಯಿತು. ಕೇಶವ ಪ್ರತ್ಯಕ್ಷನಾಗದ ಹೊರತು ಸಂಸಾರ ಸುಖವನ್ನು ಅನುಭವಿಸುವುದಿಲ್ಲ'. ಎಂದು ಪ್ರತಿಜ್ಞೆ ಮಾಡಿ ಕೇಶವನ ಸೇವೆಯಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಂಡರು. ಪತಿವ್ರತೆಯಾದ ಸೌಮ್ಯನಾಯಕಿಯೂ ಕೂಡ ಪತಿಯ ಮನೋವೃತ್ತಿಯನ್ನು ಅರಿತು ತಾನೂ ಕೂಡ ಕೇಶವನ ಸೇವೆ ಮಾಡುತ್ತಿದ್ದಳು. ದಂಪತಿಗಳ ಭಕ್ತಿಗೆ ಮೆಚ್ಚಿದ 'ಬೇಲೂರು ಕೇಶವ' ಸ್ವಾಮಿಯು ಶಂಖ, ಚಕ್ರ, ಗಧಾ, ಪದ್ಮಧಾರಿಯಾಗಿ ದರ್ಶನವಿತ್ತನು. ಅಂದಿನಿಂದ 'ವೈಕುಂಠ ಕೇಶವ' ಎಂಬ ಅಂಕಿತದಿಂದ ದೇವರ ನಾಮಗಳನ್ನು ಹಾಡಲು ತೊಡಗಿದರು. ಕಾಲಾಂತರದಲ್ಲಿ ಕೇಶವ ಎಂಬುದು ಬಿಟ್ಟು 'ವೈಕುಂಠದಾಸ' ರೆಂದೇ ಪ್ರಸಿದ್ಧಿ ಹೊಂದಿದರು. ಇವರು ರಚಿಸಿ ಹಾಡಿದ ಹಾಡುಗಳನ್ನು 'ವರದ' ಎಂಬ ಶಿಷ್ಯನು ತಾಳೆಗರಿಯ ಮೇಲೆ ಬರೆದಿಟ್ಟುಕೊಳ್ಳುತ್ತಿದ್ದನೆಂಬ ಪ್ರತೀತಿ ಇದೆ. ಬೇಲೂರಿನ ಕೇಶವಮೂರ್ತಿಯು ತುಂಬಾ ಸುಂದರವಾಗಿದ್ದರಿಂದ ಕೇಶವನು ಇಲ್ಲಿ ಚೆನ್ನಿಗರಾಯನೆಂದೇ ಪ್ರಸಿದ್ಧಿ ಪಡೆದಿದ್ದಾನೆ. ಪುರಂದರದಾಸರು, ಕನಕದಾಸರು ಜೊತೆಯಾಗಿ ಇಲ್ಲಿ ಬಂದು ಹೋಗುತ್ತಿದ್ದರೆಂಬ ಪ್ರತೀತಿಯಿದೆ. ವೈಕುಂಠದಾಸರೂ ಪುರಂದರದಾಸರಿಗೂ ಸ್ನೇಹವಿದ್ದಿರಬಹುದೆಂಬ ನಂಬಿಕೆಯಿದೆ ಪುರಂದರದಾಸರು ಬೇಲೂರಿಗೆ ಬಂದಾಗ ರಚಿಸಿದ ಕೀರ್ತನೆಗಳಲ್ಲಿ ಕೆಳಗಿನದು ಪ್ರಸಿದ್ಧ ಕೀರ್ತನೆಯಾಗಿದೆ.



ಅಳುವುದ್ಯಾತಕೊ ರಂಗ, ಅತ್ತರಂಜಿಪ ಗುಮ್ಮ
. . . . . . . . . . . . . . . . . . . .
. . . . . . .    . . .    . . .    . . .    .
ಶರಣು ವೇಲಾಪುರದ ಚೆಲುವ ಚೆನ್ನಿಗರಾಯ
ಪರಿಪರಿ ವಿಧದಿಂದ ಶರಣರ ಮೊರೆಯುವ
ವರದ ಪುರಂದರವಿಠಲರಾಯ. (೨೯)

ವೈಕುಂಠದಾಸರು ಭಾಗವತದ ಕಥೆಯನ್ನು ತಮ್ಮ ಸುಳಾದಿಗಳಲ್ಲಿ ಬಳಸಿಕೊಂಡ ಬಗೆಯನ್ನು ಮಾನಕರಿ ಶ್ರೀನಿವಾಸಾಚಾರ್ಯರು ಹೀಗೆ ವರ್ಣಿಸುತ್ತಾರೆ. 'ಕಾಳಿಂಗನ ವಿಷ ನಿವಾರಿಸಿದ ಶ್ರೀಕೃಷ್ಣನ ಪಾದಗಳು ತಮ್ಮ ಕೋಪವೆಂಬ ಸರ್ಪದ ಮದವನ್ನು ನಿವಾರಿಸಲಿ' (೩೦) ಎಂದು ನಿವೇದಿಸಿಕೊಂಡಿದ್ದಾರೆಂದೂ ಹಾಗೂ ಭಾಗವತದ ಕಾಲಿಯ ಮರ್ದನ ಸನ್ನಿವೇಷವನ್ನು ತಮ್ಮ ಅಂತರಂಗದ ಶುದ್ಧಿಯ ಸಾಧನವಾಗಿಅನ್ವಯಿಸಿಕೊಳ್ಳುವ ಮೂಲಕ ವೃದ್ಧಿಸುತ್ತಾರೆಂದು ತಿಳಿಸುತ್ತಾರೆ.

<u>ಗದುಗಿನ ನಾರಾಯಣಪ್ಪ:</u> ಇವರು ಗದುಗಿನ ವೀರನಾರಾಯಣನ ಭಕ್ತರು ಪುರಂದರದಾಸರ ಸಮಕಾಲೀನರು. ಇವರನ್ನು ಕೆಲವರು ಶೈವರೆಂದರೆ, ಕೆಲವರು ವೈಷ್ಣವರೆನ್ನುವರು. ಇವರ ಕಾಲ ಹಾಗೂ ಮತದ ಬಗ್ಗೆ ಬಹಳ ಚರ್ಚೆಯಾಗಿದೆ. ಇವರು ಮಹಾಭಾರತವನ್ನು ರಚಿಸಿ ಕೃಷ್ಣದೇವರಾಯನ ಆಸ್ಥಾನಕ್ಕೆ ಬಂದು ಅಲ್ಲಿ ವ್ಯಾಸರಾಯರಿಗೆ ಇದನ್ನು ತೋರಿಸಿದರೆಂದೂ ಅವರು ಇದನ್ನು ಅಮೂಲಾಗ್ರವಾಗಿ ಕೇಳಿ ಸಂತೋಷಪಟ್ಟು 'ಅರಸುಗಳಿಗಿದು ವೀರ' ಎಂಬ ಪದ್ಯವನ್ನು ರಚಿಸಿಕೊಟ್ಟರೆಂಬ ಪ್ರತೀತಿಯಿದೆ ಮತ್ತು ಈ ಕವಿಯನ್ನು 'ಕುಮಾರವ್ಯಾಸ' ರೆಂದು ಕರೆದರೆಂಬ ಪ್ರತಿಷ್ಠವಿದೆ. ಪುರಂದರದಾಸರು ತಮ್ಮ ಸುಳಾದಿಯೊಂದರಲ್ಲಿ ಇವರ ಪ್ರಶಂಸೆ ಮಾಡಿರುವರು.

ಹರಿಶರಣರೆನ್ನ ಮನೆಯ ಮೆಟ್ಟಲುಮನೆ ಪರಮಪಾವನ್ನವಾಶಿತುಆಆಆ
ಹರಿಶರಣರೆನ್ನ ಕೂಡಿ ಮಾತನಾಡೆ ಮನವುಕರಣಂಗಳು ಪಾವನ್ನ ಆಆಆ
ಹರಿಶರಣರೆನ್ನ ಮನೆಯಲ್ಲುಂಡರೆಬನ್ನವರ ಇಪ್ಪತ್ತೊಂದು ಕುಲ ಪಾವನ ಆಆಆ
ಗದುಗಿನ ವೀರನಾರಾಯಣಸ್ವಾಮಿಹರಿ ಪರಂದರ ವಿಠಲರೇಯ ಆಆಆ ಮಠ್ಯತಾಳ
ಭಾರತ ಆಗಮಗೋಚರವೆಂದು ವಿಚಾರಿಸೆ ಮನುಜರಿಗೆ ಗೋಚರವಪಂತೆ
ವೀರನಾರಾಯಣಾ ನೀ ಕವಿಯೆನಿಸಿದೆ ಕುಮಾರವ್ಯಾಸನಿಂದ ಭಾರತವ ವಿರಚಿಸಿದೆ (೩೧)

ಪುರಂದರದಾಸರ ಪರಿಸರದ ಕೀರ್ತನಕಾರರು ಆಧ್ಯಾತ್ಮದ ನಿಷ್ಠೆಯಿದ್ದವರು. ಮತ, ಮಡಿವಂತಿಕೆಯ ಛಲವಿಲ್ಲದೆ ನೀತಿಗೆ ಆದ್ಯತೆಕೊಟ್ಟು ಭಗವತ್ಪ್ರೀತಿಯನ್ನು ಪಡೆದವರು ಎಂದು ಪ್ರಸಿದ್ಧರಾಗಿದ್ದಾರೆ.

ಪುರಂಧರದಾಸರ ಸಾಹಿತ್ಯ: ಪುರಂದರದಾರು ಹರಿದಾಸ ವೃತ್ತಿಯನ್ನವಲಂಬಿಸಿದ ಮೇಲೆ ತಮ್ಮ ಎಂಬತ್ತೈದನೆಯ ವಯಸ್ಸಿನವರೆಗೂ ಕನ್ನಡದಲ್ಲಿ ಸಾಹಿತ್ಯ ರಚಿಸಿದರು, ಅವುಗಳಲ್ಲಿ ಕೀರ್ತನೆ, ಸುಳಾದಿ, ಉಗಾಭೋಗ ಮುಂಡಿಗೆಗಳು ಸಮಾವೇಶಗೊಳ್ಳುತ್ತವೆ. ಪುರಂದರದಾಸರು ಸುಮಾರು ೧ ಲಕ್ಷಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿದ್ದರೆಂಬ ಉಲ್ಲೇಕವಿದೆ.

ವಾಸುದೇವನ ನಾಮಾವಳಿಯ ಕ್ಲುಪ್ತಿಯನು
ವ್ಯಾಸರಾಯರ ದಯದಿಂದ ಬಣ್ಣಿಪೆನು
. . . . . . . . . . . . . . . . . . .
ಕೇದಾರ ರಾಮೇಶ್ವರ ಕಂಚಿ ಭೂತಳದ
ಪಾದಾರವಿಂದ ಕ್ಷೇತ್ರ ಪ್ರತಿ ಕ್ಷೇತ್ರವು
ಆದರದಿ ಲಕ್ಷದಿಪ್ಪತ್ತೈದು ಸಾವಿರ ಕೃತಿಯ
ವೇದಶಾಸ್ತ್ರ ಪುರಾಣ ಸಮ್ಮತಿಯಿಂದ (೩೨)

ವಿಜಯದಾಸರು ತಮ್ಮ ಸುಳಾದಿ ಯೊಂದರಲ್ಲಿ ತ್ರಿಪಾದ ಕಡಿಮೆ ಐದು ಲಕ್ಷವೆಂದಿದ್ದಾರೆ.
ಸೃಷ್ಟಿಯೊಳಗೆ ಎಲ್ಲ ಗಣೀತ ಮಾಡಲಾಗಿ
ಮೆಟ್ಟಿಗೆ ತ್ರಿಪಾದ ಕಡಿಮೆ ಐದುಲಕ್ಷ
ಇಷ್ಟಾದವು ದಾಸರು ಪೇಳಿದ ಪದ
ಇಷ್ಟ ದೈವವಾದ ವಿಜಯವಿಠಲ ಹರಿಯ
. . . . . . . . . . . . . . . . . . .
ಗುಟ್ಟಿನಿಂದಲಿ ಸಲಿಸಿ ಕುಣಿಕುಣಿಸುತಲಿ (೩೩)

ನಮಗೆ ಈಗ ಸದ್ಯಕ್ಕೆ ದೊರಕುವ ಅವರ ಕೃತಿಗಳು ಸಾವಿರದಐನೂರರ ಹತ್ತಿರ ಅಷ್ಟೇ. ಇಷ್ಟೇ ಉಳಿದಿದೆ ಎಂದು ನಿರ್ಣಯವಾದರೆ ಕನ್ನಡಿಗರು ನಾವು ಎಂಥ ಜ್ಞಾನ ನಿಧಿಯನ್ನು ಕಳೆದುಕೊಂಡವು ಎಂದು ಪರಿತಪಿಸಬೇಕಾಗುವುದು. ಅಂದರೆ ಅವರ ಎಲ್ಲಾ ರಚನೆಗಳು ದೊರೆಯದಿದ್ದುದು ನಮ್ಮ ದುರಾದೃಷ್ಟ ಅವರ ಕೃತಿಗಳು ನಷ್ಟವಾಗಲು ಮಳೆ, ತೇವ, ಬಿಸಿಲು ಮುಂತಾದ ನೈಸರ್ಗಿಕ ಕಾರಣವಿರಬಹುದು ಅಥವಾ ಅವುಗಳನ್ನು ಸರಿಯಾಗಿ ಬರೆದಿಡುವ ವ್ಯವಸ್ಥೆ ಇಲ್ಲದಿರಬಹುದು. ಈಗ ಉಳಿದಿರುವ ಕೃತಿಗಳು ಹರಿದಾಸರು ಸಂಗೀತ ವಿದ್ವಾಂಸರು ಹಾಗೂ ಸಾಮಾನ್ಯ ಜನರು ತಮ್ಮ ಮನೆತನದಲ್ಲಿ ಉಳಿಸಿಕೊಂಡು ಬಂದ ಹಸ್ತ ಪ್ರತಿಗಳು. ಅವುಗಳು

ಈಗ ದೊರೆಯುವಂತೆಯೇ ಇದ್ದವೆಂದು ಹೇಳಲಾಗದು. ಅನೇಕ ಹರಿದಾಸರು ಸಂಗೀತಗಾರರು ತಮಗೆ ತೋರಿದಂತೆ ಮಾರ್ಪಡಿಸಿ ಹಾಡುತ್ತಿರಬಹುದು, ಪುರಂದರದಾಸರು ರಚಿಸಿದಾಗಿನ ಪಾಠ, ಗಾಯನಕ್ರಮ, ರಾಗ, ತಾಳ, ನುಡಿಗಳು ಬದಲಾಗಿರಬೇಕೆಂದು ತೋರುತ್ತದೆ. ಏಕೆಂದರೆ ಅವರ ಕೃತಿಗಳಲ್ಲಿಯ ಭಾಷೆ ಪುರಂದರದಾಸರದ್ದೇ ಇರಬಹುದಾದರೂ ಬಾಯಿಂದ ಬಾಯಿಗೆ ಪಾಠಾಂತರ ಆಗಿರುವ ಸಾಧ್ಯತೆಗಳುಂಟು. ಇವರು ಕೀರ್ತನೆ, ಸುಳಾದಿ, ಉಗಾಭೋಗಗಳು, ಮುಂಡಿಗೆ, ವೃತ್ತನಾಮ, ನಿಂದಾಸ್ತುತಿಗಳನ್ನು ರಚಿಸಿದರೆಂದು ತಿಳಿದು ಬರುತ್ತದೆ. ಪುರಂದರಸಾಹಿತ್ಯದರ್ಶನ ಸಂ.೧ ರಲ್ಲಿ ಸಾ.ಕೃ ರಾಮಚಂದ್ರರಾಯರು, ಗೀತ, ಠಾಯಿ, ಸುಳಾದಿ, ಉಗಾಭೋಗ, ಪದ್ಯ, ಪದ, ಎಂಬ ಆರು ಬಗೆಯ ಪ್ರಬಂಧಗಳನ್ನು ರಚಿಸಿದ್ದಾರೆಂದು ಹೇಳುತ್ತಾರೆ.

ಪುರಂದರದಾಸರು ಸಮಾಜದ ಬದಲಾವಣೆ, ಹಾಗೂ ಭಕ್ತಿ ಪಂಥದ ಬೆಳವಣಿಗೆಗಾಗಿ ಸಾಹಿತ್ಯ ರಚಿಸಿದರು. ಮಹಾಜ್ಞಾನಿಗಳಾಗಿದ್ದರಿಂದ ಅವರ ಸಾಹಿತ್ಯ ಸಮಸ್ತ ಶಾಸ್ತ್ರಾರ್ಥಗಳನ್ನೆಲ್ಲಾ ಒಳಗೊಂಡಿತು ಪುರಂದರದಾಸರ ರಚನೆಗಳು ಹೆಚ್ಚಾಗಿ ಸಮಾಜಮುಖಿ ಚಿಂತನೆಗಳುಳ್ಳದ್ದು, ಇವರ ರಚನೆಯ ಇನ್ನೊಂದು ವಿಶೇಷವೆಂದರೆ ಇವರ ಭಾಷೆ 'ನಡುಗನ್ನಡ', ದೇಶೀ–ಶೈಲಿ, ಅಕ್ಷರ ಶಬ್ದ ಸಮಾಸ ಪ್ರಯೋಗಗಳು ಮರೆಯಾಗುತ್ತಾ ಬಂದು ಹೊಸಪ್ರಯೋಗಗಳ ರೂಡಿಯಲ್ಲಿ ಬಂದ ಭಾಷೆಗೆ 'ಹೊಸಗನ್ನಡ' ವೆನ್ನುವರು. ಇವೆರಡರ ಮಧ್ಯಶೈಲಿಯು 'ನಡುಗನ್ನಡ', ಪುರಂದರದಾಸರು ಗ್ರಾಂಥಿಕ ಭಾಷೆಗೆ ಹೆಚ್ಚಾಗಿ ಪ್ರಾಶಸ್ತ್ಯ ಕೊಡಲಿಲ್ಲ. ಇವರು ಜನರು ಆಡುವ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿದರು. ದಾಸರು ತಮ್ಮ ಕೃತಿಗಳಲ್ಲಿ ಸಂಸ್ಕೃತ ಶಬ್ದಗಳನ್ನು ಅಲ್ಲಲ್ಲಿ ಮಿಶ್ರಿತಗೊಳಿಸಿದ್ದರೂ ಗ್ರಾಮ್ಯ ಹಾಗೂ ದೇಶೀ ಶಬ್ದಗಳನ್ನು ಹೆಚ್ಚು ಬಳಸಿದ್ದಾರೆ. ಈಗ ಅವರು ರಚಿಸಿದ ಸಾಹಿತ್ಯ ಪ್ರಕಾರಗಳನ್ನು ಗಮನಿಸಿದಾಗ ಕೀರ್ತನೆ, ಸುಳಾದಿ, ಉಗಾಭೋಗಗಳು, ಮುಂಡಿಗೆಗಳು ತ್ರಿಪದಿ, ಚೌಪದಿ, ಷಟ್ಪದಿಗಳು, ವೃತ್ತನಾಮಗಳು, ಜೋಗುಳದ ಹಾಡುಗಳು, ಆರತಿ ಹಾಡುಗಳು, ಹಬ್ಬ ಹರಿದಿನಗಳಲ್ಲಿ ಹಾಡಿಕೊಳ್ಳಲು ಸುಲಭವಾದ ರಚನೆಗಳು ಮುಖ್ಯವಾಗಿವೆ.

<u>ಕೀರ್ತನೆಗಳು:</u> ಪುರಂದರದಾಸರು ತಮ್ಮ ಅನುಭವಗಳು ಹಾಗೂ ಭಕ್ತಿಯ ಅಭಿವ್ಯಕ್ತಿಗಾಗಿ ಕೀರ್ತನೆಗಳನ್ನು ಧಾರಾಳವಾಗಿ ಬಳಸಿದರು. 'ಕೀರ್ತನೆ' ಎಂಬುದು ಕೀರ್ತಿ, ಕೀರ್ತಿಸು ಪದಗಳಿಂದ ಹುಟ್ಟಿಕೊಂಡಿದೆ. ಕೀರ್ತನೆ ಪದಕ್ಕೆ ಸ್ತುತಿಸು, ಹೊಗಳು ಎಂಬ ಅರ್ಥಗಳಿವೆ. ಕೀರ್ತನೆ ಮಾಡುವವರನ್ನು 'ಹರಿದಾಸರು' 'ಕೀರ್ತನಕಾರರು' ಎಂದು ಕರೆಯುತ್ತಾರೆ. ಹರಿಯನ್ನು ಪ್ರಭುವನ್ನು ಸ್ತುತಿಸುವುದೇ ಸಂಕೀರ್ತನೆ ಎಂದು ಅನ್ನಮಾಚಾರ್ಯರು ಅಭಿಪ್ರಾಯಪಡುತ್ತಾರೆ. ಕೀರ್ತನೆಗಳನ್ನು ಪದಗಳೆಂದೂ ಕೂಡ ಕರೆಯುತ್ತಾರೆ. ಕೀರ್ತನೆ ಸಾಹಿತ್ಯ ಪ್ರಕಾರವು ಸಾಮಾನ್ಯವಾಗಿ ಭಕ್ತಿ ಪಂಥದ ಸಾಹಿತ್ಯದಲ್ಲಿ ಕಾಣಸಿಗುತ್ತದೆ. ಭಕ್ತನು ಭಗವಂತನನ್ನು ಸ್ತುತಿಸುವುದೇ ಇಲ್ಲಿ ಮುಖ್ಯವಾಗಿರುತ್ತದೆ. ಕೀರ್ತನ ಸಾಹಿತ್ಯ ಪ್ರಕಾರವು ಯಾವಾಗ ಉಗಮವಾಯಿತು ಎನ್ನುವ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೀರ್ತನೆ ಎನ್ನುವ ಹೆಸರಿನಲ್ಲಿ ಈ ಹಾಡಿನ ರೂಪ ಹದಿಮೂರನೆಯ ಶತಮಾನದಲ್ಲಿ ನರಹರಿ ತೀರ್ಥರಿಂದ ಪ್ರಾರಂಭವಾಗಿದೆ. "ಮೊದಲು ಸ್ವರರಚನೆ ರಚಿಸಿದ ಕೀರ್ತಿ ಬಸವೇಶ್ವರರ ಹಿರಿಯ ಸಮಕಾಲೀನರಾಗಿದ್ದ ಸಕಲೇಶಮಾದರಸನಿಗೆ ಸಂದರೆ, ಮೊದಲಿಗೆ ಕೀರ್ತನೆಗಳನ್ನು ರಚಿಸಿದ ಹಿರಿಮೆ ಹರಿದಾಸ

ಪಂಥದ ನರಹರಿತೀರ್ಥರಿಗೆ ಸಲ್ಲುತ್ತದೆ. ವಚನ–ಸ್ವರವಚನ ಪರಂಪರೆ ಬಸವೇಶ್ವರರ ಕಾಲಕ್ಕೆ ವಿಸ್ತಾರ ವೈವಿಧ್ಯತೆಯನ್ನು ಪಡೆದಂತೆ ಕೀರ್ತನೆ–ಸುಳಾದಿಗಳ ಪರಂಪರೆ ಪುರಂದರದಾಸರ ಕಾಲಕ್ಕೆ ಪ್ರಮುಖ ಸ್ಥಾನವನ್ನು ಪಡೆದಿದೆ" (೩೪) ಎಂದು ಡಾ.ಬಸವರಾಜ ಸಬರದ ಅವರು ಅಭಿಪ್ರಾಯ ಪಡುತ್ತಾರೆ. ಪುರಂದರದಾಸರ ಕೀರ್ತನೆಗಳಲ್ಲಿ ಪಲ್ಲವಿ, ಅನುಪಲ್ಲವಿ, ಮತ್ತು ಚರಣಗಳ ಜೋಡಣೆ ವಿಶಿಷ್ಟವಾಗಿದೆ. ನಾಲ್ಕು ಸಾಲಿನ ಪದ್ಯಗಳು ಸಾಮಾನ್ಯವಾಗಿ ಇದ್ದು, ಕೀರ್ತನೆಯ ಕೊನೆಯಲ್ಲಿ 'ಪುರಂದರವಿಠಲ' ನೆಂಬ ಅಂಕಿತವಿರುತ್ತದೆ. ಈ ಅಂಕಿತವು ಪುರಂದರದಾಸರ ಆದಿದೈವ 'ಪಾಂಡುರಂಗ ವಿಠಲ'ನ್ನು ಸೂಚಿಸುತ್ತದೆ. ಪುರಂದರದಾಸರು ಸಂಗೀತದ ಹಿನ್ನೆಲೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದರೂ ಕೂಡ ಅವರ ಉದ್ದೇಶ ನೀತಿಬೋಧೆ ಆಗಿತ್ತು. ಜನಸಾಮಾನ್ಯರಿಗೆ ತಲುಪುವಂತೆ ಆಡುಭಾಷೆಯಲ್ಲಿ ಅವರು ಸಾಹಿತ್ಯರಚನೆ ಮಾಡಿದ್ದಾರೆ. ಪುರಂದರದಾಸರ ಅಭಿವ್ಯಕ್ತಿಯ ಅಧ್ಯಯನವನ್ನು ಕೈಗೊಂಡ ಡಾ.ಎಚ್.ಎನ್.ಮುರಳಿಧರ್ ಅವರು "ಪುರಂದರದಾಸರ ಪದಗಳಲ್ಲಿ ಸಂಗೀತ ನೃತ್ಯಗಳಿಗೆ ಸಂಬಂಧಪಟ್ಟಷ್ಟು ಮಾತ್ರ ಭಾಗವನ್ನು ಲಕ್ಷಗಾನವೆಂದು ನಾವು ಎಣಿಸಬೇಕು ಉಳಿದ ಪದಗಳಿಗೆ ಸಾಹಿತ್ಯದ ಮೌಲ್ಯವೇ ಹೆಚ್ಚಾದದ್ದು". (೩೫) ಎನ್ನುವುದು ಸರಿ ಎನಿಸುತ್ತದೆ. ಡಾ.ವಿ.ಎ.ದಿವಾಣಜಿಯವರು ತಮ್ಮ ಪ್ರಬಂಧ 'ಪ್ರಸಾದಯೋಗ' ದಲ್ಲಿ ತೆಲುಗಿನಲ್ಲಿಯೂ ಪುರಂದರದಾಸರ ನಾಲ್ಕು ಕೀರ್ತನೆಗಳು ಉಪಲಬ್ಧವಾಗಿವೆ. ಹಾಗೂ ಅವುಗಳನ್ನು "ಸಂಗೀತ ಸಂಪ್ರದಾಯ ಪ್ರದರ್ಶಿನಿ" ಎಂಬ ಕೃತಿಯಲ್ಲಿ ಕಾಣಬಹುದು ಎಂದು ತಿಳಿಸುತ್ತಾರೆ. "ಪುರಂದರದಾಸರ ಕೃತಿಗಳನ್ನು ಪ್ರಮೇಯಭಾಗ, ತತ್ವನಿರೂಪಣೆ, ಕ್ಷೇತ್ರಮಹಾತ್ಮೆ, ಆರ್ತನಾದ, ಆರಾಧನೆ ಲೋಕಸಂಗ್ರಹ ಮತ್ತು ಮಾನವ ಧರ್ಮರಹಸ್ಯ ಹೀಗೆ ಅನೇಕ ವಿಭಾಗಗಳಲ್ಲಿ ವಿಂಗಡಿಸಬಹುದು. ನಾಸ್ತಿಕನಿಂದ ಹಿಡಿದು ಆಸ್ತಿಕ ಶಿಖಾಮಣಿಗಳಿಗೂ ಅವರ ಕೃತಿಗಳು ಬೆಳಕು ಚೆಲ್ಲುವುವು. ಐಹಿಕ ಜೀವನವೇ ಪರಮ ಸಾಧನೆಯೆಂದು ನಂಬುವ ಆಧುನಿಕ ಭೌತಿಕವಾದಿಗಳಿಗೆ ದಾಸರ ಸತ್ಯನಿಷ್ಠವಚನಗಳನ್ನೋದಿ ಸಂತೋಷವಾಗು ವುದು". (೩೬) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ೨೦೦೩ರಲ್ಲಿ 'ಸಮಗ್ರ ದಾಸಸಾಹಿತ್ಯ' ದಲ್ಲಿ ಒಟ್ಟು ೫೦೩ ಪುರಂದರದಾಸರ ಕೀರ್ತನೆಗಳನ್ನು ೨೫೫ ಉಗಾಭೋಗಗಳನ್ನು ೭೩ ಸುಳಾದಿಗಳನ್ನು ಪ್ರಕಟಿಸಿದ್ದಾರೆ.

'ಗುಮ್ಮನ ಕರೆಯದಿರೆ ಅಮ್ಮ ನೀನು' ಎಂದು ತಾಯಿ ಯಶೋಧೆಗೆ ಹೇಳುತ್ತಾ, ತಾವೇ ಇನ್ನೊಂದು ಕಡೆ ಯಶೋಧೆಯಾಗಿ 'ಆಡಹೋಗಲು ಬೇಡವೋ ರಂಗ' 'ಮನೆಯೊಳಗಾಡೋ ರಂಗ' ಎಂದು ಕೇಳಿಕೊಳ್ಳುತ್ತಾರೆ. 'ಎಲ್ಲಾಡಿ ಬಂದೆ ಗೋವಿಂದ' ಎಂದು ಪ್ರಶ್ನಿಸುತ್ತಾರೆ. 'ಉಣಲೊಲ್ಲೆ ಯಾಕೋ ಕಂದ' ಎಂದು ನೊಂದು ಕೊಳ್ಳುತ್ತಾರೆ'. 'ಮುದ್ದು ತಾರೋ ಕೃಷ್ಣ ಎದ್ದು ಬಾರೋ ಶುದ್ಧವಾದ ಕರ್ಪೂರದ ಕರಡಿಗೆಯ ಬಾಯಲೊಮ್ಮೆ' ಎಂಬ ಕೃತಿಯಲ್ಲಿ ತಾಯಿ ಮಾತು ಮಾತಿಗೆ ಮಗುವನ್ನೆತ್ತಿ ಮುದ್ದಾಡುವ ಸನ್ನಿವೇಶದ ಕಲ್ಪನೆ ಹಾಗೂ ಅದನ್ನು ಅಭಿವ್ಯಕ್ತಿ ಮಾಡಿರುವ ರೀತಿ ವಾತ್ಸಲ್ಯ ಭಾವದ ಪ್ರತೀಕ ಯಶೋಧೆ ಕೃಷ್ಣರು ಎನ್ನುವಂತಿದೆ. ಕೃಷ್ಣನು ಗೋಕುಲದಲ್ಲಿ ಹಾಲು, ಬೆಣ್ಣೆ ಕದ್ದಾಗ ಗೋಪಿಕಾ ಸ್ತ್ರೀಯರು ಕೃಷ್ಣನ ಕಾಟ ತಾಳಲಾರದೆ ಯಶೋಧೆಗೆ ದೂರು ಸಲ್ಲಿಸುವ ಮಧುರ ಭಾವದ ಸನ್ನಿವೇಶಗಳನ್ನು ಸ್ವಾರಸ್ಯವಾಗಿ ಕಲ್ಪಿಸಿಕೊಂಡು ಹತ್ತಾರು ಕೃತಿಗಳಲ್ಲಿ ವರ್ಣಿಸಿದ್ದಾರೆ.

ಶ್ರೀನಿವಾಸ ನಾಯಕರು ಪುರಂದರದಾಸರಾಗಿ ತಮ್ಮ ಜೀವನದಲ್ಲಿ ಮಾರ್ಪಾಡಾದಾಗ ಭಗವಂತ ನನ್ನು ಒಲಿಸಿಕೊಳ್ಳಲು ತಪಸ್ಸು ಮಾಡಲೆಂದು ಕಾಡಿಗೆ ಹೋಗಲಿಲ್ಲ. ಆದರೆ ತಮ್ಮೊಡನೆ ಉಳಿದೆಲ್ಲಾ ಜನರಿಗೆ ಭಗವಂತನಲ್ಲಿ ಭಕ್ತಿ ಹುಟ್ಟಿಸಿ ಅವರನ್ನು ಸನ್ಮಾರ್ಗಕ್ಕೆ ತರುವ ಲೋಕೋಪಕಾರದ ಕೆಲಸ ಮಾಡಿದ್ದಾರೆ. 'ಮಾನವ ಜನ್ಮ ದೊಡ್ಡದು' 'ಈಸಬೇಕು ಇದ್ದು ಜಯಿಸಬೇಕು' 'ಏನು ಇಲ್ಲವೋ ಎರಡು ದಿನದ ಸಂಸಾರ, 'ದಾನಧರ್ಮದ ಮಾಡು ಇದನಂತು ಮನುಜ' ಎಂಬ ಮುಂತಾದ ಕೃತಿಗಳಲ್ಲಿ ಜೀವನ ಪ್ರೇಮವನ್ನು ಬೆಳೆಸುವ ಮಾತುಗಳನ್ನು ಹೇಳಿದ್ದಾರೆ. "ಸಮಾಜದರ್ಶನದಲ್ಲಿ ಢಾಂಭಿಕ ಭಕ್ತಿಯ ಟೀಕೆ, ನೈಜ ಭಕ್ತಿಯ ಪ್ರೇರಣೆ, ಸಹವಾಸ ದೋಷದ ದುಷ್ಪರಿಣಾಮಗಳು, ಸತ್ಸಂಗದ ಮಹಿಮೆ, ಕುಲ ವಿಚಾರ, ಕ್ಷುದ್ರ ದೇವತಾರ್ಚನೆಯ ಖಂಡನೆ, ಹಣದ ಒಳಿತು ಕೆಡಕುಗಳು, ಲೋಪಕಾರಕ್ಕಾಗಿ ಬದುಕು ವಚನಭ್ರಷ್ಟರ ಸ್ಥಾನ, ಕಲಿಯುಗದ ಸಮಾಜ ಜೀವಿಗಳಿಗೆ ಉಪದೇಶ ಮೊದಲಾದ ಲೌಕಿಕ ವಿಷಯಗಳ ಬಗ್ಗೆ ದಾಸರು ಚಿಂತಿಸಿದ್ದಾರೆ". (೩೭)

'ಆವಕುಲವಾದರೇನು ಆವನಾದರೇನು ಆತ್ಮಭಾವವರಿತಮೇಲೆ" 'ಹೊಲೆಯ ಹೊರಗಿಹನೆ ಒಳಗಿಲ್ಲವೇ' ಮುಂತಾದ ಕೃತಿಗಳಲ್ಲಿ, ಸುಳ್ಳು, ಕಳ್ಳತನ, ವ್ಯಭಿಚಾರ ಮಾಡುವುದು ಕುಟುಂಬ ಜೀವನಕ್ಕೆ ದ್ರೋಹ ಬಗೆಯುವವರು ಹೊಲೆಯರು ಎಂದು ನೈತಿಕತೆಯ ಮೇಲೆ ಕುಲವನ್ನು ನಿರ್ಣಯಿಸಿದ್ದಾರೆ.

'ತುರುಕರು ಕರೆದರೆ ಉಣಬೇಕಣ್ಣ' 'ಜಂಗಮರು ನಾವು' ಎಂದು ಮತೈಕ್ಯದ ಭಾವ ತಳೆದಿದ್ದಾರೆ. 'ಮಡಿ ಮಡಿ, ಮಡಿಯೆಂದು ಅಡಿಗಡಿಗ್ಹಾರುತಿ ಎಂದು ಆತ್ಮಜ್ಞಾನವಿಲ್ಲದೆ ಪಾಲಿಸುವ ಕಾರ್ಯಗಳಲ್ಲಿ ಕುರುಡು ಸಂಪ್ರದಾಯಗಳನ್ನಳೆದು ಅವನ್ನು ಅಲ್ಲಗೆಳೆಯುತ್ತಾರೆ.

'ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ' ಎಂಬಲ್ಲಿ ಪತಿಯಿಲ್ಲದೆ ನೊಂದ ಸ್ತ್ರೀಯರ ಯಾವ ಒಳ್ಳೆಯ ಗುಣಗಳೂ ಎದ್ದು ತೋರುವುದಿಲ್ಲ ಎಂದು ಒತ್ತಿ ಹೇಳುತ್ತಾರೆ. ಗಂಡನ ಮನೆಯಲ್ಲಿ ಪತಿಯ ಸೇವೆ ಮಾಡುತ್ತಾ ಅತ್ತೆ ಮಾವಂದಿರು ಬಂಧುಗಳೊಡನೆ ಹೇಗಿರಬೇಕು ಎಂದು ಬುದ್ಧಿ ಮಾತು ಹೇಳುತ್ತಾರೆ. 'ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ' ಎನ್ನುತ್ತಾ 'ಮುತ್ತೈದೆಯಾಗಿರಬೇಕು ಮುದದಿಂದಲಿ' ಎಂದು ಮುತ್ತೈದೆ ಪ್ರತಿಮೆಯ ಮೂಲಕ ಭಗವಂತನಲ್ಲಿ ಭಕ್ತಿಯನಿರಿಸಲು ಹೇಳುತ್ತಾರೆ.

ಜಾನಪದ ಶೈಲಿಯ ಕೆಲವು ಕೃತಿಗಳಲ್ಲಿ 'ಕಾಗೆಕೂಗಿತಲ್ಲ' ಎನ್ನುತ್ತಾ ಅಜ್ಞಾನ ಕಳೆದು ಜ್ಞಾನದದಾರಿಗೆ ಹೋಗಲು ಹುರಿದುಂಬಿಸುತ್ತಾರೆ. 'ಆನೆ ಬಂದಿತಮ್ಮ ಮರಿ ಆನೆ ಬಂದಿತಮ್ಮ' ಕುರುಡು ನಾಯಿ ತಾ ಸಂತೆಗೆ ಬಂತಂತೆ' ನಾಯಿ ಬಂದದಪ್ಪ ಅಣ್ಣ ಅತ್ತಲಾಗಿರಿ' ಎಂಬಲ್ಲಿ ಆನೆಯನ್ನು ಅಹಂಕಾರಕ್ಕೂ, ಮರಿ ಆನೆಯನ್ನು ಕೃಷ್ಣವರ್ಣದ ಭಗವಂತನಿಗೂ ಹೋಲಿಸಿದ್ದಾರೆ. ಅಮ್ಮ! ಅಣ್ಣ! ಅಪ್ಪ! ಎಂದು ಸಂಬೋಧಿ ಸುತ್ತಾ ಮಾನವನಲ್ಲಿರುವ ಅತಿ ಆಸೆಯನ್ನು ನಾಯಿ ಪ್ರತಿಮೆಯ ಮೂಲಕ ತೆರೆದು ತೋರಿಸುತ್ತಾರೆ.

ಹರಿದಾಸರ ರಚನೆಗಳು ಸ್ವಭಾವತಃ ಆಧ್ಯಾತ್ಮಿಕ ಪ್ರಧಾನವಾದವು ಸಮಗ್ರ ಮಾನವ ಸಮುದಾಯವನ್ನು ಸಾತ್ವಿಕ ಸಹ ಬಾಳ್ವೆಯ ಕಡೆಗೆ ಸೆಳೆಯುತ್ತಾರೆ. 'ಯಾರು ಸಂಗಡ ಬಾಹೋರಿಲ್ಲ' ಎಂಬ ಕಠಿಣ ಸತ್ಯವನ್ನು ತಿಳಿದು, 'ಧರ್ಮವೆಂಬ ಸಂಬಳ ಗಳಿಸಿಕೊಳ್ಳಿರೋ' ಎಂದು ಬುದ್ಧಿವಾದ ಹೇಳುತ್ತಾರೆ.

"ಈ ಪಾರಮಾರ್ಥಿಕ ಸಾಧನೆ ಸ್ವಾನುಭವ ಪೂರ್ಣವಾದುದರಿಂದ ಅದಕ್ಕೆ ಸಾಹಿತ್ಯಿಕ ಮೌಲ್ಯವೂ ದೊರಕಿದೆ. ಹರಿದಾಸರು ಶಾಸ್ತ್ರ ವಿಷಯಗಳನ್ನು ನಿರೂಪಿಸುವಲ್ಲಿಯೂ ಅದು ಶುಷ್ಕ ಪ್ರತಿಪಾದನೆ ಎನ್ನಿಸದೆ ರಸಾನುಭವದಿಂದ ಕೂಡಿ ರಮಣೀಯವಾಗಿ ಪರಿಣಮಿಸಿದೆ, ಈ ಹಿನ್ನೆಲೆಯಲ್ಲಿ ಹರಿದಾಸರ ತಾತ್ವಿಕ ನಿಲುವನ್ನು ಸಮೀಕ್ಷಿಸಿದಾಗ, ಒಂದೆಡೆ ಅವರ ಸ್ವಧರ್ಮ ನಿಷ್ಠೆ ಕಂಡು ಬಂದರೆ, ಇನ್ನೊಂದೆಡೆ ಮಾನವ ಜೀವನದ ನೈತಿಕ ಮೌಲ್ಯವನ್ನು ಸಾರಿ ಹೇಳುವ ಹಿತೋಪದೇಶವು ಕಂಡು ಬರುತ್ತದೆ. ಈ ಎರಡೂ ಮುಖಗಳು ಒಂದೇ ಕಾಂಡದ ಎರಡು ಕವಲುಗಳಂತೆ ತೋರಿ ಬರುತ್ತದೆ". (೩೮)

ಪುರಂದರದಾಸರು ಶ್ರೀ ಮಧ್ವಾಚಾರ್ಯರ ದ್ವೈತ ತತ್ವಗಳನ್ನು ತಿಳಿಸುವ ಹಲವಾರು ರಚನೆಗಳನ್ನು ಮಾಡಿದ್ದಾರೆ. ಶ್ರೀ ಮಧ್ವಾಚಾರ್ಯರು ೧೩ನೇ ಶತಮಾನದಲ್ಲಿ ಉಡುಪಿಯ ಹತ್ತಿರ ಪಾಜಕ ಎಂಬ ಪವಿತ್ರ ಸ್ಥಳದಲ್ಲಿ ಜನ್ಮ ತಾಳಿದರು. ಇವರು ಬ್ರಹ್ಮಚಾರಿಗಳಾಗಿದ್ದಾಗಲೇ ತಮ್ಮ ೧೩ನೇ ವಯಸ್ಸಿನಲ್ಲಿ ಶ್ರೀ ಅಚ್ಯುತ ಪ್ರೇಕ್ಷ ಯತಿಗಳಿಂದ ಸನ್ಯಾಸವನ್ನು ಸ್ವೀಕರಿಸಿ ಭಾರತದ್ಯಾಂತ ಎರಡು ಸಲ ತೀರ್ಥಯಾತ್ರೆ ಮಾಡಿದರು. ಸಕಲ ವೇದ, ಶಾಸ್ತ್ರಗಳ ಆಧಾರದ ಮೇಲೆ ಮಧ್ವ ತತ್ವವನ್ನು ಸಾರಿದರು. ಶ್ರೀ ಮಧ್ವ ಮತ ಸಿದ್ಧಾಂತದ ಸಕಲ ವಿಚಾರಗಳನ್ನು ಪುರಂದರದಾಸರ ಗುರುಗಳಾದ ವ್ಯಾಸರಾಯರು ಹೀಗೆ ಕೇಂದ್ರೀಕರಿಸಿದ್ದಾರೆ.

(೧) ಶ್ರೀ ಹರಿಯೇ ಸರ್ವೋತ್ತಮನು
(೨) ಪ್ರಪಂಚವು ಸತ್ಯಭೂತವಾದುದು
(೩) ಪಾರಮಾರ್ಥಿಕವಾಗಿ ಭೇದವುಂಟು, ಅವು ಐದು ಭೇದಗಳು.
(೪) ಜೀವರೆಲ್ಲರೂ ಶ್ರೀ ಹರಿಯ ದಾಸರು (ಅನುಚರರು)
(೫) ತಾರತಮ್ಯವನ್ನು ಹೊಂದಿದವರು
(೬) ಸ್ವಾಭಾವಿಕವಾದ ಸ್ವರೂಪದ ಸುಖದ ಅನುಭವವೇ ಮೋಕ್ಷವು
(೭) ನಿರ್ಮಲವಾದ ಭಕ್ತಿಯೇ ಅಂತಹ ಮುಕ್ತಿಗೆ ಕಾರಣವು
(೮) ಪ್ರತ್ಯಕ್ಷ, ಅನುಮಾನ, ಆಗಮಗಳೇ ಮೂರು ಪ್ರಮಾಣಗಳು
(೯) ಶ್ರೀ ಹರಿಯೇ ಸಕಲವೇದಗಳಲ್ಲಿಯೂ ಪ್ರತಿಪಾದ್ಯನು
[ಶ್ರೀ ಮನ್ಮಧ್ವಮತತತ್ವ ಸುಧಾ ಪು:೨]

'ಸತ್ಯ ಜಗಕಿದು ಪಂಚಬೇಧವು' ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ' 'ಜ್ಞಾನವೊಂದೇ ಸಾಕು ಮುಕ್ತಿಗೆ' 'ಎಲೋ ಎಲೋ ಜೀವಾತ್ಮ ನಿ ಸುಲಲಿತಾತ್ಮನ ನೆನೆದು ಸುಖಿಯಾಗೋ ಮನವೇ' ಮುಂತಾದ ರಚನೆಗಳಲ್ಲಿ ಮೋಕ್ಷಕ್ಕೆ ಭಕ್ತಿಯೇ ಸಾಧನವೆಂದು ದಾಸರು ಹೇಳಿದ್ದಾರೆ. ಗುರುವಿನ ಗುಲಾಮನಾಗಿ ಗುರುಸೇವೆಯಿಂದ ಅಂತಃಕರಣ ಶುದ್ಧಿಯಾಗಿ ಜ್ಞಾನೋದಯವಾಗುವುದು. ಪರಮಾತ್ಮನಲ್ಲಿ ಮನಸ್ಸು ನಿಲ್ಲುವುದು. ಜ್ಞಾನದಿಂದ ಭಕ್ತಿ, ಭಕ್ತಿಯಿಂದ ಮುಕ್ತಿ ಹೀಗೆ ಪುರಂದರದಾಸರು ತಿಳಿಸುತ್ತಾರೆ. "ದ್ವೈತಸಿದ್ಧಾಂತವನ್ನು ಜಗತ್ತಿಗೆ ಸಾರುವಲ್ಲಿ ಇವರ ಪಾತ್ರವೂ ಮುಖ್ಯವಾಯಿತು. ದ್ವೈತ ಸಿದ್ಧಾಂತದಂತಹ ಏಕರೂಪದ ವಸ್ತುವನ್ನು ಸಹ ವಿನೂತನ ಗೊಳಿಸಿ ಅದನ್ನು ಜನಪ್ರಿಯಗೊಳಿಸಲು ದಾಸ ಸಾಹಿತ್ಯಕ್ಕೆ ಸಾಧ್ಯವಾಯಿತು". (೩೯) "ಪ್ರಮುಖವಾಗಿ ಮಧ್ವ ಮತದ ತತ್ವ ಪ್ರಚಾರಕ್ಕೆ ಬದ್ಧರಾಗಿದ್ದರೂ ಅದನ್ನು ಮೀರಿ ನಿಂತು ಸಾವಿರಾರು ಸಂಖ್ಯೆಯಲ್ಲಿ ಕೃತಿರಚನೆ ಮಾಡಿ ಹರಿಯನ್ನು ಒಲಿಸಿಕೊಂಡಂತಹ ಅಪರೋಕ್ಷಾನುಭವಿಗಳು ಪುರಂದರದಾಸರು. ಕಾವ್ಯಾಂಶದ ದೃಷ್ಟಿಯಿಂದ

ಕೃತಿಗಳ ಸಂಖ್ಯಾ ಬಾಹುಳ್ಯದ ದೃಷ್ಟಿಯಿಂದ ಉಳಿದ ಹರಿದಾಸರಾರೂ ಪುರಂದರದಾಸರ ಸಮನಾಗಿ ನಿಲ್ಲರಾರರು". (೪೦) ಪುರಂದರದಾಸರ ಒಂದೊಂದು ಕೀರ್ತನೆಯಿಂದ ಅವರಲ್ಲಿರುವ ಜ್ಞಾನ, ಭಕ್ತಿ, ಸಮಾಜದೊಡನೆ ಇರುವ ಒಲವು ಸಮಾಜ ಸುಧಾರಣೆಯ ನಿಲುವು ಎದ್ದು ತೋರುತ್ತದೆ. ಅವರ ಹಾಡುಗಳು ತತ್ವಜ್ಞಾನದ ನಿಧಿ. ಒಂದೊಂದು ಹಾಡುಗಳು ಒಂದೊಂದು ಸುಭಾಷಿತದಂತೆ. ಪುರಂದರದಾಸರ ಗೀತೆಗಳಲ್ಲಿಯ ವಿಷಯ ವ್ಯಾಪ್ತಿ ದೊಡ್ಡದಾಗಿದೆ. ಅವರ ಹಾಡುಗಳಲ್ಲಿ ಸಂಗೀತ ಒಂದು ಸುಂದರವಾದ ಆಕಾರವನ್ನು ಪಡೆಯುತ್ತದೆ. ಪಲ್ಲವಿಯಲ್ಲಿ ಅಭಿವ್ಯಕ್ತಿಯ ವಸ್ತು ಸ್ಪಷ್ಟವಾಗಿದ್ದು ಮುಂದೆ ನುಡಿಗಳಲ್ಲಿ ಅದನ್ನು ಉದಾಹರಣೆ, ದೃಷ್ಟಾಂತಗಳ ಮೂಲಕ ವಿವರಿಸಲಾಗುತ್ತದೆ.

ಯಾವುದಾದರೂ ಒಂದನ್ನು ತ್ಯಾಗ ಮಾಡಿದರೆ ಅದಕ್ಕಿಂತ ದೊಡ್ಡದನ್ನು ಆ ಭಗವಂತ ಕೊಡುತ್ತಾನೆ ಎಂಬುದು ಭಾರತೀಯರ ನಂಬಿಕೆ. ಇದ್ದ ದುಡ್ಡನ್ನೆಲ್ಲಾ ತ್ಯಾಗಮಾಡಿ ಆ ದುಡ್ಡಿನ (ಲಕ್ಷ್ಮಿ) ಪತಿ ಲಕ್ಷ್ಮಿಪತಿಯನ್ನೆ ಒಲಿಸಿಕೊಂಡವರು ಪುರಂದರದಾಸರು. ಅವರ ಕೀರ್ತನೆಗಳಲ್ಲಿ ದೇಶೀ ಅಭಿವ್ಯಕ್ತಿ, ಸಾಮಾಜಿಕ, ದೃಷ್ಟಿ ಹಾಸ್ಯ ಮನೋವೃತ್ತಿ, ಉಪದೇಶಾಮೃತಗಳು ಮುಂತಾದವು ಅವರ ಪರಿಪೂರ್ಣ ವ್ಯಕ್ತಿತ್ವದ ಭಾಗಗಳು.

ಸುಳಾದಿಗಳು:

ಹರಿದಾಸರ ಪ್ರಮುಖ ರಚನೆಗಳಲ್ಲಿ ಸುಳಾದಿಯೂ ಒಂದು. ಸುಳಾದಿಗಳನ್ನು ಮೊದಲು ರಚಿಸಿದವರು ಶ್ರೀಪಾದರಾಜರು. ವ್ಯಾಸರಾಯರೂ ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ. ಆದರೆ ಈ ಎರಡು ಪ್ರಕಾರಗಳಿಗೆ ವಿಶೇಷವಾಗಿ ಗಮನ ಹರಿಸಿದವರು ಪುರಂದರದಾಸರು.

ವಿಜಯನಗರದ ಅರಸರ ಕಾಲಕ್ಕೆ ಸಮಾಜೋದ್ಧಾರ ಕಾರ್ಯದಲ್ಲಿ ತೊಡಗಿದ ಹರಿದಾಸರು, ಸಂಸ್ಕೃತ ಭಾಷೆಯನ್ನು ತ್ಯಜಿಸಿ ತಿಳಿಗನ್ನಡವನ್ನು ಬಳಸತೊಡಗಿದರು. ದೇವರ ಪೂಜಾ ಸಂದರ್ಭದಲ್ಲಿ ಸಂಸ್ಕೃತ ಶ್ಲೋಕವನ್ನು ಹೇಳದೆ ಕನ್ನಡದಲ್ಲಿ ದೇವರ ನಾಮಗಳನ್ನು ರಚಿಸಿ ಸ್ವತ: ಶ್ರೀಪಾದರಾಜರೇ ಹಾಡಿ ನರ್ತಿಸುತ್ತಿದ್ದರಂತೆ, ಬರೀ ರಂಜನೆಗಾಗಿದ್ದ ಸಂಗೀತ ಇವರ ಕೈಯಲ್ಲಿ ದೇವರನ್ನೇ ಹೊಗಳುವ ಮಂತ್ರಗಳಾಗಿ ಪರಿವರ್ತಿತವಾದವು. ಇದೇ ಸಂದರ್ಭದಲ್ಲಿ ಜಾನಪದಲಯಗಳನ್ನು ಬಳಸಿಕೊಂಡು ಸಾಹಿತ್ಯ ರಚನೆಗೆ ತೊಡಗಿದರು. ಆರಂಭದಲ್ಲಿ ಎಲ್ಲಾ ಬಗೆಯ ಸಂಗೀತ ಕೃತಿಗಳನ್ನು ಪ್ರಬಂಧಗಳೆಂದು ಕರೆಯುತ್ತಿದ್ದರು. "ಪ್ರಬಂಧಗಳಲ್ಲಿ ಎರಡು ವಿಧ ೧. ಸೂಡ–ಕ್ರಮ ೨. ಅಲಿ–ಅಥವಾ ಸಾಲಗಸೂಡ ಕ್ರಮ" (೪೧) ಸುಳಾದಿಗಳ ಈ ರೂಪಕ್ಕೆ ಸಾಲಗಸೂಡ ಎಂಬ ಪ್ರಕಾರವೇ ಮೂಲವೆಂದು ಆರ್.ಸತ್ಯನಾರಾಯಣ ಅವರು ಅಭಿಪ್ರಾಯ ಪಡುತ್ತಾರೆ. (೪೨) "ಶ್ರೀಪಾದರಾಜರು ಲಕ್ಷಣಗಳುಳ್ಳ ಶುದ್ಧ ಸೂಡ ಕ್ರಮವನ್ನು ಸಪ್ತ ತಾಳಗಳಲ್ಲಿ ಸಾಲಗೂಡದಲ್ಲಿ ಪರಿವರ್ತಿಸಿ ಅದಕ್ಕೆ ಸೂಡಾದಿ ಅಥವಾ ಸುಳಾದಿಗಳೆಂದು ಪರಿಭಾಷೆಯನ್ನು ಕೊಟ್ಟು ಒಂದು ಕ್ರಮವನ್ನು ಏರ್ಪಡಿಸಿ ಅದಕ್ಕೆ ತಕ್ಕ ಸಾಹಿತ್ಯವನ್ನು ರಚಿಸಿದರು." (೪೩) "ಸಂಗೀತಕ್ಕೆ ಒಂದು ನಿರ್ದಿಷ್ಟವಾದ ವೇಗ ಅಥವಾ ಗತಿಯನ್ನು ಕೊಟ್ಟು ಅದರ ಮಾಧುರ್ಯವನ್ನು ಮಹತ್ವವನ್ನು ಹೆಚ್ಚಿಸಲು ಅಳವಡಿಸಿಕೊಳ್ಳದ ಅಕ್ಷರೋಚ್ಚರಣೆಯ ಕಾಲಸೂಚಕ ಕ್ರಿಯೆಗೆ ತಾಳ ಎನ್ನುವರು". (೪೪) ತಾಳಗಳಲ್ಲಿ ದೇಶೀಯ ತಾಳಗಳು, ಮಾರ್ಗ ತಾಳಗಳು ಎಂದು ಎರಡು ವಿಧ. ಸುಳಾದಿಗಳು ದೇಶೀಯ ತಾಳದ ಒಂದು ವಿಧ. "ಸುಳುಹಾದ ಹಾದಿ ಜ್ಞಾನಿಗಳಿಗೆ ಸುಲಭವಾಗಿ ಮನಸ್ಸಿಗೆ ಬೋಧೆಯಾಗುವ

ವಿಷಯವನ್ನು ಸಮಾಧಿ ಭಾಷೆಯಲ್ಲಿ ಯತಾರ್ಥವಾಗಿ ವಿವರಿಸುವುದೇ ಸುಳಾದಿ". (೪೫) ಒಂದು ಕೃತಿಯಲ್ಲಿ ಒಂದರ ಮೇಲೊಂದರಂತೆ ಏಳು ತಾಳಗಳು ೧.ಧ್ರುವ ೨. ಮಠ್ಯ ೩. ರೂಪಕ ೪. ಝಂಪಕ ೫. ತ್ರಿಪುಟ ೬.ಅಡ್ಡತಾಳ ೭ ಏಕತಾಳಗಳು ಕ್ರಮವಾಗಿ ಬಂದರೆ. ಇವುಗಳನ್ನು 'ಸುಳಾದಿ' ಎನ್ನುವರು. ಈ ಲಕ್ಷಣದಲ್ಲಿ ಮೊದಲು ಸುಳಾದಿ ರಚಿಸಿದವರೆಂದರೆ ಶ್ರೀಪಾದರಾಜರು.

"ಸಾಮಾನ್ಯವಾಗಿ ಸುಳಾದಿಗಳು ಐದು, ಏಳು, ಒಂಬತ್ತು, ಹನ್ನೊಂದು, ಹದಿಮೂರು ತಾಳಗಳಲ್ಲಿ ರಚನೆಗೊಂಡಿರುತ್ತವೆ. ಕೊನೆಗೊಂದು ಎರಡು ಪಾದದ 'ಜತೆ' ಇರುತ್ತದೆ. ಸುಳಾದಿಯ ಸಾರವೆಲ್ಲ 'ಜತೆ'ಯಲ್ಲಿಯೇ ಅಡಕವಾಗಿರುತ್ತದೆ. ಸುಳಾದಿಯ ಪಾದಗಳ ಸಂಖ್ಯೆಯಲ್ಲಿ ಪಾದದ ಉದ್ದದಲ್ಲಿ ನಿಯತತೆ ಇಲ್ಲ. ಪ್ರತಿಯೊಂದು ತಾಳದಲ್ಲೂ ಹಾಗೂ ಜತೆಯಲ್ಲೂ ರಚನೆಕಾರರ ಅಂಕಿತವಿರುತ್ತದೆ. ಅಂಕಿತದಲ್ಲೂ ಬಹುಷಃ ವಿಷ್ಣುಸಹಸ್ರ ನಾಮಾವಳಿಯ ನಾಮಗಳನ್ನು ಸೇರಿಸಲಾಗುತ್ತದೆ". (೪೬) ಡಾ.ಟಿ.ಎನ್.ನಾಗರತ್ನ ಅವರು 'ಸುಳಾದಿಯ ನಡೆ ಸರಳ ರಗಳೆಯನ್ನು ಹೋಲುತ್ತದೆ. ಕೀರ್ತನೆಗಿಂತ ಬಿಗಿಯಾದ ಬಂಧವಿಲ್ಲಿ ಕಾಣುತ್ತದೆ' ಎನ್ನುತ್ತಾರೆ. (೪೭) ಉಡುಪಿಯ ಶ್ರೀ ಮನ್ಮಧ್ವ ಸಿದ್ಧಾಂತ ಗ್ರಂಥಾಲಯವು ೧೯೨೭ ರಲ್ಲಿ ೭೩ ಪುರಂದರದಾಸರ ಸುಳಾದಿಗಳನ್ನು ಪ್ರಕಟಿಸಿತು. ಶ್ರೀ ವರದೇಂದ್ರ ಸಾಹಿತ್ಯ ಮಂಡಲ ಪ್ರಕಟಣೆ "ಶ್ರೀ ಪುರಂದರದಾಸರು ಮತ್ತು ಕರ್ನಾಟಕ ಶ್ರೀ ಹರಿದಾಸ ಪರಂಪರೆ' ಎಂಬ ಕೃತಿಯಲ್ಲಿ ೫೫ ಎಂದು ಉಲ್ಲೇಖಿಸಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಪ್ರಕಟಿಸಿದ ಪುರಂದರದಾಸರ ಸಾಹಿತ್ಯ ದರ್ಶನ ಸಂಪುಟ-೪ ರಲ್ಲಿ ೪೬ ಸುಳಾದಿಗಳಿವೆ. ಇವರೇ 'ಪ್ರಕಟಿಸಿರುವ ಸಮಗ್ರ ದಾಸ ಸಾಹಿತ್ಯ' ಸಂಪುಟ ೮ ರಲ್ಲಿ ೭೩ ಸುಳಾದಿಗಳಿವೆ. ದಾಸರು 'ಸೃಷ್ಟಿ' ಸುಳಾದಿಯಲ್ಲಿ ಬ್ರಹ್ಮ ರುದ್ರ, ಇಂದ್ರ, ಚಂದ್ರ, ಸೂರ್ಯ, ಅಗ್ನಿ ಸ್ಥಾವರ ಜಂಗಮರಿಗೆ ನಮಸ್ಕರಿಸುತ್ತಾ ಹೀಗೆ ಹೇಳಿದ್ದಾರೆ.

ಬೊಮ್ಮಾಂಡವೇ ಮಂಟಪ ಜ್ಯೋತಿಶ್ಚಕ್ರವೇ ದೀಪ
ಮಹಾಮೇರು ಸಿಂಹಾಸನ ಮಂದಾಕಿನಿ ಮಜ್ಜನ
ಮಂದರ ಪಾರಿಜಾತ ಮಾಲೆ
ಪುರಂದರ ವಿಠಲಗೆ ಅಮೃತವೇ ನೈವೇದ್ಯ —— (೪೮)

ಇಲ್ಲಿ ಶ್ರೀ ಪುರಂದರದಾಸರು ಭಗವಂತನ ಮಹಾತ್ಮೆ ಅಗಾಧವಾದದ್ದು ಎಂದು ಅನೇಕ ರೂಪಕಗಳನ್ನು ಬಳಸಿ ಕಾವ್ಯ ಸೌಂದರ್ಯವನ್ನು ಮೆರೆದಿದ್ದಾರೆ. 'ಆನಂದ' ಸುಳಾದಿಯಲ್ಲಿ ಭಗವಂತನ ಅಂಗಗಳನೆಲ್ಲಾ ವರ್ಣಿಸಿದ್ದಾರೆ. 'ಪರಿಪೂರ್ಣ' ಸುಳಾದಿಯಲ್ಲಿ ಅವನ ಪರಿಪೂರ್ಣತೆಯ ಬಗ್ಗೆ ತಿಳಿಸುತ್ತಾರೆ. 'ನರಸಿಂಹ' ಸುಳಾದಿಯಲ್ಲಿ ನರಸಿಂಹಾವತಾರದ ಬಗ್ಗೆ ತಿಳಿಸುತ್ತಾ 'ಕೃಷ್ಣ' ಸುಳಾದಿಯಲ್ಲಿ ಕೃಷ್ಣಾವತಾರವನ್ನು ವರ್ಣಿಸುತ್ತಾರೆ. ಇದುವರೆಗೂ ಯಾವ ದಾಸರಿಂದಲೂ ರಚಿತವಾಗದ ಅಪೂರ್ವವಾದ ಸುಳಾದಿ ಎಂದರೆ 'ಜೋಗುಳದ ಸುಳಾದಿ'.

"ಜೋ ಜೋ ಜೋ ಜೋ ಎನ್ನ ಸಿರಿಹರಿ ಮಾರುತಿ
ಜೋ ಜೋ ಜೋ ಎನ್ನ ಬೊಮ್ಮನ ಮರಿಯೇ
ಜೋ ಜೋ ಜೋ ಪುರಂದರ ವಿಠಲ

ಜೋ ಜೋ ಜೋ ಎನ್ನ ತಮ್ಮ ದಮ್ಮಯ್ಯ
ಜೋ ಜೋ ಜೋ ಎನ್ನ ಕಂದ ಗೋವಿಂದ. (೪೯)

ಇನ್ನೊಂದು ನವ ವಿಧ ಭಕ್ತಿ ಸುಳಾದಿಯಲ್ಲಿ ಒಂಬತ್ತು ತರಹ ಭಕ್ತಿ ಸಾಧನಗಳ ಬಗ್ಗೆ ತಿಳಿಸುತ್ತಾರೆ.

ಹರಿಶ್ರವಣ ಕೀರ್ತನೆ ಹರಿನಾಮ ಸ್ಮರಣೆ
ಹರಿಪಾದ ಸೇವನೆ ಹರಿಪೂಜಾ ವಂದನ
ಹರಿದಾಸ್ಯ ಸಖ್ಯತ್ವ ಹರಿಗಾತ್ಮಾರ್ಪಣ.
ಹರಿ ಭಕ್ತಿಯೇ ಮುಕ್ತಿಪಥತತ್ವ
ಪುರಂದರ ವಿಠಲನೇ ಪರಮಾತ್ಮ ಸಿದ್ಧ
ವರ ಮಧ್ವಮತ ಶ್ರುತಿ ಸ್ಮೃತಿಯೊಳ್ ಪ್ರಸಿದ್ಧ (೫೦)

ಇದರಲ್ಲಿ ಸುಳಾದಿಯ ಲಕ್ಷಣಗಳಿಲ್ಲವೆಂದು ಸಾ.ಕೃ.ರಾಮಚಂದ್ರರಾಯರು ಅಭಿಪ್ರಾಯ ಪಡುತ್ತಾರೆ. ಕಲಿಯುಗದಲ್ಲಿ ಅನ್ಯಾಯ ಹೆಚ್ಚಿದೆ ಆನೆಂತು ಜೀವಿಸಲಿ ಎಂದು ಕಲಿಯುಗ ಸುಳಾದಿಯಲ್ಲಿ ಭಗವಂತನನ್ನು ಪ್ರಶ್ನಿಸುತ್ತಾರೆ ಆಧ್ಯಾತ್ಮ ಜೀವನದ ಅನುಭವ ಹೆಚ್ಚಿದಂತೆಲ್ಲಾ ಅವರು ಆಡುವ ನುಡಿಗಳ ಘನಿಸಿ ಮುತ್ತಾಗಿ ಸುಳಾದಿಯ ರೂಪ ಪಡೆದುಕೊಂಡಿವೆ ಎನಿಸುತ್ತದೆ.

**ಉಗಾಭೋಗಗಳು:** "ಉಕ್+ಆಭೋಗ=ಉಗಾಭೋಗ" ಎಂದು ವಿವರಿಸಿ, ಅನುಭವಕ್ಕೆ ಬಂದ ವಿಷಯಗಳನ್ನು ಸಂಕ್ಷೇಪವಾಗಿ ಮಾತಿನರೂಪದಲ್ಲಿ ಹೇಳಿರುವುದೇ ಉಗಾಭೋಗ ಎಂದು ಕೆ.ಎಂ.ಕೃಷ್ಣರಾಯರು ಅಭಿಪ್ರಾಯಪಟ್ಟರೆ. "ಉದ್ಗ್ರಾಹ-ಆಭೋಗ" ಪ್ರಬಂಧದ (ಆದಿ ಮತ್ತು ಅಂತ್ಯದ ಭಾಗಗಳು) ಎಂಬ ಸಂಯುಕ್ತ ಪದದ ಅಪಭ್ರಂಶವೇ 'ಉಗಾಭೋಗ' ಎಂದಾಗಿರಬೇಕೆಂದು ವಿ.ವಿ.ಷಡ್‌ಗೋಪನ್ ಅವರು ವ್ಯಾಖ್ಯಾನಿಸುತ್ತಾರೆ. ಸಂಸ್ಕೃತದ 'ಉದ್ಗ್ರಾಹಾಭೋಗ'ವೇ ತದ್ಭವಗೊಂಡು 'ಉಗಾಭೋಗ'ವಾಗಿದೆ. ಇದು ಸ್ವರ ಪ್ರಧಾನವಾದ ಗೀತ. ಉದ್ಗ್ರಾಹ, ಮೇಲಾಪಕ, ಧ್ರುವ, ಅಂತರ, ಆಭೋಗ ಇವು ಐದು ಈ ರಾಗಗೀತದ ಅವಯುವಗಳಾಗಿವೆ. ಹರಿದಾಸರ ಗೇಯ ಪ್ರಕಾರಗಳಲ್ಲಿ ಸ್ವರ ಪ್ರಧಾನವಾದ ಉಗಾಭೋಗವು ಒಂದು. ಇದು ತಾಳರಹಿತ ಸಂಗೀತರಚನೆಯಾಗಿದೆ. ಇದಕ್ಕೆ 'ಅನಿಬದ್ಧಗಾಯನ'ಎಂತಲೂ ಕರೆಯುತ್ತಾರೆ ಎಂದು ಡಾ। ಬಸವರಾಜ ಸಬರದ ಅವರು ಅಭಿಪ್ರಾಯ ಪಡುತ್ತಾರೆ. (ಬಸವೇಶ್ವರ ಮತ್ತು ಪುರಂದರದಾಸ, ಡಾ। ಬಸವರಾಜ ಸಬರದ ಪುಟ ೮೮). ಉಗಾಭೋಗಗಳು ಸರಳರೂಪದಲ್ಲಿರುವ ರಾಗ ಪ್ರಧಾನವಾದ ಹಾಡುಗಳು. ಶ್ಲೋಕದ, ವಚನಗಳ ಮಾದರಿಯಲ್ಲಿ ರಚಿತವಾದ ಉಗಾಭೊಗಗಳಲ್ಲಿ ತಾತ್ವಿಕ ಚಿಂತನೆಗಳು ಮುಖ್ಯವಾಗಿರುತ್ತವೆ. ಇವು ತಾಳ ಹಾಗೂ ಪ್ರಾಸಗಳಿಂದ ಮುಕ್ತವಾಗಿ ಅರ್ಥದ ಪ್ರಾಮುಖ್ಯತೆಯನ್ನು ಬಿಂಬಿಸುವ ಸಾಹಿತ್ಯ ರೂಪಗಳು. ಪುರಂದರ ಸಾಹಿತ್ಯದರ್ಶನ ನಂ.೪ ರಲ್ಲಿ ಸಾ.ಕ್ರ ರಾಮಚಂದ್ರರಾಯರು ೧೬೧ ಉಗಾಭೋಗಗಳನ್ನು ಪ್ರಕಟಿಸಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಪ್ರೋ.ವಸಂತ ಕುಷ್ಟಗಿ ಅವರ ಸಂಪಾದಕೀಯದಲ್ಲಿ ಸಮಗ್ರದಾಸ ಸಾಹಿತ್ಯ ೨೦೦೩ರಲ್ಲಿ ಪುರಂದರದಾಸರ ೨೫೫ ಉಗಾಭೋಗಗಳನ್ನು ಪ್ರಕಟಿಸಿದ್ದಾರೆ. ಪುರಂದರದಾಸರ ಉಗಾಭೋಗಗಳು ಸಂಪ್ರದಾಯದ ಆಚರಣೆಗಳು, ಲೋಕನೀತಿ, ತಾರತಮ್ಯ, ಮಧ್ವತತ್ವ ಮುಂತಾದ ಮೌಲ್ಯಗಳನ್ನು ಸಾರುತ್ತವೆ.

ಹರಿದಾಸರ ಸಾಹಿತ್ಯದಲ್ಲಿ ತೀರ ಚಿಕ್ಕದಾದ ಚೊಕ್ಕವಾದ ಸಾರವತ್ತಾದ ಪ್ರಕಾರ ಉಗಾಭೋಗ, ಪುರಂದರದಾಸರ ಅತ್ಯಂತ ಚಿಕ್ಕದಾದ ಉಗಾಭೋಗ ಹೀಗಿದೆ.

ಮನೋವಚನಗಳಲ್ಲಿ ಕಾಯ ಕರ್ಮಗಳಲ್ಲಿ
ನೀನೆ ನೀನೆ ನೀನೆ ಪುರಂದರ ವಿಠಲ (೫೧)

ತಮ್ಮ ಕಾರ್ಯ, ಮಾತು, ಮನಸ್ಸುಗಳಲ್ಲಿ ಪುರಂದರ ವಿಠಲ ನೀನೇ ನೆಲೆಸಿರುವೆಯೆಂದು ತಿಳಿಸುತ್ತಾ ತನ್ನನ್ನು ಉದಾಸೀನ ಮಾಡದಿರಲು ಈ ರೀತಿ ಕೇಳಿಕೊಳ್ಳುತ್ತಾರೆ.

ನಿನ್ನ ದಾಸನಾಗಿ ನಿನ್ನೆಂಜಲವನುಂಡು
ನೀನುದಾಸೀನ ಮಾಡಿದರೆ, ಲೋಕರು ನಗರೆ
ನಿನ್ನ ಚರಣ ಕಮಲವನ್ನು ಕೊರಳಲಿ ಕಟ್ಟುವೆ
ಪುರಂದರವಿಠಲ. (೫೨)

ಪುರಂದರದಾಸರ ಪಾಲಿಗೆ ಸಿದ್ಧಾಂತಕ್ಕಿಂತ ಸಾಧನೆ, ಮುಖ್ಯವಾದುದು. ಇವರು ಜನಸಾಮಾನ್ಯರನ್ನು ಗಮನದಲ್ಲಿರಿಸಿಕೊಂಡು ತಮ್ಮ ಪದಗಳನ್ನು ರಚಿಸಿದರು. ಅವರ ಉಗಾಭೋಗಗಳಲ್ಲಿ, ಸರಳವಾದ ಮಾತು, ಸ್ವಭಾವೋಕ್ತಿ, ಮಧುರವಾದ ಪದಪುಂಜ ನೆನಪಿಗೆ ನೆರವಾಗುವಷ್ಟೆ ಸಾಲುಗಳು ಎದ್ದುಕಾಣುತ್ತವೆ.

<u>**ಮುಂಡಿಗೆಗಳು:-**</u>

ಮುಂಡಿಗೆಗಳು ಹರಿದಾಸ ಸಾಹಿತ್ಯದ ಪ್ರಕಾರಗಳಲ್ಲಿ ಒಂದು. ಮಿತ ಮಾತುಗಳಲ್ಲಿ ಅಮಿತ ಅರ್ಥವನ್ನು ಕೊಡುವ ಪದಗಳು. ಪ್ರತಿಯೊಂದು ಮುಂಡಿಗೆಗಳಲ್ಲಿ ಗೂಢಾರ್ಥವನ್ನು ಬಿಚ್ಚಿದರೆ ಅಪಾರವಾದ ಅರ್ಥರಾಶಿ ದೊರಕುತ್ತದೆ. ಮುಂಡಿಗೆಗಳನ್ನು ಬಿಡಿಸಲು ಆಳವಾದ ಶಾಸ್ತ್ರಾಧ್ಯಯನ, ಪುರಾಣಗಳ ಪರಿಚಯದ ಅವಶ್ಯಕತೆ ಅಗತ್ಯವಾಗಿ ಬೇಕಾಗುತ್ತದೆ. ಶಬ್ದಗಳ ಗುಹ್ಯ ಭಾಷೆಯ ಅರ್ಥವನ್ನು ಬಿಡಿಸಲು ಕಠಿಣವೆನಿಸಿದರೂ ಅರ್ಥವ್ಯಾಪ್ತಿಯು ಹೊಸ ಲೋಕವನ್ನೇ ತೆರೆದು ತೋರಿಸುತ್ತದೆ. ಮುಂಡಿಗೆಗಳಿಗೆ ಕನಕದಾಸರೇ ಪ್ರಸಿದ್ಧರು. ಪುರಂದರದಾಸರೂ ಕೂಡ ಕೆಲವು ಮುಂಡಿಗೆಗಳನ್ನು ರಚಿಸಿದ್ದಾರೆ.

ಮುಸುಕು ತೆಗೆದರೆ ಬೆನ್ನಿಲಿ ನಾಲಿಗೆ ಇದರ
ಹೆಸರು ಬಲ್ಲವರುಂಟೇ ಪೇಳಿರಿ ನರರೆ (೫೩)

ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ
ಎರಡು ತುಂಬದು ಒಂದು ತುಂಬಲೇ ಇಲ್ಲ. (೫೪)

ಏನಾದರೂ ಒಂದಾಗಲಿ ನೂರೆಂಟು ದೇವರು ಮೊರತುಂಬಕಲ್ಲೇ.(೫೫)
ಮಾಡು ಸಿಕ್ಕದಲ್ಲಾ ಮಾಡಿನ ಗೂಡು ಸಿಕ್ಕದಲ್ಲಾ
ಜೋಡು ಹೆಂಡಿರಂಜಿ ಓಡಿಹೋಗುವಾಗ ಗೋಡೆ ಬಿದ್ದು
ಬಯಲಾಯಿತಲ್ಲಾ. (೫೬)

ಮುಂತಾದವು ಮುಖ್ಯವಾದ ಮುಂಡಿಗೆಗಳು. ಮಾಡು ಎಂದರೆ ಭಕ್ತಿ, ಗೂಡು ಎಂದರೆ ಪರಮಾತ್ಮ, ಜೋಡು ಹೆಂಡಿರಂದರೆ ಅನ್ಯಥಾಜ್ಞಾನ ಮತ್ತು ಹರಿವಿಸ್ಮರಣೆ, ಗೋಡೆ ಎಂದರೆ ಸಂಸಾರ ಸ್ಥಿರವೆಂಬ ನಂಬಿಕೆ.

ಸಂಸಾರವು ಸ್ಥಿರವೆಂದು ನಂಬಿ ಭಗವಂತನ ನಾಮಸ್ಮರಣೆ ಮಾಡದೆ, ಅನ್ಯಥಾ ಜ್ಞಾನದಲ್ಲಿ ಮೈಮರೆತರೆ, ಭಕ್ತಿಯಿಲ್ಲದೆ ಪರಮಾತ್ಮನ ಕೃಪಾದೃಷ್ಟಿ ಕಾಣುವುದು ದುಸ್ತರವೆಂದು ಈ ನುಡಿಯ ತಾತ್ಪರ್ಯವಾಗಿದೆ.

ನಿಂದಾಸ್ತುತಿಗಳು:

ಭಕ್ತ ಮತ್ತು ಭಗವಂತನ ನಡುವೆ ಇರುವ ಆತ್ಮೀಯತೆಯಿಂದ ಅವನನ್ನು ನಿಂದಿಸಿದಂತೆ ಮಾಡಿ, ಭಗವಂತನ ಮಹಿಮೆಯನ್ನು ಹೊಗಳುವುದು ಈ ತರಹದ ಸ್ತುತಿಗಳ ಮಹತ್ವವಾಗಿದೆ.

ಕಂಡು ಕಂಡು ನಿ ಎನ್ನ ಕೈಯ ಬಿಡುವರೇ
ಪುಂಡರೀಕಾಕ್ಷ ಶ್ರೀ ಪುರುಷೋತ್ತಮ. (೫೭)

ನಾ ಮಾಡಿದ ಕರ್ಮ ಬಲವಂತವಾದರೆ
ನೀ ಮಾಡುವುದೇನೋ ದೇವ. (೫೮)

ನೀನ್ಯಾಕೋ ನಿನ್ನ ಹಂಗ್ಯಾಕೋ
ನಿನ್ನನಾಮದ ಬಲವೊಂದಿದ್ದರೆ ಸಾಕೋ (೫೯)

ಇದು ಎನಂಗ ಮೋಹನಾಂಗ
ಮದನ ಜನಕ ತೊರವೆಯ ನಾರಸಿಂಹ. (೬೦)

ತಂದೆ ತಾಯಿ, ಬಂಧು ಬಳಗ ಎಂದು ನಿನ್ನ ನಂಬಿದ್ದೆ ಆದರೆ ನನ್ನ ಪರಾವಲಂಬಿ ಸ್ಥಿತಿಯ ನೋಡಿ ನೀ ಎನ್ನ ಕೈ ಬಿಡಬಾರದು. ಭಕ್ತವತ್ಸಲನೆಂಬ ಬಿರುದು ಹೊತ್ತಮೇಲೆ ಭಕ್ತರನ್ನು ಕಾಯುವುದು ನಿನ್ನ ಧರ್ಮ. ಮುಕ್ತಿದಾಯಕನು, ಶಕ್ತನು ನೀನು ಎಂದು ನಿನ್ನನ್ನ ನಂಬಿದೆ ಎನ್ನುತ್ತಾರೆ ಪುರಂದರದಾಸರು. ನನ್ನ ಪೂರ್ವಜನ್ಮದ ಕರ್ಮಾನುಸಾರವಾಗಿ ನಾನು ಸುಖ ದುಖ ಅನುಭವಿಸು ವಂತಾದರೆ ನೀನು ಮಾಡುವ ಕೆಲಸ ಏನು? ಎಂದು ಭಗವಂತನನ್ನು ಪ್ರಶ್ನಿಸುತ್ತಾರೆ. ಸ್ನಾನ, ಸಂಧ್ಯಾವಂದನೆ ಧ್ಯಾನಗಳನ್ನು ಮಾಡದೆ ಶ್ವಾನನಂತೆ ಮನೆಮನೆ ತಿರುಗಿದೆ, ಅತಿಥಿಗಳಿಗೆ ಅನ್ನದಾನ ಮಾಡದೆ ಸತಿಯರ ಸಂಗಬಿಡದೆ ಮತಿಹೀನನಾದೆ, ಇನ್ನಾದರೂ ನಿನ್ನ ದಾಸರ ಸಂಗವಿತ್ತು ಮನ್ನಿಸಯ್ಯ ಎಂದು ಬೇಡಿಕೊಳ್ಳುತ್ತಾರೆ. ಇಲ್ಲಿ ಭಗವಂತನ ನಾಮಸ್ಮರಣೆಯೇ ಮುಕ್ತಿಗೆ ದಾರಿ ಎಂದು ತಿಳಿಸುತ್ತಾರೆ.

ಇದು ಎನಂಗ? ಇದು ಯಾವ ಮಾಟ? ಇದು ಸರಿಯೇ? ಎಂದು ಪ್ರಶ್ನಿಸುತ್ತಾ ತೊರವೆಯ ನಾರಸಿಂಹನ ರೂಪವನ್ನು ಹೊಗಳುತ್ತಾರೆ. ಸುರರು (ದೇವತೆಗಳು) ಸ್ತುತಿಸಿದರೂ ಬಾಯಿತೆರೆಯದೆ ಸುಮ್ಮನೆ ಕುಳಿತ ನೀನು ಈಗೇಕೆ ಹೀಗೆ ಬಾಯ ತೆಗೆಯುವುದು. ವರನೀಲ ಮುತ್ತು ಮಾಣಿಕ್ಯದ ಹಾರಗಳಿದ್ದರೂ ಕೊರಳಲ್ಲಿ ಕರುಳ ಮಾಲೆಯನ್ನು ಹಾಕಿಕೊಳ್ಳುವುದೇಕೆ? ಎಂದು ಶ್ರೀದೇವಿ ಇದ್ದ ತೊಡೆಯ ಮೇಲೆ ಹಿರಣ್ಯಕಶ್ಯಪನೆಂಬ ದಾನವನನ್ನು ಇಟ್ಟುಕೊಂಡಿರುವುದು ಸರಿಯೇ ಎಂದು ಮುಂತಾದ ರೀತಿಯಲ್ಲಿ ಅತ್ಯಂತ ಕಾವ್ಯ ಮಯವಾಗಿ ನರಸಿಂಹನ ಅಂಗವನ್ನು ವರ್ಣಿಸುತ್ತಾರೆ.

**ವೃತ್ತನಾಮ:**

ಹರಿದಾಸ ಸಾಹಿತ್ಯ ಪ್ರಕಾರಗಳಲ್ಲಿ ವೃತ್ತನಾಮವೂ ಒಂದು. ಮೊದಲು ಪಲ್ಲವಿ, ಅನುಪಲ್ಲವಿಗಳೊಡನೆ ನಾಲ್ಕು ಸಾಲಿನ ಒಂದು ವೃತ್ತವಿದ್ದು ಇದಕ್ಕೆ ಶ್ಲೋಕವೆಂದು ಹೆಸರಿಸಲಾಗುತ್ತದೆ. ಒಂದು ಪದ್ಯದ ನಂತರ ನಾಲ್ಕು ಸಾಲುಗಳು ಬರುತ್ತಿದ್ದು ಇದು ಏಳು ಅಥವಾ ಒಂಬತ್ತು ನುಡಿಗಳವರೆಗೆ ಪುನರಾವರ್ತನೆಯಾಗುತ್ತದೆ. ಒಂದು ವೃತ್ತದ ನಂತರ ಬಂದ ಪದ ಹೀಗೆ ಏಳು ವೃತ್ತಗಳಿದ್ದರೆ ಅವುಗಳನ್ನು ಅನುಸರಿಸಿ ಏಳು ಪದಗಳು ಬರುತ್ತವೆ. (೬೧) ಈ ವೃತ್ತನಾಮಗಳ ವಸ್ತುಪ್ರಾರ್ಥನೆ, ಪಾರಮಾರ್ಥಿಕ ವಿರಹ, ಮಧುರ ಸಂವಾದವಾಗಿರುವುದನ್ನು ಕಾಣುತ್ತೇವೆ. ಪುರಂದರದಾಸರು ಗೋಪಿಯರ ವಿರಹವನ್ನು ಕುರಿತು ಒಂದು ವೃತ್ತನಾಮವನ್ನು ರಚಿಸಿದ್ದಾರೆ.

ಏಕೆ ವೃಂದಾನವು ಸಾಕು ಗೋಕುಲವಾಸ!
ಏಕೆ ಬಂದೆಯಾ ಉದ್ಧವಾ? ಪ।

ಸಾಕು ಸ್ನೇಹದ ಮಾತನೇ ಕರ್ಮಹೀನನು ತಾನು
ಆ ಕುಬುಜೆಯನು ಕೂಡಿದ–ಉದ್ಧವಾ ಅ।

ಬಿಲ್ಲು ಬಿಳಿಯಯ್ಯನ ಭೇಟಿ ನಗೆನುಡಿ ನೋಟ
ಇಲ್ಲದಂತಾಯಿತಲ್ಲ
ಎಲ್ಲರಿಂದಗಲಿಸಿದ ಕ್ರೂರ ಅಕ್ರೂರನವ
ವಲ್ಲಭನ ಒಯ್ದನಲ್ಲ.
ಮಲ್ಲರನು ಮರ್ಧಿಸುತ ಮಾವ ಕಂಸನ ಕೊಂದ
ಫುಲ್ಲನಾಭನ ತಂದು ತೋರೈ ಉದ್ಧವಾ. ೧।

ಅನುದಿನೊಳಾದಿರಿಸಿ ಅಧರಾಮೃತವನ್ನಿತ್ತು
ಇನಿದಾದ ಮಾತುಗಳಲ್ಲಿ
ಮನದ ಮರ್ಮದ ತಿಳಿದ ಮನಸಿಜಪಿತನ ಸುಖವು
ಮನಸಿಜನ ಕೇಳಿಯಲ್ಲಿ
ಕನಸಿನಲಿ ಕಂಡ ತೆರನಾಯಿತಾತನಕಾಂಬು
ವನಕ ಬದುಕುವ ಭರವಸೆ ಹೇಳು ಉದ್ಧವಾ. ೨।

ಕರುಣ ನಿಧಿಯೆಂಬುವರು ಕಪಟನಾಟಕದರಸು
ಸರಸವಿರಸವ ಮಾಡಿದ
ಸ್ಮರಿಸಿದವರೆನು ಕಾಯ್ವ ಬಿರುದುಳ್ಳ ಸಿರಿರಮಣ
ಮರೆದು ಮಧುರೆ ಸೇರಿದ
ಪರಮಭಕ್ತರ ಪ್ರಿಯ ಪುರಂದರ ವಿಠಲನ
ನೆರೆಗೂಡಿಸೈ ಕೋವಿದ ಉದ್ಧವಾ. ೩। (೬೨)

ಭಾಗವತ ಪುರಾಣದಲ್ಲಿ ಇರುವ ಕೃಷ್ಣನ ಕಥೆಯಲ್ಲಿ ಬರುವ ಪ್ರಸಂಗವಿದು. ಕೃಷ್ಣನ ಆದೇಶದಂತೆ ನಂದ, ಯಶೋದೆಯರಿಗೂ ಗೋಪಿಕಾಸ್ತ್ರೀಯರಿಗೂ ಸಮಾಧಾನ ಹೇಳಲು ಉದ್ಧವನು ಗೋಕುಲಕ್ಕೆ ಬರುವನು. ಆಗ ಕೃಷ್ಣನ ವಿರಹ ತಾಳಲಾರದೆ ಪರಿತಪಿಸುತ್ತಿರುವ ಗೋಪಿಕಾಸ್ತ್ರೀಯರಿಂದ ಬಂದ ಮಾತುಗಳಿವು. ನಾಲ್ಕು ಸಾಲುಗಳ

ನುಡಿಗಳು ಪುರಂದರದಾಸರ ಕೀರ್ತನೆಗಳಲ್ಲಿ ಸಾಮಾನ್ಯ ಆದರೆ ಈ ವೃತ್ತನಾಮದಲ್ಲಿ ಪ್ರತಿಯೊಂದು ನುಡಿಯ ನಂತರ ಎರಡು ಸಾಲುಗಳು ಬರುತ್ತವೆ.

ಮೂರು ನುಡಿಗಳನ್ನೊಳಗೊಂಡ ಈ ವೃತ್ತನಾಮದಲ್ಲಿ ಉದ್ಧವಾ ಎನ್ನುವ ಪದವು ಪುನರಾವರ್ತನೆಯಾಗುತ್ತಿರುತ್ತದೆ. ಕೃಷ್ಣನಿಲ್ಲದ ಬಾಳಿನ ಗೋಳನ್ನು ಗೋಪಿಕಾಸ್ತ್ರೀಯರ ಮೂಲಕ ಪುರಂದರದಾಸರು ತುಂಬ ಸೊಗಸಾಗಿ ಚಿತ್ರಿಸಿದ್ದಾರೆ.

ಪುರಂದರದಾಸರು ಮಹಾನುಭಾವರು, ಅಖಂಡ ಭಾರತದಲ್ಲಿ ಸಂಚರಿಸುತ್ತಾ ಸಾಹಿತ್ಯ ಸೃಷ್ಟಿಯನ್ನು ಮಾಡಿದವರು, ತಮ್ಮ ಅನುಭವಗಳನ್ನು ಕೀರ್ತನೆಗಳ ಮೂಲಕ ಅಭಿವ್ಯಕ್ತಿಪಡಿಸಿದವರು. ಜನ ಸಾಮಾನ್ಯರ ಭಾಷೆಯು ಅವರ ಬಾಯಿಗೆ ಬಂದಾಗ ಕಾವ್ಯಮಯವಾಗಿ ಮೂಡಿತು.

'ಬೈಯಿರೋ ಬೈಯಿರೋ
ಮನಮುಟ್ಟಿ ಬೈಯಿರೋ'
"ನೀ ತಂದೆ ನಾ ಬಂದೆ ನೀ ಎನ್ನತಂದೆ"
"ಗುಡು ಗುಡಿಯನು ಸೇದಿ ನೋಡು'
'ಹೊಡಿ ನಗಾರಿ ಮೇಲೆ ಕೈಯ್ಯ'

ಮುಂತಾದ ಹಾಡುಗಳನ್ನು ಓದಿದಾಗ ದಾಸರು, ಅತಿ ಸುಲಭ ಶಬ್ಧಗಳಲ್ಲಿ ತಮ್ಮ ಭಾವನೆಗಳನ್ನು ಅಭಿವ್ಯಕ್ತಿಗೊಳಿಸದುದು ಕಂಡು ಬರುವುದು. ದಿನ ನಿತ್ಯದಲ್ಲಿ ನಮ್ಮ ಕಣ್ಣಿಗೆ ಕಾಣುತ್ತಿರುವ ದೃಶ್ಯಗಳನ್ನು ಅವರು ತಮ್ಮ ಕಾವ್ಯದಲ್ಲಿ ಬಳಸಿಕೊಂಡಿದ್ದಾರೆ.

"ಕಾಗೆ ಕೂಗಿತಲ್ಲ ಈಗ ಒಂದು ಕಾಗಿ ಕೂಗಿತಲ್ಲ'
'ಪಾಪೋಸು ಹೋದವಲ್ಲ !ಸ್ವಾಮಿ! ಪಾಪೋಸು ಹೋದವಲ್ಲ"

ಎಂದು ಹಾಡುತ್ತಾ ತಮ್ಮ ಚಮತ್ಕಾರವನ್ನು ತೋರುತ್ತಾರೆ. ವಿಧವಾಸ್ತ್ರೀಯರ ಸಾಮಾಜಿಕ ಪರಿಸ್ಥಿತಿಗೆ ಮರುಗಿದ ಅವರು

"ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ"

ಎಂದಿದ್ದಾರೆ. ಮೂಢ ನಂಬಿಕೆಯಿಂದ ಮಾಡುವ ಭಕ್ತಿ ಹೀನರ ಶ್ರಾದ್ಧವನ್ನು ಟೀಕಿಸುತ್ತಾರೆ.

'ಯಾವ ಕರ್ಮವೋ! ಇದು ಯಾವ ಪುಣ್ಯವೋ?
ಸತ್ತವನು ಎತ್ತಹೋದ? ಸತ್ತು ತನ್ನ ಜನ್ಮಕ್ಹೋದ
ಸತ್ತವನು ಉಂಬುವನೆಂದು ನಿತ್ಯ ಪಿಂಡ ಇಕ್ಕಿದರೆ '

ಎಂದು ಹೇಳುತ್ತಾ ಮನಸ್ಸಿನಲ್ಲಿ ಅರ್ಥ ತಿಳಿಯದೇ ಮಾಡುವ ಕರ್ಮಗಳು ವ್ಯರ್ಥವೆಂದು ಅಭಿಪ್ರಾಯಪಡುತ್ತಾರೆ.

"ಹೊಲೆಯ ಹೊರಗಿಹನೆ ಊರೊಳಗಿಲ್ಲವೆ?"
"ಆವ ಕುಲವಾದರೇನು ಆವನಾದರೇನು? ಆತ್ಮ ಭಾವವಂತ ಮೇಲೆ?"
"ಜಂಗಮರು ನಾವು! ಜಗದೊಳು ಜಂಗಮರು".

ಮುಂತಾದ ಹಾಡುಗಳಲ್ಲಿ ಅವರು ಪರಮತ ಪ್ರೇಮವನ್ನು ವ್ಯಕ್ತಪಡಿಸುತ್ತಾರೆ. ಅವರು ಕರ್ನಾಟಕ ಸಂಗೀತಕ್ಕೆ ಗಟ್ಟಿ ಮುಟ್ಟಾದ ತಳಹದಿಯನ್ನು ಹಾಕಿದವರು. ನಂತರ, ಎರಡು ಶತಮಾನಗಳನಂತರ ಜನಿಸಿದ ತ್ಯಾಗರಾಜರು ಕೂಡ ಕರ್ನಾಟಕ ಸಂಗೀತಕ್ಕೆ ಮಹತ್ತರವಾದ ಕೊಡುಗೆಯನ್ನು ನೀಡಿದರು. ಪುರಂದರದಾಸರ ಸಾಹಿತ್ಯದಲ್ಲಿ ಸಂಗೀತ ಪ್ರೇಮವು ಎದ್ದು ಕಾಣುತ್ತದೆ.

"ಕೇಳನೋ ಹರಿ ತಾಳನೋ
ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ"

ಎಂದ ಪುರಂದರದಾಸರಿಗೆ ಕಾವ್ಯ ಸ್ಫೂರ್ತಿಯನ್ನು ಕೊಟ್ಟಿದ್ದು ಅವರ ಭಗವದ್ಭಕ್ತಿ ಸಂಗೀತವನ್ನು ಯೋಗವೆಂದು ಸಾಧಿಸಿದ ಪುರಂದರದಾಸರು ಉಪದೇಶಪರ ಭಾವಗೀತೆಯ ರೂಪದಲ್ಲಿ ಕೀರ್ತನೆಗಳನ್ನು ರಚಿಸಿದರು. ಅವರ ಕೀರ್ತನೆಗಳನ್ನು ಒಮ್ಮೆ ಓದಿದರೆ ಅವುಗಳಲ್ಲಿ ಎದ್ದು ಕಾಣುವ ವಿಷಯವೆನೆಂದರೆ ವೈವಿಧ್ಯತೆ ಮತ್ತು ವಿಪುಲತೆ, ತಮ್ಮ ಕೀರ್ತನೆಗಳಲ್ಲಿ ಜೀವನದರ್ಶನವನ್ನು ಸಮಗ್ರವಾಗಿ ನಿರೂಪಿಸಿದ ಅವರನ್ನು ಶ್ರೇಷ್ಠ ಕವಿ ಎನ್ನಬಹುದು.

## -: ಕೊನೆ ಟಿಪ್ಪಣಿಗಳು :-

೧. ಮಧ್ವಾಚಾರ್ಯರು ಪ್ರತಿಪಾದಿಸಿದ ತತ್ವಕ್ಕೆ 'ತತ್ವವಾದವೆನ್ನುತ್ತಾರೆ' ಈ ತತ್ವ ಲೋಕದಲ್ಲಿ 'ದ್ವೈತ ತತ್ವ' ಎಂದೇ ಪ್ರಸಿದ್ಧಿಯಾಗಿದೆ.

೨. ಪ್ರಸಾದಯೋಗ, ವಿ.ಎ.ದಿವಾಣಜಿ ಪು.೨೧-೨೨

೩. ಶ್ರೀ ಪುರಂದರದಾಸರು, ಲೇ ಪಾಂಡುರಂಗರಾವ್ ದೇಸಾಯಿ ಪು.೪೬

೪. ಶ್ರೀ ವ್ಯಾಸರಾಯರು, ಲೇ. ಡಾ.ಕೆ. ಗೋಕುಲನಾಥ ಪು.೨೦

೫. ಪುರಂದರ ಸಾಹಿತ್ಯ ದರ್ಶನ: ಸಂ.೧ ಲೇ.ಪ್ರೋ.ಸಾ.ಕೃ ರಾಮಚಂದ್ರರಾವ್ ಪುಟ.೬

೬ ಸಮಗ್ರ ದಾಸಸಾಹಿತ್ಯ: ಶ್ರೀ ಪ್ರಸನ್ನ ವೆಂಕಟದಾಸರ ಕೀರ್ತನೆಗಳು ಪುಟ.೨೦೬

೭ ಸಮಗ್ರ ದಾಸ ಸಾಹಿತ್ಯ: ಶ್ರೀ ವಿಜಯದಾಸರ ಕೀರ್ತನೆಗಳು ಹಾಗೂ ಉಗಾಭೋಗಗಳು ಪುಟ.೨೩ ಮತ್ತು ೩೯

೮. ಸಮಗ್ರ ದಾಸ ಸಾಹಿತ್ಯ: ಶ್ರೀ ವಿಜಯದಾಸರ ಕೀರ್ತನೆಗಳು ಹಾಗೂ ಉಗಾಭೋಗಗಳು ಪುಟ.೨೭-೪೬

೯. ಶ್ರೀಮದ್ಭಾಗವತ ಮತ್ತು ಶ್ರೀ ಪುರಂದದಾಸರು ಒಂದು ತೌಲನಿಕ ಅಧ್ಯಯನ ಡಾ: ವಾಸುದೇವ ಅಗ್ನಿಹೋತ್ರಿ ಪು.೩೦

೧೦. ಸಮಗ್ರ ದಾಸ ಸಾಹಿತ್ಯ: ಶ್ರೀ ಜಗನ್ನಾಥದಾಸರ ಕೀರ್ತನೆಗಳು ಪು.೧೮೨

೧೧. ಪುರಂದರ ಸಾಹಿತ್ಯ ದರ್ಶನ ಸಂ.೧ ಪ್ರೋ.ಸಾ.ಕೃರಾಮಚಂದ್ರರಾವ್ ಪು.೯೧

೧೨. ಪುರಂದರ ಸಾಹಿತ್ಯ ದರ್ಶನ ಸಂ.೧ ಪ್ರೋ.ಸಾ.ಕೃರಾಮಚಂದ್ರರಾವ್ ಪು.೧೭೧

೧೩. ಪುರಂದರ ಸಾಹಿತ್ಯ ದರ್ಶನ ಸಂ.೪ ಸಾ.ಕೃರಾಮಚಂದ್ರರಾಯರು ಪು.೨೪೨

೧೪. ಪುರಂದರ ಸಾಹಿತ್ಯ ದರ್ಶನ ಸಂ.೧ ಸಾ.ಕೃರಾಮಚಂದ್ರರಾಯರು ಸಂ.೧, ಪು.೧೦೭

೧೫. ಪುರಂದರ ಸಾಹಿತ್ಯ ದರ್ಶನ ಸಂ.೧ ಸಾ.ಕೃರಾಮಚಂದ್ರರಾಯರು ಸಂ.೧, ಪು.೧೨೧

೧೬ ಪುರಂದರ ಸಾಹಿತ್ಯ ದರ್ಶನ ಸಾ.ಕೃರಾಮಚಂದ್ರರಾಯರು ಸಂ.೧, ಪು.೧೪೯

೧೭ ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃರಾಮಚಂದ್ರರಾಯರು ಪು.೧೪೫

೧೮. ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃರಾಮಚಂದ್ರರಾಯರು ಪು.೧೮೭

೧೯. ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃರಾಮಚಂದ್ರರಾಯರು ಪು. ೧೮೦

೨೦. ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃರಾಮಚಂದ್ರರಾವ್ ಪು.೧೯೬

೨೧. ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃರಾಮಚಂದ್ರರಾವ್ ಪು.೬

೨೨. ಪುರಂದರ ಸಾಹಿತ್ಯ ದರ್ಶನ ಸಂ.೧ ಸಾ.ಕೃರಾಮಚಂದ್ರರಾವ್ ಪುಟ.೩೨

೨೩. ಶ್ರೀ ವ್ಯಾಸರಾಯರು; ಡಾ.ಕೆ. ಗೋಕುಲನಾಥ; ಪು.೫

೨೪. ಕರ್ನಾಟಕದ ಹರಿದಾಸರು; ಡಾ.ಎಚ್.ಕೆ. ವೇದವ್ಯಾಸಾಚಾರ್ಯ ಪು.೧೯೬

೨೫. ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃ.ರಾಮಚಂದ್ರರಾವ್ ಪು.೬

೨೬. ಪುರಂದರ ಸಾಹಿತ್ಯ ದರ್ಶನ ಲೇ.ಸಾ.ಕೃ.ರಾಮಚಂದ್ರರಾವ್ ಸಂ.೧, ಕೀ.ಸಂ.೧೨.

೨೭. ವಾದಿರಾಜರ ಶ್ರೀ ಕೃಷ್ಣ ಬಾಲಲೀಲೆ ಪ್ರೋ.ಎ.ವಿ.ನಾವಡ ಪು.೧೧

೨೮. ಕನಕದಾಸರು ಅವರ ಸಾಹಿತ್ಯ ಸಮೀಕ್ಷೆ ಸಂ.ಕೆ.ಅಪ್ಪಣ್ಣಾಚಾರ್ಯ ಪು.೯

೨೯. ಪುರಂದರ ಸಾಹಿತ್ಯ ದರ್ಶನ ಸಂ.೧ ಲೇ.ಸಾ.ಕೃ.ರಾಮಚಂದ್ರರಾವ್ಕೀ.ಸಂ.೧೫

೩೦. ಹರಿದಾಸಸಾಹಿತ್ಯ ಶ್ರೀಮದ್ಭಾಗವತ (ಋಣ ಮತ್ತು ವೃದ್ಧಿ) ಮಾನಕರಿ ಶ್ರೀನಿವಾಸಾಚಾರ್ಯ ಪು.೧೪೧

೩೧. ಕರ್ನಾಟಕದ ಹರಿದಾಸರು ಹೆಚ್.ಕೆ.ವೇದವ್ಯಾಸಾಚಾರ್ಯ ಪು.೨೯

೩೨. ಪುರಂದರ ಸಾಹಿತ್ಯ ದರ್ಶನ ಸಂ.೧ ಕೀ.ಸ.೨೪

೩೩. ಪುರಂದರ ಸಾಹಿತ್ಯ ದರ್ಶನ ಸಂ.೧ ಪು.೪೨

೩೪. ಬಸವೇಶ್ವರ ಮತ್ತು ಪುರಂದರದಾಸ ಡಾ.ಬಸವರಾಜ ಸಬರದ ಪು–೨೮.

೩೫. ತಂಬೂರಿ ಮೀಟಿದವ ಡಾ.ಎಚ್.ಎನ್.ಮುರುಳಿಧರ ಪು.೨೩

೩೬. ಶ್ರೀ ಪುರಂದರದಾಸರು ಲೇ.ನರಸಿಂಗರಾವ್ ಮಾನ್ವಿ ಸಂ.ಶ್ರೀ ಬುರ್ಲಿ ಬಿಂದು ಮಾಧವ.ಪು.೧೨೬

೩೭. ಪುರಂದರದಾಸರು ಮತ್ತು ಶ್ರೀಮದ್ಭಾಗವತ: ಡಾ.ವಾಸುದೇವ ಅಗ್ನಿ ಹೋತ್ರಿ ಪು.೪೦

೩೮. ಹರಿದಾಸರ ತಾತ್ವಿಕ ನಿಲುವು: (ಹರಿದಾಸ ವಾಙ್ಮಯ ಪ್ರಬಂಧ ಸಂಕಲನ) ಲೇ.ಜೀ.ವರದರಾಜರಾವ್ ಪು.೭

೩೯. ದಾಸ ಸಾಹಿತ್ಯ ಒಂದು ಸೈದ್ಧಾಂತಿಕ ಅಧ್ಯಯನ: ಡಾ.ಆರ್.ಜಿ.ಗುಡಿ: ಪು.೩೧

೪೦. ಪುರಂದರದಾಸರ ಕೃತಿಗಳ ಸಾಹಿತ್ಯಿಕ ಮೌಲ್ಯ [ಹರಿದಾಸ ವಾಙ್ಮಯ ಪ್ರಬಂದ ಸಂಕಲನ] ಲೇ.ಟಿ.ಎನ್.ನಾಗರತ್ನ ಪು.೭೫

೪೧. ಕರ್ನಾಟಕ ಸಂಗೀತವೂ ದಾಸ ಕೂಟವು ಲೇ ಹುಲಿಗೂರು ಕೃಷ್ಣಾಚಾರ್ಯ ಪು.೯

೪೨. ಪುರಂದರ ಸಾಹಿತ್ಯ: ಧಾರವಾಡ ೧೯೭೫ ಆರ್.ಸತ್ಯನಾರಾಯಣ:

೪೩. ಕರ್ನಾಟಕ ಸಂಗೀತವು ದಾಸ ಕೂಟವು: ಲೇ.ಹುಲಗೂರು ಕ್ರಷ್ಣಾಚಾರ್ಯ ಪು.೯

೪೪. ಸಂಗೀತ ಶಾಸ್ತ್ರ ಜ್ಞಾನಸಾರ ಲೇ.ಬಿ.ಡಿ.ಲಕ್ಷಣ ಮತ್ತು ಎಂ.ಎ.ನರಸಿಂಹಯ್ಯ ಪು.೫೨

೪೫. 'ಜಗನ್ನಾಥದಾಸರು' ಕಂ.ಎಂ.ಕೃಷ್ಣರಾಯರು ಪು.೩೪೫

೪೬. ಸುಳಾದಿಗಳು ಒಂದು ಅಧ್ಯಯನ: ಶಿಲಾದಾಸ್: ಪು.೫೧

೪೭. ಸಾಹಿತ್ಯ ರೂಪಗಳು: ಟಿ.ಎನ್.ನಾಗರತ್ನ ಪು.೩೯೧ [ಕನ್ನಡ ಸಾಹಿತ್ಯ ಚರಿತ್ರೆ ಸಂ.೫]

೪೮. ಪುರಂದರ ಸಾಹಿತ್ಯ ದರ್ಶನ ಸಂ.೪ ಪು.೧೮೧

೪೯. ಪುರಂದರ ಸಾಹಿತ್ಯ ದರ್ಶನ ಸಂ.೪ ಪು.೮೯

೫೦. ಪುರಂದರ ಸಾಹಿತ್ಯ ದರ್ಶನ ಸಂ.೪ ಪು.೨೪೮

೫೧. ಪುರಂದರ ಸಾಹಿತ್ಯ ದರ್ಶನ ಸಂ.೪ ಉ.೫೧

೫೨. ಪುರಂದರ ಸಾಹಿತ್ಯ ದರ್ಶನ ಸಂ.೪ ಉ.೧೦೨

೫೩. ಪುರಂದರ ಸಾಹಿತ್ಯ ದರ್ಶನ ಸಂ.೨ ಪು.೩೪೫

೫೪. ಪುರಂದರ ಸಾಹಿತ್ಯ ದರ್ಶನ ಸಂ.೨ ಪು.೩೪೭

೫೫. ಪುರಂದರ ಸಾಹಿತ್ಯ ದರ್ಶನ ಸಂ.೩ ಪು.೩೪೪

೫೬. ಪುರಂದರ ಸಾಹಿತ್ಯ ದರ್ಶನ ಸಂ.೪ ಪು.೩೪೯

೫೭. ಪುರಂದರ ಸಾಹಿತ್ಯ ದರ್ಶನ ಸಂ.೩ ಪು.೨೫೩

೫೮. ಪುರಂದರ ಸಾಹಿತ್ಯ ದರ್ಶನ ಸಂ.೩ ಪು.೨೮೫

೫೯. ಪುರಂದರ ಸಾಹಿತ್ಯ ದರ್ಶನ ಸಂ.೩ ಪು.೫೫

೬೦. ಪುರಂದರ ಸಾಹಿತ್ಯ ದರ್ಶನ ಸಂ.೩ ಪು.೩೪೩

೬೧. ಆಧುನಿಕ ದಾಸ ಸಾಹಿತ್ಯ ಲೇ: ಜಯಲಕ್ಷ್ಮಿ ಮಂಗಳಮೂರ್ತಿ ಪು.೫೨೫

೬೨. ಪುರಂದರದಾಸರು ಮತ್ತು ಶ್ರೀಮದ್ಭಾಗವತ ಒಂದು ತೌಲನಿಕ ಅಧ್ಯಯನ ಡಾ: ವಾಸುದೇವ ಅಗ್ನಿಹೋತ್ರಿ: ಪು.೨೪೮–೨೪೯.

## ಅಧ್ಯಾಯ-೪
## ಪ್ರಾಣಿ ಪ್ರತಿಮೆಗಳು

ಪುರಂದರದಾಸರು ವ್ಯಕ್ತಿಯಾಗಿ ಬದುಕಿದವರಂತೆ ಕಂಡರೂ, ಅವರು ತಮ್ಮ ಸಾಹಿತ್ಯ ಸತ್ವದಿಂದ ವಾಸ್ತವವಾಗಿ ಇಂದು ಮುಂದಿನದೆಲ್ಲವನ್ನು ಒಳಗೊಂಡ ಕಾಲಾತೀತ ವರ್ತಮಾನದ ನೆಲೆಗೆ ನಿಲ್ಲುತ್ತಾರೆ. ಅವರನ್ನು ದರ್ಶನ ಕವಿಗಳೆಂದರೂ ತಪ್ಪಿಲ್ಲ ಏಕೆಂದರೆ ಅವರು ಹಿಂದಿನ ಪುರಾಣ ಕಥೆಗಳ ಮೂಲಕವೂ ಸಮಾಜದಲ್ಲಿ ಕಾಣಿಸುವ ಪ್ರಾಣಿ, ಪಕ್ಷಿಗಳ ಮೂಲಕವೂ ತಮ್ಮ ಕೃತಿಗಳಲ್ಲಿ ಪ್ರತಿಮಾಕರಣವನ್ನು ಮಾಡಿ ಭೂತ, ಭವಿಷ್ಯತ್ತಿನಲ್ಲಿ ಮಾನವನಿಗಿರಬೇಕಾದ ಸಾಮಾಜಿಕಪ್ರಜ್ಞೆಯನ್ನು ಬಡಿದೆಬ್ಬಿಸಿ ಸಂಭವನೀಯ ಸತ್ಯಗಳನ್ನು ಅಭಿವ್ಯಕ್ತಿಸಿದ್ದಾರೆ. ಪ್ರಾಣಿ ಪ್ರತಿಮೆಗಳು ಮನುಷ್ಯನಲ್ಲಿ ಕಂಡುಬರುವ ಪ್ರಾಣಿತನಗಳು ಅಜ್ಞಾನ, ಅಸಹಾಯಕತೆ, ಅರಿವು; ಹೀನತೆಗ ಳೊಂದಿಗೆ, ಅಹಂಕಾರ ಮತ್ತು ಚಂಚಲತೆಗಳನ್ನು ಬಿಂಬಿಸುತ್ತವೆ. ಇಲ್ಲಿ ಮನುಷ್ಯರ ವರ್ತನೆಗಳು ಹಾಗೂ ಪ್ರಾಪಂಚಿಕ ಸಂಸಾರದ ಮಿಥ್ಯಾಕರ್ಷಣೆಯನ್ನು ಪ್ರಾಣಿರೂಪಕಗಳಲ್ಲಿ ಸಂಕೇತಗೊಳಿಸಲಾಗಿದೆ. ಆನೆ ಬೃಹತ್ತತೆಗೆ, ಅಹಂಕಾರಕ್ಕೆ ಸಂಕೇತವಾದರೆ, ಕತ್ತೆ ಅಜ್ಞಾನಕ್ಕೆ, ಕಪಿ ಚಂಚಲತೆಗೆ, ಎತ್ತು ಗುರಿಯಿಲ್ಲದದುಡಿತಕ್ಕೆ, ಶ್ವಾನವು ಕೀಳುಸ್ವಭಾವಕ್ಕೆ ಸಂಕೇತವಾಗುತ್ತವೆ. ಕುರುಡುನಾಯಿ ಹಿಂದು ಮುಂದು ತಿಳಿಯದೆ ಸಿಕ್ಕಲ್ಲಿ ನುಗ್ಗುವ ಅಜ್ಞಾನ ಮನಸ್ಸನ್ನು ಪ್ರತಿನಿಧಿಸುತ್ತದೆ.

**ಅರಗಿಣಿ:** ಹರಿನಾಮದರಗಿಣಿಯು ಹಾರುತಿದೆ ಜಗದಿ
ಪರಮ ಭಾಗವತರು ಬಲೆಯ ಬೀಸುವರು ಪ

ಕೋಪವೆಂಬ ಮಾರ್ಜಾಲ ಕಂಡರೆ ನುಂಗುವುದು
ತಾಪವೆಂಬ ಹುಲಿಯು ಕೊಂಡೊಯ್ಯುವುದು
ಕಾಪಾಡಲದನೊಯ್ದು ಹೃದಯದೊಳಗಿಂಬಿಟ್ಟು
ಆಪತ್ತಿಗೊದಗುವುದು ಆ ಮುದ್ದು ಅರಗಿಣಿಯು

ಇಲ್ಲಿ ಹರಿನಾಮವನ್ನು ಅರಗಿಣಿಗೆ ಹೋಲಿಸಲಾಗಿದೆ. ಅರಗಿಣಿ ಎಂದರೆ ಗಿಣಿಗಳಲ್ಲಿ ಶ್ರೇಷ್ಠವಾದುದು, ಉತ್ತಮವಾದುದು. 'ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವವು' ಎಂದು ದಾಸರೇ ಹೇಳುವಂತೆ ಹರಿಯ ನಾಮವು ಉತ್ತಮವು, ಸಿದ್ಧಿಪ್ರದವು, ಸಾಧನೆಗೆ ಸಾಧನವು ನಿಜ. ಇಲ್ಲಿ ಭಾಗವತರೆಂದರೆ ಯಾರು?ಯಾರು ಎಲ್ಲ ಜೀವಿಗಳಲ್ಲಿ ಪಂಚಭೂತಗಳಲ್ಲಿ ಭಗವಂತನ ಇರುವಿಕೆಯನ್ನು ಕಾಣುವರೋ ಅವರೇ ಭಾಗವತರು. ಭಾಗವತ ಎಂದರೆ ಭಗವದ್ಭಕ್ತ; ಪರಮಾತ್ಮನ ಸಂಬಂಧವಾದ [ಸಂಸ್ಕೃತ-ಕನ್ನಡ ನಿಘಂಟು, ಜಿ.ಎನ್. ಚಕ್ರವರ್ತಿ ಪು:೭೧೭] ಎಂದು ಅರ್ಥ, ಭಗವಂತನ ಸ್ಮರಣೆಯನ್ನು ಮಾಡುವ ಅವನ ಭಕ್ತರು ಭಕ್ತಿಯ ಬಲೆಯನ್ನು ಬೀಸಿ ಈ ಗಿಣಿಯನ್ನು ಹಿಡಿಯುತ್ತಾರೆ. ಕೋಪವೆಂಬ ಕಾಡಬೆಕ್ಕು ಈ ಗಿಣಿಯನ್ನು ಕಂಡರೆ ನುಂಗಿಬಿಡುವುದು. ತಾಪ-ಎಂದರೆ ಬಿಸಿ ಅಥವಾ ಕಷ್ಟ ಎಂದರ್ಥ, ಕೋಪದ ಬಿಸಿಯೆಂಬ ಹುಲಿಯು ಇದನ್ನು ಕೊಂಡೊಯ್ಯುವುದು. ಹರಿನಾಮವೆಂಬ ಅರಗಿಣಿಯನ್ನು ಹೃದಯದಲ್ಲಿ ಪ್ರೀತಿಯಿಂದ ಕೂಡಿಟ್ಟರೆ ಆಪತ್ತಿಗಾಗುವುದು ಅಥವಾ ಕಷ್ಟದಲ್ಲಿ ಸಹಾಯ ಮಾಡುವುದು ಎನ್ನುತ್ತಾರೆ ಪುರಂದರದಾಸರು. ಅರಗಿಣಿಯನ್ನು ಇನ್ನೂ ವರ್ಣಿಸುತ್ತಾ

ಹರಿನಾಮವನ್ನು ಕಳ್ಳರು ಒಯ್ಯುರೆಂಬ ಭಯವಿಲ್ಲ, ಮಾರಲು ಬಂದರೆ ರೆಕ್ಕೆ ಬಡಿದು ಅವರನ್ನು ನೂಕಿ ವೈಕುಂಠದ ದಾರಿತೋರುವುದು ಈ ಗಿಳಿ. ಇಂದ್ರಿಯ ನಿಗ್ರಹವಿಲ್ಲದೆ ಭಗವಂತನ ನಾಮಸ್ಮರಣೆಯ ಫಲ ಸಿಗುವುದಿಲ್ಲ. ಸುಲಭವಾಗಿ ಸಿಗುವ ಆಪತ್ತುಗಳಿಂದ ರಕ್ಷಿಸುವ ಈ ಅರಗಿಣಿಯ ಹೊಟ್ಟೆಯೊಳು ಹದಿನಾಲ್ಕು ಲೋಕಗಳಿವೆ ಇಂತಹ ಪುರಂದರವಿಠಲನೆಂಬ ಅರಗಿಣಿಯನ್ನು ನೆನೆದು ಮುದ್ದಿಸಬೇಕು ಎಂಬುದು ತಾತ್ಪರ್ಯ.

**ಆಕಳು:** ಆವ ಕುಲವಾದರೇನು ಆವನಾದರೇನು ಆತ್ಮ
ಭಾವವರಿತ ಮೇಲೆ ಪ।

ನಾನಾ ವರ್ಣದ ಆಕಳು ಅದು
ನಾನಾ ವರ್ಣದ ಕ್ಷೀರವೇನೋ
ಹೀನ ಕರ್ಮಗಳನ್ನು ಬಿಟ್ಟು ಹಿಗ್ಗಿ
ಜ್ಞಾನ ಒಲಿಸಿರೋ
. . . . . . . . . . . . . . . . . . . . .

'ಕುಲದ ಮೇಲಿ ಹೋಗಬೇಡ ಮನುಜಾ ಕುಲವಿಲ್ಲ ಜ್ಞಾನಿಗಳಿಗೆ ಎಂದ ಪುರಂದರದಾಸರು ಕುಲ–ಜಾತಿಗಳು ಮುಖ್ಯವಲ್ಲ ಭಕ್ತಿಯ ಭಾವ, ಜ್ಞಾನಗಳೇ ಮುಖ್ಯವೆಂದು ತಿಳಿಸುತ್ತಾರೆ. ಬೇರೆ ಬೇರೆ ಬಣ್ಣದ ಆಕಳುಗಳು ಒಂದೇ ಬಣ್ಣದ ಹಾಲನ್ನೀವಂತೆ ಜಾತಿ–ಮತ ಕುಲಗಳಿಂದ ಮನುಷ್ಯ ವಿಭಿನ್ನನಾದರೂ ಆಯಾ ವ್ಯಕ್ತಿಯ ಅಂತರಂಗದಲ್ಲಿರುವ ಭಕ್ತಿರಸ ಒಂದೇ, ಯಾವಕುಲದವರೇ ಆಗಲಿ ಭಕ್ತಿ ಜ್ಞಾನಗಳಿದ್ದರೆ ಅವರ ಮಾನ್ಯರೇ. 'ಆವಕುಲವಾದರೇನು ಆವನಾದರೇನು ಆತ್ಮ ಭಾವವಂತ ಮೇಲೆ' ಎಂದು ಪಲ್ಲವಿಯೊಡನೆ ಶುರುವಾಗುವ ಈ ಕೀರ್ತನೆಯಲ್ಲಿ 'ಆಕಳು' ಪ್ರತಿಮೆ ಸಮಾಜದಲ್ಲಿರುವ ವಿಭಿನ್ನ ಜಾತಿಯ ಜನರನ್ನು ಸಂಕೇತಿಸುತ್ತದೆ. ವಿಷಯದ ಆಸೆ ಬಿಡುವುದು ಗುರುಭಕ್ತಿಮಾಡುವುದು, ಜ್ಞಾನಪಡೆದುಕೊಳ್ಳುವುದು ಇವು ಭಕ್ತಿಗೆ ಮುಖ್ಯ ಸಾಧನಗಳು.ಭಕ್ತ ಯಾವ ಜಾತಿಯವನಾದರೂ ಭಗವಂತನಿಗೆ ಪ್ರೀಯನೇ ಆಗಿರುವನು.

**ಆನೆ:** ಆನೆ ಬಂದಿತಮ್ಮಮ್ಮ ಮರಿ
ಯಾನೆ ಬಂದಿತಮ್ಮಮ್ಮ ಪ।

ತೊಲಗಿರೆ ತೊಲಗಿರೆ ಪರಬ್ರಹ್ಮ
ಬಲು ಸರಪಳಿಕಡಕೊಂಡು ಬಂದಿತಮ್ಮ
. . . . . . . . . . . . . . . . . . . . .

ಇಲ್ಲಿ 'ಆನೆ' ಪ್ರತಿಮೆ ಕೃಷ್ಣಾವತಾರದ ಬಾಲ ಕೃಷ್ಣನ ಲೀಲೆಗಳನ್ನು ತೆರೆದು ತೋರಿಸುವುದು. ದುಂಡುದುಂಡಾಗಿ ಮೈಕಟ್ಟು ಹೊಂದಿದ ಕಪ್ಪು ವರ್ಣದ ಬಾಲಕೃಷ್ಣನನ್ನು ತೂಗಾಡುತ್ತಾ ಬರುವ ಮರಿಯಾನೆಗೆ ಹೋಲಿಸಿ ವರ್ಣಿಸುತ್ತಾರೆ ಪುರಂದರದಾಸರು. ತೊಲಗಿರೆ ಎಂದರೆ ದೂರಸರಿಯಿರಿ ಸರಪಣಿಕಡಕೊಂಡು ಬರುತ್ತಿದೆ ಎನ್ನುತ್ತಾರೆ. ಮರಿಯಾನೆ ಎಂಬಲ್ಲಿ ಶ್ರೀ ಮದ್‌ಭಾಗವತ ಪುರಾಣದಲ್ಲಿ ದಶಮಸ್ಕಂದದಲ್ಲಿ ಬರುವ ದೈತ್ಯ ಸಂಹಾರ ಪ್ರಸಂಗಗಳಲ್ಲಿ ಪ್ರಮುಖವಾದ ಕೆಲವು ಸನ್ನಿವೇಶಗಳನ್ನು ಈ ಕೀರ್ತನೆಯಲ್ಲಿ ಉಲ್ಲೇಖಿಸಿದ್ದಾರೆ. ತನಗೇನೂ ಗೊತ್ತಿಲ್ಲವೆಂಬಂತೆ ಕಪಟನಾಟಕ ವಾಡುತ್ತಾ ಕಂಸನ ಸಭೆಗೆ ಬಂದು ಮುಗ್ಧನಂತೆ ನಿಂತ ಕೃಷ್ಣನು ಬಂಡಿಯ ರೂಪದಲ್ಲಿದ್ದ ಶಕಟಾಸುರನನ್ನು, ಸೋದರ ಮಾವನಾದ ಕಂಸನನ್ನು ಕೊಂದದ್ದು ಕಪಟನಾಟಕದಿಂದಲೇ

ಎಂದು ಮೊದಲನೇ ನುಡಿಯಲ್ಲಿ ಉಲ್ಲೇಖಿಸುತ್ತಾರೆ. ಎರಡನೆಯ ನುಡಿಯಲ್ಲಿ ಗೋವುಗಳ ಕೂಡ ನಲಿದಾಟ, ಕಾಳಿಂಗ ಮರ್ದನ ಮುಂತಾದ ಪ್ರಸಂಗಗಳಲ್ಲಿ ಮದ ಸೊಕ್ಕಿ ಬರುವ ಬಾಲಕನೆಂಬ ಚೆಲ್ವಾನೆ ಎನ್ನುತ್ತಾರೆ. ಭೀಮಾರ್ಜುನರನ್ನು ಗೆಲಿಸಿದ ಈ ಆನೆ ಪರಮಭಾಗವತರಿಗೆ ಪ್ರಿಯವೆಂದು, ಮಥುರೆಯಲ್ಲಿ ನಿಂತಾನೆಯೆಂದು, ಅನೇಕ ಅಸುರರನ್ನು ಕೊಂದ ಪುರಂದರವಿಠಲನೆಂಬ ಆನೆ ಇದೆಂದು ಕೃಷ್ಣಾವತಾರದ ಸನ್ನಿವೇಶಗಳನ್ನು ಚಿತ್ರಿಸಿದ್ದಾರೆ. ಈ ಕೀರ್ತನೆಯ ಪ್ರತೀಸಾಲಿನ ಕೊನೆಗೆ ಆನೆಯೆಂಬ ಶಬ್ದ ಪ್ರಯೋಗ ವಿಶೇಷ ಒತ್ತಡದಿಂದ (ಅಂತ್ಯಪ್ರಾಸ) ಕೀರ್ತನೆಯ ಸ್ವಾರಸ್ಯ ಹೆಚ್ಚುವುದು, ಮಾತ್ರವಲ್ಲದೆ ಪ್ರಾಸಾನುಪ್ರಾಸದಿಂದ ಸುಶ್ರಾವ್ಯವಾಗಿ ಹಾಡುವುದು ಕೇಳಿದಾಗ ಕೃಷ್ಣಾವತಾರದ ಪ್ರಸಂಗಗಳು ಚಲನಚಿತ್ರದಂತೆ ಕಣ್ಣ ಮುಂದೆ ಬರುತ್ತವೆ.

**ಆನೆ:** ಆನೆಯನು ಕಾಯ್ದಾಗ ಜ್ಞಾನವಿದ್ದುದು ಏನು
ನಾನು ಒದರಲು ಈಗ ಕೇಳದಿದ್ದುದು ಏನು
ದಾನವಾಂತಕ ಹರಿ ದೀನ ರಕ್ಷಕನೆಂಬೋ
ಮಾನ ಉಳಿಸಿಕೊಳ್ಳೊ ಪುರಂದರವಿಠಲ

ಶ್ರೀಮದ್ಭಾಗವತಮಹಾಪುರಾಣದ ಅಷ್ಟಮ ಸ್ಕಂದದಲ್ಲಿ ಬರುವ ಗಜೇಂದ್ರೋಪಾಖ್ಯಾನ ವನ್ನು ಸರಳವಾಗಿ ಒಂದೇ 'ಆನೆ' ಪ್ರತಿಮೆಯ ಮೂಲಕ ಹೇಳುವ ಉಗಾಭೋಗವಿದು. ಗಜೇಂದ್ರನೆಂಬ ಆನೆಯು ಕ್ಷೀರಸಾಗರದ ತೀರದಲ್ಲಿ ಇರುವ 'ತ್ರಿಕೂಟ' ಪರ್ವತದ ಪ್ರದೇಶದಲ್ಲಿ ವಿಹರಿಸುತ್ತಿತ್ತು, ಹೀಗೆಯೇ ಒಂದು ದಿನ ಬಿಸಿಲಿನ ತಾಪವನ್ನು ತಾಳಲಾರದೆ ತನ್ನ ಪರಿವಾರದೊಂದಿಗೆ ಅಲ್ಲಿಯೇ ಇದ್ದ ಸರೋವರವನ್ನು ಹೊಕ್ಕಿತು. ಅಲ್ಲಿ ಸಂತೋಷದಿಂದ ನೀರಿನಲ್ಲಿ ಆಡುತ್ತಿರುವಾಗ ನೀರಲ್ಲಿದ್ದ ಒಂದು ಬಲಿಷ್ಟವಾದ ಮಕರಿಯು (ಮೊಸಳೆ) ಗಜೇಂದ್ರನ ಕಾಲನ್ನು ಹಿಡಿದು ಎಳೆಯಹತ್ತಿತ್ತು, ಕರಿರಾಜನು ತನ್ನ ಪತ್ನಿ ಪರಿವಾರದ ಸಹಾಯದಿಂದ ಬಿಡಿಸಿಕೊಳ್ಳಲು ಎಷ್ಟೇ ಎಳೆದಾಡಿದರೂ ಸಾಧ್ಯವಾಗಲಿಲ್ಲ. ಹೀಗೆ ಆನೆ ಮೊಸಳೆಗಳ ಎಳೆದಾಟವು ಸಾವಿರ ವರ್ಷಗಳವರೆಗೆ ಮುನ್ನಡೆಯಿತು. ಕೊನೆಗೆ ದಾರಿಕಾಣದೆ ಈ ಕಷ್ಟದಿಂದ ಪಾರು ಮಾಡಲು ಭಗವಂತನಿಂದ ಮಾತ್ರ ಸಾಧ್ಯವೆಂದು ತಿಳಿದ ಗಜೇಂದ್ರನು ನಾರಾಯಣನನ್ನು ಪ್ರಾರ್ಥಿಸಲು ಭಗವಂತನು ಗರುಡಾರೂಢನಾಗಿ ಅಲ್ಲಿಗೆ ಬಂದು ತನ್ನ ಚಕ್ರಾಯುಧದಿಂದ ಮೊಸಳೆಯ ಬಾಯನ್ನು ಸೀಳಿ ಗಜರಾಜನನ್ನು ರಕ್ಷಿಸಿದನು. ಆಗ ಗಜರಾಜನೂ, ಮೊಸಳೆಯೂ ಪ್ರಾಣಿ ಶರೀರವನ್ನು ತ್ಯಜಿಸಿದರು. ಗಜರಾಜನು ಹಿಂದಿನ ಜನ್ಮದಲ್ಲಿ 'ಇಂದ್ರದ್ಯುಮ್ನ' ನೆಂಬ ರಾಜನಾಗಿದ್ದನು ಮತ್ತು ಮಕರಿಯು 'ಹೂಹೂ' ಎಂಬ ಗಂಧರ್ವನಾಗಿದ್ದನು. ಇಬ್ಬರೂ ಶಾಪದಿಂದ ಪ್ರಾಣಿಜನ್ಮವನ್ನು ಪಡೆದಿದ್ದು ಪರಮಾತ್ಮನು ಇಬ್ಬರನ್ನು ಉದ್ದರಿಸಿದನು ಎಂದು ತಿಳಿದುಬರುವುದು. ಆನೆಯನು ಕಾಯ್ದು ನೀನು, ನಾನು ಕರೆದಾಗ ಏಕೆ ಬರಲೊಲ್ಲೆ ಎಂದು ದಾಸರ ಆಕ್ಷೇಪಣೆ ಇಲ್ಲಿದೆ, ಆಪತ್ತಿನಲ್ಲಿರುವರು ಕರೆದರೆ ತಡಮಾಡದೆ ಬರುವ 'ದೀನರಕ್ಷಕ' ನೆಂಬ ಬಿರುದು ಉಳಿಸಿಕೊಳ್ಳ ಬೇಕಾದರೆ ನಾನು ಕರೆದಾಗ ಓಡಿ ಬಾ ಎಂದು ದೇವರನ್ನು ಎಚ್ಚರಿಸುತ್ತಿರುವಂತೆ, ನಾನು ಕರೆದಾಗ ಕೇಳಿಸ ದಂತೆ ಇರಬೇಡ ಎಂಬ ಶರತ್ತಿನ ಭಕ್ತಿವೈಶಿಷ್ಟತೆಯನ್ನು ಪುರಂದರದಾಸರ ಈ ಕೃತಿಯನ್ನೂ ಆತ್ಮೀಯತೆಯನಗನ್ನೂ ಎತ್ತಿ ತೋರಿಸುತ್ತದೆ.

**ಮದ್ದಾನೆ:** ಜತನ ಮಾಡೋ ಜೀವನವ ಮುಂದೆ

ಮತಿಭ್ರಷ್ಟನಾಗಿ ನೀ ಕೆಡಬೇಡ ಮನುಜ ॥ಪ॥

. . . . . . . . . . . . . . . . . . . . . .

ಹಿಂದೆ ತಗರು ಮುಂದೆ ಬಾವಿ ಅದರ
ಸಂದಣಿಸುವ ಎಡಬಲದಿ ಮದ್ದಾನೆ
ಒಂದಕ್ಕೆ ಒಂದು ಸಾಧನವು ಅದರ
ಮುಂದೆ ನೋಡಿದರೆ ತಾನದ ಸೋನೆ.

'ತಗರು' ಪೂರ್ವಜನ್ಮದ ಕರ್ಮವನ್ನು, 'ಬಾವಿ' ಮುಂದೆ ಗತಿಯೇನೆಂದು ತಿಳಿಯದ ಹಳ್ಳವನ್ನು ಸಂಕೇತಿಸಿದರೆ, ಮದ್ದಾನೆ ರಾಗದ್ವೇಷಗಳನ್ನು ಸಂಕೇತಿಸುತ್ತದೆ. ಪರಮಾತ್ಮನ ಸ್ಮರಣೆಯನ್ನು, ಭಜನೆಯನ್ನು ಮಾಡುವುದೇ ಸಾಧನಶರೀರ ಒದಗಿ ಬಂದುದರ ಪ್ರಯೋಜನ. ಪರಮಾತ್ಮನ ಅನುಗ್ರಹ ಪಡೆಯಬೇಕಾದರೆ ನಾನೆ ಮಿಗಿಲಾಗದವನೆಂಬ ಹೆಮ್ಮೆ, ನನಗಾಗಿ ಎಲ್ಲ ಎಂಬ ಅಹಂಕಾರಗಳನ್ನು ಕಿತ್ತು ಬಿಸಾಡಬೇಕು. ಏಕೆಂದರೆ ಈ ಜೀವನಕ್ಕೆ ತುಂಬ ಬೆಲೆ ಇದೆ. ಅದಕ್ಕಾಗಿ ಮತಿಭ್ರಷ್ಟನಾಗಿ ಕೆಡದೆ ಈ ಜೀವನವನ್ನು ಜತನ ಮಾಡಬೇಕು. ಈ ಜೀವನಕ್ಕೆ ಹಿಂದಿನ ಜೀವನದಲ್ಲಿ ಮಾಡಿದ ಕರ್ಮಗಳು ತಗರಿನಂತೆ ಬೆಂಬತ್ತುವವು. ಭವಿಷ್ಯದಲ್ಲಿ ಏನಾಗುವುದು ಎಂಬುದರ ಬಗ್ಗೆ ನಮಗೇನೂ ತಿಳಿಯದು. ರಾಗ ದ್ವೇಷಗಳು ಎಡ ಬಲದಲ್ಲಿರುವ ಮದ್ದಾನೆಯಂತೆ ನಮ್ಮನ್ನು ಕಷ್ಟಕ್ಕೀಡು ಮಾಡುವವು. ಈ ಜನ್ಮ ಬಿಟ್ಟರೆ ಮತ್ತು ಜನ್ಮಜನ್ಮಾಂತರಗಳ ಸುರಿಮಳೆ (ತಾನದಸೋನೆ). ಹಾಗಾಗಿ ಜಗತ್ತಿನ ಸೃಷ್ಟಿಚಕ್ರದಲ್ಲಿ ಭಾಗಿಯಾಗಿರುವ ಪ್ರತಿಯೊಬ್ಬ ಮನುಜನು ಈ ಶರೀರವನ್ನು ಪರಮಾತ್ಮನ ಅನುಗ್ರಹ ಪಡೆಯುವುದಕ್ಕಾಗಿ, ಸ್ವರೂಪಸಾಕ್ಷಾತ್ಕಾರ ಮಡಿಕೊಳ್ಳುವ ಸಾಧನವಾಗಿ ಉಪಯೋಗಿಸಿಕೊಳ್ಳಬೇಕು. ಎಂಬ ಸಂದೇಶ ಇಲ್ಲಿದೆ.

ಇಲಿ:

ಕರುಣಿಸಿ ಕೇಳು ಕಂದನಮಾತನು
ಗರುಡವಾಹನನೆ ಗಂಗೆಯ ಪೆತ್ತ ಹರಿಯೆ ॥ಪ॥

. . . . . . . . . . . . . . . . . . . . . .

ಎಳ್ಳು ಕಾಳೆಷ್ಟಾದರೆನಗಾಶ್ರಯವಿಲ್ಲ
ಅಲ್ಲವತಿಂದಿಲಿಯಂತೆ ಕೊರಗಿ
ಗಲ್ಲತಿವಿಸಿಕೊಂಡು ಗಾರು ಪಟ್ಟೆ ನೋ ಇಂಥ
ಸಲ್ಲದ ನಾಣ್ಯವ ಮಾಡುವರೋ ಹರಿಯೆ.

. . . . . . . . . . . . . . . . . . . . . .

ಸೈದ್ಧಾಂತಿಕವಾಗಿ ಬದ್ಧವಾದ ಯಾವುದೇ ಸಾಹಿತ್ಯದಂತೆ ಕೀರ್ತನಸಾಹಿತ್ಯವೂ ತನ್ನ ಅಭಿವ್ಯಕ್ತಿಯಲ್ಲಿ ಅಮೂರ್ತತೆಯನ್ನು ಮೂರ್ತವಾಗಿಸುವ ಉದ್ದೇಶವನ್ನು ಹೊಂದಿರುತ್ತದೆ. ಅನುಭವವನ್ನು ಸರಳವಾಗಿ ತಿಳಿಸಲು ಅನೇಕ ಸಿದ್ಧ ಉಪಮೆಗಳನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳುವ ಕ್ರಮವೂ ಇಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. 'ಇಲಿ' ಪ್ರತಿಮೆ ಇಲ್ಲಿ ಚಂಚಲ ಮನಸ್ಸಿನ ಜೀವಿಯನ್ನು ಸೂಚಿಸುತ್ತದೆ. ಬೋನಿನೊಳಗೆ ಅಲ್ಲ(ಶುಂಠಿ)ಯನ್ನು ಇಟ್ಟು ಇಲಿಗಳನ್ನು ಆಕರ್ಷಿಸಿ ಹಿಡಿಯುತ್ತಾರೆ. ಹಿಡಿದಮೇಲೆ ತಿವಿದು ಗಾಯಪಡಿ ಸುತ್ತಾರೆ. ಅದೇ ರೀತಿ ಸಂಸಾರದಲ್ಲಿ ಆಶೆಯುಳ್ಳವನಾಗಿ ಚಂಚಲತೆಯಿಂದ ಕೂಡಿದ ಜೀವಿಯು ಯಾವುದೋ ವಿಷಯಕ್ಕೆ ಆಕರ್ಷಿತನಾಗಿ ಕಷ್ಟದಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾನೆ. ಪುರಂದರದಾಸರು ಕೂಡ ಇಂತಹ ಕಷ್ಟದಲ್ಲಿ ಸಿಕ್ಕಿ ಹಾಕಿಕೊಂಡಿರಬಹುದು.

ಎಳ್ಳು ಕಾಳಿನಷ್ಟು ಆಶ್ರಯ ನನಗಿಲ್ಲ. ಇಂತಹ ಉಪಯೋಗವಿಲ್ಲದ ಜೀವನವನ್ನು ಏಕೆ ನೀಡಿದೆ ಎಂದು ವೇದನೆಯಿಂದ ಪ್ರಶ್ನಿಸುತ್ತಿರುವಂತಿದೆ.

**ಎತ್ತು:** ಗಾಣದೆತ್ತಿನಂತೆ ತಿರುಗಾಡಲಾರೆ
ದಂಡಿಗೆಯ ನೊಗದಂತೆ ನಾ ಬೀಳಲಾರೆ
ನವಿಲಂತೆ ನಾನಿನ್ನು ಕುಣಿದಾಡಲಾರೆ
ಗಿಳಿಯಂತೆ ನಾ ನಿನ್ನ ಕೂಗಾಡಲಾರೆ
ಪುರಂದರ ವಿಠಲನ ಕಾಣದೆಲೆ
ಮಾತನಾಡುವುದನು ಕೇಳಲಾರೆ.

ಗಾಣಕ್ಕೆ ಕಟ್ಟಿದ ಎತ್ತಿಗೆ ಸುಮ್ಮನೆ ತಿರುಗುವುದು ಗೊತ್ತೇ ಹೊರತು ಗಾಣದಲ್ಲಿ ಎಳ್ಳಿದೆಯೋ ಇಲ್ಲವೋ ತಾನು ಸುತ್ತುವುದರಿಂದ ಪ್ರಯೋಜನ ಇದೆಯೋ ಇಲ್ಲವೋ ಎನ್ನುವ ಜ್ಞಾನ ಇರುವುದಿಲ್ಲ. ಎತ್ತು ಇಲ್ಲಿ ಅಜ್ಞಾನಕ್ಕೆ ಪ್ರತೀಕವಾಗಿದೆ. ದಂಡಿಗೆ ಒಂದು ತಂತೀ ವಾದ್ಯ ಆ ವಾದ್ಯದಲ್ಲಿರುವ ಬುರುಡೆಯಿಂದ ಬೇರೆಯಾದ ಭಾಗವು ವಾದ್ಯ ಬಾರಿಸುವವನ ಕೊರಳಲ್ಲಿ ನೇತಾಡುತ್ತಿರುತ್ತದೆ ಅದರಂತೆ ನಾ ಬೀಳಲಾರೆ ಎನ್ನುತ್ತಿದ್ದಾರೆ ದಾಸರು. ಸಂಸಾರದ ನೊಗ ಹೊತ್ತುಕೊಂಡು ತನ್ನ ಮಡದಿ ಮಕ್ಕಳು ಹೊಟ್ಟೆ ಬಟ್ಟೆಗಾಗಿ ಬವಣೆಪಡುತ್ತಿರುವ ಪ್ರತಿಯೊಬ್ಬರ ಪಾಡೂ ಕೂಡ ಹೀಗೆಯೇ ಇದೆ. ಸಂಸಾರದಲ್ಲಿ ತನ್ನ ಹುಟ್ಟುವಿಕೆ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಎಂದು ತಿಳಿಯದೆ. ಸುಖ ದುಃಖಗಳಲ್ಲಿ ನವಿಲಂತೆ ಕುಣಿಯಲಾರೆ, ಗಿಣಿಯಂತೆ ಕೂಗಲಾರೆ ಪುರಂದರ ವಿಠಲನನ್ನು ಕಾಣದೆ ಯಾರ ಮಾತನ್ನು ಕೇಳಲಾರೆ ಎಂಬುದು ಅವರ ಆತ್ಮನಿವೇದನೆ. ಪುರಂದರದಾಸರು ಈ ಉಗಾಭೋಗದಲ್ಲಿ ರಾಗತಾಳದ ಗೊಂದಲವಿಲ್ಲದೆ, ಲೋಕೋಕ್ತಿಗಳನ್ನು ಒಂದಾದಮೇಲೊಂದರಂತೆ ನಿರ್ಮಾಣಮಾಡಿ ತಾವು ಹೇಳಬಯಸುವ ಅನುಭವವನ್ನು ಹೆಚ್ಚು ಏರಿಳಿತಗಳಿಲ್ಲದೆ ಸರಳವಾಗಿ ಅಭಿವ್ಯಕ್ತಿಸಿ ರುವುದು ಒಂದು ವೈಶಿಷ್ಟ್ಯ

**ಎಮ್ಮೆ:** ಕಟ್ಟಬೇಕು ಕಾಟದೆಮ್ಮೆ ಅದರ ಹಯನ
ಎಷ್ಟಾದರೂ ಉಣಬೇಕು. ಪ

ಹಮ್ಮು ಎಂಬೋದೆ ಎಮ್ಮೆ ಗಮ್ಮುಯೇಂಬೋದೆ ಹಗ್ಗ
ಹೆಮ್ಮೆ ಎಂಬೋದೆ ಅದಕೆ ದಮ್ಮುಗುದ್ದಿ
ಸುಮ್ಮನ ಮನದಿಂದ ಹಾಲ್ಕರೆದು ಪರ
ಬೊಮ್ಮನಿಗರ್ಪಿಸಬೇಕು ನಿತ್ಯದಿ ೧

ಚಂಡಿತನವೆಂಬ ಹಿಂಡಿ ಇಡಬೇಕು
ದಿಂಡತನವೆಂಬ ಪೆಂಡೆಮೇವು
ಪುಂಡತನವೆಂಬೋ ಪಿಂಡಿ ರುಬ್ಬಬೇಕು
ಪಾಂಡುರಂಗ ಗುಂಡಿ ಒಳಗೆ ಹಿಂಡಿಕೋಬೇಕು ೨

ಅಂತರಂಗ ಒಳಗೆ ಭ್ರಾಂತಿ ಬಿಡಿಸುವ ಎಮ್ಮೆ
ಅಂತದಾರಿಗೂ ತಿಳಿಯದಂಥ ಎಮ್ಮೆ
ಕಂತು ಜನಕ ಸ್ವಾಮಿ ಪುರಂದರ ವಿಠಲನ

[ಕಾಟದೆಮ್ಮೆ-ತೊಂಡು ತಿರುಗುವ ಎಮ್ಮೆ, ಹಯನ-ಹಾಲು, ಜ್ಞಾನ-ಭಕ್ತಿ ವೈರಾಗ್ಯಗಳಿಂದ ಸಿಗುವ ಆತ್ಮ ತೃಪ್ತಿ, ಹಮ್ಮು-ಅಹಂಕಾರ, ಗಮ್ಮು-ಹರಿಯನಾಮಸ್ಮರಣೆ, ಹೆಮ್ಮೆ-ಅಭಿಮಾನ, ದಿಂಡಿತನ-ಒರಟುವರ್ತನೆ, ಪೆಂಡೆಮೇವು- ಆಹಾರ, ಕಾಳುಕಡ್ಡಿ, ಪಿಂಡಿ-ಹಿಂಡಿ, ಗುಂಡಿಒಳಗೆ-ಹೃದಯದಲ್ಲಿ]

ಪ್ರತಿಯೊಬ್ಬ ಜೀವಿಯು ತನ್ನಲ್ಲಿರುವ ನಾನು-ನಾನೆಂಬ ಅಹಂಕಾರ, ಅಭಿಮಾನವನ್ನು ತೊರೆದರೆ ಹರಿಯ ಸಾಕ್ಷಾತ್ಕಾರವಾಗುವುದು. ಅಂತಹ ನಾನು-ನಾನೆಂಬ ಅಹಂಕಾರವನ್ನು ಬಿಡುವುದು ಸುಲಭವಲ್ಲ, ಅದು ಕೈಗೆ ಸಿಗದೆ ತಿಂದುತಿರುಗುವ ಕಾಟದೆಮ್ಮೆಯಂತೆ, ಹರಿನಾಮಸ್ಮರಣೆಯಿಂದ ಈ ಅಹಂಕಾರವನ್ನು ಕಟ್ಟಿಹಾಕಿ ಅದರ ಹೆಮ್ಮೆಗೆ ಗುದ್ದು ಕೊಟ್ಟು ಭಕ್ತಿಯಿಂದ ಹಾಲು ಕರೆದು ಅದನ್ನು ಪರಮಾತ್ಮನಿಗೆ ಅರ್ಪಿಸಬೇಕು ಅಂದರೆ ನಾವು ಮಾಡುವ ಕರ್ಮಗಳ ಫಲದಾಸೆ ಬಿಟ್ಟರೆ ಅಭಿಮಾನ ಹೋಗುವುದು. ಒರಟು ವರ್ತನೆಯಿಂದ ಹಿಡಿದು ತಂದು, ಜ್ಞಾನ ಭಕ್ತಿ ವೈರಾಗ್ಯಗಳೆಂಬ ಗುಂಡಿ ಒಳಗೆ ಭಕ್ತಿ ಎಂಬ ಹಾಲು ಕರೆಯಬೇಕು ಹೀಗೆ ಹಿಡಿದು ಬಗ್ಗಿಸಿ ಒಳ್ಳೆಯದನ್ನಾಗಿ ಮಾಡಿದ ಮನಸ್ಸು ಎಂಬ ಎಮ್ಮೆ ಅಂತರಂಗದ ಅಜ್ಞಾನವನ್ನು ಹೋಗಲಾಡಿ ಸುತ್ತದೆ. ಸಾಮಾನ್ಯರಿಗೆ ಅದೃಶ್ಯದಂತೆ ಗೋಚರಿಸುವ ಈ ಎಮ್ಮೆ ಮನ್ಮಥನ ತಂದೆಯಾದ [ಕಂತು ಜನಕ] ಮಹಾವಿಷ್ಣುವಿನ ಭಕ್ತರ ಮನೆಯೊಳಗೆ ಇಂಥಹ ಎಮ್ಮೆ ಇರಬೇಕು ಎಂದಿದ್ದಾರೆ ಪುರಂದರದಾಸರು. ಉದ್ದೇಶಿತ ತತ್ವ ಅಥವಾ ಸಿದ್ಧಾಂತದ ಪ್ರತಿಪಾದನೆಗಾಗಿ ಅನ್ಯವಲಯವೊಂದನ್ನು ಹೋಲಿಕೆಗೆ ಆರಿಸಿಕೊಂಡು ಆ ವಲಯದ ಪರಿಭಾಷೆಗಳನ್ನು ಬಿಡಿಬಿಡಿಯಾಗಿ ತಾತ್ವಿಕತೆಯೊಂದಿಗೆ ಸಮೀಕರ ಣಗೊಳಿಸುವುದು ಇಲ್ಲಿಯ ವಿಧಾನವಾಗಿದೆ. ಮೊದಲನೆ ನುಡಿಯಲ್ಲಿ ಅಹಂಕಾರ ಎಂಬ ಎಮ್ಮೆಯನ್ನು ಪಳಗಿಸುವ ಬಗೆ ಹೇಳಿದರೆ, ಎರಡನೇ ನುಡಿಯಲ್ಲಿ ಭಕ್ತಿಯನ್ನು ಬೆಳೆಸುವ ರೀತಿಯನ್ನು ತಿಳಿಸುತ್ತಾರೆ. ಮೂರನೆ ನುಡಿಯಲ್ಲಿ ಪರಮಾತ್ಮನ ಜ್ಞಾನವನ್ನೇ ಎಮ್ಮೆಯಾಗಿ ಸಂಕೇತಿಸಿ ಇಂಥಹ ಎಮ್ಮೆ ಪುರಂದರ ವಿಠಲನ ಭಕ್ತರ ಮನೆಯೊಳಗಿರಬೇಕು ಎಂದಿದ್ದಾರೆ 'ಪುರಂದರದಾಸರು'. 'ಎಮ್ಮೆ' ಪ್ರತಿಮೆ ಅಹಂಕಾರವನ್ನು ಸಂಕೇತಿಸುತ್ತದೆ.

**ಕತ್ತೆ:** ನಮ್ಮ ಶಾಸ್ತ್ರ ಇಲ್ಲಿ ಮಾರುವುದಲ್ಲ
ಸುಮ್ಮನಿದ್ದರೆ ಯಾರು ಕೇಳುವರಿಲ್ಲ ಪ॥
. . . . . . . . . . . . . . . . . . .
ಕತ್ತೆಗೆ ಹೂರಣ ರುಚಿ ತಿಳಿಯಲಿಲ್ಲ
ತೊತ್ತಿಗೆ ಪತಿವ್ರತೆ ಗುಣಬರಲಿಲ್ಲ
ಮುತ್ತಿನ ಹಾರ ಕಪಿಗೆ ಹಾಕಸಲ್ಲ
ಕುತ್ತಿಗೆ ಕೊಯ್ವಗೆ ಕರುಣವೇ ಇಲ್ಲ.
. . . . . . . . . . . . . . . . . . .

ಅಜ್ಞಾನಿ ಮನುಷ್ಯನನ್ನು ಕತ್ತೆಗೆ ಹೋಲಿಸಿ ಅದಕ್ಕೆ ಹೂರಣದ ರುಚಿ ತಿಳಿಯದಿರುವ ಅಸಾರ್ಥಕತೆ ಬಗ್ಗೆ ಹೇಳುವುದೇ ಇಲ್ಲಿನ ಉದ್ದೇಶವಾಗಿದೆ. ನಿತ್ಯದ ಅನುಭವಗಳನ್ನು ಗಮನಿಸುವ ಹಾಗೂ ಸಂದರ್ಭೋಚಿತವಾಗಿ ಅವುಗಳನ್ನು ಪ್ರತಿಮಾ ವಿಧಾನದಲ್ಲಿ ಬಳಸುವ ರೀತಿಯಲ್ಲಿ ಪುರಂದರದಾಸರ ಆಯ್ಕೆ ಅಭಿರುಚಿಗಳನ್ನು ಸಹ

ಕಾಣಬಹುದಾಗಿದೆ. ಬದುಕಿನ ಎಲ್ಲ ಬಗೆಯ ಅನುಭವಗಳಿಗೆ ಅವರು ಸ್ಪಂದಿಸುವ ರೀತಿ ಇಲ್ಲಿ ಕಾಣುತ್ತೇವೆ. ಜಾರೆಗೆ ಪತಿವ್ರತೆಯ ಗುಣಗಳು ಬರಲು ಸಾಧ್ಯವಿಲ್ಲ, ಕುತ್ತಿಗೆ ಕೊಯ್ಯುವ ಮನುಷ್ಯನಿಗೆ ಕರುಣಾವಿರುವುದಿಲ್ಲ ಅದರಂತೆ ಭಕ್ತನಿಗೆ  ಹರಿಯ ನಾಮಸ್ಮರಣೆಯ ಮಹತ್ವ ತಿಳಿಯುವುದಲ್ಲದೆ ಅಜ್ಞಾನಿಗೆ ಅಲ್ಲ. ಭಕ್ತಿಯಿರದ ಮನುಷ್ಯನಿಗೆ ಬುದ್ಧಿಮಾತಿನ ಮಹತ್ವ ತಿಳಿಯುವುದಿಲ್ಲ ಅದು ಕಪಿಗೆ ಹಾಕಿದ ಮುತ್ತಿನ ಹಾರದಂತೆ ವ್ಯರ್ಥ ಎಂದು ದಾಸರು ಅಭಿಪ್ರಾಯ ಪಡುತ್ತಾರೆ. ಕತ್ತೆ ಇಲ್ಲಿ ಅಜ್ಞಾನವನ್ನು ಸಂಕೇತಿಸುತ್ತದೆ.

**ಕತ್ತೆ:** ಹರಿನಾರಾಯಣ ಜಯ ಪುರುಷೋತ್ತಮ
ಹರಿನಾರಾಯಣ ಎನು ಮನವೆ ಪ।

ಲೆತ್ತ ಪಗಡೆ ಚದುರಂಗಗಳಾಡುತ
ಹೊತ್ತು ಕಳೆವುದೇತಕೆ ನೀನು
ಸುತ್ತಿ ತೊಳಲಿ ಬಳಲುತ ಮಾಡುವ ಗೃಹ
ಕೃತ್ಯದಿ ನೀನಿದ್ದು ಫಲವೇನು
ಕತ್ತೆಯಂದದಿ ಕಾಲವಕಳೆದು
ನ್ಮತ್ತನಾಗಿ ಬಾಳುವೆ ನೀನು
ಮೃತ್ಯುಭಯವನುತ್ತರಿಸುವಡೆ ಪುರು
ಷೋತ್ತಮ ನರಹರಿ ಶರಣೆನ್ನು

ಪ್ರತಿಯೊಬ್ಬ ಮನುಷ್ಯನು ತನ್ನ ಅರ್ಧ ಆಯುಷ್ಯವನ್ನು ನಿದ್ರೆ, ಬಾಲ್ಯದ ಆಟಗಳು, ಯೌವನದ ಜವಾಬ್ದಾರಿ, ಮುಪ್ಪಿನಲ್ಲಿ ಬರುವ ರೋಗಗಳಲ್ಲಿ ವ್ಯರ್ಥವಾಗಿ ಕಳೆಯುತ್ತಾನೆ, ಹರಿಯ ನಾಮಸ್ಮರಣೆಯನ್ನು ಮರೆತು ಲೆತ್ತ ಪಗಡೆ ಚದುರಂಗಗಳಾಡುತ್ತ ಹೊತ್ತು ಕಳೆದರೆ ಫಲವಿಲ್ಲ. ಗೃಹ ಕೃತ್ಯಗಳನ್ನು ಹುಟ್ಟಿನಿಂದ ಆರಂಭಿಸಿ ಸಾಯುವವರೆಗೆ ಕತ್ತೆಯಂತೆ ಮಾಡುತ್ತಾ ಕಾಲ ಕಳೆದು ಮೃತ್ಯುದೇವತೆ ಬರುವ ಬಗ್ಗೆ ಭಯಪಡುತ್ತಾ ಇರದೆ, ಪುರುಷೋತ್ತಮನಾದ ನರಹರಿಯನ್ನು ಶರಣೆಂದು ಭಜಿಸು ಎಂದು ಎಚ್ಚರಿಸುತ್ತಾರೆ ಪುರಂದರದಾಸರು. ಸಮಯದ ಮಹತ್ವ ತಿಳಿದು ಶ್ರೀ ಹರಿಯನ್ನು ಭಜಿಸಿ, ನಮ್ಮ ಬದುಕನ್ನು ಸಾಧನಮಾರ್ಗವನ್ನಾಗಿ ಮಾಡಿಕೊಳ್ಳಬೇಕೆಂದು ಅವರ ಅಭಿಲಾಷೆ, ಇದನ್ನೆ ಇನ್ನೊಂದು ಕೀರ್ತನೆಯಲ್ಲಿ 'ಮಾನವ ಜನ್ಮ ದೊಡ್ಡದು ಇದ ಹಾಳು ಮಾಡಲಿ ಬೇಡ ಹುಚ್ಚಪ್ಪಗಳಿರಾ' ಎಂದಿದ್ದಾರೆ.

**ಕಪಿ:** ಮೂಢನಾದೆನೋ ನಿನ್ನ ಬೇಡಿಕೊಳ್ಳದೆ ನಾನು
ಕಾಡೊಳಗಾಡುವ ಕಪಿಯಂತೆ ಜೀವಿಸಿ
ಗೂಡೊಳಗಿರುತಿಹ ಗೂಬೆಯ ತೆರನಂತೆ
ಮಾಡದೆ ನಿನ್ನಯ ಸ್ಮರಣೆಯ ಮರೆತೆನೋ

ಮನಸ್ಸಿನ ಚಂಚಲತೆ, ಇಂದ್ರಿಯ ವಿಕಾರಗಳಿಗೆ ಕಪಿಯ ಚಂಚಲತೆಯ ಗುಣವನ್ನು ಸಾದೃಶ್ಯಗೊಳಿಸ ಲಾಗಿದೆ. ಗೂಡೊಳಗಿರುವ ಗೂಬೆಯ ವ್ಯರ್ಥ ಜೀವನಕ್ಕೆ ಸಂಕೇತವಾಗಿದೆ 'ಕೆಟ್ಟೆನಲ್ಲೋ ಹರಿಯೆ ಸಿಟ್ಟು ಮಾಡಿ ಎನ್ನ ಬಿಟ್ಟು ಕಳೆಯಬೇಡ' ಎಂಬ ಪಲ್ಲವಿಯಿಂದ ಶುರುವಾಗುವ ಈ ಕೀರ್ತನೆಯ ಮೊದಲಿನ ಮೂರು ನುಡಿಗಳಲ್ಲಿ, ತಂದೆ ತಾಯಿಗಳ ಉದರದಿ ಬಂದು, ಬಾಲ್ಯದಲ್ಲಿ ಅರಿಯದೆ, ಯೌವ್ವನದಲ್ಲಿ ಸತಿ ಸುತರನ್ನು

ನೋಡುತ್ತ ಸಮಯ ಕಳೆದೆನೆಂದು ಪರಿತಪಿಸುತ್ತಾರೆ. ಸ್ನಾನ ಸಂಧ್ಯಾವನವು ದುರ್ಜನರ ಸಂಗದಿಂದ ಹೀನವಾಯಿತೆಂದು, ಜ್ಞಾನಗಳ ಒಡನಾಟವಿಲ್ಲದೆ ದಾನ ಧರ್ಮವ ಮಾಡದೆ ನಿನ್ನ ಸ್ಮರಣೆ ಮರೆತು ಮೂಢನಾದೆನಾನು ಎನ್ನುತ್ತಾ ದೈವಿಕ ಚಿಂತನೆಯಲ್ಲಿ ಮನಸ್ಸನ್ನು ನೆಲೆಗೊಳಿಸಲು ಪ್ರಯತ್ನಿಸಿದಷ್ಟೂ ಅದು ಕೈಗೆ ಸಿಕ್ಕದೆ ಕಂಡಕಂಡಲ್ಲಿ ಜಿಗಿಯುವ ಕಾಡಕಪಿಯಂತಾಗಿದೆ, ಗೂಡೊಳಗಿಪ್ಪ ಗೂಬೆಯಂತೆ ನನ್ನ ಜೀವನವು ವ್ಯರ್ಥವಾಗಿ ಹೋಗುತ್ತಿದೆ ಆದ್ದರಿಂದ ಬುದ್ಧಿಹೀನನಾದ ನನ್ನನ್ನು ಉದ್ಧರಿಸಿ ತಿದ್ದಿನಡೆಸಿ ನಿನ್ನಯ ಚರಣಾರವಿಂದವ ಹೊಂದುವಂತೆ ಮಾಡು ಎನ್ನ ಬುದ್ಧಿಯೊಳಗಡಗಿದ್ದು ಎಂದು ದಾಸರು ನಿವೇದಿಸಿ ಕೊಳ್ಳುತ್ತಿದ್ದಾರೆ.

ಕಪಿ: ಬಾರಮ್ಮ ನಾವಿಬ್ಬರಾಡುವ
ಮುಕ್ತಿ ಸಾಧನಂಗಳ ಬೇಗ ಬೇಡುವ ॥ಪ॥

ಕಾಡುವ ಕಪಿ ಶಯನಂಗಳ
ಬೇಡುವ ಜ್ಞಾನಮಂಟಪದಲ್ಲಿ ಜೋಡಿಕಾಡುವ ॥ಅ॥

ಮೂರು ಮನೆಯ ಭೇದವ ಮಾಡಿ
ಮುತ್ತೈದೆಂಟು ಮನೆ ಕಿತ್ತ್ಯಾಡುವ ॥೧॥

ಪುಂಡರೀಕಾಕ್ಷ ಶೇಷನ ಮೇಲೆ
ಭೂ ಮಂಡಲದೊಳಗೆ ಬ್ರಹ್ಮಾಂಡವು ॥೨॥

ಶಂಖ ಚಕ್ರಾಂಕಿತ ಪುರಂದರ ವಿಠಲನ್ನ
ಜ್ಞಾನ ಮಂಟಪದಲ್ಲಿ ॥೩॥

ಕಾಡುವ ಕಪಿ ಇಲ್ಲಿ ಚಪಲದ ಚಿತ್ತವನ್ನು ಸಂಕೇತಿಸುತ್ತದೆ. ಕಾಡುವ ಕಪಿ ಶಯನಂಗಳ ಬೇಡುವ ಎಂದರೆ ಚಪಲಚಿತ್ತದ ಲಯವನ್ನು ಬೇಡುವ ಎಂದರ್ಥ ನಾವಿಬ್ಬರು ಎಂದರೆ ಜೀವಾತ್ಮ ಪರಮಾತ್ಮ, ಜೀವಾತ್ಮನಿಗೆ ಭಕ್ತಿಯೇ ಮುಕ್ತಿ ಪಡೆಯಲು ಸಾಧನ. ಭಕ್ತಿಯು ಜೊತೆಯಿದ್ದರೆ ಪ್ರಾಕೃತಗುಣತ್ರಯಗಳಾದ ಸತ್ವ, ರಜಸ್ಸು ಮತ್ತು ತಮಸ್ಸೆಂಬ ಮೂರು ಮನೆಗಳನ್ನು ಭೇದಿಸಿ, ದಾಟಿ, ಮುತ್ತೈದೆ ಎಂದರೆ ಪೃಥ್ವಿ, ಆಪ್ ತೇಜ ವಾಯು ಆಕಾಶವೆಂಬ ಪಂಚಭೂತಗಳನ್ನು ಬಿಟ್ಟು, ಎಂಟು, ಅಷ್ಟವಿಧ ಪ್ರಕೃತಿಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಮತ್ತು ಅವ್ಯಕ್ತ, ಮಹತ್, ಅಹಂಕಾರಗಳನ್ನು ತ್ಯಜಿಸಿ, ಮುಕ್ತಿಗೆ ಸಾಧನಗಳಾದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಬೇಡುವ ಎನ್ನುತ್ತಾರೆ ಪುರಂದರದಾಸರು. ಪಲ್ಲವಿಯಲ್ಲಿ ಉಕ್ತವಾದ ಮುಕ್ತಿ ಪಡೆಯುವುದೆ ಇಲ್ಲಿ ಗುರಿ ಅದಕ್ಕೆ ಜೊತೆ ಆಡಲು ಬೇಕು ಭಕ್ತಿ. 'ಬಾರಮ್ಮ' ಎಂದು ಭಕ್ತಿಯನ್ನು ಸ್ತ್ರೀಲಿಂಗದಲ್ಲಿ ಸಂಬೋಧಿಸಲಾಗಿದೆ. ಹಠಯೋಗದಿಂದ ಕಠಿಣಮಾರ್ಗದಲ್ಲಿ ಬರುವ ತೊಂದರೆಗಳನ್ನೆಲ್ಲ ನಿವಾರಿಕೊಂಡು, ಶೇಷನ ಮೇಲೆ ಮಲಗಿರುವಂತಹ ಶಂಖ ಚಕ್ರಾಂಕಿತ ಪುರಂದರ ವಿಠಲನ್ನ ಕಾಡುವ ಕಪಿ ಶಯನಂಗಗಳ ಎಂದರೆ ಚಂಚಲಚಿತ್ತವನ್ನು ಹೋಗಿಸುವಂತೆ ಬೇಡುವ, ಯಥಾರ್ಥಜ್ಞಾನವನ್ನು ಪಡೆದು ಜ್ಞಾನಮಂಟಪದಲ್ಲಿ ಜೋಡಿ ಕೂಡಾಡುವ–ಎಂದರೆ ಪರಮಾತ್ಮನನ್ನು ಹೊಂದುವ ಉದ್ದೇಶ

ಇಲ್ಲಿದೆ. ಜ್ಞಾನವೇ ಮುಕ್ತಿಗೆ ಕಾರಣ ಅಂತಹ ಜ್ಞಾನವನ್ನು ಪಡೆದುಕೊಂಡು ಭಕ್ತಿಯ ಜೊತೆ ಸ್ನೇಹಮಾಡಿ ಮುಕ್ತಿ ಹೊಂದಬೇಕು ಎನ್ನುವುದು ಇಲ್ಲಿಯ ಸಂದೇಶ.

ಕಪಿ: ತೊಳಲದಿರು ಕಂಡ್ಯ ಕಡೆಗೆ ಪರಮಾತ್ಮ
ನೊಳ ಕಂಡು ಸುಖಿಸೊ ಮನವ ||ಪ||

ಲಿಪಿಯೊಳಖಿಳವ ಚಿಂತಿಸಿ ಕಡೆಗಡಗೆ
ಕಪಿಯಂತೆ ಎಡೆಗೊಡವೆ ಮನವೆ
ಗುಪಿತದೊಳಗಿದ್ದಾತ್ಮನ ಧ್ಯಾನಿಸಲು
ಅಪರಿಮಿತ ಸುಖ ಸುಖಿಸುವೆ ಮನವೆ. ||೧||

ಕಪಿ ಇಲ್ಲಿ ಹಿಡಿತಕ್ಕೆ ಬಾರದ ಚಂಚಲ ಮನಸ್ಸನ್ನು ಸಂಕೇತಿಸುತ್ತದೆ. ತೊಳಲದಿರು ಕಂಡ್ಯ ಕಡೆಗೆ ಪರಮಾತ್ಮನೊಳ ಕಂಡು ಸುಖಿಸೋ ಮನವೇ' ಎಂಬ ಪಲ್ಲವಿಯೊಡನೆ ಶುರುವಾಗುವ ಈ ಕೀರ್ತನೆಯಲ್ಲಿ ಮನಸ್ಸಿನಲ್ಲಿ ಬೇರೆ ಬೇರೆ ವಿಷಯ ಸುಖ: ದುಖ:ಗಳ ಬಗ್ಗೆ ಚಿಂತಿಸದೆ. ಏಕಾಗ್ರಬುದ್ಧಿಯನ್ನು ಹೊಂದಿ, ಲಿಪಿಯೊಳಗೆ ಎಂದರೆ ಬರಹದಲ್ಲಿ ಶಾಸ್ತ್ರಗಳಲ್ಲಿ ಹೇಳಿರುವುದೆಲ್ಲವನ್ನು ಚಿಂತಿಸಿ, ಮನದಟ್ಟು ಮಾಡಿಕೊಂಡು ಗುಪ್ತವಾಗಿ ಹೃದಯಗುಹೆಯಲ್ಲಿ ಅಡಗಿರುವ ಶುದ್ಧಾತ್ಮನಾದ ಪರಮಾತ್ಮನನ್ನು ಧ್ಯಾನಿಸಲು ಅಪರಿಮಿತ ಸುಖ ಹೊಂದುವೆ ಎಂದು ಜೀವಾತ್ಮನನ್ನು ಸಂಭೋದಿಸಿ ಹೇಳಲಾಗಿದೆ. ಜೀವನ ಹಾಗೂ ತತ್ವಗಳನ್ನು ಕುರಿತ ಜಿಜ್ಞಾಸೆಯನ್ನು ಮಂಡಿಸುವ ರೀತಿಯಲ್ಲಿ ಈ ಕೀರ್ತನೆ ರಚಿತವಾಗಿದೆ. ಇಲ್ಲಿ ಧ್ವನಿಯ ವೈಯಕ್ತಿಕತೆ ಪ್ರಧಾನ ವಾಗಿದ್ದು, ಆತ್ಮಾರ್ಥಕ ಸಂಭೋಧನೆ ಕಪಿ ರೂಪಕದ ಬಳಕೆ ಹೇಳಿಕೆಗಳ ರೂಪದಲ್ಲಿದೆ.

ಪುರಂದರದಾಸರು ತನ್ನ ಹೃದಯದಲ್ಲಿ ಬಿಂಬನನ್ನು ಕಾಣುವ ಬಿಂಬೋಪಾಸನೆಯನ್ನು ಇಲ್ಲಿ ಉಲ್ಲೇಖಿಸುತ್ತಾರೆ. ಮಧ್ವಾಚಾರ್ಯರು ಗೀತಾಭಾಷ್ಯದಲ್ಲಿ 'ಸರ್ವೇಷಾಂ ಬಿಂಬರೂಪೋ ಹರಿರೇವ' ಎಂಬ ಸೂತ್ರವನ್ನು ನಿರೂಪಿಸಿದ್ದಾರೆ. ಭಕ್ತನು ಪರಮಾತ್ಮನನ್ನು ತನ್ನ ಬಿಂಬವೆಂದು ತಿಳಿದಾಗ ತನ್ನ ನಿಜಸ್ವಾಮಿ ಯೆಂದು ಮುಖ್ಯ ಸ್ವತಂತ್ರನೆಂದು ತನ್ನ ಎಲ್ಲಾ ಕೆಲಸ ಕಾರ್ಯಗಳಿಗೂ ಅವನೇ ಪ್ರೇರಕನೆಂದು ತಿಳಿಯುವನು. ಜೀವ ಮತ್ತು ಈಶರು [ಪ್ರತಿಬಿಂಬ ಮತ್ತು ಬಿಂಬರು] ಅನಾದಿ ಕಾಲದಿಂದ ಒಂದೆಡೆ ನೆಲೆಸಿದ್ದಾರೆ. ಜೀವನಹೃದಯ ಗುಹೆಯಲ್ಲಿ, ಜೀವನು ತನ್ನ ಹೃದಯದಲ್ಲೇ ಬಿಂಬನನ್ನು ಕಂಡುಕೊಂಡು, ಒಳಗೆ ಬಿಂಬ, ಹೊರಗೆ ರಕ್ಷಕ ಎಂದು ಧ್ಯಾನಿಸುವುದು ಜೀವನಲ್ಲೆಲ್ಲಾ ಬಿಂಬನು ನಿತ್ಯವ್ಯಾಪ್ತನೆಂದು ಅರಿತುಕೊಳ್ಳುವುದು ಬಿಂಬೋಪಾಸನೆಯೆನಿಸುತ್ತದೆ.

ಕರಿ (ಆನೆ): ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ
ನಿನ್ನ ಸುತ್ತಿಹುದೆಲ್ಲ ಎನ್ನ ಮನವಯ್ಯ
ಜಗವು ನಿನ್ನೊಳಗೆ ನೀನು ಎನ್ನೊಳಗೆ
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು
ಕರಿಯು ಕನ್ನಡಿಯೊಳು ಅಡಗಿಪ್ಪ ತೆರನಂತೆ
ನೀನು ಎನ್ನೊಳಡಗಿಪ್ಪೆ ಪುರಂದರ ವಿಠಲ.

ಕರಿ ಎಂದರೆ ಆನೆ. ಕನ್ನಡಿಯೊಳಗೆ ಅದರ ಪ್ರತಿಬಿಂಬವನ್ನು ನೋಡುವಂತೆ ಜೀವನು ಈಶ್ವರನ ಪ್ರತಿಬಿಂಬನಾಗಿದ್ದಾನೆ. ಈ ಉಗಾಭೋಗವು ಭಗವದ್ಗೀತೆ ಎರಡನೆ ಅಧ್ಯಾಯ ೧೭ನೇ ಶ್ಲೋಕದ ಅರ್ಥವನ್ನು ತಿಳಿಸುತ್ತದೆ ಅದು ಹೀಗಿದೆ.

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್
ವಿನಾಶಮವ್ಯಯ ಸ್ಯಾಸ್ಯನ ಕಶ್ಚಿತ್ಕರ್ತು ಮರ್ಹತಿ
[ಭಗವದ್ಗೀತೆ ಅಧ್ಯಾಯ ೨: ೧೭]

ಯಾವುದರಿಂದ ಈ ಸಂಪೂರ್ಣ ದೃಶ್ಯ ಜಗತ್ತು ವ್ಯಾಪ್ತವಾಗಿದೆಯೋ ಅದನ್ನು ನೀನು ನಾಶರಹಿತವಾದು ದೆಂದು ತಿಳಿ. ಈ ಅವಿನಾಶಿಯ ವಿನಾಶವನ್ನು ಮಾಡಲು ಯಾರೂ ಕೂಡ ಸಮರ್ಥರಲ್ಲ ಎಂಬುದು ಅರ್ಥ; ಆನೆಯು ಪರಮಾತ್ಮನನ್ನು ಸಂಕೇತಿಸುತ್ತದೆ. ಪರಮಾತ್ಮನು ಅವಿನಾಶಿಯು ಜನ್ಮರಹಿತನು, ಸರ್ವವ್ಯಾಪ್ತನೂ ಆಗಿದ್ದಾನೆ. ಅದಕ್ಕಾಗಿ ಪುರಂದರದಾಸರು ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ ಎಂದಿದ್ದಾರೆ. ಜೀವನು ಪರಮಾತ್ಮನ ಪ್ರತಿಬಿಂಬದಂತೆ ಸರ್ವಕಾಲದಲ್ಲಿಯೂ ಬಿಂಬನ ಆಧೀನವಾಗಿದ್ದಾನೆ. ಬಿಂಬ ಮಾಡಿದಂತೆ ಪ್ರತಿಬಿಂಬವೂ ಚಲನವಲನಗಳನ್ನು ಮಾಡುತ್ತದೆ. ಪರಮಾತ್ಮನೇ ಜೀವನದಲ್ಲಿ ಪ್ರೇರಕನಾಗಿ, ತನ್ನಿಯಾಮಕನಾಗಿ ಇರುವುದರಿಂದಲೇ ಜೀವನು ತನ್ನ ಕಾರ್ಯ ಕಲಾಪಗಳನ್ನು ಮಾಡಲು ಸಮರ್ಥನಾಗುತ್ತಾನೆ. ಅದಕ್ಕಾಗಿ ನಿನ್ನ ಸುತ್ತಿಹುದೆಲ್ಲ ಎನ್ನ ಮನವಯ್ಯ ಎಂದಿದ್ದಾರೆ.

ಅನಂತರೂಪಿಯಾದ ಪರಮಾತ್ಮನು ಜಗತ್ತನ್ನೇ ತನ್ನೊಳಗೆ ಧರಿಸಿದ್ದಾನೆ. [ಭಗವದ್ಗೀತೆ: ಅಧ್ಯಾಯ–೧೧ ವಿಶ್ವರೂಪದರ್ಶನ ಯೋಗ] ಮತ್ತು ಬಿಂಬರೂಪಿಯಾದ ಪರಮಾತ್ಮನು ನನ್ನೊಳಗೆ ನೀನು ಎಂಬಂತೆ ಜೀವಿಯ ಅಂತರ್ಯಾಮಿಯಾಗಿದ್ದಾನೆ. ಇಡೀ ಜಗತ್ತಿಗೆ ಈ ಸತ್ಯ ತಿಳಿದಿದೆ ಹಾಗೂ ಬೃಹದಾಕಾರಹೊಂದಿದ ಆನೆ ಕನ್ನಡಿ ಯೊಳಗೆ ತನ್ನ ಪ್ರತಿಬಿಂಬ ತೋರುವಂತೆ, ವಿಶ್ವರೂಪಿಯಾದ ನೀನು ನನ್ನ ಹೃದಯದಲ್ಲಿ ಬಿಂಬ ರೂಪ ದಲ್ಲಿರುವೆ ಎಂದಿದ್ದಾರೆ ಪುರಂದರದಾಸರು. ಆನೆ ಇಲ್ಲಿ ಪರಮಾತ್ಮನ ಸರ್ವವ್ಯಾಪ್ತಿತ್ವವನ್ನು ಸಂಕೇತಿಸು ತ್ತದೆ.

**ಕಪ್ಪೆ:**

ಹೃದಯದ ಮಲವನ್ನು ತೊಳೆಯಲರಿಯದೆ ತಾವು
ಉದಯಲೆದ್ದು ಮಿಂದು ಗದಗದ ನಡುಗುತ್ತ
ಅದರಿಂದೇನು ಫಲ ಅದಕ್ಕಿಂತ ಉದಯಾಸ್ತಮಾನ
ನೀರೊಳಗಿಪ್ಪ ಮುದಿ **ಕಪ್ಪೆ** ಮಾಡಿದ ತಪ್ಪೇನಯ್ಯ
ಪುರಂದರ ವಿಠಲನ ನಾಮವ ನೆನೆಯದೆ
ದಿನಕಿನ್ನು ನೂರುಬಾರಿ ಮುಳುಗಿದರೇನಯ್ಯ

ಉದಯ ಕಾಲದಲ್ಲೆದ್ದು ನೀರಲ್ಲಿ ಮುಳುಗಿ ಗಡ ಗಡ ನಡುಗುತ್ತ ಪೂಜೆ ಮಾಡುವಾಗ ಹೃದಯ ಶುದ್ಧಿಯಿರಬೇಕು ಎನ್ನುತ್ತಾರೆ ದಾಸರು. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರ ಮುಂತಾದ ಅವಗುಣಗಳು ಇಟ್ಟು ಕೊಂಡು ಹೊರನೋಟಕ್ಕೆ ಸಾತ್ವಿಕನಂತೆ ತೋರಿಸಿದರೆ ಫಲವಿಲ್ಲ. ಅಂತಹ ಮನುಷ್ಯನಿಗೂ, ಹಗಲು, ಇರುಳು, ನೀರೊಳಿರುವ ಮುದಿ ಕಪ್ಪೆಗೂ ಏನು ವ್ಯತ್ಯಾಸವಿಲ್ಲ ಎನ್ನುತ್ತಾರೆ ಪುರಂದರದಾಸರು.

ಕೆಲವರು ನೀರಲ್ಲಿ ನಿಂತು ಮೂಗು ಓಡಿದು ಧ್ಯಾನ ಮಾಡುತ್ತಾರೆ. ಆದರೆ ಅವರಲ್ಲಿ ಹರಿಭಕ್ತಿ ಮನಸ್ಸಿನಲ್ಲಿ ಏಕಾಗ್ರತೆ ಇರುವುದಿಲ್ಲ. ಮಾಡುವ ಕ್ರಿಯೆಯಲ್ಲಿ ಭಕ್ತಿ ಇಲ್ಲದಿದ್ದರೆ ಅಂತಹ ಕ್ರಿಯೆಯನ್ನು ಜೀವನ ಪೂರ್ತಿ ಮಾಡಿದರೂ ಫಲವಿಲ್ಲ. ನಡೆ–ನುಡಿಗಳ ನಡುವೆ ಏಕತೆಯನ್ನು ಬಯಸುವ ಪುರಂದರದಾಸರು ಬೂಟಕತನವನ್ನು ಪ್ರದರ್ಶಿಸುವ ಜನರನ್ನು ಟೀಕಿಸಿ ಪುರಂದರ ವಿಠಲನ ನಾಮವ ನೆನೆಯದೆ ವ್ರತ ನಿಯಮಗಳು ವ್ಯರ್ಥ ಎಂದು ಬುದ್ಧಿವಾದ ಹೇಳುತ್ತಾರೆ.

**ಕಾಗೆ:** ತೊಳಲದಿರು ಕಂಡ್ಯ ಕಡೆಗೆ ಪರಮಾತ್ಮ
ನೊಳಕಂಡು ಸುಖಿಸೊ ಮನವೆ ಪ॥
. . . . . . . . . . . . . . . . . . . . .
ನಾಗ ಸುರ ನರಲೋಕವ ತಿರುಗಿತಿರುಗಿ
ಕಾಗೆಯಂತೆಡೆಯಾಡದೆ
ರಾಗ ದ್ವೇಷವ ತೊಲಗಿಸಿ ಮನದಿ ಮಧು
ಸೂದನನ ಕಾಣು ಕಂಡ್ಯ ಮನವೆ
. . . . . . . . . . . . . . . . . . . . .

ಪಾತಾಳ, ಸ್ವರ್ಗ, ಮನುಷ್ಯಲೋಕಗಳಲ್ಲಿ ತಿರುತಿರುಗಿ ಕಾಗೆಯಂತೆ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಹಾರಾಡದೆ, ರಾಗ ದ್ವೇಷವ ತೊಲಗಿಸಿ ಮುಕ್ತಿಯನ್ನು ಹೊಂದು, ಮಧುಸೂದನನ್ನು ಕಾಣು ಎಂಬುದು ಪುರಂದರದಾಸರ ಬೋಧನೆ. 'ಕಾಗೆ' ಪ್ರತಿಮೆ ಸ್ಥಿರ ಸ್ಥಾನವಿಲ್ಲದೆ ಅಲ್ಲಿಂದ ಇಲ್ಲಿಗೆ ಹಾರಾಡುವ ಪ್ರವೃತ್ತಿಯನ್ನು ಸಂಕೇತಿಸುತ್ತದೆ. ಮನುಷ್ಯನು ತನ್ನ ಕಾರ್ಯಗಳಿಗನುಗುಣವಾಗಿ ಕರ್ಮದಿಂದ ಬಂದಿತನಾಗಿ ಬೇರೆ ಬೇರೆ ಲೋಕಗಳಲ್ಲಿ ಜನ್ಮ ತಾಳುತ್ತಾ ಕಾಗೆಯಂತೆ ಹಾರಾಡದೆ ಜನನ ಮರಣಗಳಿಂದ ಮುಕ್ತನಾಗಿ ಮೋಕ್ಷವನ್ನು ಪಡೆಯಲು ಮಧುಸೂದನನ್ನು ಭಜಿಸುವುದೇ ಇದಕ್ಕೆ ಗುರಿ.

**ಕಾಗೆ:** ಮಲವ ತೊಳೆಯಬಲ್ಲರಲ್ಲದೆ
ಮನವ ತೊಳೆಯ ಬಲ್ಲರೆ ಪ॥
. . . . . . . . . . . . . . . . . . . . .
ಭೋಗ ವಿಷಯ ಫಲವನುಂಡು ರಾಗಲೋಭದಿಂದ ಮತ್ತ
ನಾಗಿ ಮೆರೆಯುತಿರೆ ಅವನ ಭಾಗ್ಯವಂತನೆಂಬರೆ
ಯೋಗಿಯಂತೆ ಜನರು ಮೆಚ್ಚುವಂತೆ ಹೋಗಿ ನೀರಿನಲ್ಲಿ
ಕಾಗೆಯಂತೆ ಮುಳುಗಿ ಮಾಘಸ್ನಾನ ಫಲವು ಬಾಹೋದೆ
. . . . . . . . . . . . . . . . . . . . .

ಜೀವನದಲ್ಲಿ ವಿಷಯಭೋಗಗಳನ್ನು ಅನುಭವಿಸುತ್ತಾ ಸೊಕ್ಕಿನಿಂದ ಮೆರೆಯುತ್ತಿರುವವ ರನ್ನು ಭಾಗ್ಯ ವಂತನೆನ್ನಲಾಗುವುದಿಲ್ಲ. ಉಪಭೋಗದಿಂದ ಕಾಮವು ಎಂದೂ ಕಡಿಮೆಯಾಗುವುದಿಲ್ಲ. ತುಪ್ಪದಿಂದ ಬೆಂಕಿಯು ಪ್ರಜ್ವಲಿಸುವಂತೆ ಉಪಭೋಗದಿಂದ ಭೋಗದಾಸೆಯು ಇನ್ನೂ ಹೆಚ್ಚಾಗುತ್ತದೆ. ಕೇವಲ ಜನರನ್ನು ಮೆಚ್ಚಿಸ ಲೋಸುಗ ಕಾಗೆಯಂತೆ ನೀರಿನಲ್ಲಿ ಮುಳುಗಿದರೆ ಫಲ ಸಿಗುವುದಿಲ್ಲ. 'ಕಾಗೆ' ಪ್ರತಿಮೆ ಇಲ್ಲಿ ಮನುಷ್ಯನಲ್ಲಿರುವ ಬೂಟಕತನದ ಸಂಕೇತವಾಗಿದೆ.

**ಕಾಗೆ:** ಕಾಗೆ ಕೂಗಿತಲ್ಲ ಈಗ ಬಂದು

ಕಾಗೆ ಕೂಗಿತಲ್ಲ ಪ।

ಎಲ್ಲರೇಳದ ಮುನ್ನ ಗುಲ್ಲು ಮಾಡುತಲೆದ್ದು
ಚೆಲ್ಲಿದ ಧವ ಧಾನ್ಯವ ಮೆಲ್ಲುತ
ಮಲ್ಲಿಗೆ ಮುಡಿಯುವವರು ಮರೆದೊರಗಲು ಬೇಡಿ
ಫುಲ್ಲನಾಭನ ಪೂಜಾ ಸಮಯವೆಂದು
. . . . . . . . . . . . . . . . . . . . .

ಕಾಗೆಯಂತಹ ನಿಕೃಷ್ಟ ಪ್ರಾಣಿಯೂ ಕೂಡ ಬೇರೆಯವರಿಗೆ ಹೇಗೆ ಉಪಯೋಗವಾಗುವುದು ಎನ್ನುವುದನ್ನು ತಿಳಿಸುತ್ತಾ ಪ್ರತಿಯೊಬ್ಬ ವ್ಯಕ್ತಿಯೂ ಪರಮಾತ್ಮನಲ್ಲಿ ಭಕ್ತಿ ಇಡದಿದ್ದರೆ ಕಾಗೆಗಳಿಗಿಂತ ಹೀನನೆಂದು ತಿಳಿಯಬೇಕೆನ್ನುವುದು ಗೂಡಾರ್ಥ.

ಎಲ್ಲರೇಳುವ ಮುನ್ನ ಎದ್ದು ಗುಲ್ಲುಮಾಡುತ್ತಾ ಚೆಲ್ಲಿದ ಧವಸ ದಾನ್ಯಗಳನ್ನು ತಿನ್ನುತ್ತಾ ಮಲ್ಲಿಗೆ ಮುಡಿಯುವ ಹೆಣ್ಣು ಮಕ್ಕಳನ್ನು ಮಲಗಲು ಬಿಡದೆ ಫುಲ್ಲನಾಭನ ಪೂಜಾಸಮಯವನ್ನು ತಿಳಿಸುತ್ತದೆ. ಕಾಗೆಯಿಂದಾಗುವ ಉಪಯೋಗಗಳನ್ನು ಮುಂದಿನ ನುಡಿಗಳಲ್ಲಿ ಹೇಳುತ್ತಾರೆ ಪುರಂದರದಾಸರು. ಎಲ್ಲರೇಳುವ ಮುಂಚೆ ಎದ್ದು ಕೇರಿಕೇರಿಯಲ್ಲಿ ಸಂಚರಿಸಿ ನೆಂಟರು ಬರುವ ಸುದ್ದಿ ಹೇಳುವುದು. ಪಿತೃಗಳಕಾರ್ಯಕ್ಕೆ ಅನುಕೂಲವಾಗುವುದು. ಶ್ರೇಷ್ಠ ಬ್ರಾಹ್ಮಣರ ಬಲಿಹರಣವ ತಿಂದು ಪಟ್ಟ ಸಾಲೆಮೇಲೆ ಕೂಗುವ ಕಾಗೆಯಿದೆಂದು ಇದನ್ನು ಅತಿ ಹೇಯವಸ್ತುವೆನಲು ಬೇಡಿ ಎಂದು ತಿಳಿ ಹೇಳುತ್ತಾರೆ.

**ಕುರುಡುನಾಯಿ:** ಕುರುಡು ನಾಯಿ ತಾ ಸಂತೆಗೆ ಬಂತಂತೆ
ಅದು ಏತಕೆ ಬಂತೋ ಪ।

ಖಂಡಸಕ್ಕರೆ ಹಿತವಿಲ್ಲವಂತೆ
ಖಂಡ ಎಲುಬು ಕಡಿದಿತಂತೆ
ಹೆಂಡಿರ ಮಕ್ಕಳ ನೆಚ್ಚಿತಂತೆ
ಕೊಂಡು ಹೋಗುವಾಗ ಯಾರಿಲ್ಲವಂತೆ
. . . . . . . . . . . . . . . . . . . . . ೧।

ಕುರುಡು ನಾಯಿ ಅನ್ಯಥಾ ಜ್ಞಾನದಿಂದ ಕೂಡಿದ ಜೀವಿಯನ್ನು ಸಂಕೇತಿಸುತ್ತದೆ. ಸಂತೆ ಎಂದರೆ ಸಂಸಾರ, ಯಾವ ಉದ್ದೇಶಕ್ಕಾಗಿ ಇಲ್ಲಿಗೆ ಬಂದೆ ಎಂಬ ಅರಿವಿಲ್ಲದ ಜೀವನಿಗೆ ಸ್ವರೂಪಜ್ಞಾನವನ್ನು ತಿಳಿಯುವ ಆಸಕ್ತಿಯಿಲ್ಲ. ಇಂದ್ರಿಯ ಸುಖಗಳೆಂಬ ಖಂಡ ಎಲುಬು ಕಡಿದು ಸಂಸಾರದಲ್ಲಿ ಹೆಂಡಿರು ಮಕ್ಕಳೇ ಹೆಚ್ಚೆಂದು ತಿಳಿದು ಜೀವನ ನಡೆಸಿದ ಜೀವಿಯನ್ನು ಮರಣ ಸಮಯದಲ್ಲಿ ಕೊಂಡು ಹೋಗುವಾಗ ಯಾರೂ ಜೊತೆಯಲ್ಲಿ ಬರುವುದಿಲ್ಲ ಎನ್ನುವುದು ಸತ್ಯ

ಭರದಿ ಅಂಗಡಿ ಹೊಕ್ಕಿತಂತೆ
ತಿರುವಿ ದೊಣ್ಣೆಯಲಿ ಇಕ್ಕಿದರಂತೆ
ಮರೆತರಿನ್ನು ವ್ಯರ್ಥವಂತೆ
ನರಕದೊಳಗೆ ಬಿದ್ದಿತಂತೆ. ೨।

ನಾಯಿ ಪ್ರತಿಮೆಯ ಮೂಲಕ ಹೆಚ್ಚಿನದನ್ನು ಆಸೆ ಪಟ್ಟರೆ ದೊಣ್ಣೆ ಏಟು ಸಿಗುವುದೆಂದು ಹರಿನಾಮ ಸ್ಮರಣೆಯನ್ನು ಮರೆತರೆ ನರಕವೇ ಗತಿ ಎಂದು ಆಧ್ಯಾತ್ಮಿಕ ಅರಿವು ಮೂಡಿಸುತ್ತಾರೆ.

ವೇದವಾದಗಳ ನೋಡಿತಂತೆ
ಗಾದೆ ಮಾಡಿ ಬಿಟ್ಟಿತಂತೆ
ಹಾದಿ ತಪ್ಪಿ ನಡೆದು ಯಮನ
ಬಾಧೆಗೆ ತಾ ಗುರಿಯಾಯಿತಂತೆ । ೩ ।

ಸಾಧುವೇಷ ಹಾಕಿ ವೇದ ಶಾಸ್ತ್ರಗಳನ್ನೋದಿ ಗಾದೆ ಮಾತುಗಳನ್ನು ತಿಳಿದು ಕುಟಿಲತೆ ಬಿಡದೆ, ವಿವೇಕವಿಲ್ಲದೆ ಹಾದಿ ತಪ್ಪಿ ನಡೆದರೆ ಯಮನ ಬಾಧೆಯಿಂದ ತಪ್ಪಿಸಿಕೊಳ್ಳಲಾಗದು.

ನಾನಾ ಜನ್ಮವನೆತ್ತಿತಂತೆ
ಮಾನವನಾಗಿ ಹುಟ್ಟಿತಂತೆ
ಕಾನನ ಕಾನನ ತಿರುಗಿತಂತೆ
ತಾನು ತನ್ನನ್ನೆ ಮರೆಯಿತಂತೆ

ನಾನಾ ಜನ್ಮಗಳನ್ನು ಪಡೆದು ಕೊನೆಗೆ ಮಾನವನಾಗಿ ಹುಟ್ಟಿದರೂ ಮಾನವ ಜನ್ಮದ ಫಲ ತಿಳಿಯದೆ ಸಂಸಾರವೆಂಬ ಅರಣ್ಯದಲ್ಲಿ ತಿರುಗಿ ತಾನು ಬಂದ ಉದ್ದೇಶವನ್ನೇ ಮರೆಯಿತೆಂದು ಹೇಳುತ್ತಾರೆ.

ಮಂಗನ ಕೈಯ ಮಾಣಿಕ್ಯದಂತೆ
ಹಾಂಗೂ ಹೀಂಗೂ ಕಳೆದಿತಂತೆ
ರಂಗ ಪುರಂದರವಿಠಲನ ಮರೆತು
ಭಂಗ ಬಹಳ ಪಟ್ಟಿತಂತೆ

ಮಂಗನಿಗೆ ತನ್ನ ಕೈಯಲ್ಲಿರುವ ಮಾಣಿಕ್ಯದ ಬೆಲೆ ತಿಳಿಯದು. ಹಾಗೆಯೇ ಮಾನವ ಜನ್ಮದ ಬೆಲೆ ತಿಳಿಯದೆ ಹಾಂಗೂ ಹೀಂಗೂ ಜೀವನ ಕಳೆದು ಕೊನೆಗೆ ಪಶ್ಚಾತ್ತಾಪ ಪಟ್ಟರೆ ಫಲವಿಲ್ಲ ಎಂದು ಪುರಂದರ ದಾಸರು ಹೇಳುತ್ತಾರೆ. ಗುರಿ ಇಲ್ಲದ ಮಾನವನ ಜೀವನ ಕುರುಡು ನಾಯಿಗೆ ಸಮಾನವೆಂದು ತಿಳಿಸುತ್ತಾರೆ.

**ಕೊಂಡಕೋತಿ:** ಹೆಂಡತಿ ಪ್ರಾಣ ಹಿಂಡುತಿ ದೊಡ್ಡ
ಕೊಂಡಕೋತಿಯಂತೆ ಕುಣಿ ಕುಣಿಸುತ್ತಿ । ಪ ।

ಹೊತ್ತಾರೆ ಏಳುತ್ತಿ ಹೊರಗೆ ತಿರುಗಾಡುತ್ತಿ
ಹೊತ್ತು ಹೋಯಿತು ಭತ್ಯ ತಾಯೆನ್ನುತ್ತಿ
ಉತ್ತಮ ಗುರುಹಿರಿಯರ ಮಾತು ಮಿರುತ್ತಿ
ಮೃತ್ಯು ದೇವತೆಯಂತೆ ಮನೆಯೊಳಗಿರುತಿ. । ೧ ।

ಇಲ್ಲದ್ದು ಬೇಡುತ್ತಾ ಸುಳ್ಳು ಮಾತಾಡುತ್ತಿ
ಒಳ್ಳೆ ಊಟವನುಂಡು ಕುಳಿತಿರ್ಪೆನಂತಿ
ಎಳ್ಳಿನಷ್ಟು ಕೆಲಸ ಮಾಡಲಾರೆನಂತಿ
ಎಲ್ಲೆಲ್ಲಿ ತಲೆಯೆತ್ತದ ಹಾಗೆ ಮಾಡುತ್ತಿ । ೨ ।

ಹಿರಿಯತನಕ ಹೋಗುತ್ತಿ ಗರುವಿಕೆ ಮಾಡುತ್ತಿ

ನೆರೆಹೊರೆಯರ ಕೂಡ ಬಡಿದಾಡುತ್ತಿ
ದೊರೆ ಸಿರಿ ಪುರಂದರ ವಿಠಲನ ಸ್ಮರಿಸದೆ
ದುರಿತಕ್ಕೆ ಗುರಿಯಾಗಿ ನಿ ನಿಲ್ಲುತ್ತಿ. ॥3॥

ಇಲ್ಲಿ ಸಂಸಾರದಲ್ಲಿಯ ಹೆಂಡತಿಯ ಅಸಹಕಾರವನ್ನು ಕೊಂಡಕೋತಿ ಉಪಮೇಯ ಮೂಲಕ ನಿರೂಪಿಸಲಾಗಿದೆ. ಇಲ್ಲಿ ಕೊಂಡಕೋತಿಯನ್ನು ಅತೃಪ್ತಿ ಅಸಮಾಧಾನಗಳಿಗೆ ಪ್ರತಿಮೆಯನ್ನಾಗಿ ಮಾಡಲಾಗಿದೆ. ಇಲ್ಲಿ ವಿಷಮ ದಾಂಪತ್ಯದ ಹೆಂಡತಿಯೊಬ್ಬಳ ಸ್ವಭಾವವನ್ನು ಚಿತ್ರಿಸಲಾಗಿದೆ. ದಾಂಪತ್ಯದಲ್ಲಿ ಸುಖ ಕಾಣಬೇಕಾದರೆ ಗಂಡ ಹೆಂಡತಿ ಇಬ್ಬರ ನಡುವೆಯೂ ಅನ್ಯೋನ್ಯತೆ ಇರಬೇಕು. ಇಬ್ಬರಲ್ಲಿ ಯಾರೊಬ್ಬರ ಸಹಕಾರದಿಂದ ವಂಚಿತರಾದರೆ ಇನ್ನೊಬ್ಬರಿಗೆ ನೆಮ್ಮದಿಯಿರುವುದಿಲ್ಲ. ಗಂಡನೊಂದಿಗೆ ಮಾತ್ರವಲ್ಲದೆ ನೆರೆ ಹೊರೆಯವರೊಂದಿಗೂ ಹೊಂದಿಕೊಳ್ಳದ ಅವಳನ್ನು ಬೆಟ್ಟದ ಕಪಿಯ ಸ್ವಭಾವದಂತೆ ವರ್ತಿಸುತ್ತಿ ಎಂದು ನಿಂದಿಸುತ್ತಾರೆ ದಾಸರು.

**ಕೋತಿ:** ಮತಿಗೆಟ್ಟು ಕಾಲವ ಕಳೆಯಬೇಡ ಸ
ದ್ಗತಿ ಕೊಡುವ ಹರಿಯ ನಂಬಲೋ ಮೂಢ ॥ಪ॥

ಕೋತಿಯಂತೆ ಕುಣಿದಾಡಬೇಡ ಸು
ನೀತಿ ಮಾರ್ಗವ ಪಿಡಿಯಲೋ ಗಾಢ ॥ಅ॥
. . . . . . . . . . . . . . . . . . . . .

ದೃಷ್ಟಾಂತಗಳ ಆಯ್ಕೆಯನ್ನು ಪುರಂದರದಾಸರ ಕೀರ್ತನೆಗಳು ಒಂದು ವಿಶಿಷ್ಟವಾದ ರೀತಿಯಲ್ಲಿ ಬಳಸಿಕೊಂಡಿವೆ. ಇವು ಕೀರ್ತನೆಯ ವಿಸ್ತರಣೆಯ ಅಗತ್ಯವಾಗಿ ಬಳಸದೆ ಸಮರ್ಥನೆಯ ರೂಪವಾಗಿ ಸಹಜವಾಗಿ ಮೂಡಿ ಬಂದಿವೆ. ಕೋತಿಯಂತೆ ಕುಣಿದಾಡಬೇಡ, ಬುದ್ಧಿ ಹೀನನಾಗಿ ಅನೀತಿಯ ಮಾರ್ಗದಲ್ಲಿ ನಡೆಯಬೇಡ. ಧೃಡ ಭಕುತಿ ಇದ್ದರೆ ಹರಿಯು ಸದ್ಗತಿಯನ್ನು ಕೊಡುವನು. ಇದನ್ನು ನಂಬು ಎಂದು ಇಲ್ಲಿ ಬುದ್ಧಿಮಾತು ಹೇಳುತ್ತಾರೆ.

**ಕೋತಿ:** ಯಾಕೆ ಚಿಂತಿಸುತಿದ್ದಿ **ಕೋತಿ**ಮನವೆ ॥ಪ॥

ಲೋಕನಾಥನ ನೆನೆದು ಸುಖಿಯಗು ಮನವೆ ॥ಅ॥

ಹುಟ್ಟುವಾಗಪತ್ತಿಗಾರು ಚಿಂತಿಸಿದವರು
ಕಟ್ಟ ಕಡೆಯಲಿ ಲಯಕೆ ಯಾರ ಚಿಂತೆ
ನಟ್ಟ ನಡುವಿನ ಬಾಳಿಗೇಕೆ ಚಿಂತಿಸುತಿರುವೆ
ಹುಟ್ಟಿದವರಿಗೆ ಮೂರು ಬಟ್ಟಿಲ್ಲವೆ ಮರುಳೆ.

ಇಲ್ಲಿ ಮನಸ್ಸನ್ನು ಕೋತಿ ಪ್ರತಿಮೆಯ ಮೂಲಕ ಚಿತ್ರಿಸಲಾಗಿದೆ. ಮನಸ್ಸೆಂಬುದು ಚಂಚಲ, ಹುಟ್ಟುವಾಗಲೂ ಸಾಯುವಾಗಲೂ ದಾರಿ ತೋರುವವನು ಆ ಪರಮಾತ್ಮ ಹುಟ್ಟು–ಸಾವಿನ ನಡುವಿನ ಬಾಳಿನಲ್ಲಿ ಬರುವ ಸುಖ ದುಖಃಗಳಿಗಾಗಿ ಏಕೆ ಚಿಂತಿಸುತ್ತಿ ಎಂದು ಪ್ರಶ್ನಿಸುತ್ತಾರೆ. ಎರಡನೆ ನುಡಿಯಲ್ಲಿ ನವಿಲಿಗೆ ಚಿತ್ರ ಬರೆದವರಾರು? ಹವಳದ ಲತೆಗೆ ಕೆಂಪಿಟ್ಟವರಾರು? ಗಿಳಿಗೆ ಹಸಿರು ಬಳಿದವರಾರು? ಇಷ್ಟೆಲ್ಲಾ ಮಾಡಿದ

ಸೃಷ್ಟಿಕರ್ತ ನಮ್ಮನ್ನು ಮರೆಯುವನೆ? ಎಂದು ಪ್ರಶ್ನಿಸುತ್ತಾ ಮೂರನೆಯ ನುಡಿಯಲ್ಲಿ ಬಸುರೊಳಗೆ ಶಿಶುವನ್ನು ಸಲಹಿದವರಾರು? ವಸುಧೆಯನ್ನು ಬಸಿರೊಳಗೆ ಇಟ್ಟವರಾರು? ಎಂದು ಆಧ್ಯಾತ್ಮ ಚಿಂತನೆಗೆ ಅಣಿಮಾಡಿ ಸೃಷ್ಟಿಕರ್ತನಾದ ಪರಮಾತ್ಮನೇ ಎಲ್ಲರ ಯೋಗ ಕ್ಷೇಮವನ್ನು ನೋಡುತ್ತಿರುವನು ಅದಕ್ಕೆ ಚಿಂತೆಬೇಡ ಎನ್ನುವ ಸಂದೇಶ ಇಲ್ಲಿದೆ ಇದನ್ನೆ ಕನಕದಾಸರು 'ತಲ್ಲಣಿಸದಿರು ಕಂಡ್ಯ ತಾಳು ಮನವೆ, ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಎಂದಿದ್ದಾರೆ. ಶ್ರೀ ಪುರಂದರವಿಠಲನ ಅಡಿದಾವರೆಗಳನ್ನು ನಂಬಿ ನಿಶ್ಚಿಂತೆಯಿಂದಿರುವುದೆ ಚಿಂತೆಗೆ ಉಪಾಯ.

**ಕೋತಿ:**

ಏಳೇಳು ಶರಧಿಯು ಏಕವಾಗಿದೆ ಕಂಡ್ಯ
ಹ್ಯಾಗೆ ಬಂದೆ ಹೇಳೋ ಕೋತಿ ಪ।

ಏಳು ಶರಧಿಯು ಎನಗೆ ಏಳು ಕಾಲುವೆಯು
ತೂಳಿ ಲಂಘಿಸಿ ಬಂದೆ ಭೂತ ಅ।

ಏಳುಸಮುದ್ರದೊಳಿರುವ ಮಕರಿ ಮತ್ಸ್ಯ
ಹ್ಯಾಗೆ ಬಿಟ್ಟರು ಹೇಳು ಕೋತಿ
ಏಳು ಸಮುದ್ರದ ಮಕರಿ ಮತ್ಸ್ಯದ ಕೂಡೆ
ಮಾತಾಡಿ ಬಂದೆನೋ ಭೂತ. ೧।
. . . . . . . . . . . . . . . . . . . .
. . . . . . . . . . . . . . . . . . . .
ಸಿರಿ ರಾಮಚಂದ್ರನು ನಿನ್ನರಸನಾದರೆ
ಆತ ಮುನ್ನಾರು ಹೇಳೋ ಕೋತಿ
ಹಿರಣ್ಯಕನನು ಸೀಳಿ ಪ್ರಹ್ಲಾದಗೋಲಿದ
ಶ್ರೀ ಪುರಂದರವಿಠಲನೋ ಭೂತ. ೯।

ಇಲ್ಲಿ ಕೋತಿಯು ಹನುಮಂತನನ್ನು ಸಂಕೇತಿಸಿದರೆ ಭೂತವು ರಾವಣನನ್ನು ಸಂಕೇತಿಸುತ್ತದೆ. ಇದು ಹನುಮಂತ ಮತ್ತು ರಾವಣ ಇವರ ನಡುವೆ ನಡೆದ ಸಂವಾದ ರೂಪದಲ್ಲಿದೆ. ಏಳು ಸಮುದ್ರಗಳನ್ನು ದಾಟಿ ಲಂಕೆಯ ದ್ವಾರದಲ್ಲಿರುವ ಲಂಕಿಣಿಯನ್ನು ಕೊಂದು ಸೀತೆಯನ್ನು ಭೇಟಿ ಮಾಡಿ ಲಂಕೆಯನ್ನು ದಹಿಸಿದ ಹನುಮನ ಸಾಹಸ ಕಾರ್ಯಗಳನ್ನು ಒಟ್ಟು ಒಂಬತ್ತು ನುಡಿಗಳಲ್ಲಿ ಸ್ವಾರಸ್ಯವಾಗಿ ವರ್ಣಿಸಿದ್ದಾರೆ ಪುರಂದರದಾಸರು. ಕೋತಿ ಮತ್ತು ಭೂತಗಳ ಸಂವಾದದ ನಡುವೆ ರಾಮಾಯಣದ ಉತ್ತರಾರ್ಧ ಕಥೆಯನ್ನು ಸಮೀಕರಿಸಿ ಶಬ್ದ ಚಿತ್ರಗಳ ಮೂಲಕ ಮಾಡಿದ ಅಭಿವ್ಯಕ್ತಿಯು ಶ್ರೇಷ್ಠವಾಗಿ ಅಪರೂಪವಾಗಿದೆ.

**ಕೋಕಿಲ:(ಕೋಗಿಲೆ)**

ಗೋಪ ಗೋಪನೆಂಬೊ **ಕೋಕಿಲ** ನಮ್ಮ
ಶ್ರೀ ಪತಿಯ ಕಂಡರೆ ಬರಹೇಳು ಕೋಕಿಲ
ಗೋಪ ಗೋಪನೆಂಬೊ ಕೋಕಿಲ ಪ।
. . . . . . . . . . . . . . . . . . . .
. . . . . . . . . . . . . . . . . . . .
. . . . . . . . . . . . . . . . . . . .
ಇಟ್ಟಾಡುವ ಶ್ರುತಿ ಸ್ಮೃತಿಗಳಲ್ಲಿ

ಬಟ್ಟೆಯ ಕಾಣೆವೊ ಪರಬೊಮ್ಮನ
ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ
ಥಟ್ಟನೆ ಕಂಡರೆ ಬರಹೇಳು ಕೋಕಿಲ.

ಗೋಕುಲದಲ್ಲಿ ವಾಸಿಸುತ್ತಿರುವ ಗೋಪಿಕಾಸ್ತ್ರೀಯರು ಗೋಪನೆಂಬ 'ಕೋಗಿಲೆ' ಯನ್ನು ಉದ್ದೇಶಿಸಿ ಹೇಳುವಂತಿದೆ. ಇಲ್ಲಿ 'ಕೋಗಿಲೆ' ಕೃಷ್ಣನ ಅನುಚರನಾದ ಉದ್ಧವನನ್ನು ಸಂಕೇತಿಸಲಾಗಿದೆ. 'ತಾನು ಸತಿ ಪರಮಾತ್ಮನು ಪತಿ' ಎಂಬ ಭಾವದಿಂದ ಮಾಡುವ ಆರಾಧನೆಗೆ ಮಧುರ ಭಕ್ತಿ ಎನ್ನಬಹುದು. ಪುರಂದರದಾಸರ ಕೃತಿಗಳಲ್ಲಿ ಮಧುರ ಭಾವದ ಈ ಕೃತಿಗೆ ಭಾಗವತ ದಶಮಸ್ಕಂದದಲ್ಲಿ ಬರುವ ಗೋಪಿ ಕೃಷ್ಣ ಪ್ರಸಂಗಗಳೇ ಆಕರ ಹಾಗೂ ಆದರ್ಶ.

ಇಲ್ಲಿ ಗೋಪಿಕಾಸ್ತ್ರೀಯೊಬ್ಬಳು ಕೃಷ್ಣನ ವಿರಹತಾಳಲಾರದೆ ಶ್ರೀಪತಿಯ ಕಂಡರೆ ಬರಹೇಳು ಎಂದು ಕೃಷ್ಣನ ಅನುಚರ ಉದ್ಧವನನ್ನು ಕುರಿತು ಹೇಳುತ್ತಿದ್ದಾಳೆ. ಮೊದಲಿನ ಎರಡು ನುಡಿಗಳಲ್ಲಿ ವಸಂತ ಮಾಸದಲ್ಲಿ ಗೋಪಿಕೆಯರು ವಸಂತನಲ್ಲಾಡುವ ಸಮಯಕ್ಕೆ ಪದುಮನಾಭನ ಕಂಡರೆ ಬರಹೇಳು. ಮಂಗಳಮಹಿಮನ ಸಂಗೀತ [ಕೊಳಲುನಾದ] ಕೇಳುವ ಆಸೆಯಾಗಿದೆ ಬರಹೇಳು ಎಂದು ಕೇಳುತ್ತಿದ್ದಾಳೆ. ಇಟ್ಟಾಡುವ [ಜಟಿಲವಾದ] ವೇದ, ಉಪನಿಷತ್ತುಗಳು ಪುರಾಣಗಳಲ್ಲಿ ದಾರಿಯ ಕಾಣದೆ ಪರಿತಪಿಸುತ್ತಿರುವೆವು. ಸೃಷ್ಟಿಯೊಳಗೆ ಪುರಂದರ ವಿಠಲನ ಕಂಡರೆ ಬರಹೇಳು ಎಂದು ಭಕ್ತನೊಬ್ಬನು ದೇವರ ದರ್ಶನಕ್ಕಾಗಿ ಹಾಗೂ ಸಾನಿಧ್ಯಕ್ಕಾಗಿ ತೋರುತ್ತಿರುವ ಉತ್ಕಟಾಪೇಕ್ಷೆ ಅಥವಾ ವ್ಯಾಕುಲ ಭಾವವನ್ನು ಕಾತರ ಭಾವವನ್ನು ಪುರಂದರದಾಸರು ಇಲ್ಲಿ ಸಂಕೇತಿಸಿದ್ದಾರೆ.

**ಕೋಣ:** ಮಡದಿ ಮಕ್ಕಳ ಪ್ರಪಂಚಕ್ಕಾಗಿ ದುಡಿ
ದುಡಿದು ಹಾಕಿದೆಯೊ ಮುದಿ ಕೋಣನಾಗಿ
ಮಡಿದು ಪೋಪಾಗ ಯಾರಿಲ್ಲವಾಗಿ ಇನ್ನು
ಧೃಡದಿ ನಿನ್ನೊಳು ನೀನು ತಿಳಿಯೊ ಗೂಗಿ.
. . . . . . . . . . . . . . . . . . . . . .

ಸಮಾಜದಲ್ಲಿ ಸಂಸಾರಿಯಾದವನು ನಿರ್ದಿಷ್ಟ ಗೊತ್ತುಗುರಿಗಳಿಂದ ಕೂಡಿ ಅರ್ಥಪೂರ್ಣ ಕೌಟುಂಬಿಕ ಜೀವನವನ್ನು ನಡೆಸಬೇಕೆಂದು ಪುರಂದರದಾಸರ ಅಭಿಲಾಷೆ. ಸಂಸಾರದ ಜಂಜಾಟದಲ್ಲಿಯೇ ಮುಳುಗಿ ಪರಮಾತ್ಮನನ್ನು ನೆನೆಯದೆ ಕಾಲ ಕಳೆಯುವವರನ್ನು ಬೇಸರದಿಂದ ಕೋಣ, ಗೂಗಿ, ಮೂಢ ಎಂದು ಸಂಬೋಧಿಸುತ್ತಾರೆ. ಕೋಣವು ಗೊತ್ತು ಗುರಿಯಿಲ್ಲದಂತೆ ದುಡಿಯುತ್ತದೆ. ಅದರಂತೆ ನೀನು ಮಡದಿ ಮಕ್ಕಳಿಗಾಗಿ ಎಷ್ಟು ದುಡಿದರೂ, ಸಾವು ಬಂದಾಗ ಯಾರು ಜೊತೆಯಲ್ಲಿ ಬರುವುದಿಲ್ಲ. ಆದ್ದರಿಂದ ಯಾವ ಕರ್ಮಗಳಿಂದ ತನ್ನ ಕೊನೆಯ ಗುರಿ ಮೋಕ್ಷವನ್ನು ಸಾಧಿಸಬಲ್ಲೆವು ಅಂತಹುದನ್ನು ನೀನು ತಿಳಿ ಎಂದು ಪುರಂದರದಾಸರು ಬುದ್ಧಿವಾದ ಹೇಳುತ್ತಾರೆ.

**ಗಿಳಿ:** ಗಿಳಿಯು ಪಂಜರದೊಳಿಲ್ಲ ಹರಹರಿಯೆ
ಬರಿಯ ಪಂಜರವಾಯಿತಲ್ಲ ಪ।

ಅಕ್ಕ ಕೇಳೆ ಎನ್ನ ಮಾತು

ಚಿಕ್ಕದೊಂದು ಗಿಳಿಯ ಸಾಕಿದೆ
ಅಕ್ಕ ನಾನಿಲ್ಲದ ವೇಳೆ
ಬೆಕ್ಕು ಕೊಂಡು ಹೋಯಿತಯ್ಯೋ. ೧।

ಅರ್ಥಿಲೊಂದು ಗಿಳಿಯ ಸಾಕಿ
ಮುತ್ತಿನ್ಹಾರವನ್ನು ಹಾಕಿದೆ
ಮುತ್ತಿನ್ಹಾರ ಕೊಂಡು ಗಿಳಿಯು
ಎತ್ತಲ್ಹಾರಿ ಹೋಯಿತಯ್ಯೋ. ೨।

ಇಲ್ಲಿ ಬರುವ ಗಿಳಿ ಪ್ರತಿಮೆ ದೇಹವೆಂಬ ಪಂಜರದೊಳಗಿನ ಆತ್ಮವನ್ನು ಸಂಕೇತಿಸುತ್ತದೆ. ಗಿಳಿ ತನ್ನ ಚೌಕಟ್ಟಿನ ಪರಿಭಾಷೆಯಲ್ಲಿ ಅತ್ಯಂತ ಗಂಭೀರವಾದ ಆಧ್ಯಾತ್ಮಿಕ ಚಿಂತನೆಯೆಡೆಗೆ ಓದುಗನನ್ನು ಎಳೆದೊ ಯ್ಯುತ್ತದೆ. ಈ ಕೀರ್ತನೆಯಲ್ಲಿ ಅಕ್ಕ ಕೇಳೆ! ಎಂದು ಒಬ್ಬಳು ಸ್ತ್ರೀಯನ್ನು ಸಂಬೋಧಿಸಿ ಹೇಳಿದಂತಿದೆ. ಗಿಳಿಯು ಪಂಜರದೊಳಿಲ್ಲ ಎಂದು ಆತಂಕದಿಂದ ತಾನು ಸಾಕಿದೆ ಗಿಳಿ ತಾನಿಲ್ಲದ ವೇಳೆ ಬೆಕ್ಕು ಕೊಂಡು ಹೋಯಿತು ಎಂದು ತಿಳಿಸುತ್ತದೆ. 'ಅಯ್ಯೋ' ಎಂಬುದು ಪ್ರತಿ ನುಡಿಯ ಕೊನೆಗೆ ಪುನರಾವರ್ತನೆಯಾಗುತ್ತ ನೋವಿನ ಭಾವನೆಯನ್ನು ಧ್ವನಿಸುತ್ತದೆ. ಪ್ರೀತಿಯಿಂದ ಸಾಕಿದ ಗಿಳಿಗೆ ಹಾಕಿದ ಮುತ್ತಿನ ಹಾರವು ದೇಹಕ್ಕೆ ಮಾಡುವ ಅಲಂಕಾರವನ್ನು ಸೂಚಿಸುತ್ತದೆ.

ಗಿಳಿ: ಹಸುರು ಬಣ್ಣದ ಗಿಳಿಯು
ಕುಶಲ ಬುದ್ಧಿಯ ಗಿಳಿಯು
ಅಸುವು ಗುಂದಿ ಮರಿಯು ತಾನು
ಹಸನ ಗೆಡಿಸಿ ಹೋಯಿತಯ್ಯೊ ೩।

ರಾಮ ರಾಮ ಎಂಬ ಗಿಳಿ
ಕೋಮಲ ಕಾಯದ ಗಿಳಿ
ಸಾಮಜ ಪೋಷಕ ತನ್ನ
ಪ್ರೇಮದಿ ಸಾಕಿದ ಗಿಳಿ. ೪।

ಒಂಬತ್ತು ಬಾಗಿಲ ಮನೆಯೊಳ್
ತುಂಬಿದ ಸಂದಣಿ ಇರಲು
ಕಂಭ ಮುರಿದು ಡಿಂಬ ಬಿದ್ದು
ಅಂಬರಕ್ಕೆ ಹಾರಿ ಹೋಯಿತು. ೫।

. . . . . . . . . . . . . . . . . . . . .

ಹಸಿರು ಬಣ್ಣವು ಗಿಳಿ ಎಂಬ ಮಾತು ಚೈತನ್ಯಶೀಲತೆಯನ್ನು ಕುಶಲಬುದ್ಧಿಯ ಗಿಳಿಯು ಒಳ್ಳೆಯ ಜ್ಞಾನವನ್ನು ಚಿತ್ರಿಸುತ್ತದೆ. ಅಸುವುಗುಂದಿ ಎಂದರೆ ಪ್ರಾಣವನ್ನು ಕಳೆದುಕೊಂಡು ನನ್ನ ಮನಸ್ಸಿನ ನೆಮ್ಮದಿಕ ಳೆದು ಹೋಯಿತಲ್ಲ ಎನ್ನುತ್ತಾರೆ ಪುರಂದರದಾಸರು.

ರಾಮ ರಾಮ ಎನ್ನುವ ಕೋಮಲ ದೇಹದ ಗಿಳಿಯು ಸಾಮವೇದದಿಂದ ಉತ್ಪನ್ನವಾದ ಸಂಗೀತ ವಿದ್ಯೆಯನ್ನು ಬಲ್ಲ ತಾನು ಪ್ರೇಮದಿಂದ ಸಾಕಿದ ಗಿಳಿ ಎನ್ನುವರು. ಒಂಬತ್ತು ಛಿದ್ರಗಳಿರುವ ದೇಹವೆಂಬ ಮನೆ ಬಿದ್ದು ಆಕಾಶಕ್ಕೆ ಹಾರಿಹೋಯಿತು.ಎನ್ನುತ್ತಾ ಗಿಳಿಯ ಬಗ್ಗೆ ಇನ್ನಷ್ಟು ತಿಳಿಸುತ್ತಾರೆ.

ಮುಪ್ಪಾಗದ ಬೆಣ್ಣೆ ತಿಂದು
ತಪ್ಪದೆ ಹಾಕಿದ ಹಾಲ
ಒಪ್ಪದಿಂದ ಕುಡಿದು ಕೈತಪ್ಪಿ
ಹಾರಿ ಹೋಯಿತಯ್ಯ ।೭।

ಅಂಗೈಲಾಡುವ ಗಿಳಿ
ಮುಂಗೈಮೇಲಣ ಗಿಳಿ
ರಂಗ ಪುರಂದರ ವಿಠಲನ್ನ
ಅಂಗಳದೊಳಾಡುವ ಗಿಳಿ. ।೮।

ಅಂಗೈಲಾಡುವ, ಮುಂಗೈಮೇಲಣ ಗಿಳಿಗೆ ಹಾಲು ಬೆಣ್ಣೆ ಹಾಕಿ ಉಪಚಾರ ಮಾಡಿದೆನೆಂದು ಇಲ್ಲಿ ಗಿಳಿಯನ್ನು ಸಾಕುವುದು ಒಂದು ಜೀವವನ್ನು ಪೋಷಿಸಿದ ಸಂದರ್ಭವನ್ನು ನೆನಪಿಸುತ್ತದೆ. ತಾನು ಇಲ್ಲದಾಗ 'ಯಮ' ಎಂಬ ಬೆಕ್ಕು ಕೊಂಡು ಹೋಗಿದೆ. ಪಂಜರ ತೆಗೆದು ಆಕಾಶಕ್ಕೆ ಹಾರಿಹೋದ ಗಿಳಿಯು ಈಗ ಪುರಂದರವಿಠಲನ ಅಂಗಳದೊಳಗಾಡುತ್ತಿದೆ ಎಂದು ಜೀವವು ದೇಹದಿಂದ ಮುಕ್ತವಾಯಿತೆಂದು ತಿಳಿಸುತ್ತಾರೆ ಪುರಂದರದಾಸರು.

ಗಿಳಿ ರೂಪಕ ಯಾವುದೋ ವ್ಯಕ್ತಿಯ ಸಾವಿನ ಸಂದರ್ಭವನ್ನು ಚಿತ್ರಿಸುತ್ತದೆ. ಈ ಕೀರ್ತನೆ ಪುರಂದರದಾಸರ ಮಗ ತಮ್ಮ ಕಣ್ಣ ಮುಂದೆಯೇ ತೀರಿಕೊಂಡ ಸಂದರ್ಭದಲ್ಲಿ ರಚಿತವಾದದ್ದೆಂದು ಕೆಲವರ ಅಭಿಪ್ರಾಯ. ಗಿಳಿ ಪ್ರತಿಮೆ ಸಹಜ ಮಾತುಗಳಲ್ಲಿ ಜಟಿಲ ಅರ್ಥಗಳನ್ನು ಇಲ್ಲಿ ಬಿಚ್ಚಿಡುತ್ತದೆ.

**ಗುಬ್ಬಿ:** ಸುಲಭವಲ್ಲವೋ ಮಹದಾನಂದ ತನ್ನೊಳಗೆ ತಾ
ತಿಳಿಯೋತನಕ ಗುರುದಯದಿಂದ ಪ।

ಇಬ್ಬರೊಡನೆ ಕೂಡೋತನಕ ಮುವ್ವ
ರ್ಹಬ್ಬಿದ ಬೆಟ್ಟವ ನೊಣ ನುಂಗೋತನಕ
ಒಬ್ಬಳೊಡನೆ ಸೇರೋತನಕ ಕೆಟ್ಟ
ಗುಬ್ಬಿಯ ರಾಜಹಂಸನ ಮಾಡೋತನಕ
. . . . . . . . . . . . . . . . . . . . . .

'ಸುಲಭವಲ್ಲವೋ ಮಹದಾನಂದ' ಎಂಬ ಪಲ್ಲವಿಯೊಡನೆ ಶುರುವಾಗುವ ಈ ಕೀರ್ತನೆ ಗೂಢಾರ್ಥ ಗಳನ್ನು ಬಿಚ್ಚಿಡುವ 'ಮುಂಡಿಗೆ' ಪ್ರಕಾರಕ್ಕೆ ಸೇರುತ್ತದೆ. ಆಧ್ಯಾತ್ಮ ಸುಖವೇ ಮಹದಾನಂದ ಎಂಬ ಅರ್ಥ ಇಲ್ಲಿದೆ. ಇಬ್ಬರೊಡನೆ ಎಂದರೆ ಜೀವಾತ್ಮ–ಪರಮಾತ್ಮ ಒಡನೆ–ಕೂಡಲೆ ಇಬ್ಬರೂ ಕೂಡಿದಾಗ ಆನಂದವು ಸಿಗುವುದು. ಕಾಯಾ–ವಾಚಾ–ಮನಸಾ ಮಾಡಿದ ಮೂರು ಕರ್ಮಗಳು ಮೂರು ಬೆಟ್ಟಗಳು, ಇಲ್ಲಿಯವರೆಗೆ ಮಾಡಿದ ಕರ್ಮವು ಸಂಗ್ರಹ ಮಾಡಿಟ್ಟುಕೊಂಡ 'ಸಂಚಿತ ಕರ್ಮ' ಇನ್ನು ಮುಂದೆ ದೇಹ, ಮನಸ್ಸು ಮಾತಿನಿಂದ ಮಾಡಲ್ಪಡುವ ಕರ್ಮವು 'ಅನಾಮಿ ಕರ್ಮ' ಈಗ ಮಾಡುತ್ತಿರುವ ಅನುಭವಿಸುತ್ತಿರುವ ಕರ್ಮವು ಸೇರಿ, ತ್ರಿವಿಧ

ಕರ್ಮಗಳು ಅವು ಮೂರು ಬೆಟ್ಟದಷ್ಟಿವೆ. ಜ್ಞಾನವೆಂಬುದು ಸೊಣದಂತೆ ಸೂಕ್ಷ್ಮ. ಉತ್ತಮ ಜ್ಞಾನವೆಂಬ ಸೊಣ ಈ ಮೂರು ಬೆಟ್ಟಗಳನ್ನು ನುಂಗುವ ಶಕ್ತಿ ಪಡೆದುಕೊಂಡಾಗಲೇ ಮಹದಾನಂದ. ಒಬ್ಬಳೊಡನೆ ಸೇರಬೇಕು ಎಂದರೆ ಅವಳು 'ಭಕ್ತಿ' (ಭಜ್‌ದಾತುಕ್ತಿನ್ ಪ್ರತ್ಯಯದಿಂದ ಭಕ್ತಿ ಶಬ್ದವು ನಿರ್ಮಾಣವಾಗಿದೆ.) ಭಕ್ತಿ ನಮ್ಮಲ್ಲಿ ಸೇರಿದರೆ ಮುಕ್ತಿ.

'ಗುಬ್ಬಿ' ಪ್ರತಿಮೆ ಜೀವರನ್ನು ಸಂಕೇತಿಸುತ್ತದೆ. ಗುಬ್ಬಿ ಗಿಡದಿಂದ ಗಿಡಕ್ಕೆ ಹಾರಿದಂತೆ, ಜೀವಿಯು (ಆತ್ಮವು) ದೇಹದಿಂದ ದೇಹಕ್ಕೆ ಹಾರುವುದು. ತ್ರಿಗುಣಗಳಿಂದ ಕೂಡಿದ ಲಿಂಗದೇಹವೇ ಗುಬ್ಬಿಯಲ್ಲಿರುವ ಕೆಟ್ಟತನ. ಮುಕ್ತಿಯೋಗ್ಯ ಜೀವನು ರಾಜಹಂಸ ಜ್ಞಾನಾನಂದರೂಢಿ, ನಿರಂತರ ಹುಟ್ಟು, ಸಾವು, ಸಂಸಾರದಲ್ಲಿ ಮುಳುಗಿ ಕೆಟ್ಟಿರುವ ಈ ಗುಬ್ಬಿಯನ್ನು ನಿರಂತರವಾದ ಭಕ್ತಿ, ಅಪರೋಕ್ಷಜ್ಞಾನ ಹಾಗೂ ಪರಮಾತ್ಮನ ಅನುಗ್ರಹವೆಂಬ ನದಿಯಲ್ಲಿ ತೊಳೆದರೆ ಜ್ಞಾನಾನಂದರೂಪಿ 'ರಾಜಹಂಸ' ನಾಗುವುದು.

**ನಾಯಿ:** ಡೊಂಕು ಬಾಲದ ನಾಯಕರೆ ನಿವೇನೂಟವ ಮಾಡುವಿರಿ ॥ಪ॥

ಕಣಕ ಕುಟ್ಟುವ ಅಲ್ಲಿಗೆ ಹೋಗಿ
ಹಣಿಕಿ ಇಣಿಕಿ ನೋಡುವಿರಿ
ಕಣಕ ಕುಟ್ಟೊ ಒಣಕೇಲಿ ಬಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ ॥೧॥

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಿಲಿ ಬಡೆದರೆ
ಕುಂಯಿ ಕುಂಯಿ ರಾಗವ ಮಾಡುವಿರಿ. ॥೨॥

ಹಿರೇ ಬಿದಿಯಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ
ಪುರಂದರ ವಿಠಲ ರಾಯನ ಈ ಪರಿ
ಮರೆತು ಸದಾನಿವು ಚರಿಸುವಿರಿ. ॥೩॥

ನಾಯಕರೇ! ಎಂದು ನಾಯಿಯನ್ನು ಇಲ್ಲಿ ಪುರಂದರದಾಸರು ಸಂಭೋದಿಸಿದ್ದಾರೆ. ನಿತ್ಯಯಾತ್ರೆಯ ಸಂದರ್ಭದಲ್ಲಿ ನಾಯಿಗೂ ಮನುಷ್ಯರಿಗೂ ಸಾದೃಶ್ಯ ಕಂಡಿರಬೇಕು. ನಾಯಿಯಂತೆ ಅನ್ನಕ್ಕಾಗಿ ಹಂಬಲಿಸುವ ಬೀದಿಯಲ್ಲಿ ಓಡಾಡುವ ಬೂದಿಯಲ್ಲಿ ಹೊರಳಾಡುವ ಸ್ವಭಾವವನ್ನು ನಾಯಿ ಪ್ರತಿಮೆಯಲ್ಲಿ ಅಡಗಿಸಿದ್ದಾರೆ. ಬೇರೆಯವರು ನೀಡುವ ಅನ್ನಕ್ಕಾಗಿ ಹಂಬಲಿಸುವ ದೆಸೆಯನ್ನು ನಾಯಿಗೆ ಹೋಲಿಸಿದ್ದಾರೆ.

**ನಾಯಿಕುನ್ನಿ:** ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು
ನಾಯಿ ಕುನ್ನಿಗಳಂತೆ ಪರರ ಪೀಡಿಸುತ ॥ಪ॥

ಉದಯಕಾಲದಲೆದ್ದು ಸಂಧ್ಯಾವಿಧಿಯ ಬಿಟ್ಟು
ಪದುಮನಾಭನ ಪಾದಸ್ಮರಣೆ ಮೊದಲಿಲ್ಲದೆ
ಮುದದಿ ನಿನ್ನರ್ಚಿಸದೆ ನರರ ಸದನವ ಪೊಕ್ಕು

ಒದಗಿ ಸೇವೆಯ ಮಾಡಿ ಅವರ ಬಾಗಿಲನು.

ಹಾಲು ಅನ್ನಕ್ಕಾಗಿ ಒಡೆಯನ ಕಾಲಿನ ಹಿಂದೆ ಮುಂದೆ ಓಡಾಡುವ ನಾಯಿಕುನ್ನಿಯಂತೆ, ತಾವು ಉಪಾದಾನಕ್ಕೆ ಹೋಗಿ ಕಂಡ ಕಂಡವರ ಮನೆ ಬಾಗಿಲು ಕಾಯುವುದು ತಪ್ಪಲಿಲ್ಲವೆಂದು ಅವರ ಕೊರಗು. ಇಲ್ಲಿ ತಮ್ಮನ್ನೇ ನಾಯಿಕುನ್ನಿಗೆ ಹೋಲಿಸಿಕೊಂಡಿದ್ದಾರೆ. ಸಂಧ್ಯಾವಂದನೆ, ಪೂಜೆ ಬಿಟ್ಟು ಜನರ ಸೇವೆ ಮಾಡಿದರೂ ಅವರ ಬಾಗಿಲು ಕಾಯ್ದರೂ ದಾನ ಸಿಕ್ಕದಿದ್ದಾಗ ನೋವಿನಿಂದ ಈ ಕೀರ್ತನೆ ರಚಿಸಿರಬಹುದು.

**ನಾಯಿ:** ಬಲೆಗೆ ಸಿಲುಕಿದ ಮೃಗದಂತೆ ಬಾಯ್ಬಿಡುತಲಿ
ಅಲಸಿ ಕೋಟಲೆ ಸಂಸಾರದಿಂದ
ತಲೆ ಹುಳುಕ ನಾಯಂತೆ ಬಯಲಾಸೆಗೆ ಸಿಲುಕಿದೆ
ಸಲಹೋ ಪುರಂದರ ವಿಠಲ ದೇವರ ದೇವ.

ತಲೆ ಹುಳುಕ ನಾಯಿಗೆ ಮೃತ್ಯುವು ಹತ್ತಿರವಾಗಿದ್ದರೂ ಬಯಲಾಸೆಗೆ ಸಿಲುಕುವಂತೆ ವಿಷಯಾಭಿ ಲಾಷೆಯುಳ್ಳ ಜೀವರು ಅವರು ಮಾಡುವ ಕರ್ಮಗಳಲ್ಲಿ ಸಿಕ್ಕಿಕೊಂಡು ಬಲೆಯಲ್ಲಿ ಸಿಲುಕಿದ ಮೃಗದಂತೆ ಒದ್ದಾಡುತ್ತಾರೆ. ಕಷ್ಟ ತುಂಬಿದ ಸಂಸಾರದಲ್ಲಿ ಅವರು ಮಾಡುವ ಕರ್ಮಗಳು ಬಹುಕ್ಲೇಶಕರಗಳಾಗಿರುತ್ತವೆ. ಅಲ್ಪ ಸುಖ ಮಾತ್ರ ಕೊಡುತ್ತವೆ. ಅನೇಕ ಸಲ ಅನರ್ಥಗಳನ್ನು ತಂದೊಡ್ಡುತ್ತವೆ. ಆದ್ದರಿಂದ ಪುರಂದರ ವಿಠಲನನ್ನೇ ಸಲಹೆಂದು ಕೇಳುತ್ತಿರುವ ದಾಸರು ಅತಿ ಆಸೆ ಬಿಡಬೇಕೆಂದು 'ನಾಯಿ' ಪ್ರತಿಮೆಯ ಮೂಲಕ ಹೇಳಬಯಸಿದ್ದಾರೆ.

**ನಾಯಿ:** ನಾಯಿ ಬಂದದಪ್ಪ ಅಣ್ಣ ಅತ್ತಲಾಗಿರಿ ॥ಪ॥

ನಾಯಿ ಅಂದರೆ ನಾಯಿಯಲ್ಲ
ಮಾನವ ಜನ್ಮದ ಹೀನ ನಾಯಿ ॥ಅ॥

ಕೊಟ್ಟ ಸಾಲವ ಕೊಡದ ನಾಯಿ
ಇಟ್ಟ ಭಾಷೆಯ ತಪ್ಪುವ ನಾಯಿ
ಕಟ್ಟೆ ಮೇಲೆ ಕುಳಿತುಕೊಂಡು
ಅಟ್ಟ ಹಾಸದಿ ಬೊಗಳುವ ನಾಯಿ. ॥೧॥

ಕೊಟ್ಟು ಕುದಿಯುವ ಕೆಟ್ಟನಾಯಿ
ಇಟ್ಟ ಅನ್ನವ ಹಂಗಿಪ ನಾಯಿ
ಪುಟ್ಟ ಮಾತೆ ಗರ್ಭದಲ್ಲಿ
ಕೆಟ್ಟ ಕೃತ್ಯವ ಮಾಳೆ ತಾಯಿ. ॥೨॥

ಪಟ್ಟ ಸ್ತ್ರೀಯಳ ಬಿಟ್ಟಿಹ ನಾಯಿ
ಬಿಟ್ಟ ಸ್ತ್ರೀಯಳ ಆಳುವನಾಯಿ
ದಿಟ್ಟ ಶ್ರೀ ಪುರಂದರ ವಿಠಲರಾಯನ
ಮುಟ್ಟಿ ಭಜಿಸದೆ ಹೋದ ನಾಯಿ. ॥೩॥

ನಾಯಿ ಪ್ರತಿಮೆಯು ಮನುಷ್ಯನ ಹೀನ ಸ್ವಭಾವವನ್ನು ಬಿಂಬಿಸುತ್ತದೆ. ಅಣ್ಣ! ಎಂದು ಸಂಬೋಧಿಸುತ್ತಾ ಇಂತಹ ಮನುಷ್ಯರನ್ನು ದೂರವಿಡಿ ಎಂದು ಹೇಳುತ್ತಾರೆ ಪುರಂದರದಾಸರು. ಕೊಟ್ಟ ಸಾಲವನ್ನು ಹಿಂದಿರುಗಿಸದ, ಮಾತಿನಂತೆ ನಡೆದುಕೊಳ್ಳದ, ಬೇರೆಯವರನ್ನು ಆಡಿಕೊಳ್ಳುವ, ದಾನ ಕೊಟ್ಟು ಬೇಸರಿಸಿ ಕೊಳ್ಳುವ, ಅನ್ನ ಹಾಕಿ ಹಂಗಿಸುವ, ಮಡದಿಯನ್ನು ಬಿಟ್ಟು ಅನ್ಯ ಸ್ತ್ರೀಯರ ಹಿಂದೆ ತಿರುಗುವ, ಪರಮಾತ್ಮನ ಸ್ಮರಣೆ ಮಾಡದೆ ಹೀನಾಯವಾಗಿ ನಡೆದುಕೊಳ್ಳುವ ಮನುಜ ನಾಯಿಗೆ ಸಮಾನ ಎಂಬ ಸಂದೇಶ ಇಲ್ಲಿದೆ.

**ಶ್ವಾನ: (ನಾಯಿ):** ಶ್ವಾನವ ಕಂಕುಳೊಳಿಟ್ಟು ವಾರಣಾಸಿಗೆ ಪೋದಂತೆ
ಮಾನವನೆ ಕೇಳೋ ಮದಮತ್ಸರಗಳ ಬಿಡದಲೆ
ಏನ ಮಾಡಿದರೇನು ವ್ಯರ್ಥ.
ಜ್ಞಾನಿ ಪುರಂದರ ವಿಠಲನ ನೆನೆಯೋ ಮನವೆ.

ಜನರು ಪುಣ್ಯಕ್ಷೇತ್ರಗಳಿಗೆ ಹೋಗುವುದು ಪಾಪಗಳನ್ನೆಲ್ಲಾ ಕಳೆದುಕೊಂಡು ಮನಮುಟ್ಟಿ ಪುರಂದರ ವಿಠಲನ ಚರಣ ಕಮಲಗಳನ್ನು ಭಜಿಸಿ ಧನ್ಯರಾಗಬೇಕೆಂದು, ಮದ ಮತ್ಸರಗಳನ್ನು ಬಿಡದೆ ಪುಣ್ಯಕ್ಷೇತ್ರಗಳನ್ನು ಸಂಚರಿಸಿದರೆ ಅದು ವ್ಯರ್ಥ. ನಾಯಿ ಎಂದರೆ ಹೀನ ಬುದ್ಧಿ. ಇಲ್ಲಿ ನಾಯಿ ಪ್ರತಿಮೆ ಹೀನ ಬುದ್ಧಿಯನ್ನು ಪ್ರತಿಬಿಂಬಿಸುತ್ತದೆ. ಮದ ಮತ್ಸರಗಳು ನಮ್ಮ ಆತ್ಮವಿನಾಶವನ್ನು ಮಾಡುವುದಲ್ಲದೆ ನಮ್ಮ ಸಾಧನೆಯನ್ನು ವ್ಯರ್ಥಗೊಳಿಸುತ್ತವೆ. ಈ ಸಂಸಾರದಲ್ಲಿ ನನ್ನದು ಎನ್ನುವ ಅಭಿಮಾನವೇ ಕಾಮ, ಕ್ರೋಧ, ಮದ ಮತ್ಸರಗಳಿಗೆ ಕಾರಣವಾದ್ದರಿಂದ ಈ ಅಹಂಕಾರವನ್ನು ತೊರೆದು ಎಲ್ಲವೂ ಭಗವಂತನ ಅಧೀನವೆಂದು ಒಪ್ಪಿಕೊಳ್ಳುವುದರಲ್ಲಿ ಸಾರ್ಥಕತೆಯಿದೆ. ನಾಯಿ ಪ್ರತಿಮೆ ಅವಗುಣಗಳನ್ನು ಬಿಡಲು ಪ್ರೇರೇಪಿಸುತ್ತದೆ.

**ಪತಂಗ:** ಇನ್ನೇನು ಗತಿ ಎನಗೆಲೋ ಹರಿಯೇ
ನಿನ್ನವನೆನ್ನದೆ ಮೋಸಹೋದೆನೋ ರಂಗ ಪ।

ಪರವನಿತೆಯರ ಲಾವಣ್ಯಕೆ ಲೋಚನ
ಚರಿಸುತ್ತಲವರ ಕೂಟವ ಬಯಸಿ
ಉರಿವ ಕಿಚ್ಚು ತನಗೆ ಹಿತವೆಂದು ಅದರೊಳು
ಎರಗಿದ ಪತಂಗನಾದೆನಲ್ಲೋ ರಂಗ
. . . . . . . . . . . . . . . . . . . . .

ಪರಸ್ತ್ರೀಯನ್ನು ಬಯಸುವುದು ಮಹಾಪಾಪ. ಆದರೂ ಮನಸ್ಸಿನ ದೌರ್ಬಲ್ಯವನ್ನು ಹತ್ತಿಕಲಾರದೆ ಪರಸ್ತ್ರೀ ಕೂಟವಬಯಸಿದರೆ ಬೆಂಕಿಯ ಆಕರ್ಷಣೆಯಿಂದ ಅದರೊಳು ಎರಗಿದ ಪತಂಗದಂತೆ ಜೀವಿಯು ನಾಶ ಹೊಂದುತ್ತಾನೆ. ಹಿಂದು ಮುಂದೆ ಯೋಚಿಸದೆ ಅನ್ಯಾಯ, ಅಧರ್ಮದ ದಾರಿಯಲ್ಲಿ ನಡೆದರೆ ವಿನಾಶವೇ ಗತಿ ಎಂಬುದನ್ನು 'ಪತಂಗ' ಪ್ರತಿಮೆ ಸಂದೇಶಿಸುತ್ತದೆ.

**ಪಂಚಾನನ(ಸಿಂಹ):** ದುರಿತ ಗಜಕೆ ಪಂಚಾನನ ನರ
ಹರಿಯೆ ದೇವರ ದೇವ ಗೋವಿಂದ ಪ।

ಹೆತ್ತ ಮಕ್ಕಳು ಮರುಳಾದರೆ ತಾಯ್ತಂದೆ

ಎತ್ತದೆ ನೆಲಕೆ ಬಿಸುಡುವರೆ ಗೋವಿಂದ ೧।

. . . . . . . . . . . . . . . . . . . . . .

ಇಲ್ಲಿ ಪಂಚಾನನ ಎಂದರೆ ಸಿಂಹ: ಸಿಂಹ ಪ್ರತಿಮೆ ಪರಮಾತ್ಮನನ್ನು ಪ್ರತಿನಿಧಿಸುತ್ತದೆ. ಕಷ್ಟಗಳೆಂಬ, ಪಾಪಗಳೆಂಬ ಆನೆಯನ್ನು ಕೊಲ್ಲಲು, ಮುಗಿಸಲು ಶಕ್ಯನಾಗಿರುವ ಸಿಂಹವೇ ಪರಮಾತ್ಮ. ಹೆತ್ತ ಮಕ್ಕಳು ಮರುಳಾದರೆ ತಂದೆ ತಾಯಿ ಎತ್ತಿ ಅವರನ್ನು ರಕ್ಷಿಸುವಂತೆ ನನ್ನ ಕಷ್ಟಗಳನ್ನು ಪರಿಹರಿಸು ಎಂದು ಪುರಂದರದಾಸರು ದೇವರ ದೇವ ಎಂದರೆ ಎಲ್ಲಾ ದೇವತೆಗಳಿಗೂ ನಿಯಾಮಕನಾದ ಭಗವಂತನ ಮೊರೆ ಹೋಗಿದ್ದಾರೆ.

**ಪಕ್ಷಿ:** ನೋಡಿರಯ್ಯ ನೀವು ನೋಡಿರಯ್ಯ
ನೋಡಿರಯ್ಯ ಹರಿದಾಸರ ಮಾಯವ ಪ।

. . . . . . . . . . . . . . . . . . . . . .

ಜೋಡಾಗಿಪ್ಪ ಎರಡು ಪಕ್ಷಿ
ಗೂಡನಗಲಿ ಗೂಡತೊರೆದು
ಆಡುತಬಂದು ನುಂಗಿ ನೋಡುವ ಸೊಗಸು.

. . . . . . . . . . . . . . . . . . . . . .

ದೇಹವೆಂಬ ಗೂಡಿನಲ್ಲಿ ಜೀವಾತ್ಮ ಪರಮಾತ್ಮರೆಂಬ ಎರಡು ಹಕ್ಕಿಗಳಿವೆ. ಇವುಗಳಲ್ಲಿ ಜೀವಾತ್ಮನೆಂಬ ಹಕ್ಕಿ ದೇಹವೆಂಬ ಗೂಡನ್ನು ತೊರೆದು ಕರ್ಮವನ್ನು ನುಂಗಿ ಮೋಕ್ಷ ಹೊಂದುವ ಸೊಗಸು ನೋಡಿರಯ್ಯ ಎಂದು ಕರೆ ನೀಡುತ್ತಾ ದಾಸರು ಇದೆಲ್ಲಾ ಹರಿದಾಸರ ಮಾಯೆ ಎಂದರೆ ಪರಮಾತ್ಮನನ್ನು ಕಾಣುವ ಆಟವನ್ನು ಹರಿದಾಸರು ತೋರಿಸುವರು ಎಂಬ ಅರ್ಥದಲ್ಲಿ ಹೇಳುತ್ತಾರೆ.

**ಪಕ್ಷಿ:** ಎರಡೂ ಒಂದಾಗದು, ರಂಗ
ಎರಡೂ ಒಂದಾಗದು ಎಂದೆಂದಿಗೂ ರಂಗ ಪ।

ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳು
ಒಂದೆ ಗೂಡಿನಲ್ಲಿ ಇರುತಿಹವು
ಒಂದು ಪಕ್ಷಿ ಫಲಗಳನುಂಬುದು
ಮತ್ತೊಂದು ಫಲಗಳನುಣ್ಣದು ರಂಗ. ೧।

ಹಲವು ಕೊಂಬೆಗೆ ಒಂದು ಹಾರಿತು ಒಂದು
ಹಲವು ಕೊಂಬೆಗೆ ಹಾರಲರಿಯದು
ಹಲವನೆಲ್ಲ ಒಂದು ಬಲ್ಲದು ಒಂದು
ಹಲವನೆಲ್ಲವ ಅರಿಯದು ರಂಗ. ೨।

ನೂರೆಂಟು ಕೊಂಬೆಗೆ ಹಾರಿತು ಅದು.
ಹಾರಿ ಮೇಲಕ್ಕೇರಿ ಮೀರಿತು
ಮೀರಿ ಪುರಂದರ ವಿಠಲ ನಿಮ್ಮನು
ಸೇರಿ ಸುಖಿಯಾಗಿ ನಿಂತಿತು ರಂಗ. ೩।

. . . . . . . . . . . . . . . . . . . . . .

ಮುಂಡಿಗೆ ಪ್ರಕಾರದ ಗೂಡಾರ್ಥವನ್ನು ಬಿಚ್ಚಿಡುವ ಕೀರ್ತನೆ ಇದು. ಜೀವಾತ್ಮ, ಪರಮಾತ್ಮರನ್ನು ಪಕ್ಷಿಗಳ ರೂಪದಲ್ಲಿಟ್ಟು ಬಿಂಬೋಪಾಸನೆಯಲ್ಲಿ ಬಿಂಬನಾದ ಪರಮಾತ್ಮ ಪ್ರತಿಬಿಂಬನಾದ ಜೀವಾತ್ಮರು ಒಂದೇ ಆಗಲು ಸಾಧ್ಯವಿಲ್ಲ ಎಂಬ ತತ್ವವನ್ನಿಲ್ಲಿ ತಿಳಿಸಿದ್ದಾರೆ. ಜಗತ್ತು ಎಂಬ ವೃಕ್ಷದಲ್ಲಿ ಎರಡು ಹಕ್ಕಿಗಳಿವೆ. ದೇಹವೆಂಬ ಗೂಡಿನಲ್ಲಿ ಈ ಹಕ್ಕಿಗಳ ವಾಸ ಒಂದು ಜೀವಾತ್ಮ ಇನ್ನೊಂದು ಪರಮಾತ್ಮ. ಜೀವಾತ್ಮವೆಂಬ ಹಕ್ಕಿ ಕರ್ಮದ ಮೂಲಕ ದೊರೆತ ಫಲವನ್ನು ಭೋಗಿಸುತ್ತದೆ. ಇನ್ನೊಂದಕ್ಕೆ ಕರ್ಮದ ಬಂಧನವಿಲ್ಲ. ಜೀವಾತ್ಮ ಹಲವು ದೇಹಗಳನ್ನು ಪಡೆದುಕೊಳ್ಳುವುದು. ಆದರೆ ಇನ್ನೊಂದಕ್ಕೆ ಹುಟ್ಟು ನಾಶ ಇಲ್ಲ. ನೂರೆಂಟು ಜನ್ಮಗಳ ನಂತರ ಪುರಂದರ ವಿಠಲನ ಸೇರಿ ಸುಖ ಹೊಂದಿತು. ಈ ಕೀರ್ತನೆಯ ಸಂದೇಶವು "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನೆ ವೃಕ್ಷೇ" ಎಂಬ ಶ್ರುತಿವಚನದ ಕನ್ನಡ ರೂಪ.

ಬಕ: ಸತ್ಯವೆಂಬುದೆ ಸ್ನಾನ ಉಪವಾಸ ಜಪನೇಮ ।ಪ।
ಅಸತ್ಯದಲಿ ಮಾಡುವ ಕರ್ಮ ವ್ಯರ್ಥ ।ಅ।

ಬಿಡದೆ ಮದಮತ್ಸರಾಹಂಕಾರದಲ್ಲಿ ಮುಳುಗಿ
ಒಡನೆ ಬೆರಳುಗಳೆಣಿಸಿ ಮೌನದಿಂದ
ತಡೆಯದಲೆ ಪರಲೋಕ ಸೂರೆಗೊಂಬುವನೆಂಬೆ
ಬಡ ಬಕನು ಮಾಡಿದ ಅಪರಾಧವೇನಯ್ಯ ।೧।

. . . . . . . . . . . . . . . . . . . . . .

ಮದ, ಮತ್ಸರ, ಅಹಂಕಾರಗಳನ್ನು ಬಿಡದೆ ಢಾಂಬಿಕ ಭಕ್ತಿ ತೋರಿಸುತ್ತಾ ಮೌನದಿಂದ ಧ್ಯಾನ ಮಾಡುವ ಮೋಸದ ಗುಣವನ್ನು ಬಕ ಧ್ಯಾನಕ್ಕೆ ಸಾದೃಶ್ಯ ಗೊಳಿಸಲಾಗಿದೆ. ಮೀನುಗಳಿಗೆ ಆಸೆಪಟ್ಟು ಅವು ಬರುವುದನ್ನೇ ಕಾಯುತ್ತಾ, ಅಲುಗಾಡದೆ ನಿಂತಿರುವ ಕೊಕ್ಕರೆ ಧ್ಯಾನ ಮಗ್ನವಾಗಿರುವಂತೆ ಕಾಣುತ್ತದೆ. ಅದರಂತೆ ಸುಮ್ಮನೆ ಬೆರಳುಗಳೆಣಿಸಿ ಧ್ಯಾನ ಮಾಡುವ ವ್ಯಕ್ತಿ ಸ್ವರ್ಗವನ್ನು ಸೂರೆಗೈದರೆ ಬಕವೂ ಕೂಡ ಸ್ವರ್ಗಕ್ಕೆ ಹೋಗಬೇಕು ಎಂಬ ಅಭಿಪ್ರಾಯ ಮೂಡಿ ಬಂದಿದೆ.

ಬಕ: ಪರರ ಕೇಡು ಬಯಸಿ ಗುರುಹಿರಿಯರನ್ನ ನಿಂದಿಸುತ್ತಾ
ಪರಮ ಸೌಖ್ಯವೆಂದು ಪರಸ್ತ್ರೀಯರನ್ನು ಬಯಸುತ್ತಾ
ಪರಮ ನಿಷ್ಠೆ ಮೌನಿಯಂತೆ ಧರೆಯ ಮೇಲೆ ಢಂಬ ತೋರಿ
ಹರಿವ ನೀರಿನ ತೇರದಿ ಕುಳಿತರೇನು ಬಕಧ್ಯಾನದಿ.

. . . . . . . . . . . . . . . . . . . . . .

ಬೂಟಕತನ ಎಂದರೆ ವಂಚನೆ, ಕಪಟ, ಒಳಗೊಂದು ಹೊರಗೊಂದುತನ ಇಂತಹ ಸ್ವಭಾವವನ್ನು ಬಕಧ್ಯಾನಕ್ಕೆ ಹೋಲಿಸಲಾಗಿದೆ. ಪರರಿಗೆ ಕೇಡುಬಯಸುವುದು, ಗುರುಹಿರಿಯರನ್ನು ನಿಂದಿಸುವುದು, ಪರಸ್ತ್ರೀ ಸಂಗ ಬಯಸುವುದು ಮುಂತಾದ ದುರ್ಗುಣಗಳನ್ನು ಹಲವು ತೀರ್ಥಗಳಲ್ಲಿ ಮುಳುಗಿದರೆ ಬಿಟ್ಟು ಬಿಡಲು ಸಾಧ್ಯವಿಲ್ಲ. ಅದರಂತೆ ಬಕನಂತೆ ನೀರಿನ ತೀರದಲ್ಲಿ ಕುಳಿತರೆ ಮಲವ ತೊಳೆಯಬಲ್ಲರಲ್ಲದೆ ಮನವ ತೊಳೆಯಲು ಸಾಧ್ಯವಿಲ್ಲ. ಎಂದು ಪುರಂದರದಾಸರು ತಿಳಿಸುತ್ತಾರೆ.

ಬೆಕ್ಕು: ನೆಚ್ಚದಿರು ಬೆಕ್ಕ ನೆವನೋಡುತಿದೆ
ಎಚ್ಚತ್ತಿರೆಚ್ಚತ್ತಿರಲೋ ರಾಮುಗ ।ಪ।

ಒಂಬತ್ತು ಬಾಗಿಲ ಪಂಜರವನ್ನೈದಿದೆ
ಕಂಭವಿಲ್ಲ ಕದವು ಮೊದಲೇ ಇಲ್ಲ
ಎಂಬತ್ತು ಸಾವಿರ ಸಂದುಗಂಟಿನ ಗೂಡ
ನಂಬಿ ನಿ ಕೆಡದಿರೋ ಎಲೆ ರಾಮುಗ. ೧।

ಮುನಿವರು ಐವರು ಮೋಹಿಸುವರಾರು ಮಂದಿ
ಮನ ಕಾಕು ಗೊಳಿಸುವರೆಂಟು ಮಂದಿ
ಇನಿತು ತಿಳಿದು ಹಿಂದು ಮುಂದು ವಿಚಾರಿಸಿ
ಮನನೆಚ್ಚಿ ಕೆಡದಿರೋ ಎಲೆ ರಾಮುಗ. ೨।

ಸತಿಸುತರಿಗೆ ಮತ್ತೆ ಹಿತರಿಗೆ ಬೇಕೆಂಬ
ಅತಿಲೋಭಿತನ ಬೇಡ ಎಲೆ ರಾಮುಗ
ಕ್ಷಿತಿ ಸುರರೆಂಬ ಭೂಮಿಲಿ ಬಿತ್ತಿ ಮುಂದಣ
ಪಥಕೆ ಸಾಧನ ಮಾಡಿಕೊ ರಾಮುಗ. ೩।

ಹೊನ್ನು ಹೆಣ್ಣು ಮಣ್ಣು ಎಂಬ ಮೋಹದೊಳಿದ್ದು
ಬಣ್ಣ ಗೆಡಲಿಬೇಡ ಎಲೋ ರಾಮುಗ
ಸುಣ್ಣವ ಸುಡುವಂತೆ ಸುಡುತಿದೆ ಬೆಕ್ಕು ನಿನ್ನ
ಕಣ್ಣು ತೆರೆದೆಚ್ಚತ್ತಿರೆಲೋ ರಾಮುಗ. ೪।

ಸ್ಥಿರವೆಂದು ನೆಚ್ಚಿದಿರು ಈ ಪಂಜರವನು
ಉರವಣಿಸುತ ಬೆಕ್ಕು ಮೊರೆಯುತಲಿದೆ
ಸಿರಿಯರಸ ಪುರಂದರ ವಿಠಲನ ನೆರೆನಂಬಿ ಪರಮ
ಸುಖಿಯಾಗಿರೋ ಎಲೆ ರಾಮುಗ. ೫।

ಬೆಕ್ಕು ಆಸೆಯನ್ನು ಸಂಕೇತಿಸಿದರೆ, ರಾಮುಗ ಗಿಳಿಯು ಜೀವನವನ್ನು ಸಂಕೇತಿಸುತ್ತದೆ. ಆಸೆಎನ್ನುವ ಬೆಕ್ಕು ತಿನ್ನಲು ಬರುತ್ತಿದೆ ಎಚ್ಚೆತ್ತಿರು ಎಂದು ಪುರಂದರದಾಸರು ಕಳಕಳಿಯಿಂದ ನುಡಿಯುತ್ತಾರೆ. ಒಂಬತ್ತು ಬಾಗಿಲ ಪಂಜರವೇ ದೇಹ, ಎಂಬತ್ತು ಸಾವಿರ ನಾಡಿಗಳಲ್ಲಿ ಪ್ರಾಣ ಹರಿಯುತ್ತಿದೆ. ಇದನ್ನು ನೀ ನಂಬಬೇಡ. ಪಂಚಕ್ಲೇಶಗಳಾದ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಅಹಂಕಾರಗಳೆಂಬವರು ಕೋಪಿಗಳು, ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬುವವರು ನಮ್ಮನ್ನು ಮೋಹಗೊಳಿಸುವರು. ಅಷ್ಟ ಮದಗಳೆಂಬುವವರು ನಮ್ಮ ಬುದ್ಧಿ ಕೆಡಿಸುವರು. ಇವರೆಲ್ಲರನ್ನು ನೀ ನೆಚ್ಚಬೇಡ, ಸತಿ ಸುತರೆಂಬ ಮೋಹಬೇಡ ಹೊನ್ನು ಹೆಣ್ಣು ಮಣ್ಣಿಗಾಗಿ ಆಸೆ ಬೇಡ. ದೇಹ ಸ್ಥಿರವೆಂದು ನಂಬಬೇಡ ಈ ಎಲ್ಲಾ ಕಾಮನೆಗಳ ಮೂಲಕ ಗಿಳಿಯನ್ನು ತಿನ್ನಲು ಆಸೆ ಎಂಬ ಬೆಕ್ಕು ನೇರ ನೋಡುತ್ತಿದೆ. ಇದನ್ನು ತಿಳಿದು ಎಚ್ಚರವಾಗಿರು ಎಂದು ಜೀವಕ್ಕೆ ಸಂಬೋಧಿಲಾಗಿದೆ.

**ಭೇರುಂಡ:** ಇರಬೇಕು ಇಲ್ಲದಿರಬೇಕು
ಹರಿದಾಸರು ಸಂಸಾರದೊಳಗೆ ಪ।

ಮಕ್ಕಳು ಮತಿವಂತರಾದರೆ ಮನೆಯಲ್ಲಿ

ಅಕ್ಕರೆಯಿಂದಲಿ ಕೂಡಿರಬೇಕು
ಚಿಕ್ಕತನದಿಂದ ಬುದ್ಧಿ ಭೇರುಂಡನಾದರೆ
ಗಕ್ಕನೆ ಅಲ್ಲಿಂದ ಹೊರಗಾಗಬೇಕು.

ಭೇರುಂಡವೆಂದರೆ ಎರಡು ತಲೆಯ ಹಕ್ಕಿ ಇದನ್ನು ಮನಸ್ಸು ಮುರಿಯುವುದಕ್ಕೆ ಸಾದೃಶ್ಯಗೊಳಿ ಸಲಾಗಿದೆ. ಸಂಸಾರದಲ್ಲಿ ಮಕ್ಕಳು ಬುದ್ಧಿವಂತರಾದರೆ ಕೂಡಿರಬೇಕು ಅದೆ ಮನಸ್ಸುಗಳು ಮುರಿದರೆ ಮಕ್ಕಳೆಂಬ ಮಮಕಾರವನ್ನು ಬಿಟ್ಟ ಹೊರನಡೆಯಬೇಕು. ಸಂಸಾರದಲ್ಲಿ ಹೆಂಡತಿ ಮಕ್ಕಳು ಬಂಧುಗಳು ಇವರ ಸಂಗಮವು ದಾರಿ ಹೋಕರ ಸಂಗಮವಿದ್ದಂತೆ. ಪ್ರವಾಸದಲ್ಲಿ ತಮ್ಮ ಊರುಗಳು ಬಂದಾಗ ಅವರುಗಳು ಅಗಲಿ ಹೋಗುವಂತೆ. ಪತ್ನಿ ಪುತ್ರರು ಅಗಲಿ ಹೋಗುತ್ತಾರೆ. ಕಾರಣ ಯಾರೊಡನೆಯೂ ಅತಿಯಾದ ಮೋಹ ಕೂಡದು. ಈ ಸಂಸಾರವು ನಶ್ವರವೆಂದು ತಿಳಿದು ಅಹಂ ಮಮತ್ವಗಳನ್ನು ಬಿಟ್ಟು ಬಿಡಬೇಕು. ಎಂಬ ಸಂದೇಶ ಇಲ್ಲಿದೆ.

**ಮೀನು:** ಮಾಂಸದಾಸೆಗೆ ಮತ್ಸ್ಯ ಸಿಲುಕಿ
ಹಿಂಸೆ ಪಟ್ಟ ಪರಿಯಂತೆ
ಮೋಸ ಹೋಗದ ಹಾಗೆ ಜಗ
ದೀಶ ಪುರಂದರವಿಠಲನ ನೆನೆದು.

'ಈಸಬೇಕು ಇದ್ದು ಜಯಿಸಬೇಕು ಹೇಸಿಗೆ ಸಂಸಾರದಲ್ಲಿ ಆಸೆ ಲೇಶ ಇಡದ ಹಾಗೆ' ಎಂಬ ಪಲ್ಲವಿಯೊಡನೆ ಶುರುವಾಗುವ ಈ ಕೀರ್ತನೆಯಲ್ಲಿ ಮತ್ಸ್ಯ ಪ್ರತಿಮೆ ಸಂಸಾರದಲ್ಲಿ ಸಿಲುಕಿ ಹಿಂಸೆ ಪಡುತ್ತಿರುವ ಜೀವಿಯನ್ನು ಚಿತ್ರಿಸುತ್ತದೆ. ಮೀನು ಮಾಂಸದ ಆಸೆಗಾಗಿ ಗಾಳಕ್ಕೆ ಸಿಕ್ಕು ಮೋಸ ಹೋಗಿ ಒದ್ದಾಡುತ್ತದೆ. ಅದರಂತೆ ನಾವು ಸಹ ಬದುಕಿನ ಆಮೀಷಗಳಿಗೆ ಒಳಗಾಗಿ ತೊಂದರೆ ತಂದುಕೊಳ್ಳದಂತೆ ಬಾಳಬೇಕು.

**ಮೀನು:** ಸಲೆ ನಿಜವೃತ್ತಿಯನುಳಿದು ದುರಾನ್ನವ
ನಲಿದುಂಡು ಹೊಟ್ಟೆಯ ಹೊರೆಯುತಲಿ
ಗಳೆಯ ತುದಿಯ ಮೌಂಸಕೆ ಬಂದೆರಗುತ್ತ
ಸಿಲುಕಿದ ಮೀನಿನಂತಾದೆನಲ್ಲೋ ರಂಗ.

'ಇನ್ನೇನು ಗತಿಎನಗೆಲೊ ಹರಿಯೆ' ಎಂಬ ಪಲ್ಲವಿಯೊಡನೆ ಶುರುವಾಗುವ ಈ ಪದದಲ್ಲಿ ಸಾತ್ವಿಕ ವೃತ್ತಿಯನ್ನು ಬಿಟ್ಟು ದುರ್ಜನರಲ್ಲಿ ಅನ್ನವನುಂಡು ಹೊಟ್ಟೆ ಹೊರೆಯುತ್ತಾ ದುರ್ಬಲ ಮನಸ್ಸಿನಿಂದ ಆಸೆ ಪಟ್ಟು ಮಾಂಸದಾಸೆಗೆ ಸಿಕ್ಕಿ ಒದ್ದಾಡುವ ಮೀನಿನಂತಾಯಿತಲ್ಲ ನನ್ನ ಜೀವನ ಎಂಬ ಆರ್ತನಾದ ಕೇಳಿ ಬರುತ್ತದೆ. ಹಿಂದೆ ಮುಂದೆ ತಿಳಿಯದೆ ಸಿಕ್ಕಿದರಲ್ಲಿ ಬಾಯಿಕ್ಕುವ ಮೀನಿನಂತೆ ಸಂಸಾರಿಕ ವಿಷಯಗಳು ನಮ್ಮ ಸಾಧನೆಯ ಮಾರ್ಗದಲ್ಲಿ ದಾರಿ ತಪ್ಪಿಸಿವೆ.

**ಮೀನು:** ಇದು ಭಾಗ್ಯ ಇದು ಭಾಗ್ಯವಯ್ಯಾ ।ಪ।
ಪದುಮನಾಭನ ಪಾದಭಜನೆ ಸುಖವಯ್ಯಾ ।ಅ।

ಬುದ್ಧಿಯಲಿ ತನು ಮನವ ತಿದ್ದಿಕೊಳ್ಳುತಿರಬೇಕು
ಮುದ್ದಾಗಿ ಇರಬೇಕು ಮುನಿ ಯೋಗಿಗಳಿಗೆ
ಮಧ್ವ ಮತಾಬ್ಧಿಯಲಿ ಮೀನಾಗಿ ಇರಬೇಕು

ಶುದ್ಧನಾಗಿರಬೇಕು ಕರಣತ್ರಯಂಗಳಲಿ

. . . . . . . . . . . . . . . . . . . . . .

ಬದುಕಿನಲ್ಲಿ ಹೇಗಿರಬೇಕು ಎಂಬುದನಿಲ್ಲಿ ತಿಳಿಸುತ್ತಾರೆ. ಬುದ್ಧಿಯಲ್ಲಿ ತನು ಮನವ ತಿದ್ದಿಕೊಂಡು ಮುನಿ ಯೋಗಿಗಳಲ್ಲಿ ವಿನಯದಿಂದಿರಬೇಕು. ಮಧ್ವ ಮತವೆಂಬ ಸಮುದ್ರದಲ್ಲಿ ಮೀನಾಗಿ ಈಜಿ ಎಲ್ಲಾ ತತ್ವಗಳನ್ನು ತಿಳಿದುಕೊಂಡು ಮನಸ್ಸು, ವಾಕ್, ಕಾಯಗಳೆಂಬ ಕರಣತ್ರಯಗಳಲ್ಲಿ ಶುದ್ಧನಾಗಿರಬೇಕು. ಇಲ್ಲಿ ಜ್ಞಾನವನ್ನು ಪಡೆದುಕೊಳ್ಳಲು ವೇದ, ಶಾಸ್ತ್ರಗಳನ್ನು ಓದುವ ಸಾಧಕನನ್ನು ಮೀನಿಗೆ ಹೋಲಿಸಲಾಗಿದೆ.

**ಮೂಷಕ:(ಇಲಿ)** ತಡೆಯಲಾರದೆ ಗುಹ್ಯೇಂದ್ರಿಯ ಚಪಲವ
ಮಡದಿಯರ ಸಂಗವ ಬಯಸಿ
ಒಡಲ ಕಿಚ್ಚಿಗೆ ಮೇಲೆ ಬಡಿಗಲ್ಲುಕೆಡಹಿ
ಕೊಂಡು ಬಿದ್ದ ಮೂಷಕನಂತಾದೆನಲ್ಲೋ ಕೃಷ್ಣ

. . . . . . . . . . . . . . . . . . . . . .

ಹೊಟ್ಟೆಯ ಕಿಚ್ಚಿಗೆ ಇಲಿ ಸಿಕ್ಕಿದ ವಸ್ತುಗಳನ್ನು ಛಿದ್ರಿಸಿ ತಿನ್ನಲು ಆಸೆ ಪಡುವುದು. ಅಂತಹ ಸಮಯದಲ್ಲಿ ದೊಡ್ಡ ಕಲ್ಲನ್ನು ಕೆಡವಿ ತನ್ನ ಮೇಲೆ ಹಾಕಿಕೊಳ್ಳುವಂತೆ. ಮನುಷ್ಯನು ಸಂಸಾರದಲ್ಲಿ ಸ್ತ್ರೀಯರ ಸಂಗ ಬಯಸಿ ಮಕ್ಕಳು ಸಂಸಾರಬವೆಂಬ ಕಲ್ಲಿನ ಅಡಿಯೊಳಗೆ ಸಿಕ್ಕು ಒದ್ದಾಡುತ್ತಿರುವನು. ಶರೀರ ಕೊನೆಯಾಗುವ ತನಕ ಇದರಿಂದ ಬಿಡುಗಡೆ ಸಿಕ್ಕದು ಎಂಬ ನಿರಾಶಾಭಾವ, ಖಿನ್ನಭಾವ ಪುರಂದರದಾಸರಿಗೆ ಕಾಡುತ್ತಿದೆ.

**ಮೂಷಕ:(ಇಲಿ):** ಸೂಸಲಾಸೆಗೆ ಪೋಗಿ ಬಡಿಗಲ್ಲಿನೊಳು ಸಿಕ್ಕಿದ
ಮೂಷಕನತೆರನಾದೆನೋ ಎಲೆ ದೇವ
ಹೇಸಿಕೆ ವಿಷಯಂಗಳಿಗೆ ಎರಗುತ್ತಿದೆ ಎನ್ನಮನ
ಘಾಸಿಯಾದೆನೋ ಹೃಷಿಕೇಶ ನೀ ಸಲಹಯ್ಯ
ವಾಸವಾರ್ಚಿಗ ಸಿರಿ ಪುರಂದರ ವಿಠಲ ನಿನ್ನ
ದಾಸರ ಸಂಗದೊಳು ಇರಿಸೆನ್ನ ಅನವರತ
ಕ್ಲೇಶವ ಕಳೆಯಯ್ಯ ಧೊರೆಯೇ.

ಮನುಷ್ಯನ ಆಸೆಗಳಿಗೆ ಮಿತಿಯಿಲ್ಲ. ವಿಷಯ ಸುಖಗಳಿಗೆ ಆಕರ್ಷಿತನಾಗುತ್ತ ಸೂಸಲು [ಎಳ್ಳು ಕಡಲೆಯಿಂದ ತಯಾರಿಸಿದ ಸೂಸಲು ಕಡುಬು] ತಿನ್ನುವ ಆಸೆಗೆ ದೊಡ್ಡ ಕಲ್ಲಿನಡಿಯಲ್ಲಿ ಸಿಕ್ಕು ಘಾಸಿ ಗೊಂಡಿರುವ ಇಲಿಯಂತಾಗಿದೆ ತನ್ನ ಜೀವನ. ಅದಕ್ಕಾಗಿ ಇಂತಹ ಆಸೆಗಳಿಂದ ಮುಕ್ತವಾಗುವ ಬಯಕೆ ಯಾಗಿದೆ. ಆದ್ದರಿಂದ ವಾಸವಾರ್ಚಿತ [ಇಂದ್ರನಿಂದ ಪೂಜಿಸಲ್ಪಟ್ಟ] ಪುರಂದರ ವಿಠಲನನ್ನು ಕುರಿತು ದಾಸರ ಸಂಗದೊಳು ಇರಿಸಿ ಕಷ್ಟಗಳ ಕಳೆಯಯ್ಯ ಎಂದು ಬೇಡಿಕೊಳ್ಳುತ್ತಿದ್ದಾರೆ ಪುರಂದರದಾಸರು.

**ಸರ್ಪ(ಉರಗ):** ಗುರುವುಪದೇಶವಿಲ್ಲದಾ ಮಂತ್ರ
ಗುರುವುಪದೇಶವಿಲ್ಲದಾ ಭಕ್ತಿ
ಗುರುವುಪದೇಶವಿಲ್ಲದಾ ಕ್ರಿಯೆಗಳು
ಉರಗನ ಉಪವಾಸದಂತೆ ಕಾಣಿರೋ

ಪುರಂದರದಾಸರು ವ್ಯಾಸರಾಯರಿಂದ ಗುರುಪದೇಶವನ್ನು ಅಂಕಿತವನ್ನು ಪಡೆದು ಹರಿದಾಸರಾದರು. ಆಗ ಅವರಿಂದ ರಚಿತವಾದ ಸುಳಾದಿ ಇದು ವ್ಯಾಸರಾಯರ ಸುಳಾದಿಯೆಂದೇ ಪ್ರಸಿದ್ಧವಾಗಿದೆ. ಅವರು ಗುರುಗಳಿಗೆ ಧನ್ಯವಾದವನ್ನಿರ್ಪಿಸುತ್ತಾ ಎನ್ನ ಸಾಸಿರಕುಲಕೋಟಿ ಪಾವನ್ನವಾಯಿತು ಎನ್ನುತ್ತಾರೆ. ಗುರೂಪದೇಶ ವಿಲ್ಲದೆ ಮಾಡಿದ ಮಂತ್ರ, ಭಕ್ತಿ, ಅಥವಾ ಎಲ್ಲಾ ಕ್ರಿಯೆಗಳು ವ್ಯರ್ಥ ಎಂದು ಹೇಳಲು ಉರಗನ ಉಪವಾಸವೆಂಬ ಉಪಮೆ ಬಳಸಿದ್ದಾರೆ. ಹಾವು ಆಹಾರವಿಲ್ಲದೆ ಎಷ್ಟೋದಿನಗಳವರೆಗೆ ಇರಬಲ್ಲದು ಅಂತಹ ಉಪವಾಸವನ್ನು ವ್ಯರ್ಥ ಆಚರಣೆಗೆ ಹೋಲಿಸಿದ್ದಾರೆ.

**ಸರ್ಪ(ಉರಗ):** ಅಪ್ಪಳಿಸಿ ಪರರ ಒಡವೆಗಳ ತಂದುಂಡು
ಒಪ್ಪದಿಂದುಪವಾಸ ವ್ರತವ ಮಾಡಿ
ತಪ್ಪದಲೆ ಸ್ವರ್ಗವನು ಸೂರೆಗೊಂಬುವೆನೆಂಬೆ
ಸರ್ಪಗಳು ಮಾಡಿದ ಅಪರಾಧವೇನಯ್ಯ
. . . . . . . . . . . . . . . . . . . . . .

ಸರ್ಪಗಳು ಅನ್ಯರ ಸಂಪತ್ತನ್ನು ಕಾಯುತ್ತವೆಂಬ ನಂಬಿಕೆಯಿದೆ. ಅದೇ ರೀತಿ ಮನುಷ್ಯನು ಪರರ ಸಂಪತ್ತನ್ನು ಲೂಟಿ ಹೊಡೆದು ಆ ಹಣದಲ್ಲಿ ಉಪವಾಸ ವ್ರತಾಚರಣೆಗಳನ್ನು ಮಾಡಿದರೆ ಸ್ವರ್ಗ ಸಿಗುತ್ತದೆಯೇ ಎಂದು ಪ್ರಶ್ನಿಸುತ್ತಾರೆ. ಇಲ್ಲಿ ಸರ್ಪಗಳು ಢಾಂಬಿಕರು ಆಚರಿಸುವ ಅರ್ಥಹೀನ ಸಂಪ್ರದಾಯ ಹಾಗೂ ಅನ್ಯಾಯದ ದಾರಿಯನ್ನು ಸಂಕೇತಿಸುತ್ತವೆ.

**ಸಿಂಹ:** ವಾಸುದೇವನ ಚರಣವನಜ ವಂದಿಪನೆ ।ಪ।
ಸನ್ಯಾಸಿ ರತ್ನಾಕರನೆ ವ್ಯಾಸಮುನಿರಾಯ ।ಅ।

ವಾದಿಗಜ ಸಿಂಹ ದುರ್ವಾದಿ ಮೃಗ ಭೇರುಂಡ
ವಾದಿಫಣಿ ಗರುಡ ತತ್ವಾದಿ ರಚಿತ
ವಾದಿ ಭಯಂಕರ ದುರ್ವಾದಿ ಕೋಲಾಹಲ
ವಾದಿ ಮಸ್ತಕ ಶೂಲ ಮಧುರ ಗುಣಶೀಲ

ಪುರಂದರದಾಸರು ತಮ್ಮ ಗುರುಗಳಾದ ವ್ಯಾಸರಾಯರನ್ನು ವಾದಿಗಳೆಂಬ ಆನೆಗೆ ಸಿಂಹದಂತೆ ಇರುವವರು ಎಂದು ಹೊಗಳಿದ್ದಾರೆ. ತಮ್ಮ ಗುರುಗಳು ಕುಯುಕ್ತಿಗಳಿಂದ ವಾದಮಾಡುವವರಿಗೆ ಮೃಗ ಭೇರುಂಡದಂತೆಯೂ, ವಾದಿಗಳೆಂಬ ಹಾವಿಗೆ ಗರುಡನಂತೆ ಅಂಜಿಕೆಯನ್ನು ತರುವವರೆಂದೂ, ವಾದಿಗಳ ತಲೆಯನ್ನು ತಿವಿಯುವ ಶೂಲವೆಂದೂ, ಶಾಸ್ತ್ರಗಳಿಗೆ ಸಮಂಜಸವಾದ, ಸಜ್ಜನರಿಗೆ ಪ್ರಿಯವಾದ ಮಧುರ ಗುಣಗಳನ್ನು ಹೊಂದಿದವರೆಂದು ಹೊಗಳಿದ್ದಾರೆ. ವ್ಯಾಸರಾಯರು ಭಾರತದಲ್ಲೆಲ್ಲಾ ಸಂಚರಿಸಿ ವಾದಗಳನ್ನು ಮಾಡಿದರೆಂದು ಪ್ರತೀತಿಯಿದೆ ಅದಕ್ಕಾಗಿ ಅವರನ್ನು ಸಿಂಹಕ್ಕೆ ಹೋಲಿಸಿದ್ದಾರೆ.

**ಶುಕ(ಗಿಳಿ):** ಜಯ ಜಯವದೆ ಈ ಮನೆತನಕೆ
ಬಿಡು ಬಿಡು ಬಿಡು ಮನ ಸಂಶಯವ
ಶುಕನೆಂಬಹಕ್ಕಿ ಹೇಳುತದಪ್ಪ
ಜಗವೆಂಬೋ ಗಿಡ ಹುಟ್ಟೈತಣ್ಣ
ಹಣ್ಣುಗಳೆರಡೂ ಐದಾವಪ್ಪ

ಮೂರು ಬುಡದ ಗಿಡ ಕೇಳಣ್ಣ
ಹಣ್ಣಿನ ಒಳಗೆ ನಾಲ್ಕು ರಸವು
ಐದು ದೊಡ್ಡ ಹರಕೆ ಕಾಣಪ್ಪ
ಆರು ಬಗೆಯ ಸ್ವರೂಪ ಕೇಳು
ಏಳು ಬಗೆಯ ತೊಗಟುಂಟಣ್ಣ
ಸಣ್ಣ ಗರಿಗಳು ಎಂಟೈದಾವೆ
ಅಕ್ಷವು ಇದಕೆ ಒಂಬತ್ತೈತೆ
ಎಲೆಗಳು ಹತ್ತು ಐದಾವಪ್ಪ
ಒಂದೇ ಹಕ್ಕಿ ಹಣ್ತಿಂತೈತೆ
ಮತ್ತೊಂದ್ಹಕ್ಕಿ ನೋಡುತದಪ್ಪ
ಹಣ್ತಿಂದ್ಹಕ್ಕಿ ಬಡವಾಗೈತೆ
ತಿನ್ನದ ಹಕ್ಕಿ ಬಲಿತೈತಣ್ಣ
ಸುಳ್ಳಿಲ್ಲ ನೀಕೇಳೋ ತಮ್ಮ
ದ್ವಾ ಸುಪರ್ಣಾ ಶ್ರುತಿಯಲ್ಲೈತೆ.

ಇದು ಬೀದಿಯಲ್ಲಿ ಕಣಿ ಹೇಳುತ್ತಾ ಬರುವ ಬುಡು ಬುಡಿಕೆಯವರ ಹಾಡಿನ ಧಾಟಿಯಲ್ಲಿದೆ. ಶುಕ ಮುನಿಗಳು ಪರಿಕ್ಷಿತ ರಾಜನಿಗೆ ಭಾಗವತ ಮಹಾಪುರಾಣವನ್ನು ಹೇಳಿದರು. ಅದರಲ್ಲಿ ಈ ವಿಚಾರ ಬಂದಿದೆ ಯೆಂದು ದಾಸರು ತಿಳಿಸುತ್ತಾರೆ. ಇಲ್ಲಿ ಶುಕ ಪಕ್ಷಿ ಶುಕಾಚಾರ್ಯರನ್ನು ಸಂಕೇತಿಸುತ್ತದೆ. ಇವರು ಕೃಷ್ಣ ದ್ವೈಪಾಯನ ಮುನಿ ನಿಯಮದಲ್ಲಿದ್ದಾಗ ಶುಕಿ (ಹೆಣ್ಣುಗಿಳಿ) ರೂಪದಿಂದ ಬಂದ ಘೃತಾಚಿಯೆಂಬ ಅಪ್ಸರಾಸ್ತ್ರೀಯಲ್ಲಿ ಜನಿಸಿದವರು. ಇವರು ನಾರದರಿಂದ ಉಪದೇಶ ಹೊಂದಿ ವೈರಾಗ್ಯಭರಿತರಾದವರು. ವ್ಯಾಸಮುನಿಯಿಂದ ಕೇಳಿ ತಿಳಿದ ಭಾಗವತ ಕಥೆಯನ್ನು ಪರಿಕ್ಷಿತರಾಜನಿಗೆ ಹೇಳಿದರು.

ಜಗತ್ತೆಂಬುದು ಒಂದು ವೃಕ್ಷದ ಚಿತ್ರ. ಅದರಲ್ಲಿ ಈಶ, ಜೀವರೆಂಬ ಎರಡು ಹಣ್ಣುಗಳಿವೆ. ಆ ವೃಕ್ಷಕ್ಕೆ ಸತ್ವ, ರಜಸ್ಸು, ತಮಸ್ಸೆಂಬ ಮೂರು ಬುಡಗಳು(ಗುಣಗಳು), ಹಣ್ಣಿನಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳಿವೆ. ಶಬ್ದ, ಸ್ಪರ್ಶ, ರೂಪ, ರಸ ಹಾಗೂ ಗಂಧವೆಂಬ ಐದು ಬಿಳಲುಗಳು ಅಥವಾ ಟೊಂಗೆಗಳಿವೆ. ಜಗತ್ತಿನಲ್ಲಿ ಜನರ ಜೀವನ ಆರು ಬಗೆಯ ಸ್ವರೂಪಗಳಿಂದ ಕೂಡಿದೆ. ೧) ಗರ್ಭದಲ್ಲಿರುವುದು ೨) ಜನನ ೩) ಬೆಳವಣಿಗೆಗೆ ಪ್ರಾರಂಭ ೪) ಬೆಳವಣಿಗೆ ರೂಪಾಂತರ ೫) ಬೆಳವಣಿಗೆಯ ಇಳಿಮುಖ ಮತ್ತು ೬) ಸಾವು. ತ್ವಗಿಂದ್ರಿಯ, ಚರ್ಮ, ಮಾಂಸ, ರಕ್ತ, ಮೇಧಸ್ಸು ಮಜ್ಜಾ ಮತ್ತು ಎಲುವುಗಳೆಂಬ ಏಳು ತೊಗಟೆಗಳಿಂದ ಈ ಚೇತನ ಶರೀರವು ಕೂಡಿದೆ. ಈ ಜಗತ್ತಿನ ಸೃಷ್ಟಿಯಲ್ಲಿ ಎಂಟು ಸಣ್ಣ ಟೊಂಗೆಗಳಿವೆ ಅವೇ ಸೃಷ್ಟಿಯ ಅಷ್ಟ ಪ್ರಕಾರಗಳು. ೧) ದೇವತೆಗಳು ೨) ಗಂಧರ್ವರು ೩)ದಾನವರು ೪) ರಾಕ್ಷಸರು ೫) ಪಿಶಾಚಿಗಳು ೬) ಜಂತುಗಳು ೭) ಸ್ಥಾವರ ಹಾಗೂ ೮) ಮಾನವರು.

ಪ್ರತಿ ವ್ಯಕ್ತಿಗೆ ಇರುವ ಒಂಬತ್ತು ಪೊಟರೆಗಳೆಂದರೆ ನವದ್ವಾರಗಳು. ಹತ್ತು ಎಲೆಗಳು ಎಂದರೆ ಅವು ಐದು ಪಂಚಜ್ಞಾನೇಂದ್ರಿಯಗಳು ಹಾಗೂ ಪಂಚ ಕರ್ಮೇಂದ್ರಿಯಗಳು. ಈ ಜಗವೆಂಬ ವೃಕ್ಷದಲ್ಲಿ ಎರಡು ಹಕ್ಕಿಗಳಿವೆ ಒಂದು ಜೀವಾತ್ಮ ಇನ್ನೊಂದು ಪರಮಾತ್ಮ. ಇವುಗಳಲ್ಲಿ ಜೀವಾತ್ಮನೆಂಬ ಒಂದು ಹಕ್ಕಿ ಮಾತ್ರ ಹಣ್ಣು

ತಿನ್ನುತ್ತದೆ ಎಂದರೆ ಕರ್ಮದ ಮೂಲಕ ದೊರೆತ ಸುಖ, ದುಖಃ ಫಲವನ್ನು ಅದು ಭೋಗಿಸುತ್ತದೆ. ಜೀವನಿಗೆ ಆಧ್ಯಾತ್ಮಿಕ ಆದಿದೈವಿಕ, ಆದಿಭೌತಿಕಗಳ ಕಾರಣವಾಗಿ ದೊರೆಯುವ ಸುಖಃ ದುಖಃಗಳ ಫಲ ಭೋಗವನ್ನು ಮಾಡಬೇಕು, ಅದಕ್ಕಾಗಿ ದಾಸರು ಒಂದು ಹಕ್ಕಿ ಹಣ್ತಿಂತೈತೆ ಎಂದಿದ್ದಾರೆ. ಪರಮಾತ್ಮನೆಂಬ ಹಕ್ಕಿಯು ಜೀವಿಯು ನಡೆಸುವ ಕಾರ್ಯಗಳನ್ನೆಲ್ಲಾ ನೋಡುತ್ತಿರುತ್ತದೆ. ಹಣ್ಣನ್ನು ತಿಂದ ಜೀವಾತ್ಮನೆಂಬ ಹಕ್ಕಿಯು ಸಂಸಾರವೆಂಬ ದುಖಃದಿಂದ ಬಿಡುಗಡೆಯಾಗದೆ ಬಡವಾಗಿದೆ. ಪರಮಾತ್ಮನೆಂಬ ಹಕ್ಕಿಗೆ ಆಹಾರದ ಅಗತ್ಯ, ಬಯಕೆ, ಕೊರತೆ, ನಾಶ ಯಾವುದೂ ಇಲ್ಲ. ಆಹಾರವಿಲ್ಲದೆಯೂ ಬಲಿಷ್ಠವಾಗಿರುವುದು ಪರಮಾತ್ಮನ ಸರ್ವಶಕ್ತಿತ್ವವನ್ನು ತೋರಿಸುತ್ತದೆ.

ಜೀವಿಯು ಅಸ್ವತಂತ್ರ ಈಶನು ಸ್ವತಂತ್ರನೆಂಬ ವಿಚಾರವು ಸುಳ್ಳಲ್ಲ. ಏಕೆಂದರೆ ಇದನ್ನು 'ದ್ವಾಸುಪರ್ಣಾ' ಎಂಬ ಶೃತಿ ವಾಕ್ಯವೂ ಇದನ್ನೇ ತಿಳಿಸುತ್ತದೆ. ದ್ವಾಸುಪರ್ಣಾ ಎಂಬ ಶ್ರುತಿಯ ಆಧಾರದಿಂದ ಪುರಂದರದಾಸರು ಈ ರೂಪಕವನ್ನು ರಚಿಸಿ, ಈ ಜಗತ್ತೆಂಬ ವೃಕ್ಷಕ್ಕೆ ಪರಮಾತ್ಮನೇ ಮುಖ್ಯ ಕಾರಣನಾಗಿದ್ದಾನೆ. ಅವನೇ ಈ ಜಗತ್ತಿನ ಸಕಲ ವ್ಯವಹಾರಗಳನ್ನು ನಡೆಸುವವನಾಗಿದ್ದಾನೆ ಎಂಬ ತತ್ವವನ್ನು ನಿರೂಪಿಸಿದ್ದಾರೆ.

**ಶುನಕ(ನಾಯಿ):** ಯಾರು ಮುನಿದರೆ ನಮಗೇನು ಮಾಡುವರಯ್ಯ
ಯಾರು ಒಲಿದು ನಮಗೇನು ಕೊಡುವರಯ್ಯ
ಕೊಡಬೇಡ ನಮ್ಮೊಡಲಿಗೆ ತುಸುವನು ಇಡಬೇಡ
ಈಯಲು ಬೇಡ ನಮ್ಮ **ಶುನಕ**ನೆ ತಳಗಿಯ
ಆನೆಯ ಮೇಲೆ ಬಪ್ಪನ ಶ್ವಾನ ಕಚ್ಚಬಲ್ಲುದೆ
ದೀನನಾಥ ಪುರಂದರವಿಠಲ ನಮಗುಳ್ಳತನಕ.

**ನಾಯಿ–ಶುನಕ:** ಬಂಧು ಬಳಗದಲ್ಲಿ ಯಾರನ್ನು ನಮ್ಮವರೆಂದು ಭಾವಿಸುತ್ತೇವೆಯೋ ಅವರು ಒಲಿಯಬಹುದು, ಮುನಿಯಬಹುದು, ಹೊಟ್ಟೆ ಕಿಚ್ಚು ಪಡಬಹುದು ಅದಕ್ಕಾಗಿ ಹೆಚ್ಚು ಮಹತ್ವ ಕೊಡಬಾರದು. ಆನೆಯ ಮೇಲೆ ಕುಳಿತು ಹೋಗುವವನಿಗೆ ನಾಯಿ ಕಚ್ಚಲು ಸಾಧ್ಯವಿಲ್ಲದಂತೆ ಪುರಂದರವಿಠಲನನ್ನು ನಂಬಿದವರಿಗೆ ಯಾರು ದೂಷಿಸಿದರೂ, ಒಲಿದರೂ, ಮುನಿದರೂ, ಭಯವಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ.

**ಸುರಧೇನು:** ನಾಮುಂದೆ ರಂಗ ನಿ ಎನ್ನ ಮುಂದೆ
ಎಂದೆಂದು ನಿನ್ನ ನಾಮವ ಎಂದೆಂಬ ॥ಪ॥

ಸುರ ತರುವು ನೀನು ಫಲ ಬಯಸುವನು ನಾನು
ಸುರಧೇನು ನೀನು ಕರೆದುಂಬೆ ನಾನು
ವರಚಿಂತಾಮಣಿ ನೀನು ಪರಿಚಿಂತಿಸುವೆನು ನಾನು
ಶರಧಿಕ್ಷೀರನು ನೀನು ತರಳನು ನಾನು.

ಈ ಪದದಲ್ಲಿ ಸುರಧೇನು ಎಂದರೆ ಬೇಡಿದ್ದನ್ನೆಲ್ಲಾ ಕೊಡುವ ಕಾಮಧೇನು. ಬೆಡಿದ್ದನ್ನೆಲ್ಲಾ ಕೊಡುವವನು ನೀನು ವರಚಿಂತಾಮಣಿ ನೀನು ಬೇಡುವವನು, ನಾನು ಫಲ ಬಯಸುವನು ನಾನು. ಹಾಲಿನಕಡಲಿನಷ್ಟು ದೊಡ್ಡವನು ನೀನು. ತರಳ ಎಂದರೆ ಸಣ್ಣವನು ನಾನು ಎಂಬ ಒಕ್ಕಣೆಯಿದೆ. ಇಲ್ಲಿ ಪರಮಾತ್ಮನನ್ನು

'ಸುರಧೇನು'ವಿಗೆ ಹೋಲಿಸಿ ಅವನ ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಸ್ವಾತಂತ್ರ್ಯ ಕಾರುಣ್ಯ ಮುಂತಾದ ಗುಣಗಳನ್ನು ಎತ್ತಿ ತೋರಿಸುತ್ತಾ ಸಾಧಕನ ಅಲ್ಪ ಶಕ್ತಿತ್ವ ದೈನತ್ವ ಮುಂತಾದ ಗುಣಗಳನ್ನು ಎತ್ತಿ ತೋರಿಸುತ್ತಾರೆ ಪುರಂದರದಾಸರು. ಸುರಧೇನು ಪರಮಾತ್ಮನ ಶಕ್ತಿಯನ್ನು ಸಂಕೇತಿಸುತ್ತದೆ.

**ಸುರಧೇನು:** ಹರಿಯು ಚರಣವೆಂಬ ಸುರಧೇನುವನು
ಗುರುಭೋಧೆಯೆಂಬ ಕಣ್ಣಿಯಲಿ ಕಟ್ಟಿರಯ್ಯ ಪ।

ಭಕುತಿಯೆಂಬ ಕರುವನೆ ಬಿಟ್ಟುನಿರುತ ವಿ
ರಕುತಿಯೆಂಬ ಚೆನ್ನದಳಿಯ ಹಾಕಿ
ಯುಕುತವಾದ ನಿತ್ಯಕಾಯ ಚರಿಗೆಯೊಳು
ಮುಕುತಿ ನಾಮಾಮೃತವ ಕರೆದುಕೊಳ್ಳಿರಯ್ಯ ೧।

ಗುರುವಿನ ಉಪದೇಶವೆಂಬ ಹಗ್ಗದಿಂದ, ಹರಿಚರಣವೆಂಬ ಹಸುವನ್ನು ಕಟ್ಟಿ ಮುಕ್ತಿ ನಾಮಾಮೃತವ ಹಾಲನ್ನು ಕರೆದು ಅದರಿಂದ ರುಚಿಯಾದ ಭಕ್ಷ್ಯವನ್ನು ಮಾಡುವುದರ ರೂಪಕ ಇಲ್ಲಿದೆ. ಭಕ್ತಿಯೆಂಬ ಕರುವನ್ನು ಬಿಟ್ಟು ವಿರಕ್ತಿ ಎಂಬ ನೀರಿನಿಂದ ಕೆಚ್ಚಲಿಗೆ ನೀರುಹಾಕಿ ಯುಕ್ತವಾದ ದೇಹವೆಂಬ ಚರಿಗೆಯೊಳು ಮುಕ್ತಿ ನಾಮಾಮೃತ ಕರೆಯಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಮುಂದಿನ ನುಡಿಗಳಲ್ಲಿ ಕಾಮ, ಕ್ರೋಧಗಳೆಂಬ ಬೆರಣಿ ಹಾಕಿ ಇಂದ್ರಿಯ ನೇಮದ ನೀರು ಬೆರೆಸಿ ಧ್ಯಾನವೆಂಬ ಬೆಂಕಿಯಲ್ಲಿ ಕಾಯಲಿಡಿರೋ ಎನ್ನುತ್ತಾರೆ. ಮುಂದೆ ಶಾಂತಗುಣವೆಂಬ ಹದವನರಿತು, ಭ್ರಾಂತ ಮನಕ್ಕೆ ಮಜ್ಜಿಗೆಯ ಹೆಪ್ಪನ್ನು ಹಾಕಿ ಸಿದ್ಧಾಂತವೆಂಬ ಕಡಗೋಲಿನಿಂದ ಪರಬ್ರಹ್ಮನೆಂಬ ಬೆಣ್ಣೆ ತೆಗೆಯಬೇಕು. ಶರಣಮಣಿಯೆಂಬ ತುಪ್ಪವನು ಕಾಸಿ ಅದರ ಮೇಲೆ ಬರುವ ಮರಣವೆಂಬ ನೊರೆ ತೆಗೆದು ಹೃದಯವೆಂಬ ಕೊಡ ತುಂಬಿರೋ ಎಂದ ಪುರಂದರದಾಸರು ಈ ಕೀರ್ತನೆಯಲ್ಲಿ ತಮ್ಮ ಅಭಿವ್ಯಕ್ತಿ ಕ್ರಮವನ್ನೂ ನಿರೂಪಣೆಯ ವಿಧಾನವನ್ನು ಕಾವ್ಯದ ಒಟ್ಟಾರೆ ವಿನ್ಯಾಸವನ್ನು ಸುಂದರಗೊಳಿಸಿದ್ದಾರೆ.

**ಹರಿಣ(ಜಿಂಕೆ):** ಇನ್ನೇನು ಗತಿ ಎನಗೆಲೋ ಹರಿಯೇ ಪ।

ಅಂಕದೊಳಾಡುವ ಶಿಶುಗಳ ಮುದ್ದಿನ
ಬಿಂಕದ ಸವಿನುಡಿಗಳ ಕೇಳುತ
ಕಿಂಕಿಣಿ ಧ್ವನಿಗೆ ಕಿವಿಗೊಟ್ಟು ಕೇಳುತ
ಮಂಕಾದ ಹರಿಣನಂತಾದೆನಲ್ಲೊ ರಂಗ

ಇಲ್ಲಿ ಹರಿಣವು ಸಂಸಾರದೊಳಗೆ ಮೈಮರೆತು ಮಗ್ನನಾಗಿರುವ ಸಾಧಕನನ್ನು ಸಂಕೇತಿಸುತ್ತದೆ. ತೊಡೆಯ ಮೇಲಾಡುವ ಮಕ್ಕಳ ಮುದ್ದಿನ ಮಾತುಗಳನ್ನು ಕೇಳುತ್ತ ಮನಸೋತ ತಾನು ಬೇಡನ ಬಿಲ್ಲಿನ ಝೇಂಕಾರಕ್ಕೆ ಮನಸೋತು ಅಲ್ಲೇ ನಿಂತ ಜಿಂಕೆಯಂತಾದೆನಲ್ಲ ಎಂದು ನೊಂದುಕೊಳ್ಳುತ್ತಿದ್ದಾರೆ. ಹೀಗೆ ಮೈಮರೆತು ನಿಂತ ಜಿಂಕೆಯೇ ಬೇಡನ ಬಾಣಕ್ಕೆ ಗುರಿಯಾಗಿ ಸಾವನಪ್ಪುವುದು, ಹರಿಣ ಪ್ರತಿಮೆ ಸಂಸಾರದಲ್ಲಿಯ ಮೋಹ ದುಃಖಕ್ಕೆ ಕಾರಣ ಎಂಬುದನ್ನು ಸೂಚಿಸುತ್ತದೆ.

**ಹುಚ್ಚು ಕುನ್ನಿ:** ಹುಚ್ಚು ಕುನ್ನಿಮನವೆ ನೀ
ಹುಚ್ಚುಗೊಂಬುದು ಘನವೇ

ಕಚ್ಚು ಕದತನವ ಬಿಟ್ಟು
ಅಚ್ಚುತನ ಪದವ ಮುಟ್ಟು ಪ॥

ಇಲ್ಲಿ ಚಂಚಲ ಮನಸ್ಸನ್ನು ಹುಚ್ಚುಕುನ್ನಿಗೆ ಹೋಲಿಸಲಾಗಿದೆ. ಮನಸ್ಸು ಚಂಚಲತೆಯಿಂದ ತಾಳ್ಮೆ ಕಳೆದುಕೊಳ್ಳುವುದು, ಕೋಪಮಾಡಿಕೊಳ್ಳುವುದು ವಿರೋಧ ವ್ಯಕ್ತ ಪಡಿಸುವುದು ಮುಂತಾದ ಅವಗುಣಗಳನ್ನು ಹೊಂದಿರುತ್ತದೆ. ಅಂತಹ ಕ್ರಿಯೆಗಳನ್ನು ಕಂಡವರನ್ನು ಕಚ್ಚುವ ನಾಯಿಯ ಹೀನತನಕ್ಕೆ ಹೋಲಿಸಲಾಗಿದೆ.

ಮನಸ್ಸು ದೈವವೆಂಬ ಬಲವಾದ ನೆಲೆಯನ್ನು ಆಶ್ರಯಿಸದೆ ಹುಚ್ಚು ಹುಚ್ಚಾಗಿ ಬಾಹ್ಯ ಪ್ರದರ್ಶಗಳಿಗೆ ಮಾರುಹೋದರೆ ಸಾಧಕನ ಗುಣವನ್ನು ಪಡೆಯಲು ಸಾಧ್ಯವಿಲ್ಲ. ಮನಶುದ್ಧಿಯಿಲ್ಲದೆ ಮಾಡುವ ಸ್ನಾನ, ಧ್ಯಾನ, ಜಪ, ತಪ ಮುಂತಾದ ವ್ರತಾಚರಣೆಗಳಿಂದ ಕೇವಲ ಪ್ರಚಾರವನ್ನು ಪಡೆದುಕೊಳ್ಳಬಹುದು. ಆದರೆ ಸೂರ್ಯಮಂಡಲಸ್ಥನಾದ ನಾರಾಯಣನನ್ನು ಹೊಂದುವುದು ಸಾಧ್ಯವಿಲ್ಲ.

**ಹಂದಿ:** ಗೋವಿಂದ ನಮೋ ಗೋವಿಂದ ನಮೋ
ಗೋವಿಂದ ನಾರಾಯಣ ಪ॥

......................
ತಂದು ಬಂದರೆ ತನ್ನ ಪುರುಷನ
ಕಾಣದೆ ನಿಲ್ಲಲಾರಳು
ಒಂದು ದಿವಸ ತಾರದಿದ್ದರೆ
ಹಂದಿ ನಾಯಂತೆ ಬೊಗಳುವಳು.

ಸಂಸಾರದಲ್ಲಿ ಪ್ರತಿಯೊಬ್ಬ ಬಂಧುವು ತನ್ನ ಸ್ವಾರ್ಥಕ್ಕೋಸ್ಕರ ಬೇರೆಯವರನ್ನು ಪ್ರೀತಿಸುತ್ತಾರೆ. ಅದೇ ರೀತಿ ಪತ್ನಿಯ ಪ್ರೀತಿಯೂ ಕೂಡ ಶಾಶ್ವತವಲ್ಲ. ಬೇಕಾದ ವಸ್ತುಗಳನ್ನು ತಂದು ಕೊಟ್ಟರೆ ಪ್ರೀತಿಯಿಂದ ಆದರಿಸುತ್ತಾಳೆ. ಅದೇ ವಸ್ತುಗಳನ್ನು ತಾರದಿರುವ ಪರಿಸ್ಥಿತಿ ಬಂದರೆ ಹಂದಿ ನಾಯಂತೆ ಬೊಗಳುವಳು ಎಂಬ ಕಟುವಾದ ಸತ್ಯವನ್ನು ಇಲ್ಲಿ ಪುರಂದರದಾಸರು ಎತ್ತಿ ತೋರಿಸಿದ್ದಾರೆ. ಆದ್ದರಿಂದ ಸಂಸಾರದ ಬಗ್ಗೆ ವಿರಕ್ತಿ ಹೊಂದಿ ಭಗವಂತನನ್ನು ಭಜಿಸಬೇಕು ಅವನಿಂದಲೇ ನಮಗೆ ಶಾಶ್ವತ ಪ್ರೀತಿಯು ದೊರಕುವುದು ಎಂಬ ಸಂದೇಶ ಇಲ್ಲಿ ಕಾಣುತ್ತದೆ.

**ಹಂದಿ:** ಮತಿಗೆಟ್ಟು ಕಾಲವ ಕಳೆಯಬೇಡ
ಸದ್ಗತಿಕೊಡುವ ಹರಿಯ ನಂಬಲೋ ಮೂಢ ಪ॥

ಹಾಳು ಕೇರಿಯೊಳು ತಿರುಗುವ ಹಂದಿಯಂತೆ
ಬಳಲುತ್ತ ನಾನಾ ಜನ್ಮವೆತ್ತಿ ಬಂದೆ
ಬಾಳುವ ಕಾಲಕ್ಕೆ ಮದವೇರಿ ನಿಂದಿ, ಮುಂದೆ
ಮೂಳ ಮುಪ್ಪಿನಲ್ಲಿ ಅವಿಚಾರಗೊಂಡಿ
...................... (೪೪)

ಅನೀತಿಯಲ್ಲಿ ಬದುಕುವ ಮನುಷ್ಯನ ಜೀವನವನ್ನು ಹಾಳುಕೇರಿಯಲ್ಲಿ ತಿರುಗುವ ಹಂದಿಗೆ ಹೋಲಿಸಲಾಗಿದೆ. ಯೌವ್ವನದಲ್ಲಿ ಅಹಂಕಾರದಿಂದ ಮೆರೆದು ಮುದಿತನದಲ್ಲಿ ಯುಕ್ತಾಯುಕ್ತ ವಿವೇಚನೆಯಿಲ್ಲದೆ ದಾರಿ ತಪ್ಪಿನಡೆದ ಮತಿಗೆಟ್ಟ ಮನುಷ್ಯನನ್ನು ಉದ್ದೇಶಿಸಿ ಹೇಳಲಾಗಿದೆ.

**ಹಂದಿ:** ನಿಂದಕರಿರಬೇಕಿರಬೇಕು ।ಪ।
ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ ।ಅ।

ಅಂದಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ನಿಂದಕರು
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ
ಪೊಂದಿದ ಪುಣ್ಯವನೊಯ್ಯುವರಯ್ಯ (೪೫)

ನಿಂದಿಸುವ ಜನರನ್ನು ಹಂದಿಗೆ ಹೋಲಿಸಿದ ಪುರಂದರದಾಸರು ತೆಗಳಿಕೆಯಿಂದ ಮನ: ಶುದ್ಧಿಯಾಗುವುದೆಂದು ತಿಳಿಸಿದ್ದಾರೆ. 'ಮಾಡಿದವರ ಪಾಪ ಆಡಿದವರಿಗೆ' ಎಂಬ ಕನ್ನಡದ ಗಾದೆಯಂತೆ ಒಬ್ಬ ಮಾಡಿದ ಪಾಪ ಬೇರೆಯವರು ಮಾಡಿದ ನಿಂದನೆಯಿಂದ ಪರಿಹಾರವಾಗುವುದೆಂದು ಅದು ನಿಂದಕರಿಗೆ ಒದಗುವವೆಂದು ಅಗ್ನಿ ಪುರಾಣದಲ್ಲಿ ಹೇಳಲಾಗಿದೆ. ಹಾಗೆಯೇ ದಾನಧರ್ಮಾದಿಗಳನ್ನು ಮಾಡಿದಾಗ ಬೇರೆಯವರು ಹೊಗಳಿದರೆ ಮಾಡಿದವರಿಂದ ಪುಣ್ಯವು ಹೊರಟು ಹೋಗುತ್ತದೆ. ಅದಕ್ಕಾಗಿಯೇ ದಾನ ಧರ್ಮಗಳನ್ನು ಗುಟ್ಟಾಗಿ ಮಾಡಬೇಕೆಂಬುದು.

ಬದುಕನ್ನು ಗಾಢವಾಗಿ ಪ್ರೀತಿಸುವ ಸಮಾಜ ಚಿಂತಕರಾದ ಪುರಂದರದಾಸರು ಸಾಧನಾ ಮಾರ್ಗದಲ್ಲಿ ನಡೆಯಲು ಜನರನ್ನು ಪ್ರೇರೇಪಿಸಿದರು. ಸಾಮಾನ್ಯ ಜನರ ನಡುವೆಯೆ ಇದ್ದು, ಹಂದಿ, ನಾಯಿ ಮುಂತಾದ ಪ್ರಾಣಿ ರೂಪಕಗಳಿಂದ ಮನುಷ್ಯರಲ್ಲಿರುವ ಹೀನತೆಯನ್ನು ಎತ್ತಿ ಹಿಡಿದು, ಬೆಂಕಿಯಲ್ಲಿ ಶುದ್ಧವಾಗುವ ಬಂಗಾರದಂತೆ ನಮ್ಮ ಜೀವನವು ಕಾಮ, ಕ್ರೋಧ ಮುಂತಾದ ಅವಗುಣಗಳಿಂದ ಮುಕ್ತವಾಗಬೇಕೆಂದು ಅವರು ಬಯಸಿದ್ದರು. ದಾಸರು ತಮಗೆ ಪರಿಚಿತವಾದ ವ್ಯಾವಹಾರಿಕ ಲೋಕದಿಂದ ಸುಂದರವಾದ ಉಪಮೇಯಗಳ ಮೂಲಕ ದಾಸ ಸಾಹಿತ್ಯದ ನೆಲವನ್ನು ಹದಗೊಳಿಸಿದ್ದಾರೆ. ಮತ್ತು ಪ್ರಾಣಿ ಪ್ರತಿಮೆಗಳ ಮೂಲಕ ದಾಸರು ಸಾಂಸ್ಕೃತಿಕ ಲೋಕವನ್ನು ಅನಾವರಣ ಮಾಡಿದ್ದಾರೆ.

-: ಕೊನೆ ಟಿಪ್ಪಣಿಗಳು :-

೧. ಈ ಅಧ್ಯಾಯದಲ್ಲಿ ಬರುವ ೧ – ೪೫ ಕೀರ್ತನೆಗಳನ್ನು ಪುರಂದರ ಸಾಹಿತ್ಯದರ್ಶನ ಸಂಪುಟ, ೧, ೨, ೩, ಮತ್ತು ೪ ರಿಂದ ಆಯ್ದುಕೊಳ್ಳಲಾಗಿದೆ. ಸಂ. ಪ್ರೊ.ಸಾ.ಕೃ ರಾಮಚಂದ್ರರಾವ್.

## ಅಧ್ಯಾಯ–೫
## ಸಾಮಾಜಿಕ ಪ್ರತಿಮೆಗಳು

ಹರಿಭಕ್ತಿ ಮತ್ತು ಭಾಗವತ ಧರ್ಮದ ಪ್ರಸಾರವೇ ದಾಸರಿಗೆ ಮುಖ್ಯವಾದುದು. ಆದರೆ ನಿಜವಾಗಿ ಹೇಳುವುದಾದರೆ ಪುರಂದರದಾಸರು ಲೌಕಿಕಜೀವನದಲ್ಲಿ ಇದ್ದುಕೊಂಡೇ ಶ್ರೀ ಹರಿಯ ಕೃಪಾಕಟಾಕ್ಷಕ್ಕೆ ಪಾತ್ರರಾದವರು. ಜಾತಿ–ಜಾತಿಗಳ ನಡುವಿನ ಅಸಮಾಧಾನವನ್ನು ಕಳೆಯಲು ನಾಗರಿಕರನ್ನು ನೀತಿವಂತರನ್ನಾಗಿ ಮಾಡಲು ಮತ್ತು ಅನೇಕ ರೀತಿಯಲ್ಲಿ ಸಾಮಾಜಿಕ ಸ್ವಾಸ್ಥವನ್ನು ಸ್ಥಾಪಿಸಲು ಪ್ರಯತ್ನಿಸಿದ ಇವರು ಶ್ರೇಷ್ಟ ತರಗತಿಯ ಸಮಾಜ ಸುಧಾರಕರಾಗಿದ್ದರು ಎಂದರೆ ತಪ್ಪಲ್ಲ. ಪುರಂದರದಾಸರ ಸಮಾಜ ದರ್ಶನ ದಲ್ಲಿ ಢಾಂಬಿಕ ಭಕ್ತಿಯ ಟೀಕೆ, ನೈಜ ಭಕ್ತಿಯ ಪ್ರೇರಣೆ ಸಹವಾಸದೋಷದ ದುಷ್ಪರಿಣಾಮಗಳು ಹಣದ ಒಳಿತು ಕೆಡುಕುಗಳು, ಲೋಕೋಪಕಾರಕ್ಕಾಗಿ ಬದುಕು. ವಚನಭ್ರಷ್ಟರಸ್ಥಾನ ಮುಂತಾದ ಹಲವಾರು ಲೌಕಿಕ ವಿಷಯಗಳ ಬಗ್ಗೆ ದಾಸರು ಚಿಂತಿಸಿದ್ದಾರೆ. ದಾಸರು ಮಾಡಿದ ಸಮಾಜ ಕಲ್ಯಾಣವು ಕಡಿಮೆಯೇನಲ್ಲ, ಅವರು ಆಧ್ಯಾತ್ಮವಿದ್ಯೆಯನ್ನು ಸಾಮಾನ್ಯರಿಗೆ ಒದಗಿಸಿದರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಸಂಗೀತಶಾಸ್ತ್ರ ಹಾಗೂ ದಾಸ ಸಾಹಿತ್ಯಕ್ಕೆ ತಮ್ಮ ಅಮೂಲ್ಯವಾದ ಕೊಡುಗೆಯನ್ನು ನೀಡಿದ ಅವರು ಸಾಮಾಜಿಕರಿಗೆ ತಮ್ಮ ದೈನಂದಿನ ಜೀವನದಲ್ಲಿಯೇ ಆಧ್ಯಾತ್ಮವನ್ನು ಸಾಧಿಸುವ ದಾರಿಯನ್ನು ತೋರಿ ಸಿದರು.

**ಅಡುಗೆ :** ಅನುಭವದಡುಗೆಯ ಮಾಡಿ ಅದ
ಕ್ಕನುಭವಿಗಳು ಬಂದು ನೀವೆಲ್ಲಕೂಡಿ ಪ।

ತನುವೆಂಬ ಭಾಂಡವ ತೊಳೆದು ಕೆಟ್ಟ
ಮನದ ಚಂಚಲವೆಂಬ ಮುಸುರೆಯಕಳೆದು
ಘನವಾಗಿ ಮನೆಯನ್ನು ಬಳಿದು ಅಲ್ಲಿ
ಮಿನುಗುವ ತ್ರಿಗುಣದ ಒಲೆಗುಂಡನೆಡೆದು ೧।

ವಿರಕ್ತಿಯೆಂಬುವ ಮಡಿಯುಟ್ಟು ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟುಮಾಯಾ
ಮರೆವೆಂಬ ಕಾಷ್ಠವ ಮುದದಿಂದ ಸುಟ್ಟು ೨।

ಶರಣೆಂಬ ಸಾಮಗ್ರಿ ಹೂಡಿ ಮೋಕ್ಷ
ಪರಿಕರವಾದಂಥ ಪಾಕವ ಮಾಡಿ
ಗುರು ಶರಣರು ಸವಿದಾಡಿ ನಮ್ಮ ಪುರಂದರ
ವಿಠಲನ ಬಿಡದೆ ಕೊಂಡಾಡಿ ೩। (೧)

ಇಲ್ಲಿ 'ಅಡುಗೆ' ಪ್ರತಿಮೆ ಇನ್ನೊಂದು ಉದ್ದೇಶಕ್ಕೆ ಮಾಧ್ಯಮವಾಗಿ ಆಧ್ಯಾತ್ಮಸಾಧನೆಯ ವಿವರಗಳನ್ನು ತಿಳಿಸುವುದು ವಿಶೇಷವಾಗಿದೆ. ದಾಸರು ಅಡುಗೆ ಮಾಡುವ ವಿಧಾನವನ್ನು ಹೇಳುತ್ತಾ ಎಲ್ಲ ಸಾಧಕರಿಗೂ ಬಂದು ಜೊತೆಯಾಗಲು ತಿಳಿಸುತ್ತಾರೆ.

ಸಾಮಾನ್ಯವಾಗಿ ಅಡುಗೆ ಮಾಡಲು ಪಾತ್ರೆಗಳನ್ನು ಅದಕ್ಕಂಟಿದ ಮುಸುರೆಯನ್ನು ಶುಭ್ರವಾಗಿ ತೊಳೆಯುತ್ತಾರೆ. ಮನೆಯನ್ನು ಚೆನ್ನಾಗಿ ತೊಳೆದು ಸಾರಿಸಿ ಮೂರು ಕಲ್ಲುಗಳನ್ನು ತ್ರಿಕೋಣಾಕಾರದಲ್ಲಿ ಹೂಡಿ, ಕಟ್ಟಿಗೆಯ ತುಂಡುಗಳನ್ನು ತಂದು ಬೆಂಕಿಹೊತ್ತಿಸಿ, ಪಾತ್ರೆ ಇಟ್ಟು ಬೇಕಾದ ಅಡುಗೆಯನ್ನು ಮಾಡುತ್ತಾರೆ. ಅಡುಗೆಗೆ ಬೇಕಾಗುವ ಎಲ್ಲ ಪರಿಕರಗಳನ್ನು ಸಾಧಕನು ಜೀವನದಲ್ಲಿ ಮಾಡಬೇಕಾದ ಕಾರ್ಯಗಳಿಗೆ ಹೋಲಿಸುತ್ತಾ ಮೋಕ್ಷವೆಂಬ ಪಾಕ ಮಾಡಲು ಪ್ರೇರೇಪಿಸುವ ವಿಧಾನವು ಈ ಕೀರ್ತನೆಯಲ್ಲಿ ತುಂಬ ಸುಂದರವಾಗಿ ಮೂಡಿ ಬಂದಿದೆ.

ಜೀವನವೆಂಬ ಮನೆಯಲ್ಲಿ ದೇಹವೇ ಪಾತ್ರೆ, ಮನಸ್ಸಿನ ಚಂಚಲ ಸ್ವಭಾವ ಮುಸುರೆ ಅಂತಹ ಮುಸುರೆ ಕಳೆದು ಸತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳೆಂಬ ಒಲೆಯ ಮೂರು ಕಲ್ಲುಗಳನ್ನು ಹೂಡಿ ವಿರಕ್ತಿಯೆಂಬ ಮಡಿಯನುಟ್ಟು ಹರಿಭಕ್ತಿಯೆಂಬ ನೀರನ್ನು ಪಾತ್ರೆಯಲ್ಲಿ ಹಾಕಬೇಕು ಹರಿಮಹಾತ್ಮೆ ಯೆಂಬ ಬೆಂಕಿಯಿಂದ ಅನ್ಯಥಾಜ್ಞಾನ ಅಥವಾ ಭ್ರಮೆಯೆಂಬ ಕಟ್ಟಿಗೆಯನ್ನು ಸುಡಬೇಕು ಭಗವಂತನಲ್ಲಿ ಶರಣ ಅಥವಾ ದಾಸ್ಯಭಾವದಿಂದ ಕೂಡಿ ಮೋಕ್ಷವನ್ನು ಕೊಡತಕ್ಕಂತಹ ಅಡುಗೆ ಮಾಡಬೇಕು.

ಪರಮಾತ್ಮನನ್ನು ಹೊಂದಲು ಇಂದ್ರಿಯ ನಿಗ್ರಹ, ಹರಿಯ ಮಹಾತ್ಮೆಯ ಜ್ಞಾನ ಜೀವನದಲ್ಲಿ ವಿರಕ್ತಿ ಪರಮಾತ್ಮನಲ್ಲಿ ಶರಣಾಗತಿ ಎಲ್ಲ ಭಾವಗಳ ಅವಶ್ಯಕತೆ ಎಷ್ಟಿದೆ ಎಂಬುದನ್ನು ಇಲ್ಲಿ ತೋರಿಸಲಾಗಿದೆ.

**ಅಪಮಾನ :** ಅಪಮಾನವಾದರೆ ಒಳಿತು ||ಪ||

ಅಪರೂಪ ಹರಿನಾಮ ಜಪಿಸುವ ಮನುಜರಿಗೆ ||ಅ||

ಮಾನದಿಂದ ಅಭಿಮಾನ ಪುಟ್ಟುವುದು
ಮಾನದಿಂದ ತಪ ಹಾನಿಯಾಗುವುದು
ಮಾನಿ ದುರ್ಯೋಧನನಿಗೆ ಹಾನಿಯಾಯಿತು ಅನು
ಮಾನವಿಲ್ಲ ಮಾನಾಪಮಾನ ಸಮನಿಗೆ. ||೧||
.......................
.......................

ಮಾನವೆಂದರೆ ಜನರು ತೋರಿಸುವ ಮನ್ನಣೆ, ಗೌರವ ಮಾನದಿಂದ ವ್ಯಕ್ತಿಗೆ ತನ್ನಲ್ಲಿಯೇ ಹೆಚ್ಚಿನ ಹೆಮ್ಮೆ ಒದಗಿ ಅಹಂಕಾರ ಬೆಳೆಯುವುದು. ಹರಿದಾಸರ ತಪಶ್ಚರ್ಯೆಯಲ್ಲಿ ಹರಿಯು ಸರ್ವಸಮರ್ಥನೆಂಬ ನಂಬಿಕೆ ಬಲವಾಗಿರಬೇಕು, ಬದಲಾಗಿ ತಾನೇ ಬಲವಂತನೆಂದು ನಂಬಿದರೆ ತಪಸ್ಸು ಕೆಡುವುದು. ಮಹಾಭಾರತದಲ್ಲಿ ದುರ್ಯೋಧನನಿಗೆ ಒದಗಿದ ಭಂಗಗಳೆಲ್ಲ ಅವನ ಅಭಿಮಾನದ ಫಲವಾಗಿಯೇ, ಮಾನಾಪಮಾನಗಳು ಸಮನೆಂದು ನಂಬಿದವನಿಗೆ ಯಾವುದೇ ಹಾನಿಯಿಲ್ಲ ಎಂಬ ಅರ್ಥವು ಇಲ್ಲಿ ಮೂಡಿಬಂದಿದೆ

**ಅಳು :** ಕಣ್ಣಲ್ಲಿ ನೀರಿಲ್ಲ ಮನದಲ್ಲಿ ಕೊರಗಿಲ್ಲ
ಅತ್ತೆ ಸತ್ತರೆ ಸೊಸೆ ಅಳುವಂತೆ
ಅತ್ತೆ ಅತ್ತೆ ಎಂತಂದು ನಾನತ್ತೆ
ಅತ್ತೆ ಸತ್ತರೆ ಎದೆ ಎರಡಾಯಿತೆಂದು
ಅತ್ತೆ ಅತ್ತೆ ಎಂದು ಪುರಂದರವಿಠಲನ
ದಾಸರೆಲ್ಲರ ಮುಂದೆ ಹಾಡಿ ಹಾಡಿ ನಾನತ್ತೆ. (೩)

ಅಳು ಪ್ರತಿಮೆ ಇಲ್ಲಿ ಡಾಂಬಿಕ ಭಕ್ತಿಯನ್ನು ಸಂಕೇತಿಸುತ್ತದೆ. ಅಳು ಮನಸ್ಸಿನಲ್ಲಿರುವ ಉದ್ವೇಗ ದುಃಖಗಳನ್ನು ಹೊರಹಾಕುವ ಮಾನವ ಸಹಜವಾದ ಪ್ರತಿಕ್ರಿಯೆ. ಅತ್ತೆಯನ್ನು ಕಂಡರೆ ಸೊಸೆಗೆ ಪ್ರೀತಿಯಿಲ್ಲ ಆದರೂ ಸಮಾಜದ ಎದುರಿಗೆ ತನ್ನ ಮನಸ್ಸಿನ ಭಾವವನ್ನು ತೋರಲು ಹಿಂಜರಿದು ಕಣ್ಣಲ್ಲಿ ನೀರಿಲ್ಲದೆ. ಮನಸ್ಸಿನಲ್ಲಿ ಕೊರಗಿಲ್ಲದೆ. ಅಳುತ್ತಿರುವಂತೆ ನಟಿಸುತ್ತಾಳೆ. ಮನದಲ್ಲಿ ಭಕ್ತಿಯಿಲ್ಲದ ಇಂತಹ ಜನರ ಮುಂದೆ ನಾನು ಹಾಡಿ ಹಾಡಿ ನಾನತ್ತೆ ಎಂದು ಇಲ್ಲಿ ನೊಂದು ನುಡಿದಿದ್ದಾರೆ ಪುರಂದರದಾಸರು, ಕೆಲವು ಜನರು ಲೌಕಿಕದಲ್ಲೇ ಸಂಪೂರ್ಣವಾಗಿ ಮುಳುಗಿ ಜೀವ ಚಿಂತನೆ–ದೈವಚಿಂತನೆಗಳನ್ನು ಮಾಡದೆ ಕಾಲ ಕಳೆಯುತ್ತಾರೆ. ಎಷ್ಟು ಹೇಳಿದರೂ ತಿದ್ದಿಕೊಳ್ಳದ ಅಂತಹ ಜನರನ್ನು ಉದ್ದೇಶಿಸಿ ರಚಿಸಿದ ಉಗಾಭೋಗವಿದು. ಇಲ್ಲಿ ಪುರಂದರ ದಾಸರು ಅತ್ಯಂತ ಸರಳವಾದ ಭಾಷೆಯಲ್ಲಿ ಹೃದಯಂಗಮವಾದ ಶೈಲಿಯಲ್ಲಿ ಮನಸ್ಸಿನಲ್ಲಿ ನಿಲ್ಲುವಂತೆ ಅಳುವಿನ ಕ್ರಿಯೆಯನ್ನು ಡಾಂಬಿಕ ಭಕ್ತಿಯೊಂದಿಗೆ ಸಮೀಕರಿಸಿದ್ದಾರೆ.

**ಆಶೆ :** ಮನೆಯಾಶೆ ಮನ್ನಣೆ ಕೆಡಿಸುತಲಿದೆ
ಎನ್ನಮನ ಮನೆವಾರುತೆಯಾಶೇ ಬಲು ಬಾಧಿಸುತಿದೆ
ಧನದಾಸೆ ದೈನ್ಯಬಡಿಸುತಿದೆ
ಇನಿತಾಶೆಯ ಬಿಡಿಸು ಬುದ್ಧಿಯಲಿ ನಿನ್ನ
ನೆನೆವಂತೆ ಮಾಡೆನಗೆ ಪುರಂದರವಿಠಲ. (೪)

ಹುಟ್ಟಿದಾರಂಭಿಸಿ ಸಾಯುವವರೆಗೆ ಮನುಷ್ಯನು ಆಸೆ ಪಡುತ್ತಲೇ ಇರುತ್ತಾನೆ. ಮನೆ, ಮಕ್ಕಳು, ವಾಹನ ವಸ್ತ್ರ, ಒಡವೆ, ಮುಂತಾದ ಆಸೆಗಳು ಎಷ್ಟು ಇದ್ದರೂ ತೀರುವಂತಹದಲ್ಲ. ಆಶೆಗೆ ಕೊನೆಯೇ ಇಲ್ಲ, ಅದಕ್ಕಾಗಿಯೆ ಇದನ್ನು ವಿಜಯದಾಸರು ಆಶೆ ಎಂಬುದು 'ಪಿಶಾಚಿ' ಎಂದಿದ್ದಾರೆ. [ಆಶೆ ಎಂಬ ಪಿಶಾಚಿ ಸೋಂಕಿದೆ ಮನದಲ್ಲಿ (ಅ)] ಮನೆಯಾಶೆ, ಮನೆಯ ವಿಷಯಗಳ ಬಗ್ಗೆ ತಿಳಿದುಕೊಳ್ಳುವ ಆಸೆ. ಧನದಾಸೆ ಮುಂತಾದುವುಗಳು ಪುರಂದರದಾಸರು ಹರಿದಾಸದೀಕ್ಷೆ ಸ್ವೀಕರಿಸಿದ ಮೇಲೆಯೂ ಅವರನ್ನು ಕಾಡಿರಬಹುದು ಹಾಗಾಗಿ ಇವುಗಳಿಂದ ಬಿಡಿಸಿ, ನಿನ್ನ ನಾಮಸ್ಮರಣೆಯಲ್ಲಿ ನನ್ನ ಮನಸ್ಸನ್ನು ನಿಲ್ಲಿಸು ಎಂಬ ಆತ್ಮನಿವೇದನೆ ಇಲ್ಲಿ ಕಂಡಿದೆ. ಅಷ್ಟೇ ಅಲ್ಲದೆ ಭಕ್ತರ ಮನಸ್ಸಿನ ಚಂಚಲತೆಯನ್ನು ದೂರ ಮಾಡಲು ಕೇಳಿಕೊಂಡಿಬಹುದು ಎಂಬ ಅಭಿಪ್ರಾಯವೂ ಸಹ ಮೂಡಿಬರುವ ಸಾಧ್ಯತೆಯಿದೆ. ಇನ್ನೊಂದು ಕೀರ್ತನೆಯಲ್ಲಿ ಆರು ಹಿತವರು ನಿನಗೆ ಮೂರು ಮಂದಿಯೊಳಗೆ ನಾರಿಯೋ, ಧಾರುಣಿಯೋ ಬಲು ಧನದ ಸಿರಿಯೋ ಎಂದು ಮಾನವನನ್ನು ಯೋಚಿಸಲು ಕೇಳಿಕೊಳ್ಳುತ್ತಾರೆ. ಧನದಾಸೆ ಬಿಟ್ಟು ಹರಿಸ್ಮರಣೆ ಮಾಡು ಎಂಬುದು ಅವರ ಸಂದೇಶ. ಕಳ್ಳತನ ಕೊಲೆ ದರೋಡೆ ಮುಂತಾದ

ತಾಮಸೀ ಕೃತ್ಯಗಳ ಓಂದಿರುವ ಆಸೆ ಎಂಬ ರೋಗಕ್ಕೆ ವೈರಾಗ್ಯವೇ ಮದ್ದು ಎಂದು ತಿಳಿದಿದ್ದ ಅವರು ಸಮಾಜದಲ್ಲಿ ಸಾಮರಸ್ಯ ಕಾಪಾಡಲು ಇಂತಹ ಸಂದೇಶಗಳನ್ನು ನೀಡಿದ್ದಾರೆ.

ಜೀವನದ ಉನ್ನತ ಮೌಲ್ಯಗಳ ಪರಿಪಾಲನೆಗೆ ಜೀವ ತಾನೇ ಕೆಲವು ಸೂತ್ರಗಳನ್ನು ರೂಪಿಸಿಕೊಳ್ಳಬೇಕು ಅದರಂತೆ ನಡೆದುಕೊಳ್ಳಬೇಕು. ಪ್ರಾಪಂಚಿಕ ಓತಗಳು ಶಾಶ್ವತವಲ್ಲವೆಂದು ತಿಳಿದು ಆಶೆ ಮಾಡದೆ ಬದುಕುವುದು ಮುಖ್ಯ ಆಧ್ಯಾತ್ಮದತ್ತ ಮನಸ್ಸು ಹರಿಯಲು ಸಂಸಾರದ ಅನಿತ್ಯತೆಯೇ ಕಾರಣ ಆದ್ದರಿಂದ ಎಚ್ಚರಿಕೆಯಿಂದ ಜೀವನ ನಡೆಸಲು ಈ ಕೆಳಗಿನಂತೆ ಪುರಂದರದಾಸರು ತಿಳಿಸುತ್ತಾರೆ.

**ಎಚ್ಚರಿಕೆ :** ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ
ನಿಶ್ಚಯವೆಚ್ಚರಿಕೆ ।ಪ।

ಹೆಚ್ಚದೆ ಹಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು
ಕೇಳಚ್ಚರಿಕೆ ।ಅ।

ಪೊಡವಿಪನೊಲುಮೆಯ ಕಡು ನೆಚ್ಚಿ ಗರ್ವದಿ ನಡೆಯದಿರೆಚ್ಚರಿಕೆ.
ಕೊಡನ ಅಂಧಕ ಪೊತ್ತು ನಡೆವಂತೆ ಅಧಿಕಾರ ಕಡೆಯಲ್ಲಿ ಎಚ್ಚರಿಕೆ.
ಕಡುಚಳಕನು ತಾನೆನುತ ಪರರ ಅವಘಡಿಸದೆಚ್ಚರಿಕೆ.
ಬಡ ಬಗ್ಗರ ಬಾಯಿ ಬಡಿದು ಪಾಪದಿ ಹೆಜ್ಜೆ ಇಡಬೇಡ ಎಚ್ಚರಿಕೆ ।೧।
. . . . . . . . . . . . . . . . . . . . . . . . . . . . . . . . . . . .
. . . . . . . . . . . . . . . . . . . . . . . . . . . . . . . . . . . .
ಪರಸತಿ ಧನ ಅಪಹರಿಸಲು ಸಿರಿ ಮೊಗದಿರುಹುವಳೆಚ್ಚರಿಕೆ
ನೆರೆ ಛಿದ್ರ ಕುಂಭದ ನೀರಿನಂತಾಯುಷ್ಯ ಸರಿಯುತಿದೆಚ್ಚರಿಕೆ
ಬರುವ ಹಾನಿ ವೃದ್ಧಿ ತನ್ನ ಕಾಲವ ಮೀರಲರಿಯದು ಎಚ್ಚರಿಕೆ
ವರದ ಪುರಂದರವಿಠಲನ ಚರಣವ ಮರೆಯದಿರೆಚ್ಚರಿಕೆ.

ಎಚ್ಚರಿಕೆ ಎಂಬ ಶಬ್ಧ ಪ್ರತೀಪಾದದ ಕೊನೆಯಲ್ಲಿ ಪುನರಾವರ್ತನೆಯಾಗುತ್ತ ಕೀರ್ತನೆಯಲ್ಲಿ ಮಂಡಿಸ ಲಾಗುತ್ತಿರುವ ನೀತಿ ವಾಕ್ಯಗಳಿಗೆ ಸಮರ್ಥನೆಯನ್ನು ನೀಡಲು ಸಹಕಾರಿಯಾಗುತ್ತದೆ. ಅರಸನ ಆದರವನ್ನು ನೆಚ್ಚಿ ಗರ್ವದಿ ನಡೆಯಬಾರದು ಏಕೆಂದರೆ ಅಧಿಕಾರವಾಗಲಿ ಅರಸರ ಅಭಿಮಾನವಾಗಲಿ ಶಾಶ್ವತವಲ್ಲ. ತಾನು ಬುದ್ಧಿವಂತನೆಂದು ಗರ್ವಪಡಬಾರದೆಂದೂ ಬಡ ಬಗ್ಗರಿಗೆ ಅನ್ಯಾಯವೆಸಗಿ ಪಾಪದಲ್ಲಿ ಹೆಜ್ಜೆಯಿಡಬಾರದೆಂದು ಎಚ್ಚರಿಸುತ್ತಾರೆ.

ಸಮಾಜದಲ್ಲಿ ಜೀವಿಸಬೇಕಾದರೆ ಸಮಾಜದ ನೀತಿ ನಿಯಮಗಳನ್ನು ಪಾಲಿಸಬೇಕಾದುದು ಅವಶ್ಯ ಅದರಂತೆ ಚಾಡಿಮಾತು ಕೇಳದಿರುವುದು, ಲೋಕೋಪವಾದಕ್ಕೆ ಅಂಜಿ ನಡೆತಯುವುದು, ಸಜ್ಜನರಲ್ಲಿ ವಿನಯ ದಿಂದ ನಡೆದುಕೊಳ್ಳುವುದು ಸರಿಯಾದ ಮಾರ್ಗ. ಬೇರೆಯವರನ್ನು ತೊಂದರೆಪಡಿಸಿ ತಂದ ಹಣವು ಉಳಿಯ ದೆಂದು, ಕಾಯ ಅಳಿದು ಕೀರ್ತಿಯೊಂದೇ ಉಳಿಯುವದೆಂಬ ಸತ್ಯವನ್ನು ಪುರಂದರದಾಸರು ತಿಳಿಸುತ್ತಾರೆ. ತೂತಾದ ಗಡಿಗೆಯಿಂದ ಹನಿ ಹನಿಯಾಗಿ ನೀರು ಹೇಗೆ ಖಾಲಿಯಾಗು ತ್ತದೆಯೋ ಅದರಂತೆ ಮನುಷ್ಯರ

ಆಯುಷ್ಯವೂ ಕೂಡ ನಮಗೆ ತಿಳಿಯದಂತೆ ಕಳೆದು ಹೋಗುತ್ತಿರುತ್ತದೆ. ಅದಕ್ಕಾಗಿ ಸಾಧನೆಯ ಕ್ಷೇತ್ರದಲ್ಲಿ ನಾವು ನಡೆಸುವ ಕೃಷಿ ಸರಿಯಾಗಿ ಫಲ ನೀಡಬೇಕಾದರೆ ಪುರಂದರದಾಸರ ಉಪದೇಶಾಮೃತವನ್ನು ಅದಕ್ಕೆರೆಯಬೇಕು.

**ಉರಿ :** ಶಕ್ತನಾದರೆ ನೆಂಟರೆಲ್ಲ ಹಿತರು ಅ ಪ।

ಶಕ್ತನಾದರೆ ನೋಡಲವರೆ ವೈರಿಗಳು ಅ।
.....................
.....................
.....................
ವನಸುತ್ತಿ ಸುಡುವಾಗ ವಾಯು ಬೀಸಲು ಉರಿಯು
ಘನ ಪ್ರಜ್ವಲಿಸುತಿಹುದು ಗಗನ ಕಡರಿ
ಮನೆಯೊಳಿಹ ದೀಪಕೆ ಮಾರುತನು ಸೋಂಕಿದರು
ಘನಶಕ್ತಿಯುಡುಗಿ ತಾನಂದಿ ಹೋಗುವುದು.
.....................
..................... (೬)

ಕಾಲ ಪ್ರಭಲವಾಗಿದ್ದಾಗ, ಎಲ್ಲರೂ ತನ್ನವರಾಗುತ್ತಾರೆ 'ಕಾಲತಪ್ಪಿತು ಅಂದರೆ ಮಿತ್ರರೇ ಶತ್ರುಗಳಾಗುತ್ತಾರೆ' ಎಂಬ ಲೋಕೋಕ್ತಿಯನ್ನು ಬಹುಸ್ವಾರಸ್ಯವಾಗಿ 'ಉರಿ' ಅಥವಾ 'ಬೆಂಕಿ'ಯ ಮೂಲಕ ಇಲ್ಲಿ ಹೇಳಿದ್ದಾರೆ. ಕಾಡಿಗೆ ಬೆಂಕಿ ಬಿದ್ದಾಗ ಗಾಳಿ ಬೀಸಲು ಅದಯ ಆಕಾಶದೆತ್ತರಕ್ಕೆ ಬೆಳೆದು ಇಡೀ ಕಾಡನ್ನು ಆವರಿಸುತ್ತದೆ. ಅದೇ ಬೆಂಕಿ ಮನೆಯಲ್ಲಿ ಇರುವ ದೀಪದಲ್ಲಿರುವಾಗ ಸ್ವಲ್ಪ ಗಾಳಿ ತಾಕಿದರೂ ನಂದಿ ಹೋಗುವುದು. ಈ ಎರಡೂ ಕಾರಣಕ್ಕೂ ಹಿಂದಿರುವ ಶಕ್ತಿ ಮಾರುತ ಅಥವಾ ಗಾಳಿ. ಇಲ್ಲಿ ಕಾಡಿನ ಬೆಂಕಿ ಹಾಗೂ ದೀಪಗಳ ಉದಾಹರಣೆಗಳನ್ನಿತ್ತು. ಪರಮಾತ್ಮನ ಕರುಣೆ ತಪ್ಪಿದ ಮೇಲೆ ಮತ್ತೊಬ್ಬರು ಯಾರು ಕಾಯಲಾರರು ಎಂಬ ದೃಡವಾದ ನಂಬಿಕೆ ಮಾನವನಲ್ಲಿ ಬೇರೂರಬೇಕೆಂಬುದೇ ದಾಸರ ಉಪದೇಶದ ಮುಖ್ಯಗುರಿ. ದಾಸರು ಇಲ್ಲಿ ಗಾಳಿಯ ಮೂಲಕ ಪರಮಾತ್ಮನ ಸರ್ವಶಕ್ತತ್ವವನ್ನು ಬಹುಚಮತ್ಕಾರಿಕವಾಗಿ ಜಗತ್ತಿನಲ್ಲಿ ಎದ್ದು ಕಾಣುವ ಸತ್ಯ ಸಂಗತಿಯ ಮೂಲಕ ವಿವರಿಸಿದ್ದಾರೆ.

**ಊಟ :** ಸಾಕು ಸಂಸಾರ ತೆರೆಯ ನೂಕಲಾರೆನು
ಬೇಕು ನಿನ್ನ ಚರಣಕಮಲ ಬೇರೆ ಅನ್ಯತ್ರ ಪ।
.....................
ತುಂಡು ತುತ್ತು ಕೂಳಿಗಾಗಿ ಕಂಡವರ ಕಾಡಿ
ಹಿಂಡಿ ಹಿಪ್ಪೆ ಮಾಡಿ ಮನವ
ಹೀನಗೊಳಿಸಿದೆ
ಉಣ್ಣಬಾರದ ಊಟವನ್ನು
ಕಾಣಬಾರದ ಕರ್ಮವನ್ನು
ಗುಂಡೆಕಾರರ ಕೇರಿಗೆ ಸಿಕ್ಕಿ
ಚೆಂಡಿಗಿಂತ ಹಗುರವಾದೆ ೩। (೭)
.....................

ಸಂಸಾರವನ್ನು ಸಮುದ್ರಕ್ಕೆ ಹೋಲಿಸಿ ಅದರಲ್ಲಿರುವ ರೋಗ, ದಾರಿದ್ರ್ಯ, ಏಕಾಕಿತನ, ಇಚ್ಛೆ, ಮೋಹ ಮುಂತಾದ ಕಷ್ಟಗಳನ್ನು ಒಂದಾದ ಮೇಲೊಂದರಂತೆ ಬರುವ ಸಮುದ್ರದ ತೆರೆಗಳೆಂದು ಕರೆದು, ಸಾಕು ಸಂಸಾರ ತೆರೆಯ ನೂಕಲಾರೆನು ಎನ್ನುತ್ತಾರೆ. ಪುರಂದರ ದಾಸರು ಸಂಸಾರವನ್ನು ಅಡವಿ, ಕಾನನ ಎಂದು ಚಿತ್ರಿಸಿ ಅವುಗಳ ಮೂಲಕ ಬದುಕಿಸಿ ಘೋರತೆಯನ್ನು ವ್ಯಕ್ತಪಡಿಸುತ್ತಾರೆ.

ಮನುಷ್ಯ ಜೀವಿಸಿರುವ ತನಕ ಬಟ್ಟೆಗೆ ಕಡಿಮೆಯಾದರೂ ಹುಟ್ಟಿದಾರಂಬಿಸಿ, ಸಾಯುವವರೆಗೆ ಹೊಟ್ಟೆಗೆ ಆಹಾರ ಹಾಕುತ್ತಲೆ ಇರಬೇಕು. ಅದಕ್ಕಾಗಿ ಏನೇನೋ ವೇಷ ಹಾಕಿ, ಏನೇನೋ ಕಾರ್ಯಗಳನ್ನು ಮಾಡುತ್ತಿರಬೇಕಾಗಬಹುದು ಇನ್ನು ದಾರಿದ್ರ್ಯ ಬಂದರಂತೂ ಆಹಾರಕ್ಕಾಗಿ ಪರದಾಟಪಡಬೇಕಾಗುವುದು. ಹರಿದಾಸ ವೃತ್ತಿಯನ್ನು ಆಧರಿಸಿದ್ಧ ಪುರಂದರದಾಸರೂ ಕೂಡ ತುತ್ತು ಕೂಳಿಗಾಗಿ ಬವಣೆ ಪಟ್ಟಿರಬಹುದು. ಅದಕ್ಕೆ ಕಂಡವರ ಕಾಡಿ ಹಿಂಡಿ ಹಿಪ್ಪೆ ಮಾಡಿ ಮನವ ಹೀನಗೊಳಿಸಿದೆಎನ್ನುತ್ತಾರೆ, ಉಣ್ಣ ಬಾರದ ಊಟವೆಂದು ಮಾಡಬಾರದ ಕೆಲಸ ಎಂಬರ್ಥದಲ್ಲಿ ಹೇಳಿರಬಹುದು. ಕೆಟ್ಟ ಕರ್ಮಗಳನ್ನು ಮಾಡಿ ಮೋಸಗಾರರ ಕೈಗೆ ಸಿಕ್ಕು ಚೆಂಡಿಗಿಂತ ಹಗುರಾದೆ ಎಂದು ಪಶ್ಚಾತ್ತಾಪದಿಂದ ನೊಂದು ನುಡಿಯುತ್ತಾ ಸಂಸಾರದ ಬಲೆಯಿಂದ ಹೊರಬರಲು ಯತ್ನಿಸುವ ಪುರಂದರದಾಸರು ಬಿಡುಗಡೆಗಾಗಿ ಭಗವಂತನಲ್ಲಿ ನಿರಂತರ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ. ನಿನ್ನ ಚರಣಕಮಲವೇ ಬೇಕು, ಬೇರೆ ಅನ್ಯತ್ರ ಗತಿಯು ಎನಗಿಲ್ಲ ಎಮದು ಭಗವಂತನಲ್ಲಿ ನಿವೇದನೆ ಮಾಡಿಕೊಳ್ಳುತ್ತಿದ್ದಾರೆ.

ಇಲ್ಲಿ ದಾಸರು ಸಂಸಾರದ ಅಸಾರತೆಯನ್ನು ಕೇವಲ ವೈಯಕ್ತಿಕವಾಗಿ ಹೇಳುತ್ತಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸಂಸಾರದಲ್ಲಿ ಸುಖ–ದುಃಖಗಳನ್ನು ಅನುಭವಿಸಿಯೇ ಇರುತ್ತಾನೆ, ಸಂಸಾರವನ್ನು ಅಸಾರ, ಹೇಸಿಗೆ ಎನ್ನುವ ದಾಸರು ಜೀವನವನ್ನು ನಿರಾಕರಿಸದೆ ಪ್ರಪಂಚದ ನಿಷ್ಠುರ ವಾಸ್ತವವನ್ನು ಎತ್ತಿ ತೋರಿಸುತ್ತಾರೆ. ಎಲ್ಲರೂ ಸಂಸಾರದಲ್ಲಿ ಬರುವಕಷ್ಟಗಳಿಂದ ಪಾರಾಗಲು ಭಗವಂತನನ್ನು ಮೊರೆ ಹೋಗುವುದು ಸಾಮಾನ್ಯ ಭಗವಂತನ ನಾಮಸ್ಮರಣೆಗೆ ದಾರಿ ಮಾಡಿಕೊಡುವ ಇಂತಹ ಸಂಸಾರವೆಂಬಂತ ಭಾಗ್ಯವಿರಲಿ ಎಂದಿದ್ದಾರೆ. ಇಲ್ಲಿ ಉಣ್ಣ ಬಾರದ ಊಟವೆಂದರೆ ಪಾಪಕಾರ್ಯಗಳನ್ನು ಮಾಡುವುದು. ಅವುಗಳನ್ನು ಇನ್ನೊಂದು ಕೀರ್ತನೆಯಲ್ಲಿ ಹೀಗೆ ಹೇಳುತ್ತಾರೆ.

ಇಷ್ಟು ಪಾಪಗಳ ಮಾಡಿದ್ದೆ ಸಾಕು ||ಪ||

ಸೃಷ್ಟೀಶನೆ ಎನ್ನನುದ್ಧರಿಸಬೇಕು ||ಅ||

ಒಡಲ ಕಿಚ್ಚಿಗೆ ಪರರ ಕಡುನೋಯಿಸಿದೆ ಕೃಷ್ಣ
ಕೊಡದೆ ಅನ್ಯರ ಋಣವನಪಹರಿಸಿದೆ
ಮಡದಿಯ ನುಡಿ ಕೇಳಿ ಒಡ ಹುಟ್ಟಿದವರೊಡನೆ
ಹಡೆದ ತಾಯಿಯ ಕೂಡೆ ಹಗೆ ಮಾಡಿದೆ ||೧||

.....................

ವೃತ ನೇಮ ಉಪವಾಸ ಒಂದು ದಿನ ಮಾಡಲಿಲ್ಲ
ಅತಿಥಿಗನ್ನವನು ನೀಡಲಿಲ್ಲ

ಶ್ರುತಿ ಶಾಸ್ತ್ರ ಪೌರಾಣ ಕಥೆಗಳನ್ನು ಕೇಳಲಿಲ್ಲ
ವೃಥವಾಗಿ ಬಹುಕಾಲ ಗತವಾಯಿತಲ್ಲ. ॥೨॥

. . . . . . . . . . . . . . . . . . . . .

. . . . . . . . . . . . . . . . . . . . .

ತಂದೆ ತಾಯ್ಗಳ ಸೇವೆಯೊಂದು ದಿನ ಮಾಡಲಿಲ್ಲ
ಮಂದ ಭಾಗ್ಯಗೆ ಬವಣೆ ತಪ್ಪಲಿಲ್ಲ
ಹಿಂದೆ ಮಾಡಿದ ದೋಷ ಒಂದುಳಿಯದರುಹಿದೆನೊ
ತಂದೆ ಪುರಂದರ ವಿಠಲ ಬಂದೆನ್ನ ಸಲಹೋ ॥೩॥ (೮)

ನಿಷೇಧ ಕರ್ಮಗಳ ಪಟ್ಟಿಯನ್ನೇ ಕೊಟ್ಟಿರುವ ದಾಸರು, ಸಮಾಜ ಸುಧಾರಣೆಯಲ್ಲಿ ಮೊಟ್ಟಮೊದಲು ವ್ಯಕ್ತಿಯ ವ್ಯಕ್ತಿತ್ವ ಸುಧಾರಣೆಯಾಗಬೇಕೆಂದು ತಿಳಿದಿದ್ದರು ಅದಕ್ಕಾಗಿ ಉಣಬಾರದ ಊಟ ಎಂಬಲ್ಲಿ ನಿಷೇಧ ಕರ್ಮಗಳನ್ನು ಮಾರ್ಮಿಕವಾಗಿ ಹೇಳಿದ್ದಾರೆ.

**ಒಗೆತನ :** ಸಾಕು ಸಂಸಾರ ನಮಗಿನ್ನೇತರ ಒಗೆತನ ॥ಪ॥

ಲೋಕದೊಳಗೆ ಎನ್ನ ಬೇಕೆಂಬುವರಿಲ್ಲವಿ
ವೇಕಿ ಪುರುಷ ಪರವಶನಾದರೆ ಏತರ ಸಂಸಾರ ॥ಅ॥

ಕಾಮವೆಂಬ ನೆಗೆ ಹೆಣ್ಣು ಎನ್ನ ಕಟ್ಟಿ ಆಳುತಾಳೆ
ಕ್ರೋಧವೆಂಬ ಸವತಿ ಕೊಲ್ಲುತಾಳೆ ಏತರ ಒಗೆತನ ॥೧॥

ಮದವೆಂಬ ಮೈದುನ ಎನ್ನ ಒಡನೆ ನಗುತಾನೆ
ಮತ್ಸರವೆಂಬ ಭಾವ ಎನ್ನ ತುಚ್ಛವು ಮಾಡುತಾನೆ ಏತರ ಒಗೆತನ ॥೨॥

ಮೋಹವೆಂಬ ಅತ್ತಿಗೆಯನ್ನು ಕಂಡು ಮುಣುಗುತಾಳೆ
ಲೋಭವೆಂಬ ನಾದಿನಿ ಒರುಸುತಾಳೆ ಏತರ ಒಗೆತನ ॥೩॥

ಅಜ್ಞಾನವೆಂಬ ಅತ್ತೆ ಎನ್ನ ಅಟ್ಟ ಬಡಿತಾಳೆ
ಸುಜ್ಞಾನಿ ಮಾವ ಕುರುಡನಾದರೆ ಏತರ ಒಗೆತನ ॥೪॥
ತಾಪತ್ರಯದಲ್ಲಿ ನಾನು ತೇಲಿ ಮುಣುಗುತ್ತೇನೆ
ಆಪತ್ತು ಪರಿಹರಿಸುವೆ ಪುರಂದರವಿಠಲ ಏತರ ಒಗೆತನ ॥೫॥ (೯)

ಗಂಡ–ಹೆಂಡತಿ ಇಬ್ಬರೂ ಅನ್ಯೋನ್ಯತೆಯಿಂದ ಬಾಳುವುದನ್ನು ಒಗೆತನ ಎನ್ನುವರು. ಇಲ್ಲಿ ಕಾಮ, ಕ್ರೋಧ, ಲೋಭ, ಮೋಹ–ಮದ ಮತ್ಸರಗಳನ್ನು ಸಂಸಾರದ ವಿವಿಧ ಪಾತ್ರಗಳ ಮೂಲಕ ಹೇಳಿದ್ದು ವಿಶೇಷ ವಾಗಿದೆ. ಸಂಸಾರಿಯಾದ ಜೀವನಿಗೆ ಬಯಕೆ ಎಂಬುದು ಹೆಂಡತಿ, ಇವಳು ಚಂಚಲೆಯಾದ್ದರಿಂದ ಒಂದೆಡೆ ಯಿಂದ ಇನ್ನೊಂದೆಡೆ ನೆಗೆಯುವ ಹೆಣ್ಣು 'ನೆಗೆಹೆಣ್ಣು'. ಕಾಮದ ಜೊತೆಯಲ್ಲಿಯೇ ಇರುವ ಕ್ರೋಧವು ಅವಳ ಸವತಿ. ಕಾಮದೊಂದಿಗೇ ಹುಟ್ಟಿಕೊಂಡು ಕಾಡುವುದು ಮದ, ಕಾಮಕ್ಕಿಂತ ಮೊದಲು ಹುಟ್ಟಿರುವುದು ಮೋಹ ಅದಕ್ಕಾಗಿ ಅದನ್ನು ಅತ್ತಿಗೆಯನ್ನುತ್ತಾರೆ. ಕಾಮದ ನಂತರ ಕಾಡುವುದು ಲೋಭ, ಅದಕ್ಕಾಗಿ ಅದನ್ನು ನಾದಿನಿಗೆ ಹೋಲಿಸಿದ್ದಾರೆ. ಕಾಮದ ಉಗಮ ಸ್ಥಾನ ಅಜ್ಞಾನ ಹಾಗಾಗಿ ಅದು ಅತ್ತೆ ಯಂತಾದರೆ ಹರಿಯವಿಸ್ಮರಣೆ ಸುಜ್ಞಾನಿ

ಕುರುಡನಾದಮಾವ. ಆಧ್ಯಾತ್ಮಿಕ, ಆಧಿಭೌತಿಕ, ಆದಿದೈವಿಕ ತೊಂದರೆಗಳನ್ನು ತಾಪತ್ರಯಗಳೆಂದು ಕರೆದ ದಾಸರು ಆಧ್ಯಾತ್ಮಿಕತಾಪ ಅಥವಾ ತೊಂದರೆಗಳು ಶಾರೀರಿಕ ವಾಗಿಯೂ, ಮಾನಸಿಕವಾಗಿಯೂ ಮನುಷ್ಯನನ್ನು ಕಾಡುತ್ತವೆ. ಆದಿದೈವಿಕ ತಾಪಗಳೆಂದರೆ ಪ್ರಕೃತಿಯಿಂದ ಒದಗುವ ತೊಂದರೆಗಳಾದ ಗಾಳಿ, ಬಿಸಿಲು, ಮಳೆ, ಸಿಡಿಲು ಹಾಗೂ ಕಳ್ಳರು, ಹಾವು-ಚೇಳು ಮುಂತಾದ ಆದಿಭೌತಿಕ ತೊಂದರೆಗಳಿಂದ ಬಳಲುವ ಜೀವಿಯು ಸಂಸಾರವೆಂಬ ಪಾಶದಲ್ಲಿ ಕಷ್ಟಗಳ ನಡುವೆ ಒದ್ದಾಡುತ್ತಿರುತ್ತಾನೆ. ಅದಕ್ಕಾಗಿ 'ಸಾಕು ಸಂಸಾರ' ಎಂದು ಪುರಂದರದಾಸರು ವಿವೇಕಿ ಪುರುಷನಾದ ಪರಮಾತ್ಮನನ್ನು ಎಲ್ಲ ತಾಪತ್ರಯಗಳಿಂದ ಕಾಪಾಡಲು ಕೇಳುತ್ತಾರೆ. ಹಾಗೂ ಭಗವಂತನೇ ವಶವಾದರೆ ಇನ್ನೇಕೆ ಈ ಒಗೆತನ ಎಂದು ಮಾರ್ಮಿಕವಾಗಿ ಪ್ರಶ್ನಿಸುತ್ತಾರೆ.

**ಔಷಧ :**

ಇದಕೊಳ್ಳಿ ಭವರೋಗ ಔಷಧವನು
ಇಂದ್ರಿಯವ ಜಯಿಸುವುದು ಇದಕೆ ಇಚ್ಛಾಪಥ್ಯ ॥ಪ॥

ವಾಸುದೇವನ ನಾಮ ವಾತವಿಧ್ವಂಸಿನಿ
ಜನಾರ್ಧನನ ನಾವು ಜ್ವರಾಂಕುಶ
ಮಾಧವನ ನಾಮವೇ ಮನಗಂಡ ಮಂಡೂರ
ಮಂಗಳಾತ್ಮನ ನಾಮ ಮೌಲ್ಯವಸಂತ ॥೧॥

ಅಜಪಿತನ ನಾಮ ತ್ರೈಲೋಕ್ಯ ಚಿಂತಾಮಣಿ
ಭುಜಂಗಶಯನನ ನಾಮ ಭೂಪತಿ ಮಾತ್ರೆ
ರಾಜೀವ ಲೋಚನನ ನಾಮ ರಸಕರ್ಪೂರ
ಸೀತಾಪತಿಯ ನಾಮ ದಿವ್ಯ ಸಿಂಧೂರ ॥೨॥
. . . . . . . . . . . . . . . . . . . . .
. . . . . . . . . . . . . . . . . . . . .
. . . . . . . . . . . . . . . . . . . . .
ಇದನ್ನು ಕೊಂಡವರ ಪೆಸರನು ಪೇಳುವೆನು ಕೇಳಿ
ಮುದದಿ ಪ್ರಹ್ಲಾದ ಮುಚುಕುಂದ ದ್ರುವನು
ಸದಮಲೆ ದ್ರೌಪದಿ ಅಜಮಿಳನು ಬದುಕಿದನು
ಪದುಮಾಕ್ಷ ಪುರಂದರವಿಠಲನೆಂಬ ಔಷಧವ ॥೫॥

ಇಲ್ಲಿ ಪುರದರದಾಸರು ದೈನಂದಿನ ಬದುಕಿನ ವಿವರಗಳನ್ನು ತಾತ್ವಿಕ ನೆಲೆಗಟ್ಟಿನ ಸ್ಪಷ್ಟೀಕರಣಕ್ಕೆ ಬಳಸಿಕೊಂಡಿದ್ದಾರೆ. ಅನೇಕ ರೋಗಗಳಿಗೆ ಹರಿಯ ನಾಮಸ್ಮರಣೆಯನ್ನೇ ಔಷಧಿ ಎಂದಿದ್ದಾರೆ. ಇಂದ್ರಿಯ ನಿಗ್ರಹ ಇದಕ್ಕೆ ಪಥ್ಯ ಎಂದಿದ್ದಾರೆ. ಭಾರತದಲ್ಲಿ ವೈದ್ಯವಿಜ್ಞಾನವು ಬಹು ಕಾಲದಿಂದಲೂ ಪ್ರಸಿದ್ಧವಿದೆ. ಆಯುಷ್ಯ ಆರೋಗ್ಯವನ್ನು ಕೊಡುವ ವಿದ್ಯೆಯೇ ಆಯುರ್ವೇದ. ಈ ವೈದ್ಯ ಪದ್ಧತಿಯಲ್ಲಿ ಅನೇಕ ಗಿಡ ಮೂಲಗಳನ್ನು ಬಳಸಿ ಮಾತ್ರೆಗಳನ್ನು ತಯಾರಿಸುತ್ತಾರೆ. ಹಾಗೆಯೇ ಒಂದು ಮಾತ್ರೆಗೂ ಒಂದೊಂದು ವಿಶಿಷ್ಟ ಹೆಸರು ಇರುತ್ತದೆ. ಇಲ್ಲಿ ದಾಸರು ದೇವರ ನಾಮಗಳಿಗೂ ಮಾತ್ರೆಗಳಿಗೂ ಹೋಲಿಸಿ ಈ ಪದವನ್ನು ಮೇಲಿನ ಕೀರ್ತನೆಯಲ್ಲಿ ಬಳಸಿದ ವಾತಧ್ವಂಸಿ, ಜ್ವರಾಂಕುಶ, ಮೌಲ್ಯವಸಂತ, ಭೂಪತಿ ಮಾತ್ರೆ, ರಸಕರ್ಪೂರ, ಸಿಂಧೂರ, ಲೋಹಭಸ್ಮ, ವಂಗಭಸ್ಮ, ಸ್ವರ್ಣಭಸ್ಮ, ಪೂರ್ಣಚಂದ್ರೋದಯ, ಕುಠಾರ, ವಸಂತ ಕುಸುಮಾಕರ ಮುಂತಾದ ಮಾತ್ರೆಗಳ ಹೆಸರು ಹೇಳುತ್ತಾ

ತಮಗೆ ಇರುವ ವೈದ್ಯಶಾಸ್ತ್ರದ ಜ್ಞಾನವನ್ನು ತೋರಿಸುತ್ತಾರೆ. ಇಲ್ಲಿ ಔಷಧಿಯು ಹರಿಯ ನಾಮಸ್ಮರಣೆಗೆ ಪ್ರತೀಕವಾಗಿ ಅರ್ಥವಿಸ್ತರಣೆಯನ್ನು ಪಡೆಯುತ್ತಾ ಪ್ರತಿಮೆಯಾಗುತ್ತದೆ. ಅವರು ಬಳಸಿರುವ ನವೀನ ವಿಧಾನವು ಒಂದು ಪ್ರತಿಮಾಲಕ್ಷಣವಾಗುತ್ತದೆ. ಕೊನೆಯ ನುಡಿಯಲ್ಲಿ ಈ ನಾಮಸ್ಮರಣೆಯೆಂಬ ಮಾತ್ರೆ ತೆಗೆದುಕೊಂಡು ತಮ್ಮ ರೋಗಗಳನ್ನು ಗುಣಪಡಿಸಿಕೊಂಡ ಧ್ರುವ, ಪ್ರಹ್ಲಾದ, ಮುಂತಾದವರ ಹೆಸರುಗಳನ್ನು ಹೇಳುತ್ತಾ ತಾವು ಹೇಳಿದ ಔಷಧಿಗಳ ಬಗ್ಗೆ ಸಮರ್ಥಿಸಿದ್ದಾರೆ.

ಅಂಗಿ : ವ್ಯಾಪಾರ ನಮಗಾಯಿತು ।ಪ।
ಶ್ರೀಪತಿ ಪಾದಾರವಿಂದ ಸೇವೆಯೆಂಬೋ ।ಅ।

ಹರಿಕರುಣವೇ ಅಂಗಿ ಗುರುಕರುಣ ಮುಂಡಾಸು
ಹರಿದಾಸರ ದಯವೆಂಬೊ ವಲ್ಲಿ
ಪರಮ ಪಾಪಿ ಕಲಿ ಎಂಬೋ ಪಾಪಾಸು ಮೆಟ್ಟಿ
ದುರಾತ್ಮರಾದವರ ಎದೆಮೇಲೆ ನಡೆವಂಥ ।೧।
. . . . . . . . . . . . . . . . . . . . .
. . . . . . . . . . . . . . . . . . . . .
. . . . . . . . . . . . . . . . . . . . .
. . . . . . . . . . . . . . . . . . . . . (೧೧)

ಇಲ್ಲಿ ಪುರದರದಾಸರು ಲೌಕಿಕ ವ್ಯಾಪಾರ ವಹಿವಾಟನ ಪರಿಭಾಷೆಯನ್ನೇ ಬಳಸಿ ಸ್ವಾಮಿಯ ಭದ್ರ ಆಶ್ರಯವೇ ತಮಗೆ ರಕ್ಷಣೆ ನೀಡುವ ಅಂಗಿ ಎಂದಿದ್ದಾರೆ. ಮೊದಲನೇ ನುಡಿಯಲ್ಲಿ ವ್ಯಾಪಾರಕ್ಕೆ ತಯಾರಾಗಿ ಹೊರಟಿದ್ದಾರೆ. ಮಧುಕರವೃತ್ತಿಯೆಂಬ ವ್ಯಾಪಾರದಲ್ಲಿ ಹರಿನಾಮಸ್ಮರಣೆಯನ್ನು ಹಾಡುಗಳ ಮೂಲಕ ಮಾರುತ್ತಿದ್ದಾರೆ. ಹರಿಕರುಣವೇ ಅವರಿಗೆ ಅಂಗಿ, ಗುರುಗಳ ಕರುಣೆಯೇ ತಲೆಗೆ ಸುತ್ತುವ ಬಟ್ಟೆ ಮುಂಡಾಸು, ಹರಿದಾಸರ ದಯೆ ಹೆಗಲ ಮೇಲೆ ಹೊದ್ದು ಕೊಳ್ಳುವವಸ್ತ್ರ, ಕಲಿಯುಗದಲ್ಲಿ ಅನ್ಯಾಯ ಮೋಸ ವಂಚನೆಗಳು ಹೆಚ್ಚು ಅದಕ್ಕಾಗಿ ಜನರ ಮನಸ್ಸನ್ನು ಹರಿನಾಮಸ್ಮರಣೆಗಾಗಿ ಸೆಳೆಯಲು 'ಕಲಿ' ಎಂಬೋ ಮೆಟ್ಟನ್ನು ಕಾಲಿಗೆ ತೊಟ್ಟು ದುರಾತ್ಮರಾದವರನ್ನು ಕೆಟ್ಟ ಕೆಲಸ ಮಾಡುವವರನ್ನು ತುಳಿದು ನಡೆವಂಥ ವ್ಯಾಪಾರಕ್ಕಾಗಿ ಹೊರಟಿದ್ದಾರೆ. ದಾಸರು ಹರಿದಾಸವೃತ್ತಿಯನ್ನು ಹಿಡಿದು ತಮ್ಮ ಜೀವನವನ್ನೇ ಶ್ರೀ ಸಾಮಾನ್ಯರಿಗಾಗಿ ಮುಡಿಪಿಟ್ಟರು. ಕೆಲವರು ಬಾಯಿಂದ ಉಪದೇಶ ಹೇಳುವರು ಹಲವರು ಸಮಾಜ ಸುಧಾರಣೆಯೆಂಬ ವಿಷಯದಲ್ಲಿ ಭಾಷಣ ಮಾಡುವವರು ಇನ್ನು ಕೆಲವರು. ಆದರೆ ತಮ್ಮ ಜೀವನವನ್ನೇ ಜನರ ಮುಂದೆ ಕನ್ನಡಿಯಂತೆ ಇಟ್ಟು ಜನರಿಗೆ ಹಿತ ಹೇಳಿದವರು ಪುರಂದರದಾಸರು.

'ಅಂಗಿ' ಪ್ರತಿಮೆ ಹರಿಯ ಕಾರುಣ್ಯ ಭಾವವನ್ನು ಸಂಕೇತಿಸುತ್ತದೆ. ಅದಕ್ಕಾಗಿ 'ನೀನೆ ಅನಾಥ ಬಂಧು ಕಾರುಣ್ಯ ಸಿಂಧು' ಎಂದಿದ್ದಾರೆ. ದಾಸರು ಹರಿಯ ಕರುಣೆಯಿದ್ದರೆ ಜೀವನದಲ್ಲಿ ಬರುವ ಕಷ್ಟಗಳು ಮಿಂಚಿನಂತೆ ಮಾಯವಾಗುವವು. ಅದಕ್ಕಾಗಿ ಪುರಂದರದಾಸರು ಗಜೇಂದ್ರ ಮೋಕ್ಷ, ಹಾಗೂ ದ್ರೌಪತಿಯ ಮಾನಭಂಗದ ಸನ್ನಿವೇಶಗಳನ್ನು ಹೀಗೆ ಚಿತ್ರಿಸುತ್ತಾರೆ.

**ಬಂಧು:** ನೀನೆ ಅನಾಥ ಬಂಧು ಕಾರುಣ್ಯಸಿಂಧು ಪ।
ಮದಗಜವೆಲ್ಲ ಕೂಡಿದರೇನು ಅವರು ವ್ಯಾಳಿಕೆ ಒದಗಲಿಲ್ಲ
ಮದನನಯ್ಯ ಮಧುಸೂದನ ಎನು
ಮುದದಿಂದಲಿ ಬಂದೊದಗಿದೆ ಕೃಷ್ಣಾ ೧।

ಪತಿಗಳೈವರಿದ್ದರೇನು ಸತಿಯ ಭಂಗ ಬಿಡಿಸಲಿಲ್ಲ
ಗತಿ, ನೀನೇ ಮುಕುಂದ ಎನಲು
ಅತಿವೇಗದಿ ಅಕ್ಷಯವಿತ್ತೆ ಕೃಷ್ಣಾ ೨। (೧೨)

ಗಜೇಂದ್ರನನ್ನು ಮೊಸಳೆ ಹಿಡಿದು ಎಳೆಯುತ್ತಿರಲು. ಅದನ್ನು ಬಿಡಿಸಲು ಉಳಿದ ಆನೆಗಳಿಂದ ಸಾಧ್ಯವಾಗಲಿಲ್ಲ. ಆ ಹೊತ್ತಿಗೆ ಬಂದೊದಗಿದುದು ಮಧುಸೂದನ ಎಂಬ ಹರಿಯನಾಮ. ತುಂಬಿದ ಸಭೆಯಲ್ಲಿ ದುಶ್ಯಾಸನನು ದ್ರೌಪತಿಯ ಮಾನಭಂಗ ಮಾಡಲು ಯತ್ನಿಸಿದಾಗ ಅಲ್ಲೇ ಇದ್ದ ಐವರು ಪಾಂಡವರು ನೆರವಿಗೆ ಬರಲಿಲ್ಲ. ಆಗ ಆಪತ್ತಿಗಾದುದು ಹರಿನಾಮಸ್ಮರಣೆ ಹರಿಯ ಕರುಣೆ ಎಂಬ ರಕ್ಷಣೆ ಇದ್ದರೆ. ಎಂಥ ಕಷ್ಟಗಳಿಂದಲೂ ಪಾರಾಗಬಹುದು ಎಂಬ ಸಂದೇಶ ಇಲ್ಲಿದೆ.

**ಅಂಜಿಕೆ:** ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ
ಹಾವಿಗಂಜೆ ಚೇಳಿಗಂಜೆ ಕತ್ತಿಯ ಧಾರೆಗಂಜೆ
ಇನ್ನೊಂದಕ್ಕಂಜುವೆ ಇನ್ನೊಂದಕ್ಕಳುಕುವೆ
ಪರಧನ ಪರಸತಿಗೆರಡಕ್ಕಂಜುವೆನಯ್ಯ
ಹಿಂದೆ ಕೌರವ ರಾವಣರೇನಾಗಿ ಹೋದರು
ಮುಂದೆ ಸಲಹೋ ಪುರಂದರವಿಠಲ (೧೩)

ಮಾನವನು ಸಾಮಾನ್ಯವಾಗಿ ಭಯಪಡುವುದು ಬೆಂಕಿ, ಜೈಲು ಹಾಗೂ ಶರೀರಕ್ಕೊದಗುವ ನಾನಾ ರೋಗಗಳಿಂದ ಮತ್ತು ಹಾವು ಚೇಳುಗಳಂತಹ ವಿಷವುಳ್ಳ ಪ್ರಾಣಿಗಳಿಂದ ಆದರೆ ನಾನು ಇವುಗಳಾವುಗಳಿಗೆ ಅಂಜೆನು ಆದರೆ ಪರಸತಿ, ಪರಧನಕ್ಕಂಜುವೆನಯ್ಯ ಎನ್ನುವರು ಪುರಂದರದಾಸರು, ಪರಧನ ಅಪಹರಿಸಿದ ಕೌರವ, ಪರಸತಿಯನ್ನು ಅಪಹರಿಸಿದ ರಾವಣರ ಅಂತ್ಯವನ್ನು ಉದಾಹರಿಸುತ್ತಾ ಅನೀತಿಯ ಕೆಲಸಗಳಿಂದಾಗುವ ಫಲವನ್ನು ತಿಳಿಸುತ್ತಾರೆ.

ಜಗತ್ತಿನಲ್ಲಿ ನೀತಿ ಮತ್ತು ಅನೀತಿ–ಇವು ಕತ್ತಲೆ ಮತ್ತು ಬೆಳಕಿನಂತೆ ಜೊತೆ ಜೊತೆಯಾಗಿ ನಡೆಯುತ್ತವೆ, ನೀತಿ ಬೋಧೆಯನ್ನು ಪಠ್ಯ ಪುಸ್ತಕದಂತೆ ಜನರ ಕೈಗಿತ್ತರೆ ಅದನ್ನು ಯಾರೂ ಓದಲಾರರು. ಅದಕ್ಕಾಗಿ ದಾಸರು ತಮ್ಮ ಕೀರ್ತನೆಗಳಲ್ಲಿ ಇಂತಹ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ ಉಗಾಭೋಗಗಳಂತೂ ಇಂತಹ ನೀತಿ ಬೋಧೆಗಳ ಸಂಗ್ರಹವೇ ಆಗಿವೆ. ಇವುಗಳನ್ನು ಹಾಡುವುದರ ಮೂಲಕವಾಗಲಿ ಕೇಳುವುದರಿಂದಾಗಲಿ ಜನರಲ್ಲಿ ಸುಧಾರಣೆಯಾಗಲಿ ಎಂಬುದು ಅವರ ಆಶಯ.

**ಕದ :** ಕದವ ಮುಚ್ಚಿದಳೀದೆಕೊ ಗಯ್ಯಾಳಿ ಮೂಳಿ ಪ।
ಕದವ ಮುಚ್ಚಿದಳಿದೆಕೋ ಚಿಲಕ ಅಲ್ಲಾಡುತಿದೆ
ಒಳಗಿದ್ದ ಪಾಪವು ಹೋದಿತು ಹೊರಗೆಂದು ಅ।

ಭಾರತ ರಾಮಾಯಣ ಪುಣ್ಯಕಾವ್ಯಂಗಳ
ಸಾರತತ್ವದ ಬಿಂದು ಸೇರಿತು ಒಳಗೆಂದು ॥೧॥

ಅಂದುಗೆ ಕಿರುಗೆಜ್ಜೆ ಮುಂಗಾಲಿಲಿಳವಟ್ಟು
ಧಿಂಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು ॥೨॥

ನಂದನ ಕಂದ ಗೋವಿಂದ ಮುಕುಂದನ
ಚಂದವಾದ ಧ್ವನಿ ಹೋದಿತು ಕರ್ಣಕೆಂದು ॥೩॥

ಹರಿಶರಣರ ಪಾದ ಸರಸಿಜಯುಗಳದ
ಪರಮ ಪಾವನವಾದ ರಜವು ಬಿದ್ದೀತೆಂದು ॥೪॥

ಮಂಗಳ ಮೂರುತಿ ಪುರಂದರ ವಿಠಲನ
ತುಂಗ ವಿಕ್ರಮ ಪದದಂಗುಳಿ ಸೋಕೀತೆಂದು ॥೫॥

ನಿತ್ಯಯಾತ್ರೆಯ ಸಂದರ್ಭದಲ್ಲಿ ಒಂದು ದಿನ ಯಾವಳೋ ಹೆಂಗಸು, ದಾಸರು ಮನೆಯ ಮುಂದೆ ನಿಂತಂತೆಯೇ, ಮನೆಬಾಗಿಲು ಮುಚ್ಚಿಕೊಂಡು ಒಳಗೆ ಹೋದುದು ಇಲ್ಲಿನ ಸಂದರ್ಭ. ಇಲ್ಲಿ ದಾಸರಿಗೆ ಅವಳ ನಡತೆಯಿಂದ ಬೇಸರವಾಗಿದೆ, ಮನಸ್ಸು ಉಗ್ರವಾಗಿ ಗಯ್ಯಾಳಿ, ಮೂಳೀ ಎಂಬ ಶಬ್ದಗಳಿಂದ ತಮ್ಮ ಭಾವನೆಯನ್ನು ತಿಳಿಸುತ್ತಾರೆ. ದಾಸರು ಸಮಾಜದ ಅಂಕು–ಡೊಂಕುಗಳನ್ನು ತಿದ್ದುವುದಕ್ಕಾಗಿ. ಜನರ ಮನೆ–ಮನೆಗೆ ಹೋಗಿ ಮನಗಳನ್ನು ತಿದ್ದಲು ಪ್ರಯತ್ನಿಸಿದ್ದಾರೆ, ಬುದ್ಧಿಯ ಮಾತುಗಳನ್ನು ಹೇಳಿದ್ದಾರೆ. ಆದರೆ ಕೆಲವರು ಇಂತಹ ಒಳ್ಳೆಯ ಶಬ್ದಗಳನ್ನು ಕೇಳಲು ಸಿದ್ಧರಿಲ್ಲವೆಂಬುದು ಮೇಲಿನ ಕೀರ್ತನೆಯಲ್ಲಿ ತಿಳಿಸುತ್ತಾರೆ. ಭಕ್ತರ ಮನೆಗೆ ಬಂದರೆ ಮನೆ ಶುದ್ಧವಾಗುತ್ತದೆ. ಪುರಾಣ ಕಥೆಗಳನ್ನು ಕೇಳಿದರೆ ಚಿತ್ತಶುದ್ಧವಾಗುತ್ತದೆ. ಇಂದ್ರಿಯಗಳು ಪವಿತ್ರವಾಗುತ್ತವೆ. ಆದರೆ ಇವೆಲ್ಲ ಸಾಧ್ಯವಾಗಬಾರದೆಂದೇ ಕೆಲವರು ಮನಸ್ಸಿನ ಕದ ಮುಚ್ಚುವುದುಂಟು. ಆಸೆ, ಅಸೂಯೆ, ಅಹಂಕಾರ ಮುಂತಾದ ಕೆಟ್ಟ ವಿಷಯಗಳು ಹೊರಗೆ ಹೋದಿತೆಂದು ಕದವ ಮುಚ್ಚುವರು. 'ಚಿಲುಕ ಅಲ್ಲಾಡುತಿದೆ' ಎಂಬ ವಾಕ್ಯವು ಆಗಲೇ ಬಾಗಿಲು ಮುಚ್ಚಿದ್ದನ್ನು ತಿಳೀಸುತ್ತದೆ.

**ಕಡುಬು :** ಹೂರಣ ಕಡಬನು ಮಾಡಿದೆ ನಾ
ಕರಿದಾ ಹೂರಣ ಕಡುಬನು ಮಾಡಿದೆ ನಾ ॥ಪ॥

ಸಾಧನವೆಂಬೊ ಚತುಷ್ಟಯದ ಕಲ್ಲಲಿ
ಸಂಶಯ ಜೀವನ ಗೋಧಿಯ ಬೀಸಿ
ನಾಭಿಯ ಅಷ್ಟಾಂಗದ ಹಸಿಕಲ್ಲಲಿ.
ನಾಲ್ಕು ಶ್ರುತದ ಗುಂಡಿಲಿ ಕುಟ್ಟಿ ॥೧॥

ರೋಮದ ಮಧ್ಯದಿ ಒಲೆಗಳ ಹೂಡಿ
ಈಡಿಲ್ಲದೆ ಅಗ್ನಿಯ ತುಂಬಿ
ಮದ ಅಷ್ಟವೆಂಬೊ ಕಾಷ್ಟವ ಹಚ್ಚಿ

ಇಡಾವೆಂಗಳ ಕೊಳವೆಯ ಊದಿ ೨।

ಕಾರಣವೆಂಬೋ ಮಡಕೆಯೊಳಗೆ
ಕರುಣ ಕಡಲೇಬೇಳೆಯ ಹಾಕಿ
ಪೂರ್ವದಿ ಒಳಿತಾಗಿ ಕುದಿಸಿ
ಪ್ರೇಮ ಹೇಮದ ಸೌಟಲಿ ತೋಳಿಸಿ ೩।

ಗುರು ಕರುಣವೆಂಬೋ ಬೆಲ್ಲವ ಹಾಕಿ
ಗುರುವ ನೆನೆಸುತ ಕಣಕವ ನೆಗಚಿ
ಪರಿಪರಿ ತೇಜದ ಹೂರಣ ತುಂಬಿ
ಪರಿ ಪರಿ ಪ್ರಣವದ ಪದವ ಪಾಡುತಲಿ ೪।

ವರದನೆಂಬೆಣ್ಣೆ ಬಾಂಡ್ಲೆಯೊಳಗೆ
ಕರಹಾಮೃತದ ತುಪ್ಪವ ಹಾಕಿ
ತಿರಿ ಹೊರಗೆ ಮುರಿಗೆಯ ಕರಿದು
ಪುರಂದರ ವಿಠಲಗೆ ಎಡೆಯ ಮಾಡಿದೆನು ೫। (೧೫)

ಹೂರಣ ಕಡುಬು ಅತ್ಯಂತ ಸ್ವಾದಿಷ್ಟವೂ ತಯಾರಿಸಲು ಕಷ್ಟಕರವೂ ಆದ ಸಿಹಿ ಅಡುಗೆ ಇಲ್ಲಿ ಗೋದಿ ಅಥವಾ ಕಣಕವು ಜೀವನನ್ನು ಪ್ರತಿನಿಧಿಸಿದರೆ ಅದರೊಳಗೆ ಇರುವ ಹೂರಣ ಪರಮಾತ್ಮನನ್ನು ಪ್ರತಿನಿಧಿಸುತ್ತದೆ. ಗೋದಿಗೆ ಸಂಶಯವೆಂಬ ಹೊಟ್ಟು ಮುಸುಕಿದೆ. ನಾಲ್ಕು ವೇದಗಳೆಂಬ ಒರಳು ಕಲ್ಲಿನಲ್ಲಿ. ಅಷ್ಟಾಂಗಯೋಗ, ಸಾಧನಚತುಷ್ಟಯವೆಂಬ (ಶ್ರವಣ, ಮನನ, ಧ್ಯಾನ, ನಿಧಿಧ್ಯಾಸನ ಅಥವಾ ಜ್ಞಾನ, ಕರ್ಮ, ಭಕ್ತಿ, ವಿರಕ್ತಿ) ಕಲ್ಲಿನಲ್ಲಿ ಕುಟ್ಟಿದಾಗ ಸಂಶಯದ ಹೊಟ್ಟು ಬೇರ್ಪಟ್ಟು ಹಸನಾದ ಹಿಟ್ಟು ದೊರೆಯುತ್ತದೆ. ಈ ಹಿಟ್ಟಿಗೆ ಹರಿನಾಮಸ್ಮರಣೆ ಯೆಂಬ ಘೃತಜಲವನ್ನು ಬೆರೆಸುತ್ತಾ, ಗುರುಗಳನ್ನು ನೆನೆಯುತ್ತಾ ಕಣಕವನ್ನು ತಯಾರಿಸಿ. ಹದ ಮಾಡಬೇಕು ಕಾರಣಶರೀರವೆಂಬ ಮಡಕೆಯಲ್ಲಿ ಭಗವದನುಗ್ರಹವೆಂಬ ಕಡಲೆಬೇಳೆಯನ್ನು ಹಾಕಿ ಹರಿಭಕ್ತಿಯ ನೀರನ್ನು ಸುರಿದು ಒಲೆ ಹಚ್ಚಿ ಬೆಂಕಿ ಹಾಕಿ ಅಷ್ಟಮದ ಗಳೆಂಬ ಕಟ್ಟಿಗೆಯನ್ನು ಉರಿಸುತ್ತಾ ಅಡುಗೆ ಮಾಡಬೇಕು. ಹರಿಪ್ರೇಮವೆಂಬ ಶ್ರೇಷ್ಠವಾದ ಸೌಟನಿಂದ ಈ ಬೇಳೆಯನ್ನು ಬೇಯಿಸಿ ತೊಳಿಸಬೇಕು. ಬೆಂದ ಹೂರಣ ತಯಾರಿಸಬೇಕು. ಈ ಹೂರಣದಲ್ಲಿ ಅಂತಃ ತೇಜಸ್ಸು ತುಂಬಿರುತ್ತದೆ. ಸಾಧನೆಯಿಂದ ಹದವಾದ ಕಣಕದಲ್ಲಿ, ಈ ಹೂರಣ ತುಂಬಿ, ಹೂರಣವು ಚೆಲ್ಲದಂತೆ ಮುರಿಗೆ ಹಾಕಬೇಕು, ಕಣಕ ಜೀವಾತ್ಮನಾದರೆ ಹೂರಣ ಪರಮಾತ್ಮನು ಹೀಗೆ ತಯಾರಿಸಿದ ಕಡುಬನ್ನು ಶ್ರೀಹರಿಯ ಇನ್ನೊಂದು ನಾಮ ವರದನೆಂಬ ಬಾಣಲೆಯಲ್ಲಿ ಮಾನಸ ಪೂಜೆಯ ತುಪ್ಪ ಹಾಕಿ. ಕರಿದು ದಿವ್ಯವಾದ ಈ ಕಡುಬುಗಳನ್ನು ಪುರಂದರವಿಠಲಗೆ ನಿವೇದನೆ ಮಾಡಬೇಕು. ಇಲ್ಲಿ ಹೂರಣ 'ಕಡುಬು' ಪ್ರತಿಮೆಯ ಮೂಲಕ ಜೀವನು ಅನನ್ಯ ಶರಣಾಗತಿಯಿಂದ ತನ್ನನ್ನೇ ಭಗವಂತನ ಅಡಿದಾವರೆಗಳಿಗೆ ಸಮರ್ಪಿಸಿಕೊಳ್ಳಬೇಕು ಎಂದು ವರ್ಣಿಸಿದ್ದಾರೆ.

**ಕಟಪಟಿ (ಹಿಂಸೆ ತೊಂದರೆ):–**

ಏತರ ಕಟಪಟಿ ಒಂದಿನ ಹೋಗುತಿ ಲಟಪಟಿ ಪ।

ಬರುವಾಗ ಏನು ತಂದೆ
ಬರುತಲೇ ಎಲ್ಲಾನು ನನ್ನದೆಂದೆ
ದುಡ್ಡು ಕೂಡಿಟ್ಟು ಬಳಿದು ಹೋಗುವಾಗ
ಬಳಲಿ ಬಳಲಿ ಅಳಮಾರಿಗೆ ಬಂದೆ ೧।

ದೊಡ್ಡ ಮನೆಯ ಕಟ್ಟಿ ಅದರೊಳು
ಮಡದಿಯ ಒಯ್ದಿಟ್ಟಿ
ಮಡದಿಗೆ ಮೋಹದ ಮಗು ಒಂದು ಹುಟ್ಟಿ
ಅದರ ಮೇಲೆ ನೀ ಮನಸಿಟ್ಟಿ ೨।

ಸಂಸಾರ ಬಲು ಖೊಟ್ಟಿ ಅದರೊಳು
ಬಿದ್ದಿದ್ದಿ ಕಾಲ್ಕಟ್ಟಿ
ತಂದೆ ಶ್ರೀ ಪುರಂದರ ವಿಠ್ಠಲರಾಯನ
ಧ್ಯಾನವನ್ನೇ ಮರೆತು ಬಿಟ್ಟಿ. ೩। (೧೬)

ಕಟಪಟಿ ಎಂದರೆ ಯಾಕೆ ತೊಂದರೆ ಎಂದರ್ಥ. ಅಧಿಕಾರ ಸಂಪತ್ತು ತಾನು ತನ್ನವರು ಎಂಬ ಭ್ರಮೆಗಳು ಹೋಗಬೇಕೆಂದು ಪುರಂದರದಾಸರು ಹೇಳುತ್ತಾರೆ, ಹುಟ್ಟುವಾಗ ಬರಿಗೈಯಲ್ಲಿ ಬಂದು ಹೋಗುವಾಗಲೂ ಹಾಗೆಯೇ ಹೋಗುವ ಮನುಷ್ಯ ಹುಟ್ಟು–ಸಾವುಗಳ ನಡುವಣ ಜೀವಿತದ ಅವಧಿಯಲ್ಲಿ ಮಾತ್ರ ಮನೆ, ಮಡದಿ, ಮಕ್ಕಳು, ಹಣ ಎಂಬ ಮೋಹ ಬೆಳೆಸಿಕೊಂಡು ಒದ್ದಾಡುವುದು ಎತಕ್ಕಾಗಿ ಎಂದು ಕೇಳುವ ಪುರಂದರದಾಸರು. ಕಟಪಟಿ ಎಂಬ ಶಬ್ದ ಪ್ರತಿಮೆಯ ಮೂಲಕ–ಸಂಸಾರದ ಅನಿತ್ಯತೆಯನ್ನು ಒತ್ತಿ ಹೇಳುತ್ತಾರೆ.

**ಕರ್ಮ :** ಆರೇನು ಮಾಡುವರು ಅವನಿಯೊಳಗೆ ಪ।

ಪೂರ್ವ ಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ ಅ।

ಮಾಡಿದಡುಗೆಯ ಕೆಡಲು ಮನೆಯ ಗಂಡನು ಬಿಡಲು
ಕೂಡಿದ್ದ ಸತಿ ತಾ ಕುಣಿಸ್ಯಾಡಲು
ಗೋಡೆಗೆ ಬರೆದ ಹುಲಿ ಘುಡಿ ಘುಡಿಸಿ ತಿನಬರಲು
ಆಡಿದ ಮಾತುಗಳ ಅಖಿಳರೂ ನಿಜವೆನಲು ೧।

ಹೊಲ ಬೇಲಿ ಮೆದ್ದರೆ ಮೊಲವೆದ್ದು ಇರಿದರೆ.
ತಲೆಗೆ ತನ್ನ ಕೈ ಪೆಟ್ಟು ತಾಕಿದರೆ.
ಹೆಳಲು ಹಾವಾದರೆ ಗೆಳೆಯ ರಿಪುವಾದರೆ
ಕಲಸಿಟ್ಟ ಅವಲಕ್ಕಿ ಕಲಪರಟಿ ನುಂಗಿದರೆ ೨।

ಹೆತ್ತ ತಾಯಿ ಮಕ್ಕಳಿಗೆ ಹಿಡಿದು ವಿಷ ಹಾಕಿದರೆ
ಮತ್ತೆ ತಂದೆಯು ಹೊರಗೆ ಮಾರಿದರೆ
ತೊತ್ತು ಅರಸಿಗೆ ಪ್ರತಿ ಉತ್ತರವನಾಡಿದರೆ
ಕತ್ತಲೆಯು ಬೆನ್ನಟ್ಟಿ ಕರಡ್ಯಾಗಿ ಕಚ್ಚಿದರೆ ೩।

ಕಣ್ಣಿನೊಳಗಿನ ಬೊಂಬೆ ಕಚ್ಚಾಡ ಬಂದರೆ

ಹೆಣ್ಣಿನ ಹೋರಾಟ ಹೆಚ್ಚಾದರೆ
ಅನ್ನ ಉಣ್ಣದೆ ಬಹಳ ಅಜೀರ್ಣವಾದರೆ
ಪುಣ್ಯ ತೀರ್ಥಗಳಲ್ಲಿ ಪಾಪ ಘಟಿಸಿದರೆ ॥೩॥

ಅರಿಕುಳಿತ ಕೊಂಬೆ ಎರಡಾಗಿ ಮುರಿದರೆ
ಮೇರೆ ತಪ್ಪಿ ವಿಧಿಯ ಮರೆದರೆ
ಆರಿದ್ದ ಇದ್ದಲಿಯು ಅಗ್ನಿಯಾಗುರಿದರೆ
ಧೀರ ಪುರಂದರವಿಠಲ ನಿನ್ನ ದಯತಪ್ಪಿದರೆ. ॥೪॥ (೧೭)

ಪೂರ್ವಜನ್ಮದಲ್ಲಿ ಮಾಡಿರುವ ಕರ್ಮಗಳು. ಈ ಜನ್ಮದಲ್ಲಿ ನಮ್ಮ ಸುಖ–ದುಃಖಗಳನ್ನು ನಿರ್ಧರಿಸುತ್ತವೆ ಎಂಬ ನಂಬಿಕೆ ಹಿಂದೂ ಧರ್ಮದಲ್ಲಿದೆ ಅದಲ್ಲದೆ ಭಗವಂತನ ದಯೆ ತಪ್ಪಿದರೆ ನಡೆಯ ಬಾರದ್ದಲ್ಲವೂ ನಡೆಯುತ್ತದೆ ಎಂಬುದನ್ನು ಅನೇಕ ದೃಷ್ಟಾಂತಗಳ ಮೂಲಕ ದಾಸರು ತಿಳಿಸುತ್ತಾರೆ.

ಗೋಡೆಯಲ್ಲಿ ಚಿತ್ರದ ರೂಪದಲ್ಲಿದ್ದ ಹುಲಿಯು ಜೀವಂತವಾಗಿ ತಿನ್ನಲು ಬರುವುದು, ಹೆರಳು ಹಾವಾಗಿ ಕಚ್ಚಲು ಬರುವದು, ಕತ್ತಲೆಯೇ ಬೆನ್ನಟ್ಟ ಕರಡಿಯಾಗಿ ಕಚ್ಚಿದರೆ. ಕಣ್ಣಿನೊಳಗಿನ ಬೊಂಬೆ ಕಚ್ಚಾಡ ಬಂದರೆ. ಮುಂತಾದ ದೃಷ್ಟಾಂತಗಳು ನಮ್ಮ ದೈವವು ಸರಿಯಾಗಿಲ್ಲದಿದ್ದರೆ. ಎಲ್ಲವೂ ವಿಪರೀತವಾಗಿ ಪರಿಣಮಿಸುವುದರ ಬಗ್ಗೆ ತಿಳಿಸುವವು. ಪ್ರತಿಯೊಬ್ಬ ಜೀವಿಗೂ ಜೀವನದಲ್ಲಿ ಈ ತರಹದ ಅನುಭವಗಳಾಗಿರುತ್ತವೆ. ಅದಕ್ಕೆ ಪೂರ್ವಜನ್ಮದ ಕರ್ಮ ಎಂದೋ 'ಸಮಯ ಸರಿಯಿಲ್ಲವೆಂದೂ' ಎಂಬ ಮಾತು ಜನರಾಡುವುದನ್ನು ನಾವು ಕೇಳಿರುತ್ತೇವೆ. ಅದಕ್ಕಾಗಿ ಶ್ರೀ ಹರಿಯೇ ಇದಕ್ಕೆಲ್ಲ ಕಾರಣನೆಂದು ಅವನ ಕರ್ತೃತ್ವ ಶಕ್ತಿಯನೂ ಅಸ್ವತಂತ್ರವಾದ ಜಗತ್ತು ಅವನ ಮೇಲೆ ಅವಲಂಬಿಸಿದುದನ್ನು ತಿಳಿದು ಭಗವಂತನೇ ಇಂತಹ ಕಷ್ಟಗಳನ್ನು ಕಳೆಯುವನು ಎಂದು ಅವನಲ್ಲಿ ನಂಬಿಕೆ ಇಟ್ಟು ನಡೆಯಬೇಕು ಎಂಬುದನ್ನು ದಾಸರು ಕೆಳಗಿನ ಉಗಾಭೋಗದಲ್ಲಿ ಮನದಟ್ಟಾಗುವಂತೆ ಸ್ಪಷ್ಟ ಪಡಿಸಿದ್ದಾರೆ.

ಹರಿ ನಡೆಯದಿರಲು ನಡೆಯಲಿಲ್ಲೀ ಜಗವು
ಹರಿ ನುಡಿಯದಿರಲು ನುಡಿಯಲಿಲ್ಲೀ ಜಗವು
ಹರಿ ನೋಡದಿರಲು ನೋಡಲಿಲ್ಲೀ ಜಗವು
ಹರಿ ಮಾಡದಿರಲು ಮಾಡಲಿಲ್ಲೀ ಜಗವು
ಹರಿ ಎವೆಯಿಕ್ಕದಿರಲು ಎವೆಯಿಕ್ಕದೀ ಜಗವು
ಹರಿ ಉಸಿರಿಕ್ಕದಿರೆ ಉಸಿರಿಕ್ಕದೀ ಜಗವು
ಹರಿ ಸರ್ವಚೇಷ್ಟಕ ಹರಿ ಪುರಂದರ ವಿಠಲ
ಹರಿ ಆಡಿಸಿದಂತೆ ಆಡುತಿಪ್ಪದೀ ಜಗವು (೧೮)

ಕೇನೋಪನಿಷತ್ತಿನ ಸಮಗ್ರ ತಿರುಳನ್ನು ಈ ಎಂಟೂ ಚರಣಗಳಲ್ಲಿ ಹೇಳಿದ್ದಾರೆ ದಾಸರು "ತೇನ ವಿನಾ ತೃಣಮಪಿನಚಲತಿ" ಎಂಬ ತತ್ವದ ಅರ್ಥವನ್ನು ಈ ಉಗಾಭೋಗದಲ್ಲಿ ಸುಂದರವಾಗಿ ಚಿತ್ರಸಿದ್ದಾರೆ. ಈ ಕೀರ್ತನೆಯ ಹಿಂದಿನ ಉದ್ದೇಶ ಸಂಸಾರದಲ್ಲಿ ಆಗುವ ಘಟನೆಗಳಿಗೆ ಚಿಂತಿಸಿದೆ ಎಲ್ಲವೂ ಭಗವಂತನ ಲೀಲೆ ಎಂದು ನಿಶ್ಚಿಂತತೆಯನ್ನು ಹೊಂದುವುದೇ ಆಗಿದೆ.

ಕಲ್ಲು :

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ॥ಪ॥

ಪದುಮನಾಭನ ಪಾದಭಜನೆ ಸುಖವಯ್ಯ ॥ಅ॥

ಕಲ್ಲಾಗಿ ಇರಬೇಕು ಕಠಿಣ ಭವ ತೊರೆಯೊಳಗೆ
ಬಿಲ್ಲಾಗಿ ಇರಬೇಕು ಬಲ್ಲವರೊಳಗೆ
ಮೆಲ್ಲನೆ ಮಾಧವನ ಮನದಿ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಂಧು ಜನರೊಳಗೆ. ॥೧॥ (೧೯)

ಕಲ್ಲು ಇಲ್ಲಿ ಮನಸ್ಸಿನ ಸ್ಥಿರತೆಯನ್ನು ಸಂಕೇತಿಸುತ್ತದೆ. ಜೀವನದಲ್ಲಿ ಹೇಗಿರಬೇಕು? ಎಂಬ ಪ್ರಶ್ನೆಗೆ ಜೀವನದಲ್ಲಿ ಬರುವ ಪ್ರವಾಹದಲ್ಲಿ ಕೊಚ್ಚಿ ಹೋಗದೆ ಕಷ್ಟ ಬಂದಾಗ ಹರಿವ ನದಿಯಲ್ಲಿರುವ ಕಲ್ಲಿನಂತೆ ಸ್ಥಿರವಾಗಿರಬೇಕು. ನಾನು ನಾನೆಂಬ ಅಹಂಕಾರ ಬಿಟ್ಟು ಜ್ಞಾನಿಗಳಲ್ಲಿ ಬಿಲ್ಲಿನಂತೆ ಬಾಗಿ ವಿನಯ ತೋರಿ ಸಬೇಕು ಸತ್ಯ, ನ್ಯಾಯ, ನಿಷ್ಠೆ, ದಾನ, ಧರ್ಮ, ಪರೋಪಕಾರ, ಜ್ಞಾನ, ಭಕ್ತಿ, ವೈರಾಗ್ಯಗಳೇ ಮುಂತಾದ ಮೌಲ್ಯಗಳನ್ನು ಬೆಳೆಸಿಕೊಂಡು ಬಂಧುಗಳಲ್ಲಿ ಪ್ರೀತಿಯಿಂದ ನಡೆದುಕೊಂಡು, ಮೆಲ್ಲನೆ ಮಾಧವನ ಮನವ ಮೆಚ್ಚಿಸಬೇಕು ಎಂದ ಪುರುಂದರದಾಸರು ಪರಮಾತ್ಮನ ನಾಮಸ್ಮರಣೆ ಮಾಡಲು ಮಾನವ ಜನ್ಮದ ಅವಕಾಶವೇ ದೊಡ್ಡ ಭಾಗ್ಯವೆಂದಿದ್ದಾರೆ. ಕಷ್ಟ ಬಂದಾಗ ಮನಸ್ಸನ್ನು ಕಲ್ಲಿನಂತೆ ಗಟ್ಟಿಗೊಳಿಸಬೇಕೆಂದು ಪುರಂದರದಾಸರು ಭಗವಂತನ ನಾಮಸ್ಮರಣೆ ಮಾಡಲು ಒಲ್ಲದ ಕೆಲವರ ಮನಸ್ಸು ಕಲ್ಲಿಗಿಂತಲೂ ಕಠಿಣ ಎಂದು ಈ ಕೆಳಗಿನ ಕೀರ್ತನೆಯಲ್ಲಿ ಹೇಳಿದ್ದಾರೆ.

ಕಲ್ಲು :

ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು ॥ಪ॥

ನಾಯಿ ಕುನ್ನಿಗಳಂತೆ ಪರರ ಪೀಡಿಸುತ ॥ಅ॥

. . . . . . . . . . . . . . . . . . . .

ಕಲ್ಲು ಕರಗಿಸಬಹುದು ಹುರಿಗಡಲೆಯೊಳು ಅದರ
ತೈಲವನ್ನು ತೆಗೆದಾದರುಣ್ಣಲುಬಹುದು
ಒಲ್ಲದವರ ಮನಸು ಮೆಚ್ಚಿಸಲರಿಯೆನೈ
ಹಲ್ಲು ಕಿರಿಯುತ ಹಂಬಲಿಸಿ ಬಾಯಿಬಿಡುತ ॥೨॥ (೨೦)

. . . . . . . . . . . . . . . . . . . . .

ಹರಿದಾಸರೂ ಲೌಕಿಕ ಜನರಂತೆ ಅವರಿವರನ್ನು ಆಶ್ರಯಿಸುವುದು ತಪ್ಪಲ್ಲವೆಂದು ದಾಸರ ಕೊರಗು. ನಿತ್ಯಯಾತ್ರೆಯೂ ಮನೆ ಬಾಗಿಲು ಕಾಯುವುದೇ ಆದುದಕ್ಕೆ ಆವರು ಬೇಸರ ವ್ಯಕ್ತಪಡಿಸುತ್ತಾರೆ. ದಾಸರು ಹರಿಕೀರ್ತನೆಯನ್ನು ಹಾಡಿದ ಮಾತ್ರಕ್ಕೆ ಲೌಕಿಕ ಜನರ ಮನಸ್ಸು ಪರಿವರ್ತನೆಯಾಗಲಾರದು. ಕಠಿಣವಾದ ಕಲ್ಲು ಕರಗಿಸಬಹುದು, ಹುರಿ ಕಡಲೆಯಿಂದ ಎಣ್ಣೆ ತೆಗೆಯುವುದು ಅಸಾಧ್ಯ, ಅದನ್ನಾದರೂ ಮಾಡಬಹುದು ಆದರೆ ಹರಿನಾಮ ಕೇಳಲು ಒಲ್ಲದವರ ಮನಸ್ಸು ಮೆಚ್ಚಿಸುವುದು ಬಲು ಕಷ್ಟ ಏಕೆಂದರೆ, ವಿಷಯಾಸಕ್ತರಾದವರಿಗೆ ಹರಿಭಜನೆಯ ಸ್ವಾರಸ್ಯ ತಿಳೀಯುವುದಿಲ್ಲ. ಆದ್ದರಿಂದ 'ಒಲ್ಲದ ಮನಸ್ಸು' ಕಲ್ಲಿ ಗಿಂತ ಕಠಿಣ ಎಂದಿದ್ದಾರೆ. ಇದೇ

'ಕಲ್ಲು' ಪ್ರತಿಮೆ ಕಲ್ಲನ್ನು ದೇವರೆಂದು ಭಜಿಪಾಗ ಕ್ಷೇಮವಿತ್ತು ಎಂದ ಪುರಂದರದಾಸರು. ಓೀಗೆ ಅಭಿಪ್ರಾಯ ಪಡುತ್ತಾರೆ.

**ಕಲ್ಲು :**

ಅಕ್ಕಾ ಅಕಟಕಟೆನ್ನ ಗಂಡ ವೈಷ್ಣವನಾದ ಕಾರಣ
ರಕ್ಕಸಾಂತಕನ ಭಜಿಸಿ ಬರಿದಾಯ್ತೆನ್ನ ಬದುಕು ಪ।

ಅಡ್ಡ ಗಂಧವನಿಟ್ಟುಕೊಂಡು ರುದ್ರದೇವರ ಭಜಿಸುವಾಗ
ಬಡ್ಡಿಗೆ ಹಣವ ಕೊಟ್ಟು ಸುಖದೊಳಿದ್ದವು.
ಅಡ್ಡ ಗಂಧಬಿಟ್ಟು ದೊಡ್ಡ ನಾಮ ಮುದ್ರೆ ಧರಿಸಲಾಗಿ
ಬಡ್ಡಿ ಬಾಚಿ ಹೋಗಿ ಬಾಯ್ಗೆಗಡ್ಡೆ ಬಿದ್ದಿತು ೧।
. . . . . . . . . . . . . . . . . . . . .
. . . . . . . . . . . . . . . . . . . . .
. . . . . . . . . . . . . . . . . . . . .
ಎಲ್ಲಮ್ಮ ಯಕಲಾತಿ ಉಡ್ಡಿ ಮೈಲಾರ ದೇವರ
ಕಲ್ಲೆಂದು ಭಜಿಪಾಗ ಕ್ಷೇಮವಿತ್ತೆ
ಬಲ್ಲಿದ ಪುರಂದರ ವಿಠಲನ ಭಜಿಸಲು
ಸಲ್ಲದ ವೈಕುಂಠ ಸಲ್ಲುವಂತಾಯಿತು. ೩।
. . . . . . . . . . . . . . . . . . . . . (೨೧)

ಈ ಕೀರ್ತನೆಯು ಒಂದು ಪ್ರಕಾರದ ನಿಂದಾಸ್ತುತಿಯಂತಿದೆ. ಈ ಪದ ವೈಷ್ಣವ ಭಾಗವತರ ಹಿರಿಮೆಯನ್ನು ಮಾರ್ಮಿಕವಾಗಿ ತಿಳಿಸುತ್ತದೆ. ಇಲ್ಲಿ ಪುರಂದರದಾಸರು ತಮ್ಮ ಎಂದಿನ ನಿರೂಪಣೆಯ ಕ್ರಮವನ್ನು ಎಂದರೆ ತನ್ನನ್ನು ತಾನು ಉದ್ದೇಶಿಸಿ ಹೇಳುವುದು ಇಲ್ಲವೇ ಇತರನ್ನು ಉದ್ದೇಶಿಸಿ ಹೇಳುವ ಕ್ರಮವನ್ನು ಬಿಟ್ಟು ಒಬ್ಬ ಸ್ತ್ರೀ ಪಾತ್ರದ ಭಾವಸ್ಥಿತಿಯನ್ನು ಆರೋಪಿಸಿಕೊಂಡು ನಿರೂಪಣೆಯಲ್ಲಿ ತೊಡಗುವುದು ಇಲ್ಲಿಯ ವಿಶೇಷವಾಗಿದೆ.

ನಿರೂಪಕಿ ಸ್ತ್ರೀ ಪಾತ್ರದ ಮೂಲಕ ಪುರಂದರದಾಸರು 'ಅಡ್ಡ ಗಂಧ" ದವರೆಂದರೆ ಸ್ಮಾರ್ತ ಸಂಪ್ರ ದಾಯದಲ್ಲಿರುವಾಗ ಹಾಗೂ ಯಲ್ಲಮ್ಮ, ಯಕಲಾತಿ ಮೈಲಾರ ದೇವರನ್ನು ಕಲ್ಲೆಂದು ಭಜಿಸುವಾಗ ಸಂತೋಷ ದಿಂದ ಇದ್ದೆವು, ರಾಕ್ಷಸರನ್ನು ಕೊಂದ ವಿಷ್ಣುವನ್ನು ಭಜಿಸುವಾಗ ಬರಿದಾಯಿತೆನ್ನ ಬದುಕು ಎನ್ನುತ್ತಾರೆ. ಇಲ್ಲಿ ಬೇರೆ ಸಂಪ್ರದಾಯಗಳನ್ನು ಹೊಗಳುತ್ತಲೇ ವೈಷ್ಣವ ಧರ್ಮವನ್ನು ಎತ್ತಿ ಹಿಡಿಯುತ್ತಾರೆ. ಜೊತೆ ಅನ್ಯನಿಷ್ಠೆಯ ನಿಂದನೆಯೂ ಇದೆ. ಮೇಲಾಗಿ ಸಾ.ಕೃ.ರಾಮಚಂದ್ರರಾಯರು ಹೇಳುವಂತೆ ಈ ಪದವು ಪುರಂದರದಾಸರದ್ದೇ ಎಂಬುದರ ಬಗ್ಗೆ ನಿಶ್ಚಯವಿಲ್ಲ. ಇದು ಪುರಂದರದಾಸರದ್ದೇ ಹೌದಾದರೆ ಅವರು ಹರಿದಾಸ ದೀಕ್ಷೆಯನ್ನು ವಹಿಸುವ ಮೊದಲು ಅವರ ಧರ್ಮ, ವೃತ್ತಿ, ಆಚಾರ, ನಂಬಿಕೆಗಳನ್ನು ಕುರಿತು ಪ್ರಸ್ತಾಪ ಇಲ್ಲಿ ಬರುತ್ತದೆ.

**ಕಾಗದ :**

ವ್ಯಾಪಾರ ನಮಗಾಯಿತು ಪ।

ಶ್ರೀಪತಿ ಪಾದಾರದಿಂದ ಸೇವೆಯೊಂಬೋ ಅ।
. . . . . . . . . . . . . . . . . . . . .
ಬಿಳಿಯ ಕಾಗದ ಹೃದಯ ಬಾಯಿ ಕಲಮದಾಗಿ
ನಾಲಗೆ ಎಂಬೋದು ಲೇಖನಿಯು
ಶ್ರೀ ಲೋಲನ ಕಥೆ ದಿವ್ಯನಾಮಂಗಳ

ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ ೮। (೨೨)

ಹರಿದಾಸರಾಗುವ ಮುನ್ನ ಪುರಂದರದಾಸರು ಲೌಕಿಕ ವ್ಯಾಪಾರ ಮಾಡುತ್ತಿದ್ದರಷ್ಟೆ, ಹಾಗಾಗಿ ಅವರ ಕೀರ್ತನೆಗಳಲ್ಲಿ ಅನೇಕ ಕಡೆ ವ್ಯಾಪಾರದ ಮೂಲಕ ಆಧ್ಯಾತ್ಮಿಕ, ಸಾಮಾಜಿಕ, ವಿಷಯಗಳನ್ನು ಪ್ರಸ್ತುತ ಪಡಿಸಿದ್ದಾರೆ. ಇಲ್ಲಿಯ ವ್ಯಾಪಾರದ ಸರಕು ಶ್ರೀಪತಿಯ ಪಾದಾರವಿಂದ ಸೇವೆಯು, ಹರಿನಾಮ ಸ್ಮರಣೆ ಮಾಡುತ್ತಿರುವಾಗ ಅವರಿಗೆ ಕಾಗದ ಬರೆಯುವ ಪ್ರಸಂಗ ಬಂದಿದೆ, ಅಲ್ಲಿ ಹೃದಯವೇ ಬಿಳಿಯ ಕಾಗದ, ಬಾಯಿ ಬರೆಯುವ ಸಾಧನವಾದ ಲೆಕ್ಕಣಿಕೆ ಅಥವಾ ಕಲಮನ್ನು ಇರಿಸುವ ಪಾತ್ರೆ (ದಾನಿ). ನಾಲಿಗೆ ಎಂಬ ಲೇಖನಿಯಿಂದ ಹರಿಯ ಕಥೆಯನ್ನು ಶೀಲ ಮನದಿ ಬರೆದು ಮತ್ತೆ ಅದನ್ನು ಹರಿಗೆ ಒಪ್ಪಿಸುವ ಕಾರ್ಯ ಒದಗಿದೆ. ಇಲ್ಲಿ ಅವರು ಬಳಸುವ ರೂಪಕಗಳು ಅವರ ಕಲ್ಪನೆಯ ಸೊಗಸನ್ನು ಎತ್ತಿ ತೋರಿಸುತ್ತದೆ. ಇಲ್ಲಿ 'ಕಾಗದ' ರೂಪಕವು ಬರಿಯ ಅಲಂಕಾರ ವಾಗದೆ ಭಾವನೆಯ ಪಿಂಡವಾಗಿ ಅಮೂರ್ತಕ್ಕೆ ಮೂರ್ತತೆಯನ್ನು ತಂದುಕೊಡುವ ಸಂಜೀವಿನಿ ಯಾಗಿದೆ. ಇಲ್ಲಿ ಕಾಗದ ಪ್ರತಿಮೆಯ ಧ್ವನಿ ಸಾಮರ್ಥ್ಯವು ಕವಿಯ ಭಾವನೆಯನ್ನು ಎಲ್ಲರ ಹೃದಯದಲ್ಲಿ ಪುನರ್ನಿರ್ಮಿಸುವ ಕಾರ್ಯ ಮಾಡಿದೆ.

**ಕಾಲ :**

ಕಾಲ ಕಳೆದೆನಲ್ಲಾ ಜ್ಞಾನ ಬರಲಿಲ್ಲವಲ್ಲಾ ॥ಪ॥
ಕಾಲನವರು ಕರೆಯಬಂದರೆ ಏನು ಹೇಳಲಿ ಸೊಲ್ಲಾ ॥ಅ॥

ಬಾಲತನದಿ ಜನಿಸಿ ತಾಯಿ ಮೋಲೆಗೆ ಭ್ರಮಿಸಿ
ಹಾಲು ಬೆಣ್ಣೆ ಸವಿದುಂಡು ಹಸುಕೂಸು ಎಂದೆನಿಸಿ ॥೧॥

ಚೆಂಡು ಬುಗುರಿಯಾಡಿ ಚೆಲುವ ಊಟವ ಬೇಡಿ
ಹಿಂಡು ಗೋವಳರೊಡನೆ ಕೂಡಿ ಅಲ್ಲಿ ಮನಸು ಮಾಡಿ ॥೨॥

ಪ್ರಾಯದಲ್ಲಿ ಸಿಕ್ಕು ಮಾಯದಲ್ಲಿ ಸೊಕ್ಕಿ
ಸ್ತ್ರೀಯರೊಡನೆ ಸರಸವಾಡಿ ದುರುಳ ಬುದ್ಧಿಯ ಮಾಡಿ ॥೩॥

ಮಕ್ಕಳಾಧೀನದಿ ಸಿಕ್ಕಿದೆನೋ ದಿಕ್ಕು ಕಾಣದೆ ಕೊನೆಗೆ
ಕಕ್ಕುಲಾತಿ ಎಂಬೋ ಬುದ್ಧಿ ತೋರಿತೆನ್ನ ಮನಕೆ ॥೪॥

ರಾಮಪೂಜೆಯನ್ನು ಮಾಡಿ ದಣಿಯಲಿಲ್ಲಾ ಕೈಯಿ
ಮುನ್ನ ಸ್ವಾಮಿ ಪುರಂದರ ವಿಠಲನ್ನಾ ನೋಡಲಿಲ್ಲಾ ಕಣ್ಣು ॥೫॥ (೨೩)

ಪ್ರತಿಯೊಬ್ಬರೂ ತಮಗೆ ದೊರೆತಿರುವ ಆಯುಷ್ಯದಲ್ಲಿ ಏನಾದರೂ ಸಾಧನೆ ಮಾಡಬೇಕು ಎಂಬ ಉದ್ದೇಶ ಪುರಂದರದಾಸರಿಗೆ ಇದೆ. ಅದಕ್ಕಾಗಿ ಈ ಕೀರ್ತನೆಯಲ್ಲಿ ಇಷ್ಟು ಕಾಲ ಬಾಲ್ಯದಲ್ಲಿ ಆಟವಾಡುತ್ತಾ ಯೌವನದಲ್ಲಿ ಸ್ತ್ರೀಯರೊಡನೆ ಸರಸವಾಡಿ, ವೃದ್ಧಾಪ್ಯದಲ್ಲಿ ಮಕ್ಕಳಾಧೀನದಲ್ಲಿ ದಿಕ್ಕು ಕಾಣದೆ ಕಳೆದೆನೆಂದು ಪರಿತಾಪ ಪಟ್ಟುಕೊಳ್ಳುತ್ತಿದ್ದಾರೆ. ಕಾಲನವರು ಎಂದರೆ ಯಮದೂತರು ಕರೆಯಬಂದರೆ ಏನು ಹೇಳಲಿ ರಾಮ

ಪೂಜೆಯನ್ನು ಮಾಡಿ ದಣಿಯಲಿಲ್ಲಾ ಮನಸ್ಸು ಭಗವಂತನ ನೋಡಲಿಲ್ಲಾ ಕಣ್ಣು. ಎಂದು ತಮಗೆ ತಾವೇ ಹೇಳಿಕೊಂಡಂತೆ ಕಂಡರೂ ಈ ಕೀರ್ತನೆ ನಮಗೆಲ್ಲರಿಗೂ ಅನ್ವಯಿಸುವುದಂತೂ ನಿಜ.

ಈ ಕಾಲ ಅಥವಾ ಸಮಯವನ್ನು ವ್ಯರ್ಥಗೊಳಿಸಬಾರದೆಂದು ಹೇಳುತ್ತಾ ಕಾಲಬದಲಾದಂತೆ ಮೌಲ್ಯಗಳೂ ಬದಲಾಗುವುದನ್ನು ಈ ಕೆಳಗಿನಂತೆ ಹೇಳುತ್ತಾರೆ.

ಕಾಲ: ಧರ್ಮಕ್ಕೆ ಕೈ ಬಾರದೀ ಕಾಲ, ಪಾಪ
ಕರ್ಮಕ್ಕೆ ಮನ ಸೋಲದೀ ಕಾಲ ।ಪ।

ದಂಡ ದ್ರೋಹಕೆ ಉಂಟು, ಪುಂಡು ಪೋಕರಿಗುಂಟು
ಹೆಂಡತಿ ಮಕ್ಕಳಿಗಿಲ್ಲೀ ಕಾಲ
ದಿಂಡೇರಿಗುಂಟು ಜಗಭಂಡರಿಗುಂಟು
ಅಂಡಲೆವರಿಗಿಲ್ಲವೀ ಕಾಲ ।೧।

ಮತ್ತೆ ಸುಳ್ಳರಿಗುಂಟು ನಿತ್ಯ ಹಾದರಕುಂಟು
ಉತ್ತಮರಿಗಿಲ್ಲವೀ ಕಾಲ
ತೊತ್ತೇರಿಗುಂಟು ತಾಟಕಿಗುಂಟು
ಹೆತ್ತತಾಯಿಗಿಲ್ಲವೀ ಕಾಲ ।೨।

ಹುಸಿದಿಟವಾಯಿತು ರಸಕಸವಾಯಿತು
ಸೊಸೆ ಅತ್ತೆಯ ದಂಡಿಸೋದೀ ಕಾಲ
ಬಿಸಜಾಕ್ಷ ಪುರಂದರ ವಿಠಲನ ಮನದಲ್ಲಿ
ಸ್ತುತಿಸುವವರಿಗಿಲ್ಲವೀ ಕಾಲ. ।೩ (೨೪)

'ಕಾಲ' ಪ್ರತಿಮೆ ಕಟು ಹಾಗೂ ಒರಟಾಗಿ ಕಂಡರೂ ನಿಜ ಸಂಗತಿಯನ್ನು ಬಿಚ್ಚುತ್ತಾ ಹೋಗುತ್ತದೆ. ಈ ಕಾಲದಲ್ಲಿ ಧರ್ಮಕ್ಕೆ ಕೈ ಬಾರದು, ದುಷ್ಟರಿಗೆ ಎಲ್ಲ ರೀತಿಯ ಅನುಕೂಲಗಳುಂಟು, ಶಿಷ್ಟರನ್ನು ಮಾತ್ರ ಯಾರೂ ಕೇಳುವುದಿಲ್ಲ, ಹಿರಿಯರು ಕಿರಿಯರನ್ನೇ ಒಲಿಸುವ ಪ್ರಸಂಗ ಬಂದಿದೆ. ನಯ ವಿನಯಗಳಂತೂ ಇಲ್ಲವೇ ಇಲ್ಲ ಎನ್ನುತ್ತ, ಸುಳ್ಳು ಸತ್ಯವಾಗಿದೆ, ಸತ್ಯವು ಈ ಕಾಲದಲ್ಲಿ ಸತ್ತೇ ಹೋಗಿದೆ. ಸೇವಕರಿಗೆ ಬಾಯಿ ಜೋರಾಗಿರುವವಗೆ ಕಾಲ, ಒಳ್ಳೆಯವರಿಗೆ, ಭಗವಂತನ ಸ್ಮರಿಸುವವರಿಗಲ್ಲ ಈ ಕಾಲ ಎಂದ ಪುರುಂದರದಾಸರು–೪೦೦ ವರ್ಷಗಳ ಹಿಂದಿನ ಮಾತನ್ನು ಹೇಳಿದ್ದಾರೆ. ಆಗಿನ ಸ್ಥಿತಿಯೇ ಹೀಗಿದ್ದರೆ, ಈಗಂತೂ ಸತ್ಯ ನ್ಯಾಯ, ನಿಷ್ಠೆಗಳಿಗೆ ಮಹತ್ವವೇ ಇಲ್ಲವಾಗಿದೆ.

ಕಾಲದ ಮಹಿಮೆಯನ್ನು ಇನ್ನೂ ಮುಂದುವರಿಸಿದ್ದಾರೆ. ಇದೊಂದು ಪ್ರಸಿದ್ಧವಾದ ಕೀರ್ತನೆ. ಇಲ್ಲಿ ಕಾಲ ಪ್ರತಿಮೆ, ಹೆಚ್ಚಿನ ಅರ್ಥವನ್ನು ಮೂರ್ತಗೊಳಿಸುತ್ತದೆ.

ಕಾಲ : ಸತ್ಯವಂತರಿಗಿದು ಕಾಲವಲ್ಲ ।ಪ।
ದುಷ್ಟಜನರಿಗೆ ಸುಭಿಕ್ಷ ಕಾಲ ।ಅ।

ಹರಿಸ್ಮರಣೆ ಮಾಡುವಗೆ ಕ್ಷಯವಾಗುವಕಾಲ
ಪರಮ ಪಾಪಿಗಳಿಗೆ ಸುಭಿಕ್ಷಕಾಲ

ಸ್ಥಿರವಾದ ಪತಿವ್ರತೆಯ ಪರರು ನಿಂದಿಪಕಾಲ
ಧರೆಯರಿಯೆ ಜಾರೆಯನು ಕೊಂಡಾಡುವಕಾಲ ।೧।

ಉಪಕಾರ ಮಾಡಿದರೆ ಅಪಕರಿಸುವಕಾಲ
ಸಕಲವನು ತಿಳಿದವಗೆ ದುರ್ಭಿಕ್ಷಕಾಲ
ಸತಿ ಸುತರು ಎಂಬುವರ ನಂಬಲರಿಯದಕಾಲ
ಸಟೆಯಿಲ್ಲವಿದು ಬಹು ವಿಪರೀತಕಾಲ ।೨।

ಧರ್ಮಮಾಡುವವ ನಿರ್ಮೂಲವಾಗುವಕಾಲ
ಕರ್ಮಿಪಾತಕರಿಗೆ ಬಹು ಸೌಖ್ಯಕಾಲ
ನಿರ್ಮಲಾತ್ಮಕ ಸಿರಿಪುರಂದರವಿಠಲನ
ಮರ್ಮದೊಳು ಭಜಿಸಲರಿಯದ ಕಾಲವಯ್ಯ ।೩। (೨೫)

ಈ ಪದದಲ್ಲಿಯೂ ಕೂಡ ಸತ್ಯವಂತರಿಗೆ, ಪತಿವ್ರತೆಯರಿಗೆ, ಪರೋಪಕಾರಿಗಳಿಗೆ, ಧರ್ಮ ಮಾಡುವವನಿಗೆ ಇದು ಒಳ್ಳೆಯ ಕಾಲವಲ್ಲ. ಪರಮ ಪಾಪಿಗಳಿಗೆ, ಕರ್ಮಿ ಪಾತಕರಿಗೆ ಇದು ಬಹು ಸೌಖ್ಯಕಾಲ ಎಂದ ಪುರುಂದರದಾಸರು ಸಮಾಜದಲ್ಲಿಯ ಅಂಕು–ಡೊಂಕುಗಳನ್ನಿ ತಿದ್ದುವುದರ ಬಗ್ಗೆ ಯೋಚಿಸಿನುಡಿದ್ದಾರೆ. ಅವರು ಯಾವ ಭಾಷಣವನ್ನು ಮಾಡಲಿಲ್ಲ. ಪುಸ್ತಕ ಬರೆಯಲಿಲ್ಲ. ಆದರೂ ಸಮಾಜದಲ್ಲಿ ಒಂದು ಬಗೆಯ ಕ್ರಾಂತಿಯನ್ನು ಎಬ್ಬಿಸಿ, ತಮ್ಮ ನಡೆ–ನುಡಿಗಳ ಬಗೆಗೆ ಯೋಚಿಸುವಂತೆ ಮಾಡಿದ್ದಾರೆ, ಅವರ ಕಣ್ಣೆದುರಿಗೆ ಆ ಕಾಲದ ಇಡೀ ಮಾನವ ಸಮಾಜ ಇದ್ದಿತು. ದಾಸರು ತಮ್ಮ ಕಣ್ಣಿಗೆ ಕಂಡ ತಪ್ಪು–ಒಪ್ಪುಗಳನ್ನು ತೋರಿಸಿ ಸಮಾಜವನ್ನು ತಿದ್ದುವಕೆಲಸ ಮಾಡಿದ್ದಾರೆ. ಇದು ಅತಿ ಉತ್ತಮವಾದ ಸಮಾಜ ಸುಧಾರಣೆಯ ಸಂಗತಿ ಎಂದರೆ ತಪ್ಪಾಗಲಾರದು.

**ಕುಲ:** ಒಂದು ದೇಶವೆಂದ ಮೇಲೆ ಅಲ್ಲಿ ಅನೇಕ ಮತಗಳ, ಜಾತಿಗಳು, ಪಂಗಡಗಳು, ಗುಂಪುಗಳು ಇರುವುದು ಸ್ವಾಭಾವಿಕ ಪರಿಸ್ಪರ ಭಿನ್ನಾಭಿಪ್ರಾಯಗಳು ಇರುವುದು ಸಹಜವೇ. ಕೆಲವು ಗುಂಪುಗಳು ಕೂಡಿದಾಗ ಆಗಾಗ ಕಲಹಗಳು ಆಗುವದುಂಟು. ಮತ ಮತಗಳಲ್ಲಿ ಸಾಮರಸ್ಯ ಮತ್ತು ಐಕ್ಯ ಸ್ಥಾಪಿಸಲು ಪುರಂದರದಾಸರು ತಮ್ಮ ಕೀರ್ತನೆಗಳ ಮೂಲಕ ಸಾಕಷ್ಟು ಪ್ರಯತ್ನ ಮಾಡಿದ್ದಾರೆ. ಕುಲ, ಮತ, ಜಾತಿಗಳು ಮುಖ್ಯವಲ್ಲ. ಭಕ್ತಿ, ಜ್ಞಾನ ಇವುಗಳು ಮುಖ್ಯ ಎಂದ ದಾಸರು 'ಕುಲದ ಮೇಲೆ ಹೋಗಬೇಡ ಮನುಜಾ' ಎಂದು ಈ ಕೆಳಗಿನಂತೆ ಹೇಳಿದ್ದಾರೆ.

**ಕುಲ:** ಕುಲದ ಮೇಲೆ ಹೋಗ ಬೇಡ ಮನುಜಾ
ಕುಲವಿಲ್ಲ ಜ್ಞಾನಿಗಳಿಗೆ
ವರದ ಪುರಂದರ ವಿಠಲನ ಪಾದವ
ಸೇರಿ ಮುಕ್ತನಾಗೂ (೨೬)

ಯಾವ ಕುಲದವರೇ ಆಗಲಿ ಭಕ್ತಿಜ್ಞಾನಗಳಿದ್ದರೆ ಅವರು ಮಾನ್ಯರೇ ಅದಕ್ಕೆ ಕುಲ ಕಾರಣವಾಗು ವುದಿಲ್ಲ ಓಗೆ ಹೇಳುತ್ತಾ ಸಮಾಜದ ಜನರಲ್ಲಿ ಅಂತಃಕರಣಶುದ್ಧಿಗೆ ದಾರಿಮಾಡಿಕೊಡುವ, ಕಾಮ, ಕ್ರೋಧಾದಿಗಳ ಜಾಗ್ರತಿ

ಮೂಡಿಸುವ, ಪರನಿಂದೆ ಹಿಂಸೆ, ವಂಚನೆಗಳಿಂದ ಮನಸ್ಸನ್ನು ಮುಕ್ತ ಮಾಡುವ, ಮನಸ್ಸು, ಮಾತು ದೇಹಗಳೆಂಬ ತ್ರಿಕರಣಗಳನ್ನು ಶುದ್ಧೀಕರಣಗೊಳಿಸುವ ಕಾರ್ಯವನ್ನು ಪುರಂದರದಾಸರು ಪ್ರಾರಂಭಿಸಿದರು.

**ಕುಂಬಾರನ** **ತಿಮಿರಿ:** ಜತನ ಮಾಡೋ ಜೀವನದ ಮುಂದೆ
ಮತಿ ಭ್ರಷ್ಟನಾಗಿ ನೀ ಕೆಡಬೇಡ ಮನುಜ ಪ।

ಅಸ್ಥಿ ಮಲಮಾಂಸಾದಿ ಮೂತ್ರ ಅದರ
ಸುತ್ತಿಕೊಂಡಿರುವೋದು ಆ ಮರದ ಬಳ್ಳಿ
ಇಟ್ಟಡೆಯಲಿ ಬಾಹೋ ರಭಸ ಅದರ
ಹುಟ್ಟಿ ನೋಡಿದರೆ ಕುಂಬಾರನ ತಿಮಿರಿ ೧।
. . . . . . . . . . . . . . . . . . . . . (೨೭)

ಜನಜೀವನದ ಅಂತರಂಗವನ್ನು ಸ್ಪಂದಿಸಿ ಅವರನ್ನು ಜ್ಞಾನದ ಬೆಳಕಿನಲ್ಲಿ ತಂದು, ಪರಿಶುದ್ಧವಾದ ಜೀವನ ನಡೆಸಲು ಕರೆ ಕೊಟ್ಟ ದಾಸರು ಈ ಜೀವನವನ್ನು ಜಾಗ್ರತೆಯಿಂದ ಕಾಪಾಡಲು ಎಚ್ಚರಿಸುತ್ತಾರೆ. ಅಸ್ಥಿಮಲ ಮಾಂಸಾದಿಗಳಿಂದ ಕೂಡಿದ ಈ ದೇಹವು ಅನಿತ್ಯ ಹಾಗೂ ಈ ದೇಹದ ಹುಟ್ಟು ಆಗುವದು ಸ್ತ್ರೀ ಗರ್ಭಾಶಯ ದಿಂದ ಅದನ್ನು ಕುಂಬಾರನ ತಿಮಿರಿ ಎನ್ನುತ್ತಾರೆ ದಾಸರು. ರಾಗದ್ವೇಷಗಳನ್ನು ಬಿಟ್ಟು ನಾನೇ ಮಿಗಿಲಾದವನೆಂಬ ಹೆಮ್ಮೆಯನ್ನು ತ್ಯಜಿಸಿ ಈ ಜೀವನವನ್ನು ಜಾಗೃತೆಯಿಂದ ಕಾಪಾಡಲು ತಿಳಿಸುತ್ತಾರೆ.

**ಕೂಪ (ಭಾವಿ):** ಎಲ್ಲಾನು ಬಲ್ಲೆನೆಂಬುವಿರಲ್ಲ, ಅದಗುಣ ಬಿಡಲಿಲ್ಲ ಪ।
ಸೊಲ್ಲಿಗೆ ಶರಣರ ಕಥೆಗಳ ಪೇಳುತ
ಅಲ್ಲದ ನುಡಿಯನು ನುಡಿಯುವಿರಲ್ಲ ಅ।
. . . . . . . . . . . . . . . . . . . . .
ಗುರುಗಳ ಸೇವೆ ಮಾಡಿದಿರಲ್ಲ ಗುರುತಾಗಲಿಲ್ಲ
ಪರಿ ಪರಿ ದೇಶವ ತಿರುಗಿದಿರಲ್ಲ ಪೊರೆಯುವರಿನ್ನಿಲ್ಲ
ಅರಿವೊಂದರಿಯದೆ ಆಗಮ ತಿಳಿಯದೆ
ನರಕ ಕೂಪದಲಿ ಬೀಳುವಿರಲ್ಲ ೨।
. . . . . . . . . . . . . . . . . . . . . (೨೮)

ಬೂಟಕತನವುಳ್ಳ ಜನರು ಎಲ್ಲಾ ಕಾಲಕ್ಕೂ ಇರುವರು. ನಡೆ – ನುಡಿಗಳ ನಡುವೆ ಏಕತೆ ಅವರಲ್ಲಿ ಇರುವುದಿಲ್ಲ. ಬೂಟಕತನ ಎಂದರೆ ವಂಚನೆ, ಕಪಟ ಬಾಹ್ಯದಲ್ಲಿ ತಾವು ಸದಾಚಾರ ನಿಷ್ಠರೆಂದು ತೋರಿಸಿ ಕೊಳ್ಳುತ್ತಾ ಒಳಗೆ ಕೆಟ್ಟ ಗುಣಗಳನ್ನು ಬಿಡದೆ ಇರುವುದು ಅವರ ಸ್ವಭಾವ. ಇವರು ಎಲ್ಲವನ್ನೂ ತಿಳಿದವನೆಂಬ ಹೆಮ್ಮೆಇಟ್ಟುಕೊಂಡು ಭಕ್ತರ ಕಥೆ ಹೇಳುತ್ತಾ ಅಶ್ಲೀಲ ಮಾತುಗಳನ್ನು ಆಡುತ್ತಾರೆ. ಎಷ್ಟು ದೇಶಗಳನ್ನು ಸುತ್ತಿದರೂ, ಗುರುಗಳ ಸೇವೆ ಮಾಡಿದರೂ ಹರಿಸರ್ವೋತ್ತಮನೆಂದು ತಿಳಿಯದೆ. ಶಾಸ್ತ್ರಗಳ ಸರಿಯಾದ ಅರ್ಥ ತಿಳಿಯದೆ, ನರಕವೆಂಬ ಬಾವಿಯಲ್ಲಿ ಬೀಳುವಿರಲ್ಲ ಎಂದು ಪುರಂದರದಾಸರು ಬೇಸರದಿಂದ ನುಡಿಯುತ್ತಾರೆ.

**ಕೆಟ್ಟ :** ಅಲ್ಲದ ಕರ್ಮವ ಆಚರಿಸಿದವ ಕೆಟ್ಟ
ಲಲ್ಲೆ ಮಾತಿನ ಸತಿಯ ನಂಬಿದವ ಕೆಟ್ಟ
ಎಲ್ಲರೊಳಗೆ ವಿರೋಧಿಸಿದವ ಕೆಟ್ಟ
ಬಲ್ಲಿದವರೊಡನೆ ಸೆಣಸಾಡುವವ ಕೆಟ್ಟ

ಪುಲ್ಲನಾಭ ಶ್ರೀ ಪುರಂದರವಿಠಲನ
ಮೆಲ್ಲಡಿಗಳನ್ನು ನಂಬದವನು ಕೆಟ್ಟ ನರಗೇಡಿ. (೨೯)

'ಕೆಟ್ಟ' ಶಬ್ದದ ಪುನರುಕ್ತಿ ಸಲ್ಲದ ಕೆಲಸ ಮಾಡುವುದರ ಫಲವನ್ನು ಒತ್ತಿ ಹೇಳಿರುತ್ತದೆ. ಇಲ್ಲಿ ನಿಷಿದ್ಧವಾದ ಕರ್ಮಗಳನ್ನು ಆಚರಿಸುವುದನ್ನು ತಡೆ ಹಿಡಿಯುವ ಎಚ್ಚರಿಸುವ ಉದ್ದೇಶ ಪುರಂದರದಾಸರಿಗಿದೆ. ನಿಷಿದ್ದ ಕರ್ಮವನ್ನು ಆಚರಿಸಿದರೆ ಅದರ ಫಲ ಕೆಟ್ಟದಾಗುತ್ತದೆ. ಪ್ರೀತಿಯಿಂದ ಮಾತನಾಡಿ ಪತಿಯು, ಕೆಟ್ಟ ದಾರಿಯಲ್ಲಿ ನಡೆಯಲು ಪ್ರಚೋದಿಸುವ ಎಷ್ಟೋ ಸ್ತ್ರೀಯರಿರುತ್ತಾರೆ. ಅಂತಹವರ ಮಾತು ಕೇಳಿದ ವ್ಯಕ್ತಿ ಕೆಟ್ಟ ವ್ಯಕ್ತಿಯಾಗುವುದು ಸತ್ಯ ಎಲ್ಲರೊಳಗೆ ವಿರೋಧಿಸುವುದು. ಎಲ್ಲ ಬಲ್ಲವರೊಡನೆ ಸೆಣ ಸಾಡುವುದರಿಂದ ಕೆಟ್ಟ ಫಲಗಳೇ ದೊರಕು ವುದು. ಈ ಉಗಾಭೋಗದಲ್ಲಿ ಕರ್ಮಗಳ ಫಲ ಸರಿಯಾಗಿ ದೊರೆಯಬೇಕಾದರೆ ಅವರ ಆಚಾರ ಸರಿಯಾಗಿರ ಬೇಕೆಂಬ ಸಂದೇಶ ದೊರಕುತ್ತದೆ. ಪುರಂದರವಿಠಲನ ಪಾದವನ್ನು ನಂಬದವನು 'ಕೆಟ್ಟ ನರಗೇಡಿ' ಎಂದು ಕೆಟ್ಟ ಮನುಷ್ಯನನ್ನು ಒರಟಾಗಿ ಸಂಭೋಧಿಸುತ್ತಾರೆ.

'ಕೆಟ್ಟ' ಎಂಬ ಭಾವ ಪ್ರತಿಮೆ ನೀತಿಯ ಸಂದೇಶವನ್ನು ಎಲ್ಲರಿಗೂ ನೀಡುತ್ತದೆ. ಅಲ್ಲದ ಕೆಲಸಗಳ ಪರಿಣಾಮ ಎಂಥಹದು ಎಂದು ಮನಸ್ಸಿಗೆ ಮನದಟ್ಟು ಮಾಡಿ ಕೊಡುತ್ತದೆ.

**ಕೆರೆ :**

ಕೆರೆಯ ನೀರನು ಕೆರೆಗೆ ಚೆಲ್ಲಿ
ವರವ ಪಡೆದವರಂತೆ ಕಾಣಿರೊ
ಹರಿಯ ಕರುಣದೊಳಾದ ಭಾಗ್ಯವ
ಹರಿಸಮರ್ಪಣೆ ಮಾಡಿ ಬದುಕಿರೊ
ಸಿರಿ ಪುರಂದರ ವಿಠಲ ರಾಯನ
ಚರಣ ಕಮಲವ ನಂಬಿ ಬದುಕಿರೋ. (೩೦)

ಕೆರೆ ಇಲ್ಲಿ ಪರಮಾತ್ಮನನ್ನು ಸಂಕೇತಿಸುತ್ತದೆ. ಮಧ್ವಸಿದ್ಧಾಂತದ ಪ್ರಮುಖ ಪ್ರಮೇಯಗಳಲ್ಲಿ 'ಹರಿಸರ್ವೋತ್ತಮ ತತ್ವ' (ಅ) ಕೂಡ ಒಂದು, ಹರಿಯು ಸರ್ವೋತ್ತಮನು. ಅವನಿಂದಲೆ ಈಜಗತ್ತಿನ ಸೃಷ್ಟಿಯಾಗಿದೆ. ಅವನ ಇಚ್ಛೆಯಂತೆಯೇ ಮನುಷ್ಯರು ಕರ್ಮಗಳನ್ನು ಮಾಡುತ್ತಾರೆ. ಅದಕ್ಕಾಗಿ ಜೀವನದಲ್ಲಿ ಆಗುವ ಕಾರ್ಯಗಳಿಗೆ ಹರಿಯೇ ಕಾರಣನೆಂದು ತಿಳಿದು ಕರ್ಮದ ಫಲಗಳನ್ನು ಅವನಿಗೆ ಅರ್ಪಿಸ ಬೇಕೆಂದೂ ಪುರಂದರ ವಿಠಲರಾಯನ ಚರಣವನ್ನು ನಂಬಿ ನಿಶ್ಚಿಂತೆಯಿಂದ ಬದುಕಲು ಕರೆನಿಡುತ್ತಾರೆ ಪುರಂದರದಾಸರು. ಇದೇ ಅರ್ಥವನ್ನು ಕೊಡುವ ಇನ್ನೊಂದು ಉಗಾಭೋಗ ಈ ಕೆಳಗಿನಂತಿದೆ.

ನೀನೇ ಕರ್ತನು ಅಕರ್ತರು ಸಿರಿ ಅಜಭವಾದಿ ಇಂದ್ರಾದ್ಯಮರರು
ನೀನೆ ಸ್ವತಂತ್ರ ಅಸ್ವತಂತ್ರರವರು ನೀನೆ ಸರ್ವಾತ್ಮಕವಾಗಿ ಸ್ವೀಕರಿಸುವ
ಜ್ಞಾನ ನಿನಾಧೀನ ಕರ್ಮ ನಿನ್ನಾಧೀನ
ಅನಾದಿ ಕಾಲದಿ ಇರುವ ಜೀವರಿಗೆ ನೀನೆ ಸುಖವನೀವೆ
–ಶುದ್ಧ ಕರ್ಮಗಳಂತೆ
ಅನಾದಿ ಕಾಲದಿ ಜೀವ ಕರ್ಮಜ್ಞಾನ ಅನಾದಿಗಳ ನಿನ್ನಾಧೀನವಯ್ಯ
ಅನಾದಿ ಕರ್ಮ ನೀನೇ ಪುರಂದರವಿಠಲ
ನೀನೇ ಸಲಹೋ ನಿನ್ನ ಅಡಿಯ ಪೊಂದಿದವರ. (೩೧)

**ಗುಡುಗುಡಿ :** ಗುಡುಗುಡಿಯನು ಸೇದಿ ನೋಡೋ ||ಪ||
ಒಡಲ ಪಾಪಂಗಳೆಲ್ಲ ಈಡಾಡೋ ||ಅ||

ಮನವೆಂಬೋ ಸಂಚಿಯ ಬಿಚ್ಚಿ ನಿನ್ನ
ದಿನದ ಪಾಪಗಳೆಂಬೋ ಭಂಗಿಯ ಕೊಚ್ಚಿ
ತನುವೆಂಬೊ ಚಿಲುಮೆಯೊಳಿಕ್ಕಿ ಅಚ್ಯುತನ
ಧ್ಯಾನವೆಂತೆಂಬೊ ಬೆಂಕಿಯ ಹಚ್ಚಿ ||೧||

ಬುರುಡೆಯೆಂಬೋದು ಈ ಶರೀರ ನಿನ್ನ
ಗುರುಭಕ್ತಿಯೆಂಬೋದು ಕೊಳವಿಯಾಕಾರ
ಸಿರಿನಾರಾಯಣನೆಂಬೋ ನೀರ ಅದ
ನರಿತು ತುಂಬಿಕೊಳ್ಳೋ ಎಲೆ ಮೋಜುಗಾರ ||೨||

ಸದ್ಯದಿಂದಮಲು ಎರವುದು ದಾ
ರಿದ್ರ್ಯ ದೋಷವು ಸುಟ್ಟು ಹೊಗೆಯು ಹಾರುವುದು
ಬುದ್ಧಿಗೆ ಜ್ಞಾನ ತೋರುವುದು ಗುರು
ಮಧ್ವೇಶ ಪುರಂದರವಿಠಲನ ತೋರುವುದು. (೩)

ಗುಡುಗುಡಿ ಎನ್ನುವುದು ಗುಡುಗುಡು ಎಂದು ಸದ್ದು ಮಾಡುವ ತಂಬಾಕು ಸೇದುವ ಒಂದು ಸಾಧನ, ಇದನ್ನೇ ಹುಕ್ಕಾ ಎನ್ನುವರು. ಪುರಂದರದಾಸರು ಪರ್ಯಟನೆಯಲ್ಲಿದ್ದಾಗ ಗುಡುಗುಡಿ ಸೇದುತ್ತಿರುವವರನ್ನು ಕಂಡು ಅದರ ವಿವರಗಳನ್ನು ಅಧ್ಯಾತ್ಮದ ಹಂದರದಲ್ಲಿ ಸೇರಿಸಿದ್ದಾರೆ. ಗುಡುಗುಡಿ ಸೇದುವ ಜನರು ಸಂಚಿಯಲ್ಲಿ ತಂಬಾಕನ್ನು ಇಟ್ಟುಕೊಂಡಿರುತ್ತಾರೆ. ಅದನ್ನು ಹೊರ ತೆಗೆದು ತಿಕ್ಕಿ ಸಣ್ಣ ಕುಡಿಕೆಯಲ್ಲಿ ಹಾಕಿ ಬೆಂಕಿ ಹಚ್ಚಿ. ಅದರ ಹೊಗೆಯನ್ನು ಕೊಳವೆಯಾಕಾರದ ವಸ್ತುವಿನಿಂದ ಸೇದುತ್ತಾರೆ. ಅದನ್ನೇ ಪುರಂದರದಾಸರು ಹೀಗೆ ಹೇಳಿದ್ದಾರೆ. ಮನಸ್ಸೆಂಬ ಸಂಚಿ ಅಥವಾ ಸಣ್ಣ ಚೀಲ ಬಿಚ್ಚಿ, ಪಾಪ ಕರ್ಮಗಳನ್ನು ಹೊಡೆದು ಹಾಕಿ. ದೇಹವೆಂಬ ಕೊಳವೆಯಲ್ಲಿ ಹಾಕಿ ಅಚ್ಯುತನ ಧ್ಯಾನದಿಂದ ಬೆಂಕಿಯ ಹಚ್ಚಿ ಗುಡುಗುಡಿ ಸೇದಲು ತಿಳಿಸುತ್ತಾರೆ. ಅನೇಕ ಉಪಮೆ ರೂಪಕಗಳನ್ನು ಬಳಸಿ. ಹರಿಭಕ್ತಿಯ ಫಲವನ್ನು ತಿಳಿಸುತ್ತಾ. ಗುರುಭಕ್ತಿಯ ಮೂಲಕ ಹರಿಯನ್ನು ಕಾಣಲು ಪ್ರೇರೆಪಿಸುತ್ತಾರೆ.

**ಗೂಡು :** ಗೂಡು ಸಿಕ್ಕಲಿಲ್ಲಾ ಗೂಡಿನ
ಜಾಡು ತಿಳಿಯಲಿಲ್ಲಾ ||ಪ||

ಜೋಡು ಹೆಂಡಿರು ಓಡಿ ಹೋದರು
ಗೋಡೆ ಬಿದ್ದು ಬಯಾಲಾಯಿತಲ್ಲ ||ಅ||

ಎಚ್ಚರಗೊಳಲಿಲ್ಲಾ, ಮದದಲಿ ಹುಚ್ಚನಾದರೆನಲ್ಲಾ
ಕೆಚ್ಚನಲಿ ಬೆಲ್ಲದಚ್ಚು, ಬಿದ್ದು ತಾ
ಹುಚ್ಚೆದ್ದೊದರಿದಂತಾಯಿತಲ್ಲ ||೧||

ಮುಪ್ಪು ಬಂದಿತಲ್ಲಾ, ಪಾಯಸ ತುಪ್ಪವನುಣಲಿಲ್ಲಾ

ತುಪ್ಪದ ಬಿಂದಿಗೆ ತಿಪ್ಪೆಯ ಮೇಲೆ
ಧೊಪ್ಪನೆ ಬಿದ್ದಂತಾಯಿತಲ್ಲಾ ೨।

ಯೋಗವಳಿಯಿತಲ್ಲಾ ಮುಂದಣ ಭೋಗ ತಿಳಿಯಲಿಲ್ಲ
ನಾಗಶಯನ ಶ್ರೀ ಪುರಂದರವಿಠಲನ
ನೀಗಿ ಮುರೆದು ಮನ ಬರಡಾಯಿತಲ್ಲಾ ೩। (೩೩)

ಇಲ್ಲಿ 'ಗೂಡು' ಜಗತ್ತಿಗೆಲ್ಲ ನೆಲೆಯಾದ ಪರಮಾತ್ಮನನ್ನು ಸಂಕೇತಿಸುತ್ತದೆ. ಜೀವನ ಪೂರ್ತಿ ದಾರಿಯುದ್ದಕ್ಕೂ ವರ್ಣರಂಜಿತ ಸುಖದ ಅಭಿಲಾಷೆಯನ್ನಿಟ್ಟುಕೊಂಡು ಕಾಲ ಕಳೆಯುವ ಜನರಿಗೆ ಬದುಕಿನ ಕೊನೆಯ ಘಟ್ಟದ ಅನಿಸಿಕೆ ಅನುಭವಗಳನ್ನು ಹೇಳಿ ಎಚ್ಚರ ಮಾಡಬೇಕಿತ್ತು ಅದಕ್ಕಾಗಿ ಈ ಹಾಡಿನ ಮೂಲಕ ಜನರಿಗೆ ದಾಸರು ಸಮಯದ ಮಹತ್ವವನ್ನು ಹೆಳುತ್ತಿದ್ದಾರೆ.

ನೆಮ್ಮದಿಯ ನೆಲೆ ಸಿಗದೆ, ಅದನ್ನು ಹುಡುಕುವ ದಾರಿ ಕಾಣದೆ ಒದ್ದಾಡುವ ಜೀವಿಗೆ ಕೊನೆಯ ಕಾಲದಲ್ಲಿ ಪಾಪ–ಪುಣ್ಯವೆಂಬ ಜೋಡು ಹೆಂಡಿರು ಓಡಿ ಹೋಗಿ ದೇಹವೆಂಬ ಗೋಡೆ ಬಿದ್ದು ಬಯಲಾಗುವದು. ಭಗವಂತನ ಹಿರಿಮೆಯ ಅರಿವು ತಿಳಿಯದೇ ಸಮಯ ಕಳೆದರೆ, ಬೆಲ್ಲದ ಅಚ್ಚು ಬೆಂಕಿಯಲ್ಲಿ ಬಿದ್ದು ಕರಗಿದಂತೆ ಮಾನವನ ಆಯುಷ್ಯ ಕರಗಿಹೋಗುವದು.

ರಾಮನಾಮವೆಂಬ ಪಾಯಸವನ್ನು ಶಾಸ್ತ್ರಜ್ಞಾನದಿಂದ ಬಂದ ವಿವೇಕವೆಂಬ ತುಪ್ಪವನ್ನು ತಿನ್ನದೆ ಸಂಸಾರವೆಂಬ ತಿಪ್ಪೆಯಲ್ಲಿ ವಿವೇಕವೆಂಬ ತುಪ್ಪದ ಬಿಂದಿಗೆ ಬಿದ್ದು ಹೋಯಿತೆಂದು ದಾಸರು ನೊಂದು ಕೊಳ್ಳುತ್ತಾರೆ. ಮಾನವ ಜನ್ಮ ಬಂದದ್ದು ಏಕೆಂದು ಅರಿಯದೆ. ವ್ಯರ್ಥವಾಗಿ ಕಾಲಕಳೆದೆನೆಂದು ಪಶ್ಚಾತ್ತಾಪ ಪಡುತ್ತಿರುವಂತೆ ಕಂಡ ಪುರಂದರದಾಸರ ಈ ಕೀರ್ತನೆ ಆರ್ತಭಾವದಿಂದ ಕೂಡಿದ್ದು, ಪ್ರತಿಯೊಬ್ಬ ಜೀವಿಯನ್ನು ಎಚ್ಚರಿಸುವಂತಿದೆ. ದಾಸರ ಅಂತರಂಗದ ಭಾವಧಾರೆಯನ್ನು ವಿವರಿಸುವ 'ಗೂಡು' ಪ್ರತಿಮೆ ಮೂಲಭೂತವಾಗಿ ಪರಮಾತ್ಮನನ್ನು ಹೊಂದುವುದೇ ಪ್ರತಿಯೊಬ್ಬ ಜೀವಿಯ ಮುಖ್ಯ ಗುರಿ ಎಂದು ತಿಳಿಸುತ್ತದೆ. ದಾಸರಿಗೆ ಎಲ್ಲರೂ ನೀತಿಮಾರ್ಗದಲ್ಲಿ ನಡೆದು. ಜ್ಞಾನದ ಬೆಳಕಿನಲ್ಲಿ ಓಡಾಡಬೇಕೆಂಬ ಆಶಯವಿತ್ತು ಹಾಗಾಗಿ ಪರಿಶುದ್ದವಾದ ಪಾವನವಾದ ಪವಿತ್ರ ಜೀವನ ನಡೆಸಲು ಅವರು ಜನತೆಗೆ ಕರೆಕೊಟ್ಟರು.

**ಚಿಂತೆ :** ಹಾ, ಹಾ, ಹಾ, ಹಾ, ಮಾನವ ಹೀಗೇಕೆ ಕೆಟ್ಟೆ ಪ।
ಹರಿಭಜನೆಯ ಬಿಟ್ಟೆ ಅ।
. . . . . . . . . . . . . . . . . . . . .
. . . . . . . . . . . . . . . . . . . . .
ತನುವಿನ ಚಿಂತೆ ತನಯರ ಚಿಂತೆ ಧನಧಾನ್ಯದ ಚಿಂತೆ ವನಿತೆಯರ
ಚಿಂತೆ ಉದರದ ಚಿಂತೆ ಅನುದಿನದಲಿ ತನುವ ನೆನಸುತ ಕನಗಿನಂತೆ ೨।

ಮಡದಿ ಮಕ್ಕಳಿಗೆ ಒಡವೆಯ ಗಳಿಸಬೇಕೆಂಬೊ
ಚಿಂತೆ ಮನೆ ಚಿಂತೆ ಮಾನ್ಯದ ಚಿಂತೆ ಮನುಜರಿಗೆ
ಅನುದಿನ ಪುರಂದರವಿಠಲನ ನೆನೆಯದೆ ಕನಗಿನಂತೆ ೩।(೩೪)

ಜೀವರು ತಮ್ಮ ಸಾದನೆಯನ್ನು ಪೂರ್ತಿಮಾಡಿಕೊಳ್ಳಲು ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸಿಕೊಂಡು ಭಗವಂತನಸಾಮಸ್ಮರಣೆಯನ್ನು ಮಾಡುತ್ತಾ ಆನಂದವನ್ನು ಹೊಂದಲಿ ಎಂಬ ಸದುದ್ದೇಶದಿಂದ ಭಗವಂತನು ಜೀವರಿಗೆ ಸಾಧನ ಶರೀರಗಳನ್ನು ಕೊಟ್ಟು ಸೃಷ್ಟಿಗೆ ತರುತ್ತಾನೆ. ಸೃಷ್ಟಿಯಲ್ಲಿ ಬಂದಮೇಲೆ ಜೀವರು ಈ ಸಂಸಾರದ ಸುಖ-ದುಃಖಗಳಲ್ಲಿ ಮುಳುಗಿ ಭಗವಂತನನ್ನೇ ಮರೆತುಬಿಡುತ್ತಾರೆ. ಹೀಗಾಗಬಾರದೆಂದು ಪುರಂದರದಾಸರು ಜೀವರನ್ನು ಎಚ್ಚರಿಸುತ್ತ ಇರಬೇಕು, ಇರದಿರಬೇಕು ಎಂದಿದ್ದಾರೆ. ಹರಿಭಜನೆಯ ಬಿಟ್ಟು ಕೇವಲ ಸಂಸಾರದ ಚಿಂತೆಯನ್ನು ಮಾಡುತ್ತಾ ನೀಕೆಟ್ಟೇ ಎನ್ನುತ್ತಾರೆ. ಪತಿ, ಪತ್ನಿ, ಮಕ್ಕಳು, ಮನೆ, ಜಮಿನು ಎನ್ನುತ್ತಾ ಚಿಂತೆಯೊಳು ಮಾನವನು ಸಮಯವನ್ನು ಹಾಳು ಮಾಡುವುದುವ್ಯರ್ಥ ಎಂದು ತಿಳಿಸುತ್ತಾರೆ.

ಈ ಸಂಸಾರದಲ್ಲಿ ನನ್ನದು ಎಂಬ ಅಭಿಮಾನವೇ ಎಲ್ಲ ದುಃಖಗಳ ಮೂಲವಾದ್ದರಿಂದ ವಿಷಯಾದಿ ಗಳಲ್ಲಿ ಮಮತಾಬುದ್ಧಿಯನ್ನು ತೊರೆದು ಎಲ್ಲವೂ ಭಗವಂತನ ಆಧೀನ, 'ತೇನ ವಿನಾ ತೃಣಮಪಿ ನಚಲತಿ' ಎಂಬ ಅಂಶವನ್ನು ಮನದಲ್ಲಿಟ್ಟು ಜೀವಿಸಬೇಕು. ಸಂಸಾರದಲ್ಲಿ ಚಿಂತೆಯನ್ನು ಬಿಟ್ಟು ವೈರಾಗ್ಯಭಾವವನ್ನು ತಾಳಬೇಕು. ಎಂಬ ಸಂದೇಶವನ್ನು 'ಚಿಂತೆ' ಪ್ರತಿಮೆಯು ಮಾರ್ತಗೊಳಿಸುತ್ತದೆ. ಎಷ್ಟು ಉಪದೇಶವನ್ನು ಕೇಳಿದರೂ ಚಿಂತೆಯನ್ನು ಬಿಡದ ಚಂಚಲ ಮನಸ್ಸನ್ನು ಕೋತಿ ಎಂದಿದ್ದಾರೆ.

**ಚಿಂತೆ :**

ಯಾಕೆ ಚಿಂತಿಸುತ್ತದ್ದಿ ಕೋತಿ ಮನವೆ ಪ।
ಲೋಕನಾಥನ ನೆನೆದು ಸುಖಿಯಾಗು ಮನವೆ ಅ।

ಹುಟ್ಟುವಾಗಪತ್ತಿಗಾರು ಚಿಂತಿಸಿದರು
ಕಟ್ಟಕಡೆಯಲಿ ಲಯಕೆ ಯಾರಚಿಂತೆ
ನಟ್ಟನಡುವಿನ ಬಾಳಿಗೇಕೆ ಚಿಂತಿಸುತಿರುವೆ
ಹುಟ್ಟಿದವರಿಗೆ ಮೂರು ಬಟ್ಟಲ್ಲವೆ ಮರುಳು ೧।

ನವಿಲಿಗೆ ಚಿತ್ರ ಪತ್ರವನಾರು ಬರೆದವರು
ಪವಳದ ಲತೆಗೆ ಕಂಪಿಟ್ಟವರು ಯಾರು
ಸವಿಮಾತಿನರಗಿಣಿಗೆ ಹಸಿರು ಬಳಿದವರಾರು
ಅವಮಾಡಿದವ ನಮ್ಮ ಮರೆತಿಹನೆ ಮರುಳೆ ೨।

ಬಸುರೊಳಗೆ ಶಿಶುವನು ಅದಾರು ಸಲಹಿದರು
ವಸುಧೆಯನು ಬಸುರೊಳಗೆ ಇಟ್ಟವರು ಯಾರು.
ಹಸಗೆಡದೆ ನಮ್ಮ ಶ್ರೀ ಪುರಂದರವಿಠಲನ
ಬಿಸಜ ಪಾದವ ನಂಬಿ ಸುಖಿಯಾಗು ಮನವೆ ೩। (೩೫)

ಸಂಸಾರದಲ್ಲಿ ಹೆಂಡತಿ, ಮಕ್ಕಳು, ಬಂಧುಗಳು ಎಂದು ಚಂಚಲ ಮನಸ್ಸು ಎಲ್ಲರ ಬಗ್ಗೆ ಚಿಂತೆಯಲ್ಲಿ ಮುಳುಗಿರುತ್ತದೆ. ಮನಸ್ಸು ತುಂಬಾ ಚಂಚಲವಾದ್ದರಿಂದ ಅದನ್ನು ಹಿಡಿತದಲ್ಲಿಟ್ಟುಕೊಳ್ಳುವುದು ತುಂಬಾ ಕಠಿಣ ಅದಕ್ಕೇ ಪುರಂದರದಾಸರು ಅದನ್ನು 'ಕೋತಿ' ಎಂದು ಕರೆದಿದ್ದಾರೆ.

ಸಂಸಾರದಲ್ಲಿ ಹೆಂಡತಿ, ಮಕ್ಕಳು, ಬಂಧುಗಳು ಇವರ ಸಂಗಮವು ದಾರಿ ಹೋಕರ ಸಂಗವಿದ್ದಂತೆ. ಪ್ರವಾಸದಲ್ಲಿ ತಮ್ಮ ಊರುಗಳು ಬಂದಾಗ ಅವರುಗಳು ಅಗಲಿ ಹೋಗುವಂತೆ ಅವರೆಲ್ಲರೂ ಆಯುಷ್ಯ ಮುಗಿದಂತೆ ಒಬ್ಬರನ್ನೊಬ್ಬರು ಅಗಲಿ ಹೋಗುತ್ತಾರೆ. ಕಾರಣ ಯಾವುದಕ್ಕೂ ಹೆಚ್ಚು ಚಿಂತಿಸಬಾರದು. ಹುಟ್ಟು ಸಾವುಗಳ ನಟ್ಟನಡುವೆ ಬರುವ ಈ ಬಾಳಿಗೆ ಚಿಂತಿಸುವ ಅಗತ್ಯವಿಲ್ಲವೆಂದೂ ಪ್ರತಿಯೊಬ್ಬ ವ್ಯಕ್ತಿಗೆ ಧರ್ಮ, ಅರ್ಥ, ಕಾಮ ವೆಂಬ (ಮೂರು ಬಟ್ಟೆ) ಮೂರು ದಾರಿಗಳಿವೆ ಎಂದೂ ತಿಳಿಸುತ್ತಾರೆ. ಬಸುರೊಳಗೆ ಶಿಶುವನ್ನಿಟ್ಟು, ಅದನ್ನು ಸಲಹಿದವರಾರು? ನವಿಲಿಗೆ ಚಿತ್ರ ಬರೆದ ವರಾರು? ಹವಳದ ಬಳ್ಳಿಗೆ ಕೆಂಪು ಬಣ್ಣ ವನಿಟ್ಟವರಾರು? ಗಿಳಿಗೆ ಹಸಿರು ಬಣ್ಣವನ್ನಿಟ್ಟವರಾರು? ಎಂದು ಎಲ್ಲರನ್ನು ಪ್ರಶ್ನಿಸುತ್ತಾ ಪ್ರಕೃತಿಯಲ್ಲಿ ಎಲ್ಲವನ್ನೂ ಸೃಷ್ಠಿ ಮಾಡಿದವನು ಭಗವಂತನೇ. ಆದ್ದರಿಂದ ಅವ ಮಾಡಿದವ ನಮ್ಮನ್ನು ಮರೆಯದೇ ಸಲಹುವನು ಎಂಬ ನಂಬಿಕೆಯಿಂದ ಅವನ ಪಾದವನಂಬಿ ಸುಖಿ ಯಾಗು ಎಂದಿದ್ದಾರೆ.

**ಜಂಗಮರು :**

ಜಂಗಮರು ನಾವು ಜಗದೊಳು ಪ।
ಜಂಗಮರು ನಾವು ಲಿಂಗಾಂಗಿಗಳು

ಮಂಗಳವಂತರು ಭವಿಗಳೆಂತಂಬಿರಿ ಅ।

ಹರ ಗುರುದೈವ ಕೇಶವ ನಮ್ಮ ಮನೆ ದೈವ
ವರದ ಮೋಹನ ಗುರು ಶಾಂತೇಶ
ಹರಗುರು ದ್ರೋಹ ಮಾಡಿದ ಪರವಾದಿಯು
ಕೌರವ ನರಕದಿ ಮುಳುಗುವುದೇ ಸಿದ್ಧ ೧।

ವಿಭೂತಿ ನಮಗುಂಟು ವಿಶ್ವೇಶ ನಮಗುಂಟು
ಶೋಭನ ನಾಮ ಮುದ್ರೆಗಳುಮಟು
ಶ್ರೀ ಭಾಗೀರಥೀಯಗಣಿತ ಮಜ್ಜನವುಂಟು
ಸೌಭಾಗ್ಯವೀವ ಮಹಂತನ ಮಠದವರು ೨।

ವಿರಕ್ತರು ನಾವು ಶೀಲವಂತರು ನಾವು
ವಿರಭದ್ರ ಪ್ರಿಯಭಕ್ತರು ನಾವು
ಕಾರಣಕರ್ತ ಶ್ರೀ ಪುರಂದರವಿಠಲನ
ಕಾರುಣ್ಯಕೆ ಮುಖ್ಯ ಪಾತ್ರರು ನಾವು ೩। (೩೬)

ಸಮಾಜದಲ್ಲಿ ವಿವಿಧ ಮತಗಳ ನಡುವೆ ಸಾಮರಸ್ಯವಿದ್ದರೆ. ಅದು ಮಾದರಿ ಸಮಾಜಕ್ಕೆ ನಾಂದಿಯಾ ಗುತ್ತದೆ. ಲೋಕೋದ್ಧಾರಕ್ಕಾಗಿ ಜನರ ನಡುವೆ ಸಂಚರಿಸುತ್ತಾ ತಮ್ಮ ಜೀವನವನ್ನು ಕಳೆದ ದಾಸರು ಸರ್ವಧರ್ಮ ಗಳ ಜನರಲ್ಲಿ ಮಾನ್ಯರಾಗಿದ್ದರು. ಅವರಿಗೆ ಯಾವಧರ್ಮದ ಮೇಲೂ ದ್ವೇಷವಿರ ಲಿಲ್ಲ. ಜೊತೆಯಲ್ಲಿ ಸ್ವಧರ್ಮ ದಲ್ಲಿ ಶ್ರೇಷ್ಠಮಟ್ಟದ ಅಭಿಮಾನವಿತ್ತು ಆದರೆ ದುರಾಭಿಮಾನವಿರಲಿಲ್ಲ.

ಜಂಗಮರು ಎಂದರೆ ವೀರಶೈವ ಸಂಪ್ರದಾಯದ ವಿರಕ್ತರು. ಪುರಂದರದಾಸರೂ ತಮ್ಮನ್ನು ಜಂಗಮ ರೆಂದು ಕರೆದುಕೊಂಡಿದ್ದಾರೆ. ಏಕೆಂದರೆ ಅವರು ಎಂದೂ ಎಲ್ಲೂ ಬಹಳ ಹೊತ್ತು ನಿಲುವವರಲ್ಲ. ಲೋಕ ಹಿತದ

ಉದ್ದೇಶದಿಂದ ಸದಾ ಸಂಚಾರ ಮಾಡುತ್ತಿದ್ದ ಅವರು ಜಂಗಮರೇ ಸರಿ. ನಾವು 'ಲಿಂಗಾಂಗಿಗಳು' ಎಂದು ಹೇಳಿಕೊಂಡಿದ್ದಾರೆ. ಜೀವಕ್ಕೆ ಎಲ್ಲಿಯವರೆಗೆ ಲಿಂಗದೇಹದ ಸಂಪರ್ಕವುಂಟೋ, ಅಲ್ಲಿಯವರೆಗೆ ಎಲ್ಲರೂ ಲಿಂಗಾಂಗಿಗಳು. ಲಿಂಗದೇಹ ಭಂಗವಾದಾಗ ಮಾತ್ರ ಅವರಿಗೆ ಲಿಂಗದೇಹದ ಸಂಗ ತಪ್ಪುತ್ತದೆ. ಅವರನ್ನು ನಾವು ಮುಕ್ತರೆಂದು ಕರೆಯುತ್ತೇವೆ.

ವೀರಶೈವ ಸಂಪ್ರದಾಯದ ಪ್ರಕಾರ, ಇಷ್ಟಲಿಂಗವನ್ನು ಮೈಮೇಲೆ ಧರಿಸಿದವರು ಲಿಂಗಾಂಗಿಗಳು ನೂರೊಂದು ಸ್ಥಳಗಳಲ್ಲಿ ನಲವತ್ತುನಾಲ್ಕು ಅಂಗಸ್ಥಳಗಳು, ಐವತ್ತೇಳು ಲಿಂಗಸ್ಥಳಗಳು, ಅಂಗದಿಂದ ಪ್ರಾರಂಭವಾಗಿ ಲಿಂಗದಲ್ಲಿ ಪರಿವರ್ತನವಾಗುವುದು ಸಾಧನೆ. ಹೀಗೆ ಸಿದ್ಧಿಯನ್ನು ಪಡೆದವರು ಲಿಂಗಾಂಗಿಗಳು ಲಿಂಗನೊಂದಿಗೆ ಅಂಗನು ಬೆರೆಯುವುದು ಲಿಂಗಾಂಗ ಸಾಮರಸ್ಯವೆನಿಸಿಕೊಳ್ಳುತ್ತದೆ (೨)

ದಾಸರು ಮುಂದುವರೆದು ತಮ್ಮನ್ನು ತಾವು ಮಂಗಳವಂತರು, ಭವಿಗಳು (ಸಾಮಾನ್ಯ ಮನುಷ್ಯರು) ಶೀಲವಂತರು ಮಹಂತನ ಮಠದವರು ವೀರಭದ್ರನ ಭಕ್ತರು ಎಂದು ಕರೆದುಕೊಳ್ಳುತ್ತಾರೆ. ವಿಭೂತಿ ನಮಗುಂಟು ಶೋಭನ ನಾವು ಮುದ್ರೆಗಳುಂಟು ಎಂದ ದಾಸರು ಮನೋಭಿಮಾನಿದೈವನಾದ ರುದ್ರದೇವರನ್ನು ತಮ್ಮ ಗುರುಗಳೆಂದೂ, ಕೇಶವನು ತಮ್ಮ ಮನೆದೈವವೆಂದೂ ಹೇಳಿಕೊಂಡಿದ್ದಾರೆ. ಇಲ್ಲಿ ಜಂಗಮ ಪ್ರತಿಮೆಯ ವೈರಾಗ್ಯವನ್ನು ಸಂಕೇತಿಸುತ್ತದೆ. ಪುರಂದರದಾಸರು ತಮ್ಮಜೀವನದ ಸರ್ವಸ್ವವನ್ನು ತ್ಯಾಗ ಮಾಡಿ ವಿರಕ್ತರಾದವರು ನಿಜವಾದ ಜಂಗಮರೇ ಸರಿ.

**ತುರುಕರು :**

ತುರುಕರು ಕರೆದರೆ ಉಣಬಹುದಣ್ಣ
ತುರುಕರು ಕರೆದರೆ ಅತಿ ಪುಣ್ಯವಯ್ಯ ಪ।

ತುರುಕರಿಂದ ಮುಟ್ಟು ಮುಡಿ ಬಿಟ್ಟು ಹೋಗೋದು
ತುರುಕರಿಂದ ಎಂಜಲು ಹೋಗೋದು
ತುರುಕರ ಕೂದಲು ತುರುಬಿಗೆ ಸುತ್ತಿದರೆ
ಎಣಿಕೆಯಿಲ್ಲದ ಮತ್ತೈದೆಯರಣ್ಣ ೧।

ತುರುಕರಿಂದ ಸ್ವರ್ಗ ಸಾಧನವಾಗೋದು
ತುರುಕರಿಂದ ನರಕ ದೂರವಯ್ಯ
ತುರುಕರು ಬಂದರೆ ಸರಕ್ಕನೆ ಏಳಬೇಕು
ತುರುಕರ ಪೂಜಿಸೆ ಹರಿಯೊಲಿದ ೨।

ತುರುಕರ ನೀರ ಎರಕೊಂಡ ನಮ್ಮದೇವ
ಎರಕೊಂಡ ನೀರೆಲ್ಲ ಸನಕಾದಿಗಳಿಗೆ
ಬೆರಕೆ ಮಾಡಿದ ಹರಿದಾಸರಿಗೆಲ್ಲ
ಎರವು ಮಾಡಿದ ನಮ್ಮ ಪುರಂದರವಿಠಲ ೩। (೩೭)

ಇದೊಂದು ಶ್ಲೇಷಾರ್ಥವನ್ನು ಕೊಡುವ ಕೀರ್ತನೆ. ತುರುಕರೆಂದರೆ ಮುಸಲ್ಮಾನರು (ತುರ್ಕಿಯವರು) ತುರು-ಕರು ಎಂದರೆ ಹಸು-ಕರು ಎಂದೂ ಆಗುತ್ತದೆ. ಈ ಕೀರ್ತನೆ ಗೋ-ಮಹಿಮೆಯನ್ನು ತಿಳಿಸುತ್ತದೆ.

ಹಿಂದೂಗಳಲ್ಲಿ ಹಸುವೆಂದರೆ ಪೂಜ್ಯಭಾವನೆಯಿದೆ. ಗೋಮೂತ್ರ ಗೋಮಾಯ (ಹಸುವಿನ ಸೆಗಣಿ)ಗಳನ್ನು ಪವಿತ್ರವೆಂದು ಭಾವಿಸುತ್ತಾರೆ ಹಾಗೂ ಶುದ್ಧೀಕರಣಕ್ಕೆ ಬಳಸುತ್ತಾರೆ. ಹಸುವನ್ನು ಮುಟ್ಟಿ ಪೂಜಿಸಿದರೆ ದೋಷಗಳು ಹೋಗುವುದೆಂದು ಆಕಳಿನ ಬಾಲದಿಂದ ಕೂದಲನ್ನು ತೆಗೆದು ತುರುಬಿಗೆ ಸುತ್ತಿದರೆ ಮುತ್ತೈದೆ ಭಾಗ್ಯ ಹೆಚ್ಚುವದೆಂಬ ನಂಬಿಕೆಯಿದೆ. ಗೋವನ್ನು ಹೊಗಳುವುದರ ಹಿಂದೆ ಪುರಂದರದಾಸರು ಮುಸಲ್ಮಾನರನ್ನು ಶುದ್ಧರೆಂದು ಹೊಗಳಿ ಜಾತಿ–ಜಾತಿಗಳ ನಡುವೆ ಇರುವ ದ್ವೇಷವನ್ನು ಅಳಿಸಿ ಪ್ರೀತಿಯನ್ನು ಬೆಳೆಸಲು ಯತ್ನಿಸಿದ್ದಾರೆ. ಅವರಿಗೆ ಜಾತಿ ಮುಖ್ಯವಾಗಿರಲಿಲ್ಲ. ಮಾನವೀಯತೆ ಶುದ್ಧ ಮನಸ್ಸು, ಹೃದಯಗಳುಳ್ಳವರೇ ಉತ್ತಮ ಜಾತಿಯವರೆಂದು ಅವರು ನಂಬಿದ್ದರು. ಅದಕ್ಕೆ ಅವರ ಕೀರ್ತನೆಗಳಾದ 'ಜಂಗಮರು ನಾವು', 'ತುರುಕರು ಕರೆದರೆ ಉಣಬಹುದಣ್ಣ', 'ಕುಲದ ಮೇಲೆ ಹೋಗಬೇಡ ಮನುಜಾ' ಮುಂತಾದವು ಸಾಕ್ಷಿ. ದಾಸರಿದ್ದಕಾಲದಲ್ಲಿ ಮತ–ಮತಗಳ ನಡುವೆ ಭಿನ್ನಾಪ್ರಾಯ ಗಳಿದ್ದರೂ ಈಗಿನಷ್ಟು ದ್ವೇಷವಿರಲಿಕ್ಕಿಲ್ಲ. ಆಕಾಲದಲ್ಲಿ ಹಳ್ಳಿಗಳಲ್ಲಿ ಎಲ್ಲ ಮತಗಳ ಜನರು ಪರಸ್ಪರ ಒಬ್ಬರ ಹಬ್ಬಗಳಲ್ಲಿ ಮತ್ತೊಬ್ಬರು ಪಾಲ್ಗೊಳ್ಳುತ್ತಿದ್ದರು. ಇಂತಹ ಪದ್ಧತಿಗಳು ಅನೇಕ ಹಳ್ಳಿಗಳಲ್ಲಿ ಇಂದಿಗೂ ತಕ್ಕ ಮಟ್ಟಿಗೆ ನಡೆದುಕೊಂಡು ಬಂದಿವೆ. ಮೊಹರಮ್ ಹಬ್ಬವನ್ನು ಎಲ್ಲ ಹಿಂದೂಗಳು ಮುಸ್ಲೀಮರೊಂದಿಗೆ ಸಂಭ್ರಮದಿಂದ ಆಚರಿಸುವುದುಂಟು ಹಸ್ತದಾಕಾರದ ದೈವಾಕೃತಿಗಳಾದ ಮೊಹರಮ್ ಪಿರ್ಲುಗಳಿಗೆ ಎಲ್ಲ ಜಾತಿಯವರು ಸಕ್ಕರೆಯನ್ನು ನಿವೇದಿಸುತ್ತಾ ಮಸೀದಿಯ ಮುಂದಿನ 'ಅಲಾಯಿಕುಣಿ' (೪) ಮುಂದೆ ಬೆಂಕಿಯನ್ನು ಹಚ್ಚಿ ಕುಣಿಯುತ್ತಾರೆ.

**ದುಗ್ಗಾಣಿ :**

ದುಗ್ಗಾಣಿ ಎಂಬುದು ದುರ್ಜನ ಸಂಗ
ದುಗ್ಗಾಣಿ ಬಲು ಕೆಟ್ಟದಣ್ಣ ।ಅ।

ಆಚಾರ ಹೇಳೋದು ದುಗ್ಗಾಣಿ ಬಹು
ನೀಚರ ಮಾಡೊದು ದುಗ್ಗಾಣಿ
ನಾಚಿಕೆಯಿಲ್ಲದೆ ಮನೆ ಮನೆ ತಿರುಗಿಸಿ
ಛೀ ಛೀ ಎನಿಸೋದು ದುಗ್ಗಾಣಿ ಅಣ್ಣ ।೧।

ನೆಂಟತನ ಹೇಳೋದು ದುಗ್ಗಾಣಿ, ಬಹು
ನೆಂಟರನೊಲಿಸೋದು ದುಗ್ಗಾಣಿ
ಒಂಟೆ ಹಾಂಗೆ ಮೋರೆ ಮೇಲಕ್ಕೆ ಸೆಳಕೊಂಡು
ಕುಂಟನೆನಿಸುವುದು ದುಗ್ಗಾಣಿ ಅಣ್ಣ ।೨।

ಮಾನವಾಗಿರಿಸೋದು ದುಗ್ಗಾಣಿ, ಬಹು
ಮಾನ ಹಸಗೆಡಿಸೋದುದುಗ್ಗಾಣಿ
ಮಾನನಿಧಿ ಶ್ರೀ ಪುರಂದರವಿಠಲನ
ಕಾಣಿಸದಿರುವುದು ದುಗ್ಗಾಣಿ ಅಣ್ಣ ।೩। (೩೮)

ದಾಸರು 'ದುಗ್ಗಾಣಿ' ಎಂಬುದನ್ನು ಇಲ್ಲಿ ಹಣ ಎಂಬುದಕ್ಕೆ ಪರ್ಯಾಯವಾಗಿ ಬಳಸಿದ್ದಾರೆ. ಹಣ ಎಂಬುದು ಎಂತಹ ಕೆಟ್ಟ ಕೆಲಸವನ್ನೂ ಮಾಡಿಸುತ್ತದೆ ಎಂಬುದನ್ನು ಇಲ್ಲಿ ತಿಳಿಸುತ್ತಾರೆ. ಜೀವನಕ್ಕೆ ಅತ್ಯವಶ್ಯಕವಾದ

ಹಣವನ್ನು ಪಡೆಯುವದಕ್ಕಾಗಿ ಜನರು ಆಚಾರಹೇಳುವುದನ್ನು ನೀಚಕೆಲಸ ಮಾಡುವುದನ್ನೂ ಮಾಡುತ್ತಾರೆ. ಮಾನ್ಯತೆ ಪಡೆಯುವುದಕ್ಕೂ ಮಾನವನ್ನೂ ಕಳೆದುಕೊಳ್ಳುವುದಕ್ಕೂ ಕಾರಣವಾದ ಈ ದುಗ್ಗಾಣಿಗಾಗಿ ಜನರು ನೆಂಟತನವನ್ನು ಹೇಳಿಕೊಂಡು ಬರುತ್ತಾರೆ. ದುಡ್ಡಿಗಾಗಿ ಮನೆ ಮನೆ ತಿರುಗಿ ಛೀ ಛೀ ಎನಿಸಿಕೊಂಡ ಅನುಭವವೂ ಕೆಲವರಿಗೆ ಆಗುತ್ತದೆ. ಒಟ್ಟಿನಲ್ಲಿ ದುಡ್ಡಿಲ್ಲದೆ ಬದುಕಲೂ ಸಾಧ್ಯವಿಲ್ಲ ಎಂಬ ಈ ಕಾಲದಲ್ಲಿ ಅದನ್ನು ಪಡೆಯುವದಕ್ಕಾಗಿ ಅನೇಕ ತಾಪಗಳನ್ನು ಅನುಭವಿಸಬೇಕಾಗಿ ಬರುವದು ಪ್ರತಿಯೊಬ್ಬ ವ್ಯಕ್ತಿಯು ಹಣದ ಮಹತ್ವವನ್ನು ತಿಳೀದು ನೀತಿಯುತವಾದ ದಾರಿಯಲ್ಲಿ ನಡೆಯಬೇಕು ಎಂಬುದನ್ನು ತಿಳಿಸುತ್ತಾರೆ. ದುಗ್ಗಾಣಿಯನ್ನು ಅಣ್ಣ ಎಂದು ಕರೆಯುತ್ತಾರೆ ಅದರ ಮೌಲ್ಯವನ್ನು ಹೆಚ್ಚಿಸಿದ್ದಾರೆ.

**ದೇಹ :** ವಿಷಯದ ವಿಚಾರಬಿಡು, ವಿಹಿತ ಕರ್ಮದ ಮಾಡು
ವೈರಾಗ್ಯ ಭಾಗ್ಯವ ಬೇಡು ॥ಪ॥
ವಿಷವೆಂದು ಕಾಮಕ್ರೋಧಗಳೆಲ್ಲ ನೀಡಾಡು
ಮಸಣಮನವೇ ಮಾಧವನ್ನ ಕೊಂಡಾಡು ॥ಅ॥
.....................
.....................
ನಂಬದಿರು ಈ ದೇಹ ಅಂಬುಗುಳ್ಳೆಯಂತೆ
ನಂಬಿ ನೀ ಕೆಡಲಿಬೇಡ
ಕೊಂಬುದವರು ಬಂದರೆ ಕೊಡರೊಂದು ರುವ್ವಿಯನು
ಅಂಬುಜಾಕ್ಷ ಪುರಂದರವಿಠಲನ್ನು ನೆನೆ ಮನವೆ. ॥೩॥ (೩೯)

ದೇಹ ಪ್ರತಿಮೆ ಅಶಾಶ್ವತವಾದ ಜೀವನವನ್ನು ಅರ್ಥೈಸುತ್ತದೆ. ಇದನ್ನು ನೀರಿನಗುಳ್ಳೆಗೆ ಹೋಲಿಸಿ ಇದು ನಾಶ ಹೊಂದುವಂತಹದು ಅದಕ್ಕಾಗಿ ಜೀವನದಲ್ಲಿ ಆಸೆ, ಮೋಹಗಳನ್ನು ಬಿಟ್ಟು ವೈರಾಗ್ಯದಿಂದ ವಿಹಿತ ಕರ್ಮಮಾಡಲು ದಾಸರು ಪ್ರಚೋದಿಸುತ್ತಿದ್ದಾರೆ. ಸಾಮಾನ್ಯವಾಗಿ ಎಲ್ಲರೂ ತಮ್ಮ ದೇಹವನ್ನು ಬೆಳೆಸಲು ರಕ್ಷಿಸಲು. ಅಲಂಕರಿಸಿ ಸಂತೋಷ ಪಡಲು ಹೆಣಗಾಡುತ್ತಾರೆ. ಆದರೆ ಈ ದೇಹ ಅಶಾಶ್ವತ ಅದನ್ನು ನಂಬಬೇಡ ಎಂದು ಎಚ್ಚರಿಸುತ್ತಿದ್ದಾರೆ. ದೇಹವನ್ನು ಮಾರಿದರೆ ಒಂದು ಕಾಸೂ ಬಾಳುವುದಿಲ್ಲ. ಯಮದೂತರು ಒಂದು ಪ್ರಾಣವನ್ನು ಸೆಳೆದುಕೊಂಡು ಹೋಗುವಾಗ ದೇಹದ ಬೆಲೆಯೆಂದು ಒಂದು ಕಾಸನ್ನೂ ಕೊಟ್ಟ ಹೋಗುವುದಿಲ್ಲ. ದೇಹದ ಭಯಂಕರ ರೂಪವನ್ನು ಇನ್ನೊಂದು ಕೀರ್ತನೆಯಲ್ಲಿ ಹೀಗೆ ಹೇಳಿದ್ದಾರೆ.

**ದೇಹ:** ಮನುಜ ಶರೀರವಿದೇನು ಸುಖ ಎನು ಸುಖ ಇದು ॥ಪ॥

ಎನು ಸುಖ ಇದ ನೆನೆದರೆ ಘೋರವಿದೇನು ಸುಖ ॥ಅ॥

ಜನನ ಮರಣ ಮಲದಾ ಕೂಪದಲ್ಲಿದ್ದು
ಅನುಭವಿಸುವುದು ಇದೇನು ಸುಖ
ತನುವಿದ್ದಾಗಲೇ ಹೃದಯ ಶೌಚದ
ಸ್ತನಗಳೆಂಬುವುದೇನು ಸುಖ ॥೧॥

ದಿನ ದಿನ ಹಸಿವು ತೃಷೆ ಘನ ಘನ ರೋಗದೊ

ಅನುಭವಿಸುವುದು ಅದೇನು ಸುಖ
ನೆನೆಯಲನಿತ್ಯ ನಿರ್ಗುಳ್ಳಿಡಯಂತಿರುತಿಪ್ಪ
ತನು ಮಲ ಭಾಂಡವಿದೇನು ಸುಖ
. . . . . . . . . . . . . . . . . . . . . ೨ (೪೦)

ದೇಹವೇ ಸರ್ವಸ್ವ ಎಂದು ಭಾವಿಸಿದವರಿಗೆ ದೇಹದ ಒಳಗೆ ತುಂಬಿರುವ ಕೊಳಕು, ರಕ್ತ ಮಾಂಸ ಮೂಳೆಗಳ ಹಂದರರ ಬಗ್ಗೆ ತಿಳಿದರೆ ಭಯಂಕರ ಅಘಾತವಾಗುತ್ತದೆ. ಆಗ ಅವರು ಎಷ್ಟು ಸಾಧ್ಯವೋ ಅಷ್ಟು ಇಂದ್ರಿಯ ಸುಖವನ್ನು ಭೋಗಿಸುವ ದಾಹದಿಂದ ದೂರವಿರುವ ಪ್ರಯತ್ನ ಮಾಡುತ್ತಾರೆ. ಅದಕ್ಕಾಗಿ ಪುರಂದರದಾಸರು ಪರಿ ಪರಿ ವಿಧದಿಂದ ದೇಹವು ಅನಿತ್ಯವೆಂದು. ಇದು ಕೊಳೆಗಳ ಮಡಕೆ ಅಥವಾ ಮಲಭಾಂಡವೆಂದು ಕರೆದು ಸತ್ಯದರ್ಶನ ಮಾಡಿಸುತ್ತಿದ್ದಾರೆ. ಹುಟ್ಟಿನಿಂದ ಸಾಯುವವರೆಗೆ ದಿನವೂ ಹಸಿವು ಬಾಯಾರಿಕೆ, ರೋಗಗಳಿಂದ ಬಳಲುವುದರಲ್ಲಿ ಎನು ಸುಖ? ಎಂದು ಎಲ್ಲರನ್ನೂ ಪ್ರಶ್ನಿಸುತ್ತಿದ್ದಾರೆ.

**ದೇಹ :** ರಾಮ ರಾಮ ರಾಮ ರಾಮ ರಾಮ ಎನ್ನಿರೋ ರಘು ಪ।
ರಾಮನ ನಾಮವನುದಿನ ಪಾಡಿರೋ ಅ।

ತುಂಬಿದ ಪಟ್ಟಣಕ್ಕೆ ಒಂಬತ್ತು ಬಾಗಿಲು
ಸಂಭ್ರಮದರಸುಗಳೈದು ಮಂದಿ
ಢಂಬಕತನದಿಂದ ತಿರುಗು ಕಾಯದಿ
ನಂಬಿಕೆ ಇರಿಸಿ ಕೆಡಬೇಡಿರೋ ೧।

ನೆಲೆಯಿಲ್ಲದೀ ಕಾಯ ಎಲುವಿನಹಂದರ
ಬಲಿದು ಹೊದ್ದಿಸಿದ ಚರ್ಮದ ಹೊದ್ದಿಕೆ
ಮಲಮೂತ್ರಗಳು ಮಾಂಸ ರಕ್ತದ ರಾಶಿಯು
ಹೊಲಸು ದೇಹವ ನೆಚ್ಚಿಕೆಡಬೇಡಿರೋ ೨।

ತೊಗಲು ಬೊಂಬೆಯು ಮಾಡಿ ಜಗದೊಳು ನಿಲ್ಲಿಸಿ
ನೆಗೆದಾಡಿಸಿ ಹೊತ್ತು ಹೋಗುವಂತ
ಒಗುಮಿಗೆಯಿಂದಲಿ ಉಬ್ಬುವ ಕಾಯವ
ಹಗಲು ಇರುಳು ನೆಚ್ಚಿ ಕೆಡಬೇಡಿರೋ ೩।
. . . . . . . . . . . . . . . . . . . .
. . . . . . . . . . . . . . . . . . . . (೪೧)

ದೇಹವು ಅಶಾಶ್ವತ. ಈ ಶರೀರ ಇಂದ್ರಿಯಗಳ ಮನ ಬುದ್ಧಿ ಮತ್ತು ಜೀವನವನ್ನು ತನ್ನ ಆತ್ಮೋನ್ನತಿ ಯನ್ನು ಮಾಡಿಕೊಳ್ಳುವ ಸಾಧನವಾಗಿ ಮಾಡಿಕೊಳ್ಳಬೇಕು. ಶರೀರದ ಮೇಲೆ ಭೋಗ ವಸ್ತುಗಳ ಮೇಲೆ ವೈರಾಗ್ಯವನ್ನು ಸಾಧಿಸಬೇಕಾದರೆ ದೇಹದ ವಸ್ತು ಸ್ಥಿತಿಯನ್ನು ತಿಳಿಯಬೇಕು ಅದಕ್ಕಾಗಿ ದಾಸರು ಇದನ್ನು ಮಲ–ಮೂತ್ರ, ರಕ್ತ ಮಾಂಸ ತುಂಬಿದ, ಚರ್ಮದ ಹೊದ್ದಿಕೆ ಹೊದಿಸಿದ ಈ ಕಾಯವು ತೊಗಲು ಬೊಂಬೆಯಂತೆ ಎಂದಿದ್ದಾರೆ. ಬೊಂಬೆಯಾಟದಲ್ಲಿ ಬೊಂಬೆಗಳನ್ನು ತಂದು ಆಟವಾಡಿಸಿ ಹೋಗುವಂತೆ ಈ ದೇಹವು ಜೀವನದಲ್ಲಿ ತನ್ನ ಪಾತ್ರವನ್ನು ವಹಿಸಿ ಹೊರಟುಹೋಗುವುದು. ಇದು ತುಂಬಿದ ಪಟ್ಟಣದಂತೆ, ಇದಕ್ಕೆ ಒಂಬತ್ತು

ಬಾಗಿಲುಗಳು ಅವು ಯಾವವೆಂದರೆ, ಕಣ್ಣುಗಳೆರಡು, ಕಿವಿಗಳೆರಡು, ಮೂಗಿನ ಹೊಳ್ಳೆಗಳೆರಡು, ಬಾಯಿ, ಮೂತ್ರದ್ವಾರ, ಮಲದ್ವಾರ ಹೀಗೆ ಒಂಬತ್ತು ಬಾಗಿಲುಗಳು ಅದಕ್ಕಾಗಿ ಇದನ್ನು 'ಪುರ' ಎಂದಿದ್ದಾರೆ. ಸಂಸಾರವೆಂಬ ಚಕ್ರದಲ್ಲಿ ತಿರುಗಾಡುವ ಈ ದೇಹದ ಮೇಲೆ ನಂಬಿಕೆ ಇರಿಸಿ ನಿವು ಕೆಡಬೇಡಿರೆಂದು ದಾಸರು ಎಚ್ಚರಿಸುತ್ತಿದ್ದಾರೆ. ರಾಮ ನಾಮವನ್ನು ಜಪಿಸಿ ದುರಿತಪರ್ವತಗಳನ್ನೆಲ್ಲ ಪರಿಹಾರ ಮಾಡಿಕೊಳ್ಳಿರಿ ಎಂದು ಉಪದೇಶಿಸುತ್ತಾರೆ. ಈ ಶರೀರದ ಭ್ರಾಂತಿ ಬಿಟ್ಟು ವಾಸುದೇವನ ನೆನೆದು ಸುಖಿಯಾಗು ಎಂದು ಈ ಕೀರ್ತನೆಯಲ್ಲಿ ಹೀಗೆ ಹೇಳಿದ್ದಾರೆ.

**ದೇಹ :** ವಾಸುದೇವನ ನೆನೆದು ಸುಖಿಯಾಗು ಮನವೆ ಪ।

ಈ ಶರೀರದ ಭ್ರಾಂತಿ ಇನ್ನೇಕೆ ಮನವೆ ಅ।

ದಂತಗಳು ಸಡಲಿದವು ಧಾತುಗಳು ಕುಂದಿದವು
ಕಾಂತೆಯರು ಜರಿದು ಓಕರಿಸುತಿಹರು
ಚಿಂತೆ ಇನ್ನೇತಕೆ ಬಯಲಾದ ದೇಹಕ್ಕೆ
ಇಂತೆಂದು ತಿಳಿದು ಶ್ರೀಕಾಂತನ್ನ ನೆನೆ ಮನವೆ ೧।

ಕಾಲು ಜವೆಗುಂದಿತು ಕಂಗಳ ದೃಷ್ಟಿ ಹಿಂಗಿತು
ಮೇಲೆ ಯೌವನ ಪೋಗಿ ಜರೆ ಬಂದಿತು
ಕಾಲ ಕರ್ಮಗಳು ಸಂಧಿಸಿದ ಸಮಯದಲಿ
ಬಾಲ ತನುವಿನ ಆಸೆಯೆಲ್ಲಹುದೋ ಮನವೆ ೨।

ನೀರ ಬೊಬ್ಬುಳಿಯಂತೆ ನಿತ್ಯವಲ್ಲವೋ ದೇಹ
ಧಾರುಣಿ ಧನ ಸ್ತ್ರೀಗೆ ಮರುಳಾಗ ಬೇಡ
ನೀರಜನಾಭ ಶ್ರೀ ಪುರಂದರವಿಠಲನ
ಬಾರಿ ಬಾರಿಗೆ ನೆನೆದು ಸುಖಿಯಾಗೋ ಮನುಜ ೩। (೪೨)

ನೀರಮೇಲಿನ ಗುಳ್ಳೆಯು ಒಡೆದು ಹೋಗುವಂತೆ ಈ ದೇಹವು ವಿನಾಶ ಹೊಂದುವಂತಹದು. ದೇಹವು ಈ ದಿನ ನೆಟ್ಟಗಿದ್ದು ಶಕ್ತಿಯುತವಾಗಿದ್ದರೆ ಆಯುಷ್ಯ ಕಳೆದಂತೆ ಅದು ಕುಗ್ಗುತ್ತದೆ, ಹಲ್ಲುಗಳು ಸಡಿಲವಾಗುವವು. ಶರೀರದ ಸಪ್ತಧಾತುಗಳಾದ ರಸ, ರಕ್ತ, ಮೇಧಸ್ಸು, ಮೌಂಸ, ಮಜ್ಜಾ, ಅಸ್ಥಿ, ಶುಕ್ರ ಮುಂತಾದುವುಗಳು ಕುಂದುತ್ತವೆ. ಕಾಲು ಶಕ್ತಿಗುಂದಿ ಕಂಗಳ ದೃಷ್ಟಿಯು ಕಡಿಮೆಯಾಗುವುದು, ಹೆಣ್ಣು, ಹೊನ್ನು, ಮಣ್ಣುಗಳಿಗೆ ಮರುಳಾಗಿ ಕಳೆದ ಈ ಯೌವನವು ಹೋಗಿ ವೃದಾಪ್ಯವು ಒದಗುವುದು. ವೃದ್ಧಾಪ್ಯದಲ್ಲಿ ಪರರ ಆಧೀನವಾಗಿ ಬಾಳುವಾಗ ಪತ್ನಿ, ಮಕ್ಕಳ ವ್ಯಂಗದ ಮಾತುಗಳನ್ನು ಕೇಳ ಬೇಕಾಗಬರುವುದು. ಒಂದು ದಿನ ಬೆಂಕಿಯಲ್ಲಿ ಸುಟ್ಟು ಬೂದಿಯಾಗುವ ಈ ದೇಹದ ಮೇಲಿನ ಅಭಿಮಾನವನ್ನು ತಗ್ಗಿಸಿ ಪುರಂದರವಿಠಲನ ನೆನೆದು ಸುಖಿಯಾಗು ಎಂದು ಪುರಂದರದಾಸರು ಭೋದಿಸುತ್ತಿದ್ದಾರೆ.

**ದೇಹ :** ಹರಿನಾರಾಯಣ ಜಯ ಪುರುಷೋತ್ತಮ
ಹರಿನಾರಾಯಣ ಎನು ಮನವೆ ಪ।

ದುರಿತಭಯವನುತ್ತರಿಸಬೇಕಾದರೆ

ಸಿರಿಯರಸನ ಸ್ಮರಿಸಲಿ ಮನವೆ ೫।

. . . . . . . . . . . . . . . . . . . . .

ಕೂಳಿನ ಬಲದಲಿ ಬೆಳೆದ ಕಾಯದ
ಬಾಳುವೆಯೆಂಬುದು ಸ್ಥಿರವಲ್ಲ
ಮಾಳಿಗೆ ಮನೆಯುಪ್ಪರಿಗೆಯು ಕೋಣೆಯು
ಪೌಳಿಗಳಲ್ಲಲ್ಲಿಹುದಲ್ಲ
ಜಾಳಿಗೆ ತುಂಬಿದ ಹೊನ್ನಾಭರಣವು ನಾಳಿಗೆ ಸಂಗಡ ಬಾಹುದಲ್ಲ
ಕಾಲಿನ ಬಾಧೆಯ ಕಳೆಯಬೇಕಾದರೆ
ನಾಲಿಗೆಯಲಿ ನುಡಿ ಹರಿ ಸೊಲ್ಲ

. . . . . . . . . . . . . . . . . . . . . ೭। (೪೩)

ದೇಹವು ಶಾಶ್ವತವಾದದಲ್ಲ ಎಂಬ ಉಪದೇಶವನ್ನು ದಾಸರು ಒತ್ತಿಹೇಳುತ್ತಾ ಅದರ ಮಹತ್ವವನ್ನು ಹೆಚ್ಚಿಸಿದ್ದಾರೆ. ಪ್ರತಿಯೊಬ್ಬ ಮನುಷ್ಯನಿಗೆ ಆಗಬೇಕಾದುದು ಹರಿಯೇ ಸರ್ವೋತ್ತಮನೆಂಬ ಜ್ಞಾನ ದೇಹಾಭಿಮಾನದ ನಿಷ್ಫಲತೆಯ ಪೂರ್ಣಜ್ಞಾನ ಅದಕ್ಕಾಗಿ ಆಹಾರದ ಬಲದಲ್ಲಿ ಬೆಳೆದು ಈ ದೇಹವು ಮಾಳಿಗೆ ಮನೆ ಹೊನ್ನಾಭರಣಗಳು ಯಾವುದು ಸಾವಿನ ನಂತರ ಸಂಗಡ ಬರುವುದಿಲ್ಲ ಎಂಬ ಸತ್ಯವನ್ನು ತಿಳಿಸುತ್ತಾ ಹರಿಸ್ಮರಣೆ ಮಾಡಲು ತಿಳಿಸುತ್ತಾರೆ. ಹರಿನಾಮಸ್ಮರಣೆ ಕಷ್ಟಗಳನ್ನು, ಭಯವನ್ನೂ, ದೂರ ಮಾಡುತ್ತದೆ ಎಂಬ ಸಮಾಧಾನದ ಮಾತನ್ನೂ ಹೇಳುತ್ತಾರೆ ದೇಹದ ಅಸ್ಥಿರತೆಯನ್ನೂ ಅಲ್ಪತೆಯನ್ನು ಇನ್ನೂ ವಿವರವಾಗಿ ಹೀಗೆ ಹೇಳುತ್ತಾರೆ.

**ದೇಹ:** ಯಾರು ಬರುವರು ನಿನ್ನ ಹಿಂದೆ ಇತ್ತ ಪ।
ಬಾರೆಂದು ಯಮ ಭಟರು ಸೆಳೆದೊಯ್ಯುವಾಗ ಅ।

ಸತಿ ಸುತಾದಿಗಳು ಬರುವದಿಲ್ಲ ನಿನ್ನ
ಹಿತವಾದ ಬಂಧು ಸ್ನೇಹಿತರು ಬರುವದಿಲ್ಲ
ಕ್ಷಿತಿಮಾನ್ಯ ಕ್ಷೇತ್ರ ಬರುವುದಿಲ್ಲ ಲಕ್ಷ್ಮಿ
ಪತಿಯೊಬ್ಬನಲ್ಲದೆ ಗತಿಯೊಬ್ಬರಿಲ್ಲ ೧।

ತುರಗ ಗಜಗಳು ಬರುವುದಿಲ್ಲ ನಿನ್ನ
ಮೆರವಣಿಗೆ ಮಾಡುವ ತನು ನಿನ್ನದಲ್ಲ
ನರಪತಿಯ ಸೇವೆ ಸ್ಥಿರವಲ್ಲ ನರ
ಹರಿಯೊಬ್ಬನಲ್ಲದೆ ಗತಿಯೊಬ್ಬರಿಲ್ಲ ೨।

. . . . . . . . . . . . . . . . . . . . .

ಈ ದೇಹ ನೀ ಬಿಟ್ಟ ಬಳಿಕ ನಿನ್ನವರು
ಬೀದಿಯಲಿ ನಿಂತು ಬೊಬ್ಬೆ ಹಾಕುವರು
ಬಾಧಗೋಸ್ಕರ ಬೆಂಕಿ ಹಾಕಿ ಸುಡುವರು ನಿಂತ
ಭೂದಿಯ ನೀರೊಳು ಬೆರೆಸಿ ಚೆಲ್ಲುವರು ೪।

. . . . . . . . . . . . . . . . . . . . . (೪೪)

ದೇಹದ ಮೇಲಿನ ಅಭಿಮಾನಕ್ಕೆ ಎಚ್ಚರಿಕೆಯ ಅಗತ್ಯವಿದೆ. ಇಲ್ಲವಾದಲಿ ಈ ಅಭಿಮಾನ ಅತೀ ಯಾದರೆ ಮನೋದ್ವೈಹಿಕ ರೋಗಗಳಿಂದ ಅತಿಯಾದ ಬಾಧೆಯನ್ನು ಅನುಭವಿಸಲು ಕಾರಣವಾಗುತ್ತದೆ, ಮರಣದ ನಂತರದ

ದೃಶ್ಯವನ್ನು ದೇಹ ಪ್ರತಿಮೆಯಲ್ಲಿ ತುಂಬಿ ವಿವರಣೆಯನ್ನು ನಿಡುತ್ತಾ ಒಂದೊಂದು ನುಡಿಯಲ್ಲಿ ಪ್ರತಿಯೊಬ್ಬನ ಮನಸ್ಸನ್ನು ಪ್ರವೇಶಿಸಿ ಭಗವಂತನೆಡೆನೆ ಜೀವಿಯ ಲಕ್ಷವನ್ನು ಸೆಳೆಯುವ ಉದ್ದೇಶ ದಾಸರಿಗಿದೆ. ಸುಖ ದುಃಖಗಳಿಗೆ ಕಾರಣವಾದ ಪತ್ನಿ ಪುತ್ರರು ಬಂಧುಗಳು, ಸ್ನೇಹಿತರು, ಆನೆ, ಕುದುರೆಗಳು, ಧನ, ಧಾನ್ಯಗಳು ಬಂಗಾರ-ಮನೆ ಯಾವುದೂ ಮರಣದನಂತರ ಜೀವಿಯ ಜೊತೆ ಬರು ವುದಿಲ್ಲ. ಪ್ರೀತಿಯಿಂದ ಸಾಕಿ ಸಲುಹಿದ ತಂದೆ-ತಾಯಿಗಳೂ ಜೊತೆ ಬರುವದಿಲ್ಲ. ಜೀವ ಹೋದ ನಂತರ ಈ ದೇಹವನ್ನು ಬೀದಿಯಲ್ಲಿಟ್ಟು ಅಳುವರು ನಂತರ ಬೆಂಕಿ ಹಾಕಿ ಸುಟ್ಟು ಬೂದಿಯ ನೀರೊಳ ಬೆರೆಸಿ ಚೆಲ್ಲುವರು ಎಂಬ ಸತ್ಯವನ್ನು ಶಬ್ದಗಳ ಮೂಲಕ ಕಣ್ಣಿನ ಮುಂದೆ ಕಾಣುವಂತೆ ದೃಶ್ಯಗೊಳಿಸುತ್ತಾ ದೇಹದ ಮೇಲಿನ ಅಭೀಮಾನ ಸಲ್ಲದು ಎಂಬ ಸಂದೇಶ ನಿಡುತ್ತಿದ್ದಾರೆ ಇನ್ನಾದರೂ ಪುರಂದರವಿಠಲ ನೀನೆ ಗತಿ ಎಂದು ಕೂಗು ಎಂದು ಹೆಳುತ್ತಾ ಭಕ್ತಿಯ ಪಥಕ್ಕೆ ಜನರನ್ನು ಸೆಳೆಯುತ್ತಿದ್ದಾರೆ.

**ದೇಹ :**

ಈ ತನುವ ನಂಬಲು ಬೇಡೊ ಜೀವವ ಪ।
ಅನುವಾಗಿ ನಿನ್ನಂಗಕೆ ಕೆಲಕಾಲ ತೋರುವುದೊ
ಅನುವಿಲ್ಲದಾಗ ಈ ತನುವೆ ನಿನಗೆ ವೈರಿ ಅ।

ಜರೆಯು ಮರಣದಿಂದ ಭರಿತವಾದುದೀ ಕಾಯ
ಸ್ಥಿರವೆಂದು ನಂಬಿ ನೀ ಮರುಳಾಗಬೇಡ ೧।

ಧನಧಾನ್ಯ ಪಶು ಪತ್ನಿ ಸ್ಥಿರವೆಂದು ತಿಳಿದು
ಮನುಮಥನಯ್ಯನ ಮರೆಯದೆ ಮನವೆ ೨।

ಶರಣೆಂದರೆ ಕಾವ ಗರುಡಕೇತನ ನಮ್ಮ
ಪುರಂದರವಿಠಲನ್ನ ಮರೆಯದ ಮನವೆ ೩। (೪೫)

ಪುರಂದರದಾಸರ ರಚನೆಗಳು ಬದುಕಿನ ಶೋಧನೆಗಳಾಗಿವೆ. ಸಮಾಜದಲ್ಲಿ ಅಶಾಂತಿ ತಲೆ ದೋರಲು ಅಭಿಮಾನ, ಮೋಹ, ಹೆಣ್ಣು ಹೊನ್ನು ಮಣ್ಣುಗಳೇ ಕಾರಣ ಎಂಬ ಸತ್ಯ ಅವರಿಗೆ ತಿಳಿದಿತ್ತು, ಅವರು ಸಮಸ್ಯೆಯ ಮೂಲವನ್ನೇ ಶೋಧಿಸಿ ಅದರಿಂದ ಸಮಾಜದ ಸಮಸ್ಯೆಯನ್ನು ಬಿಡಿಸಲು ಯತ್ನಿಸಿ ದರು ಒಬ್ಬ ಮಾನವನ ಸುಧಾರಣೆ ಒಂದು ಸಮಾಜದ ಸುಧಾರಣೆಗೆ ಮೈಲಿಗಲ್ಲಾಗವುದು ಸರ್ವಕಾಲದ ಲ್ಲಿಯಾ ವಿದಿತ ಸತ್ಯವಾಗಿದೆ. ಅದಕ್ಕಾಗಿ ಈ ದೇಹವನ್ನು ನಂಬ ಬೇಡ, ಬಾಲ್ಯ, ಯೌವನ, ವೃದ್ಧಾಪ್ಯಗ ಳಿಂದ ಕೂಡಿದ ಈ ದೇಹವು ಕೆಲವು ಕಾಲ ಅನುಕೂಲವಾದಂತೆ ಕಾಣುವುದು. ವೃದ್ಧಾಪ್ಯ ಆವರಿಸಿದಂತೆ ತನ್ನ ಮನಸ್ಸಿನ ಮಾತಿಗೆ ದೇಹವು ತನಗೆ ಅಹಿತವಾಗಿ ಅನಾನುಕೂಲವಾಗಿ ತೋರುವುದು, ಧನ, ಧಾನ್ಯ ಪಶುಪತ್ನಿಯರು ಅಸ್ಥಿರ ಎಂದು ತಿಳಿದು ಗರುಡಧ್ವಜನಾದ ಪುರಂದರವಿಠಲನನ್ನು ನೆನೆದರೆ. ಅವನು ಮರೆ ಯದೇ ಕಾಯ್ವನು ಎಂಬ ಸಂದೇಶ ನೀಡುತ್ತಾರೆ.

**ದೇಹ :**

ಯಾತಕೆ ನೋಡುತಿ ಯಮನ ಪಾಶಕೆ ಬೀಳುತಿ ಪ।
ನಾಥ ನಾರಾಯಣ ಹರಿಕೃಷ್ಣ ಎಂಬುವ

ಕೀರ್ತನೆಯನು ಕೇಳಿ ದೂಷಿಸಿ ನಗುತಿ ॥೨॥

ಮೂಢತನದಿ ಮಲ ಮೂತ್ರದ ಭಾಂಡಕೆ ಬಹು ಶೃಂಗಾರವ ಮಾಡುತಿ
ಗಾಡಾಂಧಕಾರದ ಮದ ಉನ್ಮತ್ತದಿ ಕವಿದು ಮುಗ್ಗುಂಡಿಗೆ ಬೀಳುತಿ
ಪಾಡಿ ಪೊಗಳಿ ನಿನ್ನ ಬದಿಯಲ್ಲರುವವರು ಕಾದುಕೊಂಡಿಹರೆಂದು ನೋಡುತಿ
ಪೀಡಿಸಿ ಕಾಲನ ದೂತರು ಎಳೆವಾಗ ಬೇಡಿ ನೀ ಭಯದಲಿ ಕೂಗುತಿ ॥೧॥

ಖಂಡ ಮೌಂಸಗಳು ತುಂಬಿದ ದೇಹವ ಕಂಡು ಸಂತೋಷದಿ ಉಬ್ಬುತಿ
ಕಂಡ ಕಂಡುದಾಪೇಕ್ಷಿಸಿ ಮನದಲಿ ಉಂಡೇನೆನ್ನುತ ಹಿಗ್ಗುತಿ
ಕಂಡುಕೊಳ್ಳದೆ ಮುಂದಿನ ಮಾರ್ಗವ ಪುಂಡಾಟಗಳನು ಮಾಡುತಿ
ಕಂಡ್ಯಮದೂತರು ಕೊಂಡೊಯ್ದು ನಿನ್ನನ್ನು ದಂಡೀಸುವಾಗ ಕಣ್ಣಣ್ಬಿಡುತ್ತಿ ॥೨॥

ದುಷ್ಟ ಯಮದೂತರು ಕಟ್ಟಿ ಎಳೆಯಲು ಬಿಟ್ಟು ಪೋಪುದೀ ಪ್ರಾಣವು
ಕಟ್ಟಿದ ಮನೆಯನು ಬಿಟ್ಟು ಹೋಗುವಂತೆ ಬಿಟ್ಟು ಪೋಪುದೀ ಜೀವವು
ಒಟ್ಟಿದ ಕಸವು ಸುಟ್ಟು ಹೋಗುವ ಹಾಗೆ ಸುಟ್ಟು ಪೋಪುದೀ ದೇಹವು
ಹುಟ್ಟಿದ ಮಕ್ಕಳು ಕೊಟ್ಟಿಗೆ ಪಶುಗಳು ಪೆಟ್ಟಿಗೆ ನಗ ಬೆನ್ನಟ್ಟಿಬಾರವು ॥೩॥
......................................
...................................... (೪೬)

ಇಲ್ಲಿ ಮಲ ಮೂತ್ರದ ಭಾಂಡವು ದೇಹವನ್ನು ಸಂಕೇತಿಸುತ್ತದೆ, ಇದ್ದಾಗ ನಾನು, ನನ್ನದು ಎಂದು ಅಹಂಕಾರದಿಂದ ಮೆರೆಯುವ ಮಾನವ ಸತ್ತಾಗ ಯಾವುದನ್ನೂ ಒಯ್ಯಲಾರ. ಅದಕ್ಕಾಗಿ ಸತ್ತ ಮೇಲೆ ಕವಡೆ ಕಾಸೂ ಬೆಲೆಬಾಳದ ಈ ದೇಹದ ಮೇಲಿನ ಪ್ರೀತಿಯನ್ನು ಬಿಡಲು ದಾಸರು ಪ್ರೇರೆಪಿಸುತ್ತಿದ್ದಾರೆ. ಲೋಕನೀತಿಯನ್ನು ಹೇಳುತ್ತಾ ಊರೂರು ಸುತ್ತುವ ಪುರಂದರದಾಸರನ್ನು ನೋಡಿ ಅವರ ಕೀರ್ತನೆ ಯನ್ನು ಕೇಳಿ ದೂಷಿಸಿ ನಕ್ಕ ಕೆಲವರನ್ನು ಉದ್ದೇಶಿಸಿ, ಯಾತಕೆ ಅಹಂಕಾರ ಪಡುತ್ತಾ ಈ ದೇಹವನ್ನು ನೋಡುತ್ತಿ ಎಂದು ಕೆಳುತ್ತಿದ್ದಾರೆ. ಮಲಮೂತ್ರದ ಭಾಂಡ (ಪಾತ್ರೆ) ವಾದ ಈ ದೇಹದ ಬಗ್ಗೆ ಅಭಿಮಾನ ಬೇಡವೆಂದು ಹೇಳುತ್ತಿದ್ದಾರೆ. ಪರಿಪರಿಯಾಗಿ ದೇಹವನ್ನು ಶೃಂಗರಿಸಿ ಅಪೇಕ್ಷೆಯಿಂದ ಬಗೆ ಬಗೆಯಾದ ಆಹಾರವನ್ನು ಸೇವಿಸಿ ಖಂಡ ಮಾಂಸಗಳು ತುಂಬಿದ ದೇಹವ ಕಂಡು ಸಂತೋಷದಿಂದ ಉಬ್ಬುತಿ ಆದರೆ ಯಮದೂತರು ಕೊಂಡೊಯ್ದು ನಿನ್ನನ್ನು ದಂಡಿಸುವಾಗ ಕಣ್ಣಣ್ಬಿಡುತಿ ಎಂದು ಎಚ್ಚರಿಸುತ್ತಿದ್ದಾರೆ. ಮೊದಲು ಸಂಸಾರಿಗಳಾಗಿ ನಂತರ ದಾಸತ್ವ ಸ್ವೀಕರಿಸಿದ ದಾಸರು ಜೀವನ ತ್ಯಾಗ ಭೋಗಗಳೆರಡರ ಅನುಭವವನ್ನೂ ಹೊಂದಿದೆ. ಇಲ್ಲಿ ಮಾನವ ಜನ್ಮವನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳಬಾರದು ಎಂದು ಮಾರ್ಮಿಕವಾಗಿ ಹೇಳಿದ್ದಾರೆ. ಕಟ್ಟಿದ ಮನೆಯನ್ನು ಬಿಟ್ಟು ಹೋಗುವಂತೆ ಈ ದೇಹವನ್ನು ಬಿಟ್ಟು ಜೀವನವು ಹೊರಟು ಹೋದಾಗ ಒಟ್ಟಿದ ಕಸವು ಸುಡುವಂತೆ ಸುಟ್ಟು ಹೋಗುವುದು. ದಾಸರು ಸಾಧನಾ ಮಾರ್ಗಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ, ಸಕಲವನ್ನು ತಿಳಿದುಕೊಳ್ಳಲು ಜ್ಞಾನೇಂದ್ರಿಯಗಳಿವೆ. ಒಳ್ಳೆಯ ಕಾರ್ಯಗಳನ್ನು ಮಾಡಲು ಕರ್ಮೇಂದ್ರಿಯಗಳಿವೆ. ಹೀಗಾಗಿ ದೇಹವನ್ನು ಸಾಧನಾ ಕಾರ್ಯಕ್ಕೆ ಉಪಯೋಗಿಸಬೇಕು ಪುರಂದರವಿಠಲನ ನೆನೆದು ಮುಕ್ತಿ ಬಟ್ಟೆಯ ಹೊದ್ದುಕೊಳ್ಳಬೇಕೆಂದು ಜನ ಸಮುದಾಯಕ್ಕೆ ಕರೆಕೊಡುತ್ತಾರೆ.

**ದೇಹ :** ತನುವೆಂಬ ದೊಡ್ಡ ದೋಣಿಯಲಿ
ಹರಿನಾಮವೆಂಬ ಬಂಡವ ತುಂಬಿ
ವ್ಯವಹಾರವನು ಮಾಡುವೆಯಯ್ಯ
ಇಂದ್ರಿಯಗಳೆಂಬ ಸುಂಕದವರಡ್ಡಾಗಲು
ಮುಕುಂದನ ಮುದ್ರೆಯನೆ ತೋರಿ
ಹೊಳೆಯ ದಾಟುವೆನಯ್ಯ
ಪುರಂದರವಿಠಲನಲ್ಲಿಗೆ ಪೋಗಿ
ಮುಕುತಿ ಸುಖವೆಂಬ ಲಾಭಗಳಿಸುವೆನಯ್ಯ (೪೭)

ದೋಣಿಯು ದೇಹವನ್ನು ಸಂಕೇತಿಸುತ್ತದೆ. ದೇಹವನ್ನು ಸಾಧನೆಗೆ ದೋಣಿಯನ್ನಾಗಿ ಉಪಯೋಗಿಸಿ ಮುಕ್ತಿ ಸುಖವೆಂಬ ಲಾಭಗಳಿಸುವ ದಾರಿಯನ್ನು ಪುರಂದರದಾಸರು ಇಲ್ಲಿ ತೋರು ತ್ತಿದ್ದಾರೆ. ಆಧ್ಯಾತ್ಮ ವಿಚಾರಗಳಲ್ಲಿ ಮುಕ್ತಿಯಷ್ಟೇ ಅದರ ಸಾಧನೆಗೆ ಮಹತ್ವವಿದೆ. ನಿತ್ಯ ಮಾನವ ಶರೀರದ ಸಾರ್ಥಕತೆಯನ್ನು ಕಂಡುಕೊಳ್ಳುವತ್ತ ತೊಡಗಿದ ಹರಿದಾಸರ ಸಾಹಿತ್ಯ ಸಾಧನಾ ಮಾರ್ಗದ ಬಗ್ಗೆಯೇ ಸಾಕಷ್ಟು ತಿಳಿಸುತ್ತದೆ. ದೇಹವೆಂಬ ದೋಣಿಯಲಿ ಹರಿನಾಮಸ್ಮರಣೆಯೆಂಬ ಬಂಡವ ತುಂಬಿ ಸಂಸಾರವೆಂಬ ಹೊಳೆದಾಟಿ ಮುಕ್ತಿ ಲಾಭ ಪಡೆಯಲು ಹೊರಟಿದ್ದಾರೆ ಪುರಂದರದಾಸರು. ದಾರಿಯಲ್ಲಿ ಸುಂಕದವರು ಅಡ್ಡಗಟ್ಟಿದರೆ ಮುಕುಂದನ ಮುದ್ರೆ ತೋರಿ ಸಾಗುವೆನೆನ್ನುತ್ತಿದ್ದಾರೆ. ದೇಹವೇ ದೋಣಿಯಾಗಿ, ಹರಿ ನಾಮವೇ ವ್ಯಾಪಾರದ ವಸ್ತುವಾಗಿ ಚಿತ್ರಿಸಿ ಅರ್ಥವಿಸ್ತರಣೆಯನ್ನು ಮಾಡುತ್ತಾ ಹೋಗುವ ಈ ಉಗಾಭೋಗವು ಮುಕ್ತಿ ಹೊಂದುವ ಬಗ್ಗೆ ಗಾಢವಾಗಿ ಚಿಂತಿಸುವಂತೆ ಮಾಡುತ್ತದೆ.

ಗುರಿಯಿರದ ದಾರಿ ವ್ಯರ್ಥ, ದಾರಿಯಿರದ ಗುರಿ ಅನರ್ಥ ಭಾರತೀಯ ತತ್ವ ಶಾಸ್ತ್ರದಲ್ಲಿ ಜೀವನು ತನ್ನ ಸ್ವರೂಪಾನಂದವನ್ನು ಪಡೆಯುವುದೇ ಮುಕ್ತಿ ಭಗವಂತನ ಅನುಗ್ರಹವೊಂದೇ ಮುಕ್ತಿಯ ಉಪಾಯ. ಜ್ಞಾನ ವೈರಾಗ್ಯಗಳಿಂದೊಡ ಗೂಡಿದ ಭಕ್ತಿಯೇ ಅವನೊಲುಮೆಯ ಯುಕ್ತಿ ಅಂತಹ ಭಕ್ತಿಯ ಸಾಧನೆ ಅಷ್ಟು ಸುಲಭವಲ್ಲ. ಅದಕ್ಕೆ ನಿರಂತರ ಪ್ರಯತ್ನ ನಡೆಯಬೇಕು. ಗೊತ್ತು ಗುರಿಯಿಲ್ಲದ ಯತ್ನವೂ ವ್ಯರ್ಥ,. ಸಾಧನೆಯ ಮಾರ್ಗದಲ್ಲಿ ಅಂತಃಕರಣ ಶುದ್ಧಿಗೆ ತುಂಬ ಮಹತ್ವವಿದೆ. ರಾಗ–ದ್ವೇಷ ತುಂಬಿದ ಮನಸ್ಸು ಭಗವಂತನತ್ತ ಹರಿಯಲಾರದು ಓಗೆ ಹರಿನಾಮಸ್ಮರಣೆ ಮಾಡಲು ಜಾತಿ, ಮತ, ಕುಲ ಬೇಧ ಸಲ್ಲದು ಎಂದು ದಾಸರು ಹೇಳುತ್ತಾರೆ. ಮುಕ್ತಿಯ ಮಾರ್ಗದಲ್ಲಿ ಸಾಧಕರಿಗೆ ತೋರಿದ ಒಂದು ಸುಲಭವಾದ ಉಪಾಯ ನಾಮಸ್ಮರಣೆ ಎಂಬುದನ್ನೂ ತಿಳಿಸುತ್ತಾರೆ.

**ದೇಹ :** ನೀರಮೇಲಣ ಗುಳ್ಳೆಯಂತೆ ಈ ದೇಹ
ನಿಮಿಷವೋ ನಿಮಿಷಾರ್ಧವೂ ಕಾಣಬಾರದು
ಹಾರಲೇಕೆ ಪರಧನಕೆ ಪರಸತಿಗೆ
ಹಾರುವನ ಕಟ್ಟ ಬೇಕು ಹಾರುವನ ಕುಟ್ಟ ಬೇಕು.
ಹಾರುವರನ ಕಂಡರೆ ಕೆನ್ನೆಯ ಮೇಲೆ ಹಾಕಬೇಕು
ಊರೊಳಗೆ ಐದು ಮಂದಿ ಹಾರುವರೈದಾರೆ
ನೀನೆ ವಿಚಾರಿಸೋ ಪುರಂದರವಿಠಲ. (೪೮)

ಮಾನವನ ದೇಹವು ನಶ್ವರವಾದುದು ಶೀಘ್ರವಾಗಿ ಬಿದ್ದು ಹೋಗುವಂತಹದು ಈ ದೇಹವು ಬಿದ್ದು ಹೋಗುವ ಮೊದಲೆ ಭಗವಂತನನ್ನು ಭಜಿಸಿ ಸುಖಿಯಾಗಬೇಕು ಎಂಬ ಉದ್ದೇಶದೊಂದಿಗೆ ಈ ಜನ್ಮದಲ್ಲಿ ಇಂದ್ರಿಯಗಳನ್ನು ನಿಗ್ರಹದಲ್ಲಿಟ್ಟುಕೊಂಡು ಸಾತ್ವಿಕ ಮಾರ್ಗವನ್ನು ಅನುಸರಿಸಬೇಕು ಎಂಬ ಅರ್ಥದಲ್ಲಿ ಈ ಉಗಾಭೋಗ ಮೂಡಿಬಂದಿದೆ.

ಹಾರುವರೆಂದರೆ ಬ್ರಾಹ್ಮಣರು ಪರಧನ, ಪರಸತಿಗೆ ಆಸೆ ಪಡುವ ಬ್ರಾಹ್ಮಣರು ಯೋಗ್ಯರಲ್ಲ ಅವರನ್ನು ದಂಡಿಸಬೇಕು ಎಂಬ ಶ್ಲೇಷಾರ್ಥ ಇಲ್ಲಿ ಮೂಡಿದೆ. ಹಾರುವ ಎಂದರೆ ಚಂಚಲವಾದ ಮನಸ್ಸು ಎಂಬ ಅರ್ಥವೂ ಕೂಡ ಆಗುತ್ತದೆ. ಪರಧನ, ಪರಸತಿಗೆ ಆಸೆ ಪಡುವ ಚಂಚಲ ಮನಸ್ಸು ಕೂಡ ಕ್ಷಣಾರ್ಧದಲ್ಲಿ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಹಾರುತ್ತಿರುತ್ತದೆ. ದೇಹದಲ್ಲಿ (ಊರೊಳಗೆ) ಐದು ಇಂದ್ರಿಯಗಳು ಈ ಚಂಚಲ ಮನಸ್ಸಿನ ಆಸೆಗೆ ಉತ್ತೇಜಿಸುತ್ತಿರುತ್ತವೆ. ಅದಕ್ಕಾಗಿ ಇಂದ್ರಿಯಗಳನ್ನು ನಿಗ್ರಹಿಸಿ ಕೊಳ್ಳಬೇಕು ಎಂಬುದು ತಾತ್ಪರ್ಯ. ಇದೇ ವಿಷಯವನ್ನು ಇನ್ನೊಂದು ಕೀರ್ತನೆಯಲ್ಲಿ ಪುರಂದರದಾಸರು ಹೀಗೆ ಹೇಳಿದ್ದಾರೆ.

ನೋಡದಿರು ಪರಸ್ತ್ರೀಯರ
ನೋಡಿದರೆ ಕೇಡಹುದು ತಪ್ಪದಿದಕೋ ಪ।

ನೋಡಿದರೆ ಸ್ತ್ರೀ ಹತ್ಯವು ನುಡಿಸಿ ಮಾ
ತಾಡಿದರೆ ಗೋ ಹತ್ಯವು
ಕಾಡಿದರೆ ಶಿಶು ಹತ್ಯವು ಮೈ
ಗೂಡಿದರೆ ಬ್ರಹ್ಮ ಹತ್ಯವು ೧।

ಎರಳೆಗಂಗಳರೊಲುಮೆಗೆ ಮರುಳಾಗಿ
ಬರಿದೆ ನೀ ಕೆಡಬೇಡವೊ
ದುರುಳು ಯಮಲೋಕದಲ್ಲಿ ಕರೆದೊಯ್ದು
ಉರಿಗಂಬ ಅಪ್ಪಿಸುವರೊ ೨।

ಮರುಳು ಮಾನವನೆ ಕೇಳೊ ಪರಿಸತಿಯ
ಉರಿಯೆಂದು ನೋಡು ನಿತ್ಯ
ವರದ ಪುರಂದರವಿಠಲನ ನೆನೆದರೆ
ಸ್ಥಿರವಾದ ಮುಕುತಿಯಹುದು ೩। (೪೯)

ಪರಸ್ತ್ರೀಯನ್ನು ಉರಿಯಂತೆ ಕಾಣುವುದು ವಿಹಿತವೆಂದು ಸಮಾಜದ ಶೀಲಚಿಂತಕರಾದ ದಾಸರು ಅಭಿಪ್ರಾಯಪಡುತ್ತಾರೆ. ವೈಯಕ್ತಿಕ ನೆಲೆಯಲ್ಲಿ ಪರಸ್ತ್ರೀವ್ಯಾಮೋಹ ಸೌಶಿಲ್ಯದ ದೃಷ್ಟಿಯಿಂದ ತುಂಬ ಕೆಟ್ಟದ್ದು ಅಂತಹ ವ್ಯಾಮೋಹಗಳಿಗೆ ನರಕದಲ್ಲಿ ಸಿಕ್ಕಬಹುದಾದ ಪಾತಕಗಳನ್ನೆಲ್ಲ ವಿವರಿಸುವ ಪುರಂದರದಾಸರು ಸಮಾಜದಲ್ಲಿ ಸ್ತ್ರೀಯರಿಗೆ ಅನ್ಯಾಯವಾಗಬಾರದು ಹಾಗೂ ಪುರುಷರು ತಮ್ಮ ಮಿತಿಯನ್ನರಿತು ಬಾಳಬೇಕು ಎಂದಿದ್ದಾರೆ. ಸ್ಕಂದ ಪುರಾಣ ಹೀಗೆ ಹೇಳುತ್ತದೆ.

ಮಾತೃವತ್ ಪರದಾರಾಣಿ ಪರದ್ರವ್ಯಾಣಿ ಲೋಷ್ಠವತ್ ಪ।
ಯಃ ಪಶ್ಯತಿ ನರೋನಿತ್ಯಂ ಸ ತಪಃ ಫಲಮಶ್ನುತೇ ಅ।

ಇನ್ನೊಬ್ಬರ ಹೆಣ್ಣು ಮಕ್ಕಳನ್ನು ತಾಯಿಯಂತೆ ಇನ್ನೊಬ್ಬರ ದ್ರವ್ಯವನ್ನು ಮಣ್ಣಿಗೆಸಮಾನವೆಂದು ಯಾವನು ತಿಳಿಯುವನೋ ಅವನು ತಪಸ್ಸಿನ ಫಲವಾದ ಸಿದ್ಧಿಯನ್ನು ಪಡೆಯುತ್ತಾನೆ. ಪುರಂದರದಾಸರು ದೇಹದ ಬಗ್ಗೆ ಇನ್ನೂ ವಿವರಿಸುತ್ತಾ ನಶ್ವರವಾದ ಈ ದೇಹವನ್ನು ನಂಬಬೇಡ ಎನ್ನುತ್ತಾರೆ.

**ದೇಹ:** ನಂಬದಿರು ಈ ದೇಹ ನಿತ್ಯವಲ್ಲ
ಅಂಬುಜಾಕ್ಷನ ಭಜಿಸಿ ಸುಖಿಯಾಗೊ ಮನವೆ ಪ॥

ಎಲುಬು ರಕ್ತ ಮಾಂಸಗಳು ಮೇಲೆ ಚರ್ಮದ ಹೊದಿಕೆ
ಒಳಗೆ ಮಲ ಮೂತ್ರ ಕ್ರಿಮಿರಾಶಿ ಇಹವು
ಹಲವು ವ್ಯಾಧಿಯ ಬಿಡು ಪಂಚಭೂತದ ನಾಡು
ಬಲುಹು ದೇಹದ ನೆಚ್ಚಿ ಕೆಡಬೇಡ ಮನವೆ ೧॥

ಸತಿ ಸುತರು ಹಿತರೆಂದು ಮತಿ ಮರೆತು ಮಮತೆಯಲಿ
ಅತಿ ಕಾಂಕ್ಷೆಯಿಂದ ದುರ್ವಿಷಯ ಬಲಿದು
ಸತತ ಲಕ್ಷ್ಮೀಪತಿಯ ಶರಣೆನ್ನದಿಹ ಪರದ
ಗತಿ ಶೂನ್ಯನಾಗಿ ನೀ ಕೆಡಬೇಡ ಮನವೆ. ೨॥

ಪರರ ನಿಂದಿಸದೆ ಪರ ವಧುಗಳನು ಬಯಸದೆ
ಗುರು ವಿಪ್ರ ಸೇವೆಯನು ಮಾಡುಬಿಡದೆ
ಹರಿ ಸ್ತುತಿಯ ನೀ ಕೇಳು ಹರಿ ಕೀರ್ತನೆಯ ಪಾಡು
ಸಿರಿ ಪುರಂದರವಿಠಲನೊಲಿದು ಪಾಲಿಸುವ ೩॥ (೫೦)

ಮಾನವನ ದೇಹಕ್ಕೆ ಆಧಾರವಾಗಿರುವ ಕಂಭಗಳೆಂದರೆ ಎಲಬುಗಳು.ಈ ಎಲುಬುಗಳನ್ನು ಕಟ್ಟಿರುವುದು ನರಗಳಿಂದ ಇಂಥ ಎಲುಬುಗಳ ಗೂಡಿಗೆ ಹಚ್ಚಿರುವುದು ಮಾಂಸ ಮತ್ತು ರಕ್ತ ಇದನ್ನು ಮುಚ್ಚಿರುವುದು ಚರ್ಮ ಇದು ಕೆಟ್ಟ ವಾಸನೆಯ ಗೂಡು ಇದಕ್ಕೆ ತಗಲುವುದು ಮುಪ್ಪು ಈದೇಹವು ಅನೇಕ ವ್ಯಾಧಿಗಳಿಗೆ ಆಕರವೆನಿಸಿದೆ ಮೃತ್ಯುವಿನ ವಶವಾಗಿರುವ ಈ ದೆಹವನ್ನು ನಂಬಿ ಕೆಡಬೇಡ ಮನವೇ ಎನ್ನುತ್ತಿದ್ದಾರೆ ದಾಸರು.

ಸತಿ ಸುತರು ಹಿತವೆಂದು ತಿಳಿಯದೆ ಪರರನಿಂದಿಸದೆ. ಪರರವಧುಗಳನ್ನು ಬಯಸದೆ, ಗುರು ವಿಪ್ರರ ಸೇವೆಯನು ಮಾಡುತ್ತಾ ಹರಿಕೀರ್ತನೆಯನ್ನು ಪಾಡುವುದು ಸರಿಯಾದ ದಾರಿಯೆಂದು ದಾಸರು ಹೇಳುತ್ತಿದ್ದಾರೆ. ನಾರಾಯಣನ ನಾಮವನ ನೆನೆಯುತ್ತಾ ಇರು. ಈ ಡಿಂಬವನ್ನು ನಂಬದಿರು ಎಂದು ಎಚ್ಚರಿಸುತ್ತಿದ್ದಾರೆ.

**ದೇಹ:** ನಾರಾಯಣನೆಂಬ ನಾಮವ ಮನದಲಿ ನೆನೆಯತಿರೆಚ್ಚರಿಕೆ ಪ॥
ನೀರ ಮೇಲಣ ಗುಳ್ಳೆಯಂತಿಹ ಡೀಂಬವ ನಂಬದಿರೆಚ್ಚರಿಕೆ ಅ॥ (೫೧)

ಇಂದ್ರಿಯಗಳ ಸುಖವನ್ನು ನೆಚ್ಚಬಾರದು ಬಾಲ್ಯ ಯೌವನ ವೃದ್ಧಾಪ್ಯ ಎಂದು ಬದಲಾಗುವ ಈ ದೇಹದ ಗತಿಯು ಕಾಲವನ್ನು ಅವಲಂಬಿಸಿರುತ್ತದೆ ಎಂದು ದಾಸರು ಈ ಕೆಳಗಿನಂತೆ ಅಭಿವ್ಯಕ್ತಿಸುತ್ತಾರೆ.

**ದೇಹ:** ಇಂದ್ರಿಯಗಳ ಸುಖವ ನೆಚ್ಚದಿರು ಕಂಡ್ಯ
ಇಂದ್ರಾದಿ ಲೋಕವೆಲ್ಲವು ಕಾಲ ಕಂಡ್ಯ

ಎಂದಿನಂತಲ್ಲ ಈ ದೇಹ ಕಳೆ ಕಂಡ್ಯ
ಹಿಂದು ಮುಂದಣ ಗತಿಯ ಅರಿತಿಹುದು ಕಂಡ್ಯ ೧।
. . . . . . . . . . . . . . . . . . . . . . (೫೨)

ಈ ದೇಹದ ಅನಿತ್ಯತೆಯನ್ನು ಇಲ್ಲಿವರೆಗೆ ಹೇಳುತ್ತಾ ಬಂದ ಪುರಂದರದಾಸರು ಈ ದೇಹವನ್ನು ಹೇಗೆ ಮುಕ್ತಿಗೆ ಸಾಧನವನ್ನಾಗಿ ಮಾಡಬೇಕೆಂದು ತಿಳಿಸುತ್ತಾರೆ.

**ದೇಹ :** ತನುವೆಂಬ ಮಂಟಪದಿ
ಮನವೆಂಬ ಹಸೆಮಂಚ
ಘನವಾದ ಸುಜ್ಞಾನ ದೀಪದಬೆಳಕಲ್ಲಿ
ಸನಕಾದಿ ವಂದ್ಯನೀ ಬೇಗನೆ ಬಾರೊ. (೫೩)

ಹರಿಯನ್ನು ಹೃದಯಕುಹರದಲ್ಲಿ ಕಾಣುವ ತವಕ ಇಲ್ಲಿ ಕಾಣುತ್ತದೆ. ಬಿಂಬೋಪಾಸನೆಯ (ಉ) ಸ್ವಾರಸ್ಯಇದೇ ಆಗಿದೆ. ಶರೀರವೇ ಮಂಟಪ ಮನಸ್ಸೇ ಹಸೆಮಣೆ ಸಚ್ಛಾಸ್ತ್ರದಿಂದ ಒದಗಿದ ಜ್ಞಾನವೇ ದೀಪ. ಇದು ಸಾದಕನು ಪರಮಾತ್ಮನನ್ನು ತನ್ನ ಹೃದಯದಲ್ಲಿ ಉಪಾಸನೆ ಮಾಡುವ ಸಿದ್ಧತೆ, ಭಗವಂತನನ್ನೇ ತನ್ನ ಹೃದಯದಲ್ಲಿ ಆಹ್ವಾನಿಸುತ್ತಾ ಪರಮಾತ್ಮನನ್ನು ನೋಡದ, ನೆನೆಯದ ಈ ಜೀವವಿದ್ದು ಫಲವೇನು ಪಾಪಿ ದೇಹದಲಿ ಎಂದಿದ್ದಾರೆ ದಾಸರು.

**ದೇಹ:** ಈ ಜೀವವಿದ್ದು ಫಲವೇನು ಚೆಲುವ ಪ।
ರಾಜೀವ ಲೋಚನನ ನೆನೆಯದ ಪಾಪಿ ತನುವಿನಲಿ ಅ।

ಅರುಣ ಉದಯದಲೆದ್ದು ಹರಿಯ ಸ್ಮರಣೆಯ ಮಾಡಿ
ಗುರು ಹಿರಿಯರನು ಮನದಿ ನೆನೆದು ನೆನೆದು
ಪರಮ ಸುಖಿಯಾಗಿ ನದಿಯೊಲುಮಿಂದು ರವಿಗರ್ಘ್ಯ
ವೆರೆಯದ ಕಡು ಪಾಪಿಯಾದ ಈ ತನುವಿನಲಿ ೧।

ಹೊನ್ನ ಕಲಶದಲಿ ಅಗ್ರೋದಕವ ಶ್ರೀ ಹರಿಗೆ
ಚೆನ್ನಾಗಿ ಅಭಿಷೇಕವನ್ನು ಮಾಡಿ
ರನ್ನದುಡಿಗೆಗಳುಡಿಸಿ ರತ್ನಗಳನಳವಡಿಸಿ
ಕಣ್ಣಿನಲಿ ನೋಡಲರಿಯ ಕಪಟ ತನುವಿನಲಿ ೨।
. . . . . . . . . . . . . . . . . . . . . .
. . . . . . . . . . . . . . . . . . . . . .
ಉರಗಾದ್ರಿಯಲಿ ಚಂದ್ರ ಪುಷ್ಕರಣಿ ಮೊದಲಾದ
ಪರಿಪರಿ ತೀರ್ಥದಲಿ ಮುಣುಗಿ ಮುಣುಗಿ
ತಿರುವೆಂಗಳಪ್ಪ ಶ್ರೀ ಪುರಂದರವಿಠಲನ
ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ ೮। (೫೪)

ಪ್ರತಿಯೊಬ್ಬ ಜೀವಿಯ ಹೃದಯ ಮಂದಿರದಲ್ಲಿ ಸೂಕ್ಷ್ಮರೂಪದಿಂದ ವಾಸಮಾಡುತ್ತಾ ಪ್ರತಿಯೊಬ್ಬರ ಯೋಗಕ್ಷೇಮವನ್ನು ನೋಡುತ್ತಿರುವ ಆ ಭಗವಂತನನ್ನು ಹೊಂದಲು ಸುಲಭವಾದ ಮಾರ್ಗವಾದ ಮೊದಲು ಸದಾಚಾರ, ಪೂಜೆ, ಹೋಮ ಮುಂತಾದುವುಗಳನ್ನು ಮಾಡಬೇಕು. ನಂತರ ಅವನ ಸ್ಥೂಲ ರೂಪದ ಚಿಂತನೆ ಯನ್ನು ಮಾಡುತ್ತಾ ಸ್ನಾನ ಸಂಧ್ಯಾವಂದನೆ ದೇವತಾ ಪೂಜೆಗಳನ್ನು ದಿನನಿತ್ಯದಲ್ಲಿ ರೂಪಿಸಿಕೊಳ್ಳುವುದು ಅಗತ್ಯ

ವೈಷ್ಣವರ ದೇವಪೂಜಾಪದ್ಧತಿಯಲ್ಲಿ ಮೊದಲು ಶಂಖ ಪೂಜೆ, ಕಲಶ ಪೂಜೆ, ಪೀಠ ಪೂಜೆಗಳನ್ನು ಮಾಡಿ ಪೀಠದಲ್ಲಿ ಸಾಲಿಗ್ರಾಮವನ್ನು ದೇವರ ಪ್ರತಿಮೆಗಳನ್ನು ಇಟ್ಟು ಧೂಪ, ದೀಪಗಳನ್ನು ನೈವೇದ್ಯಗಳನ್ನು ಅರ್ಪಿಸುವ ಪದ್ಧತಿಯಿದೆ. ಅದನ್ನೇ ಪುರಂದರದಾಸರು. ನದಿಯಲ್ಲಿ ಮಿಂದು ಸೂರ್ಯನಿಗೆ ಅರ್ಘ್ಯ ನೀಡಿ ಬಂಗಾರದ ಕಲಶದಲ್ಲಿ ನೀರು ತುಂಬಿ ಶ್ರೀಹರಿಗೆ ಅಭಿಷೇಕ ಮಾಡಿ. ಆಭರಣಗಳನ್ನು ಹಾಕಿ ಆಭಗವಂತನನ್ನು ನೋಡದ ಕಣ್ಣುಗಳು ವ್ಯರ್ಥ ಎಂದಿದ್ದಾರೆ. ಈ ಕೀರ್ತನೆಯನ್ನು ದಾಸರು ತಿರುಪತಿಯಲ್ಲಿ ರಚಿಸಿದ್ದಂತೆ ತೋರುತ್ತದೆ. ಅದಕ್ಕೆ ತಿರುವೆಂಗಡದ ಒಡೆಯ ವೆಂಕಟಾಚಲಪತಿಯನ್ನು ಕಣ್ಣಿನಲಿ ನೋಡದ ಈ ದೇಹವು ಕಪಟಿಯಂತೆ ಎಂದಿದ್ದಾರೆ.

ಮನಸ್ಸು ಚಂಚಲ ಸದಾಚಾರಗಳನ್ನು ಮಾಡುತ್ತಿದ್ದರೂ ಎಲ್ಲೆಲ್ಲೊ ಓಡುತ್ತಿರುತ್ತದೆ. ಅದಕ್ಕಾಗಿ ನಿನ್ನ ಕರುಣದ ಕಂದನಾದ ದಾಸನಾದ ನನಗೆ ನೀನೆ ದಾರಿ ತೋರು ಎಂದು ದಾಸರು ಇಲ್ಲಿ ಪರಿಪರಿಯಿಂದ ಕೇಳಿಕೊಳ್ಳುತ್ತಿದ್ದಾರೆ.

**ದೇಹ:**

ನಿನ್ನ ದಾಸನಾದೆ ನಾನು ।ಪ।
ಎನಮನ್ನಿಸಿ ಮಮತೆಯ ಮಾಡಯ್ಯ ನೀನು ।ಅ।
. . . . . . . . . . . . . . . . . . . . .
. . . . . . . . . . . . . . . . . . . . .
ಮಲಮೂತ್ರ ದೇಹದೊಳ್ ಬಂದು ಬಲು
ಅರಸಿದೆ ನಿನ್ನ ಕಾಣದೆ ದೇಹ ನೊಂದು
ಲಲನೆಗಕ್ಷಯವಿತ್ತೆ ಎಂದು ನಿನ್ನ
ಒಳಗಿನ ಕರುಣದ ಕಂದ ನಾನೆಂದು ।೩।

ಮಂದಮತಿಯೊಳಗಾನು ಬಲು
ದಂದುಗದಲಿ ಸಿಲುಕಿ ನೊಂದೆನೊ ನಾನು
ತಂದೆ ತಾಯಿಯೆಲ್ಲವೂ ನೀನು ಹೀಗೆ
ಎಂದು ನೇಮಿಸು ಎನಗೊಂದು ದಾರಿಯನು ।೪। (೫೫)

ಅನಿತ್ಯವಾದ ಈ ದೇಹದಲ್ಲಿ ಜೀವವಿರುವ ತನಕ ಧರ್ಮವೆಂಬ ಸಂಬಳಗಳಿಸಲು ಪಾಪ, ಪುಣ್ಯಗಳ ಸಂಸಾರ ಕಟ್ಟಲು ಈ ಕೆಳಗಿನಂತೆ ದಾಸರು ಉಪದೇಶಿಸುತ್ತಿದ್ದಾರೆ.

**ದೇಹ:**

ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ ।ಪ।
ಮತ್ತೆ ಮುರಾರಿ ಕೃಷ್ಣನ ನೆನೆಯಲು
ಮುಕ್ತಿಗೆ ಸಾದನವಣ್ಣ ದೇಹ ।ಅ।

ಮಾನಿನಿಯರ ಕುಚಕೆ ಮರುಳಾಗದಿರು
ಮಾಂಸದ ಗಂಟುಗಳಲ್ಲಿ
ನಾನಾಪರಿಯಲಿ ಮೋಹ ಪಡದಿರು
ಹೀನ ಮೂತ್ರದ ಕುಳಿಯಲ್ಲಿ
ಜಾನಕಿರಮಣನ ಧ್ಯಾನವ ಮಾಡಲು
ಜಾಣನಾಗುವಿ ಅಲ್ಲ ಪ್ರಾಣಿ ।೧।
. . . . . . . . . . . . . . . . . . . . .
. . . . . . . . . . . . . . . . . . . . .

ಕತ್ತಲೆ ಬೆಳದಿಂಗಳ ಸಂಸಾರಕಟ್ಟೋ
ಧರ್ಮದ ಮಟ್ಟಿ
ಚಿತ್ತ ಶುದ್ಧನಾಗಿ ನಡೆಯದಿದ್ದರೆ
ವ್ಯರ್ಥವಾಗಿ ನಿ ಕೆಟ್ಟಿ
ಚಿತ್ತ ಜನಯ್ಯ ಶ್ರೀ ಪುರಂದರವಿಠಲನ
ಭಜಿಸೋ ಬೇಗ ಮನಮುಟ್ಟಿ (೫೬)

ಧರ್ಮವೆಂಬ ಮಣ್ಣಿನಿಂದ ಪಾಪ–ಪುಣ್ಯಗಳಿಂದ ಕೂಡಿದ ದುಃಖವೆಂಬ ಕತ್ತಲೆ ಸುಖವೆಂಬ ಬೆಳದಿಂಗಳ ಸಂಸಾರ ಕಟ್ಟು ಎನ್ನುವ ಪುರಂದರದಾಸರು ಚಿತ್ತ ಶುದ್ಧನಾಗಿ ಪುರಂದರವಿಠಲನ ಮನ ಮುಟ್ಟಿ ಭಜಿಸಿ ಜಾಣನಾಗು ಎಂದು ನೀತಿಬೋಧೆ ಮಾಡುತ್ತಿದ್ದಾರೆ. ದೇಹದ ಅನಿತ್ಯತೆಗಾಗಿ ಇದನ್ನು ನಂಬಬೇಡ ಎಂದ ದಾಸರು ಶ್ರೀ ಕೃಷ್ಣನ ಚರಣಕಮಲವ ನಂಬಲು ಕರೆನೀಡುತ್ತಿದ್ದಾರೆ.

**ದೇಹ:** ನಂಬು ಕಂಡ್ಯ ಮನವೆ
ನಂಬು ಶ್ರೀ ಕೃಷ್ಣನ ಚರಣ ಕಮಲವ ।ಪ।

ಒಂಬತ್ತು ಬಾಗಿಲ ಪಟ್ಟಣದೊಳಗೆ
ಸಂಭ್ರಮದಿಂದ ಬೈಲಾಗುವ ಮುನ್ನ ನೀ ।೧।

ಆರುಮಂದಿ ಕಳ್ಳರು ಊರೊಳಗೆ
ಸೂರೆ ಮಾಡಿ ಗಾಸಿ ಮಾಡುವ ಮುನ್ನ ನೀ ।೨।

ಎಳು ಸುತ್ತಿನ ಕೋಟೆ ಘನ ದುರ್ಗವನ್ನು
ಕಾಲನವರು ಬಂದು ಕರೆಯುವ ಮುನ್ನನೀ ।೩।

ದೇಹ ನಾಯಕ ದೇವರು ತಾವು
ದೇಹವ ಬಿಡದೆ ಬಿಡುವಾಗುವ ಮುನ್ನ ನೀ ।೪।

ಪುರವಿದು ಸ್ಥಿರವಲ್ಲ ಮೆಚ್ಚಿಕೆಡಲುಬೇಡ
ಪುರಂದರ ವಿಠಲನ್ನ ಆ ಪಾದ ಪದುಮದ ।೫। (೫೭)

ಒಂಬತ್ತು ಬಾಗಿಲದ ಪಟ್ಟಣವು ಇಲ್ಲಿ ದೇಹವನ್ನು ಸಂಕೇತಿಸುತ್ತದೆ ಭಗವಂತನು ಕೊಟ್ಟ ಶರೀರ, ಮನ, ಬುದ್ಧಿ ಮತ್ತು ಜೀವನವನ್ನು ತನ್ನ ಆತ್ಮೋನ್ನತಿಗಾಗಿ ಸಾಧನವಾಗಿ ಮಾಡಿಕೊಳ್ಳಬೇಕೆಂಬ ಸಂದೇಶ ಇಲ್ಲಿ ಮೂಡಿ ಬರುತ್ತದೆ. ಕಣ್ಣುಗಳೆರಡು, ಕಿವಿಗಳೆರಡು. ಮೂಗಿನ ಹೊಳ್ಳೆಗಳೆರಡು, ಬಾಯಿ, ಮೂತ್ರದ್ವಾರ, ಮಲದ್ವಾರಗಳೆಂಬ ಒಂಬತ್ತು ಬಾಗಿಲುಳ್ಳ ಪಂಚಭೂತಗಳಿಂದ ಕೂಡಿದ ಈ ಶರೀರವೆಂಬ ಪಟ್ಟಣಕ್ಕೆ ಆರು ಮಂದಿ ಕಳ್ಳರು (ಕಾಮ, ಕ್ರೋಧ, ಲೋಭ, ಮೋಹ, ಮದಿ, ಮತ್ಸರ) ನುಗ್ಗಿ ಎಳುಸುತ್ತಿನ ಕೋಟೆ ಘನ ದುರ್ಗ (ಚರ್ಮದ ಪದರಗಳು) ವನ್ನು ಕೆಡವಲು ಕಾಲನವರು (ಯಮ) ಬರುವ ಮುನ್ನ ದೇಹನವರು (ಮುಖ್ಯ ಪ್ರಾಣ) ಈ ಪಟ್ಟಣವನ್ನು ಬಿಟ್ಟು ಹೋಗುವ ಮುನ್ನ ಪುರಂದರವಿಠಲನ ಪಾದ ನೆನೆಯಲು ಪುರಂದರದಾಸರು ಪ್ರೇರೇಪಿಸುತ್ತಾರೆ. ಈ ಪುರ

(ಪಟ್ಟಣ, ದೇಹ) ಸ್ಥಿರವಲ್ಲ. ಅದಕ್ಕಾಗಿ ಶ್ರೀ ಕೃಷ್ಣನ ಚರಣವ ನಂಬಿ ಜೀವನವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳಲು ಎಚ್ಚರಿಸುತ್ತಾರೆ.

**ದೇಹ:** ಹರಿಭಕುತಿ ಉಳ್ಳವರ ಶರೀರವೇ ಕುರುಕ್ಷೇತ್ರ ಪ।

ಅವರು ನರರೆಂದು ಬಗೆವವರೆ ನರಕವಾಸಿಗಳು ಅ।

ಸದಮಲನ ನೆನೆಸುವ ಹೃದಯ ಕಾಶೀಪುರವು
ಮಧುವೈರಿ ನೆನೆವ ಮನ ಮಣಿಕರ್ಣಿಕೆಯು
ಪದುಮನಾಭನ ಪಾಡುವ ವದನವೇ ವೈಕುಂಠ
ಸದಮಲನ ಬಣ್ಣಿಸುವ ಜಿಹ್ವೆ ಶ್ರೀ ಮುಷ್ಣ ೧।

ನರಹರಿಯ ವೀಕ್ಷಿಸುವ ನಯನ ದ್ವಾರಾವತಿಯು
ಸಿರಿಧರಗೆ ಶರಣೆಂಬ ಶಿರವೆ ಬದರಿ
ಮುರಹರನ ಕಥೆಯ ಕೇಳುವ ಕಿವಿಯೇ ಕೇದಾರ
ಹರಿಯ ನಿರ್ಮಾಲ್ಯ ಘ್ರಾಣಿಪ ಮೂಗು ಮಧುರೆ ೨।

ಲಕ್ಷ ಪ್ರದಕ್ಷಿಣೆ ಮಾಡುವಾ ಚರಣ ಮಾಯಾವತಿಯು
ಲಕ್ಷ್ಮಿ ಪತಿಯ ಪೂಜಿಸುವ ಕರವೆ ಕಂಚಿ
ಶಿಕ್ಷಿಸುವುದು ಸುಕೃತ ದುಷ್ಕೃತ ಆಲಿಸಿ ಕೇಳೊ
ಪಕ್ಷಿವಾಹನ ಪುರಂದರವಿಠಲನು ಕೊಡುವ ಮುಕುತಿ ೩। (೫೮)

ಭಗವಂತನ ಕೃಪೆಯಿಂದ ಮನುಷ್ಯದೇಹವು ಉಂಟಾಗುತ್ತದೆ. ಅಂತಹ ದೇಹವನ್ನು ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಬಳಸಿಕೊಂಡರೆ ಅದು ಶ್ರೇಷ್ಠ ಹಾಗೂ ಹರಿಯಲ್ಲಿ ಭಕ್ತಿ ಉಳ್ಳವರ ದೇಹವು ಪರಮಾತ್ಮನು ವಾಸಿಸುವ ತೀರ್ಥಕ್ಷೇತ್ರವೆಂದು ಪುರಂದರದಾಸರು ಬಣ್ಣಿಸುತ್ತಾರೆ. ಭಕ್ತಿಯನ್ನುವ ಸಾಧನೆ ಭಾಗವತಪಂಥದಲ್ಲಿ ತುಂಬ ಮುಖ್ಯವಾದುದು ಅದನ್ನು ಸಾಧನೋತ್ತಮವೆಂದು ಬಣ್ಣಿಸುತ್ತಾರೆ. ಉಳಿದ ಸಾಧನೆಗಳಾದ ಜ್ಞಾನ, ವಿರಕ್ತಿ ಕರ್ಮಗಳಿಗೆ ಭಕ್ತಿಯಿಂದಲೆ ಪರಿಪಾಕ ಒದಗುವುದು ಭಕ್ತಿಯಿಂದಲೆ ಪರಮಾತ್ಮ ಒಲಿಯುವನೆಂಬ ನಂಬಿಕೆಯಿದೆ. ಅಂತಹ ಶುದ್ಧ ಭಕ್ತಿಯುಳ್ಳ ಭಕ್ತರ ದೇಹವು ಕುರುಕ್ಷೇತ್ರ. [ಶ್ರೀ ಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು ಉಪದೇಶಿಸಿದ ಸ್ಥಳ] ಕಾಶಿ, ವೈಕುಂಠ, ದ್ವಾರಾವತಿ ಬದರಿ, ಕೇದಾರ, ಕಂಚಿ, ಮಣಿಕರ್ಣಿಕೆ (ಕಾಶಿಯ ಹತ್ತಿರವಿರುವ ಹಿಮಪರ್ವತ) ಮುಂತಾದ ತೀರ್ಥಕ್ಷೇತ್ರಗಳಿಗೆ ಸಮ ಎಂದಿದ್ದಾರೆ.

ಪುರಂದರದಾಸರ ರಚನೆಗಳನ್ನು ಅಧ್ಯಯನ ಮಾಡಿ ನೋಡಿದಲ್ಲಿ ಅವರು ಮಾನವ ಸಮಾಜದ ಮೇಲ್ಮೆಗಾಗಿ ಅಮೂಲ್ಯವಾದ ಕೃತಿಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಸುಮಾರು ೨೦ ಕ್ಕಿಂತ ಹೆಚ್ಚು ರೂಪಕ, ಅಲಂಕಾರಗಳನ್ನೊಳಗೊಂಡ ದೇಹ ಪ್ರತಿಮೆಗಳ ಮೂಲಕ ಮನುಷ್ಯನ ಜೀವಿತವೇ ಅಸ್ಥಿರ ಎಂಬುದನ್ನು ವಿವರಿಸುತ್ತಾರೆ. ದೇಹದ ಮೇಲೆ ವೈರಾಗ್ಯ ಮೂಡಲು ಹೀಗೆ ಹೇಳುತ್ತಾರೆ.

**ದೇಹ:** ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ
ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ

ದೇಹವು ಈ ದಿನ ನೆಟ್ಟಗಿದ್ದು ಪುಷ್ಟವಾಗಿದ್ದರೆ. ಕೆಲವೆ ದಿನಗಳಲ್ಲಿ ಅದು ಕ್ಷೀಣವಾಗುತ್ತದೆ. ಒಗ್ಗುತ್ತದೆ, ಮುಗ್ಗುತ್ತದೆ, ಕುಗ್ಗುತ್ತದೆ, ಒಂದು ದಿನ ಬೆಂಕಿಯಲ್ಲಿ ಸುಟ್ಟು ಭೂದಿಯಾಗುವ ಈ ನಿನ್ನ ದೇಹವನ್ನು ಪರಮಾತ್ಮನ್ನು ಒಲಿಸಿಕೊಳ್ಳಲು ಸಾಧನವನ್ನಾಗಿ ಬಳಸಿ ಸಾರ್ಥಕವನ್ನು ಹೊಂದಬೇಕು ಎನ್ನುತ್ತಾರೆ. ಅಷ್ಟೆ ಅಲ್ಲದೆ ಹರಿ ಭಕ್ತಿ ಉಳ್ಳವರ ದೇಹವನ್ನು ತೀರ್ಥಕ್ಷೇತ್ರವೆಂದು ಹರಿಯಲ್ಲಿ ಭಕ್ತಿ ಮಾಡುವವರು ಶ್ರೇಷ್ಠರೆಂದು ಹೊಗಳುತ್ತಾರೆ. ಹರಿಭಕ್ತರನ್ನು ಸಾಮಾನ್ಯ ಜನರೆಂದು ತಿಳಿದವರು ನರಕಕೆ ಹೋಗುತ್ತಾರೆ ಎಂದು ಭಾವಾವೇಷದಿಂದ ನುಡಿಯುತ್ತಾರೆ.

**ದುಗ್ಗಾಣಿ :**

ದುಗ್ಗಾಣಿ ಎಂಬುದು ದುರ್ಜನ ಸಂಗ
ದುಗ್ಗಾಣಿ ಬಲು ಕೆಟ್ಟದಣ್ಣ ।ಅ।

ಆಚಾರ ಹೇಳೋದು ದುಗ್ಗಾಣಿ ಬಹು
ನೀಚರ ಮಾಡೊದು ದುಗ್ಗಾಣಿ
ನಾಚಿಕೆಯಿಲ್ಲದೆ ಮನೆ ಮನೆ ತಿರುಗಿಸಿ
ಛೀ ಛೀ ಎನಿಸೋದು ದುಗ್ಗಾಣಿ ಅಣ್ಣ ।೧।

ನೆಂಟತನ ಹೇಳೋದು ದುಗ್ಗಾಣಿ, ಬಹು
ನೆಂಟರನೊಲಿಸೋದು ದುಗ್ಗಾಣಿ
ಒಂಟೆ ಹಾಂಗೆ ಮೋರೆ ಮೇಲಕ್ಕೆ ಸೆಳಕೊಂಡು
ಕುಂಟನೆನಿಸುವುದು ದುಗ್ಗಾಣಿ ಅಣ್ಣ ।೨।

ಮಾನವಾಗಿರಿಸೋದು ದುಗ್ಗಾಣಿ, ಬಹು
ಮಾನ ಹಸಗೆಡಿಸೋದು ದುಗ್ಗಾಣಿ
ಮಾನನಿಧಿ ಶ್ರೀ ಪುರಂದರವಿಠಲನ
ಕಾಣಿಸದಿರುವುದು ದುಗ್ಗಾಣಿ ಅಣ್ಣ ।೩। (೬೦)

ದುಗ್ಗಾಣಿ ಎಂದರೆ ಅಲ್ಪಬೆಲೆಯ ನಾಣ್ಯ. ದುಗ್ಗಾಣಿ ಪ್ರತಿಮೆ ಇಲ್ಲಿ ಹಣವನ್ನು ಸಂಕೇತಿಸುತ್ತದೆ. ಅದು ಎಷ್ಟು ನೀಚವಾದುದು ಎಂಬುದರ ಬಗ್ಗೆ ಅರ್ಥವನ್ನು ವಿಸ್ತರಿಸುತ್ತ ಹೋಗುವ ಈ ಪ್ರತಿಮೆ ಹಣದ ಗುಣವನ್ನು ಅಂತರದರ್ಶನ ಮಾಡಿಸುತ್ತದೆ. ಹಣವುಳ್ಳವನು ಅಹಂಕಾರದಿಂದ ಬೀಗುವುದು ಸತ್ಯವೇ, ಅದಕ್ಕೆ ಒಂಟೆಯಂತೆ ಮುಖ ಮೇಲಕ್ಕೆತ್ತಿ ಗರ್ವದಿಂದ ನಡೆಯುವ ಶ್ರೀಮಂತರನ್ನು ಸಮಾಜದಲ್ಲಿ ಎಲ್ಲರೂ ನೋಡುತ್ತಾರೆ. ಹಣವಿದ್ದವನಿಗೆ ನೆಂಟರೆಂದು ಹೇಳಿಕೊಂಡು ಬರುವ ಜನರೂ ಹೆಚ್ಚು. ಮಾನದಿಂದ ಇರಲು ಹಣದ ಅವಶ್ಯಕತೆ ಇದ್ದೆ ಇದೆ. ಆದರೆ ಹಣಕ್ಕಾಗಿ ನೀಚ ಕೆಲಸ ಮಾಡುವ ನಾಚಿಕೆ ಇಲ್ಲದೆ ಮನೆ ಮನೆ ತಿರುಗುವ ಜನರಿಗೇನೂ ಕಡಿಮೆಯಿಲ್ಲ. ಹಣಕ್ಕಾಗಿ ಕೊಲೆ ಕಳ್ಳತನ ನಡೆಯುತ್ತಿರುವ ಸಮಾಜಕ್ಕೆ ಅವರ ನೀತಿವಾಕ್ಯಗಳು ಇಂದಿಗೂ ನಮ್ಮ ಕಣ್ಣುತೆರೆದು ಹೃದಯ ತಿಳಿಯಾಗುವಂತೆ ಮಾಡುವ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸುವ ಕೆಲಸ ಮಾಡುತ್ತಿವೆ.

**ದುಃಖ :**

ಒಂದಲ್ಲ ಎರಡಲ್ಲ ನೊಂದ ಜೀವಕ್ಕೆ ದುಃಖ
ಒಂದೊಂದೂ ಕ್ಷಣಕೆ ಅನಂತ ದುಃಖ ।ಪ।

ಬಸಿರಿನೊಳಗೆ ದುಃಖ ಶಿಶುತನದಲಿ ದುಃಖ
ಎಸೆವ ಕೌಮಾರ ಯೌವನದ ದುಃಖ
ವಶವಲ್ಲದ ದುಃಖ ವಾರ್ಧಿಕ್ಯದ ದುಃಖ
ಸತಿ ಸುತ ಮಿತ್ರರು ಕಾಡುವ ದುಃಖ ೧।

ಅಪ್ಪ ಭೋಗದ ದುಃಖ ಆರರಿಗಳ ದುಃಖ
ಕಷ್ಟದಾರಿದ್ರ್ಯ ಕಾಡುವ ದುಃಖ
ಮೃಷ್ಟಾನ್ನವು ಇಲ್ಲದೆ ಮಿಡುಕುವ ದುಃಖ
ದುಷ್ಟರಿಂದ ನುಡಿ ಕೇಳುವ ದುಃಖ ೨।

ತನಗಿಂತಲಧಿಕರನು ಸರಿಸುವ ದುಃಖ
ತನಗಿಂತ ಬಡವರು ಕಾಡುವ ದುಃಖ
ತನ್ನ ಸರಿಯರ ಮಾತು ಕೇಳುವ ದುಃಖ
ತನ್ನವರು ತನಗಿನ್ನು ಆಗದ ದುಃಖ
...................... (೬೧)

ದುಃಖ ಒಂದು ಭಾವ ಪ್ರತಿಮೆ, ಕಣ್ಣಿಗೆ ಕಾಣದಿದ್ದರೂ ಮನುಷ್ಯ ಭಾವನೆಗಳನ್ನು ಮೂರ್ತಗೊಳಿಸಲು ಶಬ್ದಗಳಿಂದಾದ ಚಿತ್ರ, ಎಲ್ಲ ಜೀವಿಗಳು ದುಃಖವು ಬೇಡವೆಂದು ಸುಖವು ಎಂದೆಂದೂ ಇರಲೆಂದು ಬಯಸುವುದು ಸಾಮಾನ್ಯ ಕತ್ತಲೆ–ಬೆಳಕಿನಂತೆ ಸುಖ–ದುಃಖಗಳು ಎಂದೆಂದಿಗೂ ಒಂದಾದ ಮೇಲೊಂದರಂತೆ ಬರುತ್ತಲೇ ಇರುತ್ತವೆ. ಸುಖ–ದುಃಖಗಳು ನಮಗೆ ಪೂರ್ವಜನ್ಮದ ಕರ್ಮಾನುಸಾರವಾಗಿ ಉಮಟಾಗುತ್ತವೆ ಎಂಬುದನ್ನು ಭಗವದ್ಗೀತೆಯಲ್ಲಿ ಹೇಳಿದೆ. ಅದಕ್ಕಾಗಿ ಅನೇಕ ತರಹದ ದುಃಖಗಳ ಪಟ್ಟಿಯನ್ನೇ ಮಾಡಿದ ಪುರಂದರದಾಸರು ಇಂತಹ ಸುಖ–ದುಃಖಗಳೀಂದ ಪಾರು ಮಾಡಲು ಲಕ್ಷ್ಮೀಕಾಂತನ ನೆನೆದು ನಿಶ್ಚಿಂತನಾಗಲು ತಿಳಿಸುತ್ತಾರೆ. ಅನೇಕ ತರಹದ ಕಷ್ಟಗಳಿಂದ ನರಳಿ ಮನೋರೋಗಕ್ಕೆ ತುತ್ತಾಗುತ್ತಿರುವ ಜನರ ಸಂಖ್ಯೆ ಸಮಾಜದಲ್ಲಿ ಹೆಚ್ಚಾಗುತ್ತಿದೆ. ಅದಕ್ಕಾಗಿ ನಾವೆಲ್ಲರೂ ಹರಿಯ ದಾಸರು ಅವನ ಇಚ್ಛೆಯಂತೆ ಈ ಜೀವನ ಎಂಬ ಆಧ್ಯಾತ್ಮಿಕ ನಿಲುವನ್ನು ನಂಬಿನಡೆಯುವುದು ನಮ್ಮ ಗುರಿಯಾಗಬೇಕು.

**ನಗೆ :** ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ಪ।
ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು ಅ।

ಪರರ ವನಿತೆಯೊಲುಮೆಗೊಲಿದು
ಹರುಷದಿಂದ ಅವಳ ಬೆರೆದು
ಹರಿವ ನೀರೊಳಗೆ ಮುಳುಗಿ
ಬೆರೆಳನೆಣಿಸುತಿಹರ ಕಂಡು ೧।

ಪತಿಯ ಸೇವೆ ಬಿಟ್ಟು ಪರ
ಪತಿಯ ಕೂಡೆ ಸರಸವಾಡಿ
ಸತತ ಮೈಯ ತೊಳೆದು ಹಲವು
ವ್ರತವ ಮಾಳ್ಪ ಸತಿಯೆ ಕಂಡು ೨।

ಹೀನ ಗುಣವ ಮನದೊಳಿಟ್ಟು
ತಾನು ವಿಷದ ಪುಂಜನಾಗಿ
ಮೌನಿ ಪುರಂದರವಿಠಲನ
ಧ್ಯಾನ ಮಾಡುವವನ ಕಂಡು. |೩|(೬೧)

ನಗೆ ಪ್ರತಿಮೆ ಇಲ್ಲಿ ಜಗತ್ತಿನಲ್ಲಿ ನಡೆಯುವ ನಾಟಕವನ್ನು, ಢಾಂಬಿಕತೆಯನ್ನು ಮೂರ್ತಗೊಳಿಸುತ್ತದೆ. ಸಮಾಜದಲ್ಲಿ ಕೆಲವರು ಒಂದಲ್ಲ ಒಂದು ಬಗೆಯ ನಾಟಕದಲ್ಲಿ ಪಾತ್ರಧಾರಿಗಳಾಗಿದ್ದಾರೆ, ವ್ರತ, ಆಚಾರ, ಧ್ಯಾನ ಇವು ಬಹಿರಂಗ ವೇಷಭೂಷಣಗಳು. ಆದರೆ ಅವರ ಮನಸ್ಸು ಪರವನಿತೆಯರಲ್ಲಿ ಆಸಕ್ತವಾಗಿರುತ್ತದೆ. ಮನಸ್ಸಿನಲ್ಲಿ ಹೀನ ಗುಣ ಇರುತ್ತದೆ. ಒಳಗೆ ವಿಷತುಂಬಿ ಕೊಂಡಿರುತ್ತದೆ. ಹೀಗೆ ಅಂತರಂಗ ಬಹಿರಂಗ ಎರಡೂ ಕಡೆ ವೇಷಹಾಕಿ ನಾಟಕವಾಡುವ ಜನರನ್ನು ಕಂಡು ನಗುತ್ತಿದ್ದಾರೆ.

**ನಡತೆ :** ಜನರ ನಡತೆ ಕೇಳಿರಯ್ಯ, ಇಂಥ |ಪ|

ಜನರ ನೋಡಿ ನೀವು ಎನೆಂಬಿರಯ್ಯ |ಅ|
ತಾಯಿಗನ್ನವನಿಕ್ಕರಯ್ಯ, ಬಲು
ಬಾಯ ಮಾತಿಗೆ ಮರುಳಾಗುವರಯ್ಯ
ನ್ಯಾಯವೆಂಬುದು ಇಲ್ಲವಯ್ಯ
ಅನ್ಯಾಯವೇ ಗತಿಯೆಂದು ಸಾಧಿಪರಯ್ಯ |೧|

ಉತ್ತಮ ಸ್ತ್ರೀಯಳ ಬಿಟ್ಟು, ತನ್ನ
ವೃತ್ತಿಗಳೆಲ್ಲವ ಸೂಳೆಗೆ ಕೊಟ್ಟು
ಮತ್ತರೊಡನೆ ಕೂಡಿ ಕೆಟ್ಟು, ಇಹ
ರುತ್ತಮರೆಂಬರೀ ಜಗದೊಳು ಮಟ್ಟು |೨|
. . . . . . . . . . . . . . . . . . . . .
. . . . . . . . . . . . . . . . . . . . .
ಬಡವನ್ನ ಬಾರೆನ್ನರಯ್ಯ, ಏನು
ನಡತೆಯಿದ್ದರು ಪ್ರಯೋಜನವಿಲ್ಲವಯ್ಯ
ಕಡು ಮೂರ್ಖರಿಗೆ ಕಾಲವಯ್ಯ, ಎ
ನ್ನೊಡೆಯ ಪುರಂದರವಿಠಲ ಕೇಳಯ್ಯ |೫| (೬೨)

'ನಡತೆ' ಪ್ರತಿಮೆ ಸಮಾಜದಲ್ಲಿ ಜನರ ನಡತೆಯ ವಿಶ್ವಕೋಶವನ್ನೇ ಮೂರ್ತಗೊಳಿಸುತ್ತದೆ. ಜನರ ನಡವಳಿಕೆಯಲ್ಲಿ ಕಂಡು ಬರುವ ಅಸಂಗತತೆಯನ್ನು ಪುರಂದರದಾಸರು ಈ ಕೀರ್ತನೆಯಲ್ಲಿ ಪ್ರಸ್ತಾಪಿಸಿದ್ದಾರೆ. ಮರ್ಯಾದೆಯ ಬೇಲಿಯನ್ನು ಮುರಿದು ಸ್ವೇಚ್ಛೆಯಲ್ಲಿ ನಿರತರಾಗುವುದು, ತಾಯಿ, ಪತಿ, ಪತ್ನಿಯರಿಗೆ ಅನ್ಯಾಯ ವೆಸಗುತ್ತಾ ಗೃಹಭಂಗಕ್ಕೆ ಕಾರಣರಾಗುವ ಜನರನ್ನು ಹಾಗೂ ಅರ್ಥಿಕ ಅಂತಸ್ತು ಗಳನ್ನು ಮಾತ್ರ ಗಮನಿಸಿ ಪುರಸ್ಕಾರ ತಿರಸ್ಕಾರಗಳನ್ನು ಸೂಚಿಸುವುದು ಮುಂತಾದ ಜನರ ನಡತೆಗಳನ್ನು ಇಲ್ಲಿ ಶಬ್ದಗಳಲ್ಲಿ ಚಿತ್ರಿಸಲಾಗಿದೆ.

**ನಾಟಕಸ್ತ್ರೀ :** ಉದರ ವೈರಾಗ್ಯವಿದು, ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ |ಪ|

ಉದಯ ಕಾಲದಲ್ಲೆದ್ದು ಗಡಗಡ ನಡುಗುತ
ನದಿಯಲಿ ಮಿಂದೆನೆಂದು ಹಿಗ್ಗುತಲಿ
ಮದಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದು ।೧।
. . . . . . . . . . . . . . . . . . . .
. . . . . . . . . . . . . . . . . . . .
ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟ ನೀತ ಸರಿಯಾರಿಲ್ಲೆನಿಸಿ
ನಾಟಕಸ್ತ್ರೀಯಂತೆ ಬಯಲಢಂಬವ ತೋರಿ
ಊಟದ ಮಾರ್ಗವ ಜ್ಞಾನವಿಲ್ಲದೆ. ।೪।(೬೪)

ನಾಟಕ ಸ್ತ್ರೀ ಪ್ರತಿಮೆ ಉದರ ವೈರಾಗ್ಯ ಅಥವಾ ಹೊಟ್ಟೆಪಾಡಿಗಾಗಿ ವೈರಾಗ್ಯದ ಸೋಗು ಹಾಕುವ ಜನರನ್ನು ಅಭಿವ್ಯಕ್ತಿಸುತ್ತದೆ. ಸಮಾಜದಲ್ಲಿ ಢಾಂಬಿಕ ಜನರು ಜಾಸ್ತಿ. ತನು – ಮನ ಶುದ್ಧಿ ಇಲ್ಲದೆ. ತಾವು ಸಜ್ಜನರೆಂದು ಸದಾಚಾರಗಳನ್ನು ಮಾಡುವವರೆಂದು ಬಿಂಬಿಸುತ್ತಾ ಜನರನ್ನು ಮೋಸಗೊಳಿಸುತ್ತಾರೆ. ಹಿಂದಿನ ಕಾಲದಲ್ಲಿ ಪುರಷರೇ ನಾಟಕಗಳಲ್ಲಿ ಸ್ತ್ರೀ ಪಾತ್ರ ಮಾಡುತ್ತಿದ್ದರು ಅಂತಹ ಪುರುಷರಂತೆ ಢಾಂಬಿಕರು ನಿಜವಾದ ಭಕ್ತರಲ್ಲ ಆದರೆ ಭಕ್ತರಂತೆ ನಟಿಸುವವರು. ಇಂತಹವರನ್ನು ದೂರವಿಟ್ಟು ನಿಜವಾದ ಜ್ಞಾನಿಗಳನೊಡನಾಡಲು ಪುರಂದರದಾಸರು ಕರೆ ನೀಡುತ್ತಾರೆ.

**ನಾಲಿಗೆ :** ಆಚಾರವಿಲ್ಲದ ನಾಲಿಗೆ ನಿನ್ನ
ನೀಚ ಬುದ್ಧಿಯ ಬಿಡು ನಾಲಿಗೆ ।ಪ।

ವಿಚಾರವಿಲ್ಲದೆ ಪರರ ದೂಷಿಸುದಕ್ಕೆ
ಚಾಚಿ ಕೊಂಡಿರುವಂಥ ನಾಲಿಗೆ ।ಅ।

ಪ್ರಾತಃ ಕಾಲದೊಳೆದ್ದು ನಾಲಿಗೆ
ಸಿರಿಪತಿಯೆನ್ನಬಾರದೆ ನಾಲಿಗೆ
ಪತಿತ ಪಾವನ ನಮ್ಮ ರತಿ ಪತಿ ಜನಕನ
ಸತತವು ನುಡಿ ಕಂಡ್ಯ ನಾಲಿಗೆ. ।೧।

ಚಾಡಿ ಹೇಳಲಿ ಬೇಡ ನಾಲಿಗೆ
ನಿನ್ನ ಬೇಡಿಕೊಂಬುವೆನು ನಾಲಿಗೆ
ರೂಢಿಗೊಡೆಯ ಶ್ರೀ ರಾಮನ ನಾಮವ
ಪಾಡುತಲಿರು ಕಂಡ್ಯ ನಾಲಿಗೆ ।೨।

ಹರಿಯ ಸ್ಮರಣೆ ಮಾಡು ನಾಲಿಗೆ
ನರಹರಿಯ ಭಜಿಸು ಕಂಡ್ಯ ನಾಲಿಗೆ
ವರದ ಪುರಂದರವಿಠಲರಾಯನ
ಚರಣ ಕಮಲವ ನೆನೆ ನಾಲಿಗೆ ।೩। (೬೫)

ನಾಲಿಗೆ ಪ್ರತಿಮೆ ಇಲ್ಲಿ ಮಾತಿನ ಮಹತ್ವವನ್ನು ಬಿಂಬಿಸುತ್ತದೆ. ನಮ್ಮ ಭಾವನೆಯನ್ನು ವಿವರಿಸಲು ಇರುವ ಏಕೈಕ ಸಾದನವೆಂದರೆ ಭಾಷೆ ಅದನ್ನು ದೂಷಿಸಲು ಚಾಡಿ ಹೇಳಲು ಪರರ ಮನಸ್ಸನ್ನು ನೋಯಿಸಲು ಉಪಯೋಗಿಸದೆ ಹರಿಯಸ್ಮರಣೆ ಮಾಡಲು ಉಪಯೋಗಿಸಬೇಕೆಂಬ ಅರ್ಥ ಇಲ್ಲಿ ಮೂಡಿಬರುತ್ತದೆ.

**ನಾಲಿಗೆ :** ಗೋವಿಂದ ನಮೋ ಗೋವಿಂದ ನಮೋ
ಗೋವಿಂದ ನಾರಾಯಣ ||ಪ||

ಗೋವರ್ಧನ ಗಿರಿಯನೆತ್ತಿದ ಗೋವಿಂದ ನಮ್ಮ ರಕ್ಷಿಸೈ ||ಅ||
. . . . . . . . . . . . . . . . . . . . .
. . . . . . . . . . . . . . . . . . . . .
. . . . . . . . . . . . . . . . . . . . .
ಉಂಟು ಕಾಲಕೆ ನೆಂಟರಿಪ್ಪರು
ಬಂಟರಾಗಿ ಕಾಯ್ವರು
ಕಂಟಕ ಯಮನವರು ಎಳೆವಾಗ
ನೆಂಟರಿಪ್ಪರು ಬಾರರು ||೩||

ಒಡವೆ ಅರಸಿಗೆ ಒಡಲು ಅಗ್ನಿಗೆ
ಮಡದಿ ಮತ್ತೊಬ್ಬ ಚೆಲುವಿಗೆ
ಬಡಿದು ಹೊಡೆದು ಯಮನವರೆಳೆವಾಗ
ಎಡವಿ ಬಿದ್ದಿತು ನಾಲಿಗೆ ||೬
. . . . . . . . . . . . . . . . . . . . . (೬೬)

ನಾಲಿಗೆ ಪ್ರತಿಮೆ ಇಲ್ಲಿ ಜೀವಿಯ ಅಂತ್ಯವನ್ನು ಸೂಚಿಸುತ್ತದೆ. "ನರಜನ್ಮ ಬಂದಾಗ, ನಾಲಿಗೆ ಇರುವಾಗ, ಕೃಷ್ಣ ಎನಬಾರದೆ" ಎಂದ ಪುರಂದರದಾಸರು ನಾಮಸ್ಮರಣೆಯ ಮಹತ್ವ ತಿಳಿಸಿದ್ದಾರೆ ಪ್ರತಿಯೊಬ್ಬ ಜೀವಿಯೂ ತನ್ನ ಜೀವಿತವನ್ನು ಹರಿನಾಮಸ್ಮರಣೆಯಿಂದ ಸಾರ್ಥಕ ಮಾಡಿಕೊಳ್ಳಬೇಕು, ಜೀವಿಯ ಅಂತ್ಯಬಂದಾಗ ಮಡದಿ–ಮಕ್ಕಳು ಸ್ನೇಹಿತರು, ಸೇವಕರು ಒಡವೆ, ಹಣ ಯಾವುದೂ ಜೊತೆಗೆ ಬರುವುದಿಲ್ಲ. ನಮ್ಮ ದೇಹದಲ್ಲೇ ಇರುವ ನಾಲಿಗೆ ಕೂಡ ಜೀವ ಹೋದಮೇಲೆ ಹೊರಳಿ ಬೀಳುವುದು ಎಂಬ ಸತ್ಯ ಇಲ್ಲಿ ವಿದಿತವಾಗಿದೆ.

**ನಾರಿ :** ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ ||ಪ||

ಪಡೆದವಳ ಎದೆಗೊರಳ ಕೊಯ್ವಂಥ ಚೂರಿ ||ಅ||

ಮಾತು ಕಲಿತರೆ ಏನು ಮಹಾಜಾಣೆಯಾದರೇನು
ಚಾತುರ್ಯವಿದ್ದರೇನು ಚೆಲುವೆಯಾದರೇನು
ರಾಸಿ ಹಣ ವಿದ್ದರೇನು ಏಸು ಪೇಳಿದರೇನು
ರೀತಿ ಕೆಟ್ಟ ಜನ್ಮ ಪೊರೆಯಬೇಕಲ್ಲ ||೧||

ಹೊರಕೆ ಬರಲಿಕೆ ಸಲ್ಲ ಇದಿರಾಗಿ ಇರೆ ಸಲ್ಲ
ಅಡುಗೆ ಯೋಗ್ಯಳಲ್ಲ ಹರಿಯುತಾನೆ ಬಲ್ಲ
ಮರ್ಯಾದೆಗಳು ಇಲ್ಲ ಬಲು ಹಗುರ ರಾಜ್ಯಕ್ಕೆಲ್ಲ

ಸರ್ವ ರೀತಿಲಿ ಕೆಟ್ಟ ಜನ್ಮ ಪೊರೆಸಲ್ಲ ೨।

. . . . . . . . . . . . . . . . . . . . .

. . . . . . . . . . . . . . . . . . . . .

ಚಾಕರಿಯ ಮಾಡಿದರೆ ಆಚೀಚೆಲಾಡುವರು
ರಾಶಿ ಅನ್ನವನುಂಡಳೆಂದು ದೂರುವರು
ಈಸು ಸೈರಿಸಿಕೊಂಡು ಏಕಾಂತದಲಿ ಕುಳಿತು
ಶ್ರೀಶ ಪುರಂದರವಿಠಲನ ನೆನೆಯೆ ನಾರಿ ೮। (೬೭)

ನಾರಿ ಪ್ರತಿಮೆಯು ಇಲ್ಲಿ ವಿಧವಾ ಸ್ತ್ರೀಯರನ್ನು ಸಂಕೇತಿಸುತ್ತದೆ. ದಾಸರು ಇಲ್ಲಿ ವಿಧವೆಯಾದ ಹೆಂಗಸು ಹೇಗೆ ಸಮಾಜದ ಗುರಿಗೆ ಬಲಿಯಾಗುತ್ತಾಳೆಂಬುದನ್ನು ಚಿತ್ರಿಸಿದ್ದಾರೆ. ಆಧುನಿಕ ಕಾಲದಲ್ಲಿ ಕೂಡ ವಿಧವೆಯರ ಬಾಳು ಕಣ್ಣೀರಿನ ಕಡಲಾಗಿರುವಾಗ ಪುರಂದರದಾಸರ ಕಾಲಕ್ಕೆ ಇನ್ನೂ ಕಠಿಣವಾಗಿರಬೇಕು. ವಿಧವೆಯರ ಮೂಕ ವೇದನೆಗಳಿಗೆ ಸ್ಪಂದಿಸಿರುವ ಪುರಂದರದಾಸರಿಗೆ ಅವರ ಬಗೆಗೆ ಅಪಾರ ಅನುಕಂಪ ಇರುವುದೂ ಸಮಾಜದ ಬಗೆಗೆ ಆಕ್ರೋಶ ಇರುವುದೂ ಇಲ್ಲಿ ಸ್ಪಷ್ಟವಾಗುತ್ತದೆ. ವಿಧವೆಯ ರೂಪ, ಯೌವನ, ಬುದ್ಧಿಮತ್ತೆ, ಶ್ರೀಮಂತಿಕೆ, ಸೇವಾಚಾತುರ್ಯ ಶ್ರಮಗಾರಿಕೆ ಇವೆಲ್ಲವೂ ಆಕ್ಷೇಪಿಸುವರ ಬಾಯಿಗೆ ಒಳ್ಳೆಯ ಆಹಾರವಾಗಿ ಬಿಡುತ್ತವೆ. ಹೆತ್ತ ಮನೆ ಹೊಕ್ಕ ಮನೆಗಳೆರಡರಿಂದಲೂ ದೂಷಣೆಯನ್ನೇ ಪಡೆಯುವ ಆಕೆಯ ಸ್ಥಿತಿ ಚಿಂತಾಜನಕ.

**ಪಾಶ :** ಸಾಕು ಸಂಸಾರ ತೆರೆಯ ನೂಕಲಾರೆನು
ಬೇಕು ನಿನ್ನ ಚರಣ ಕಮಲ ಬೇರೆ ಅನ್ಯತ್ರ ಗತಿಯಕಾಣೆ ಪ।

. . . . . . . . . . . . . . . . . . . . .

. . . . . . . . . . . . . . . . . . . . .

ಸಂಸಾರವು ಸಂತಸಕ್ಕೆ ಆಗರವಾಗಲಿ ಎಂದು ಎಲ್ಲರೂ ಬಯಸುತ್ತಾರೆ. ಆದರೆ ಎಷ್ಟೋ ಸಲ ನಮ್ಮ ಶ್ರಮಕ್ಕೆ ತಕ್ಕ ಫಲ ಸಿಗುವುದಿಲ್ಲ. ಅದಕ್ಕಾಗಿ, ಪುರಂದರದಾಸರು ಸಂಸಾರದಲ್ಲಿ ಬರುವ ಕಷ್ಟಗಳನ್ನು ಸಮುದ್ರದ ತೆರೆಗಳಿಗೆ ಹೋಲಿಸಿ ನೂಕಲಾರೆನು ಸಂಸಾರ ತೆರೆಯ' ಎಂದು ಹೇಳುತ್ತಿದ್ದಾರೆ. ಸಂಸಾರವನ್ನು ಇನ್ನೊಂದು ರೂಪಕ 'ಪಾಶ'ದ ಮೂಲಕ ಹೇಳುತ್ತಾ ತಮ್ಮ ಕಷ್ಟವನ್ನು ಭಗವಂತನಲ್ಲಿ ಹೇಳಿಕೊಳ್ಳುತ್ತಿದ್ದಾರೆ.

**ಪಾಶ:** ತಂದೆ ತಾಯಿ ಬಂಧು ಬಳಗ
ವೆಂದು ಪಾಶಕ್ಕೆಸಿಕ್ಕು
ಒಂದು ದಿನದ ಸುಖವನು ಇಂದು ಕಾಣೆನೋ
ಕಂದರ್ಪಜನಕ ಕಾಯದಿರೆ
ಕುಂದುನಿಂದೆ ಬಂದರೆ ದೂರು ತಂದು
ಕೊಡುವರು ಲಕ್ಷ್ಮೀರಮಣ ೨। (೬೮)

ಸಂಸಾರವನ್ನು 'ಬಲೆ' ಗೆ ಹೋಲಿಸಿ ಅವರಲ್ಲಿ ಸಿಕ್ಕು ಒದ್ದಾಡುತ್ತಿರುವೆ. ನಿನ್ನ ಚರಣಕಮಲ ಬಿಟ್ಟು ಬೇರೆ ಅನ್ಯತ್ರಗತಿಯ ಕಾಣೆ, ಕರುಣದಿ ಕಾಯಬೇಕು ಎಂದು ಆತ್ಮನಿವೇದನೆ ಮಾಡಿಕೊಳ್ಳುತ್ತಿದ್ದಾರೆ.

**ಪಾಯಸ :** ಬರಿದೆ ನೀ ಬಯಸದಿರಿಹಲೋಕ ಸುಖವೆಂಬೊ
ಅರಗಿನ ಪಾಯಸವ ಪ।

ಕರಣ ಶುದ್ಧದಿಗಳಿಸು ಪರಲೋಕ ಸುಖವೆಂಬ

ಶ್ಯಾವಿಗೆ ಪಾಯಸವ ಹೇ ಮನವೇ ।ಅ।

ಮುಂದುವರಿಯದೆ ಬಾಳ್ವ ಮೂಢ ನೃಪನ ಸೇವೆ
ಮುಗ್ಗು ರಾಗಿಯ ಹಿಟ್ಟು
ಮಂದಮತಿಗಳೊಳು ಸ್ನೇಹವ ಮಾಡಲು
ನೀ ಪೋಗುವೆ ಕೆಟ್ಟು
ಸಮದೇಹವಿಲ್ಲದೆ ದೊಡ್ಡ ಮಾರ್ಗದಲಿ ಮು
ಕುಂದ ನಂಪ್ರಿಯ ಕಟ್ಟು ಹೇಮನವೆ ।೧। (೬೯)

ಅರಗಿನ ಪಾಯಸವು ಇಲ್ಲಿ ಇಹಲೋಕ ಸುಖವನ್ನು ಸಂಕೇತಿಸುತ್ತದೆ. ಮನುಷ್ಯನ ದೇಹಕ್ಕೆ ಆಗುವ ಪಕ್ವಾನ್ನ ವಡವೆ, ವಸ್ತ್ರಗಳಸುಖವು ಅರಗಿನ ಪಾಯಸದಂತೆ, ಅದನ್ನು ತ್ಯಜಿಸಿ ಪರಮಾತ್ಮನ ಅನುಗ್ರಹವೆಂಬ ಅನುಕೂಲ್ಯವಾದ ಪರಲೋಕಸುಖವೆಂಬ ಶ್ಯಾವಿಗೆಪಾಯಸವನ್ನು ಗಳಿಸು ಎನ್ನುತ್ತಾರೆ ಪುರಂದರದಾಸರು. ಈ ದೇಹಕ್ಕೆ ಒದುಗುವ ಸುಖಗಳು ಅರಗಿನಂತೆ ನಮ್ಮ ಇಂದ್ರಿಯಗಳನ್ನು ಸುಡುತ್ತವೆ. ಈಗಿನ ಸಮಾಜದಲ್ಲಿ ಇಂದ್ರಿಯಗಳ ದಾಹಕ್ಕೆ ಬಲಿಯಾದ ಅನೇಕರು "ಸಕ್ಕರೆ ರೋಗ, ಬೊಜ್ಜು, ಕ್ಯಾನ್ಸರ್ ಹಾಗೂ ಏಡ್ಸ್" ಮುಂತದ ರೋಗಗಳಿಂದ ಬಳಲುತ್ತಿದ್ದಾರೆ. ಅದಕ್ಕಾಗಿ ಪುರಂದರದಾಸರು ತಿಳಿಸಿದ ಇಂದ್ರಿಯ ನಿಗ್ರಹವು ಅತ್ಯಂತ ಅವಶ್ಯಕ ಎನಿಸುತ್ತದೆ. ಹಾಗೂ ಅಂತಃಕರಣ ಶುದ್ಧಿಯಿಂದ, ಜ್ಞಾನಿಗಳ ಸ್ನೇಹದಿಂದ ಆಧ್ಯಾತ್ಮಿಕವಾಗಿ ಪ್ರಗತಿಹೊಂದಿ ಜ್ಞಾನಮಾರ್ಗದಲಿ ನಡೆಯಲು ದಾಸರು ಜನರನ್ನು ಪ್ರೇರೆಪಿಸುತ್ತಿದ್ದಾರೆ.

**ಬೇರ (ವ್ಯಾಪಾರ):** ನಾನು ಬೇರ ಮಾಡುವೆ
ಎನ್ನ ನಾಲಿಗೆಯೆಂಬ ಎತ್ತನೇರಿಕೊಂಡು ।ಪ।

ತನುವೆಂಬೋ ಒಂದು ಗೋಣಿಯಲ್ಲಿ
ರಾಮನಾಮವೆಂಬೊ ಸರಕು ತುಂಬಿಕೊಂಡು ।೧।

ಇಂದ್ರಿಯಗಳೆಂಬ ಸುಂಕದವರಡ್ಡ ಬಂದರೆ ಮು
ಕುಂದ ಮುದ್ರೆಯ ತೋರಿಸಿ ಹೊಡೆದಾಡಿ ।೨।

ಅಚಲಾನಂದ ಪುರಂದರವಿಠಲನಲ್ಲಿ ಪೋಗಿ
ಪ್ರಚುರ ಭಕ್ತಿಯೆನ್ನಿತ್ತು ಮುಕ್ತಿಯ ಪಡೆದು ।೩। (೭೦)

ಇಲ್ಲಿ ಬೇರ (ವ್ಯಾಪಾರ ಎನ್ನುವುದರ ತದ್ಭವ ಬೇಹರ>ಬೇರ) ಪ್ರತಿಮೆಯು ವ್ಯಾಪಾರದ ವಿವರಗಳನ್ನು ಬಿಚ್ಚಿಡುತ್ತಾ ತಾತ್ವಿಕ ನೆಲೆಗಟ್ಟಿನ ಸ್ಪಷ್ಟೀಕರಣವನ್ನು ಮೂರ್ತಗೊಳಿಸುತ್ತದೆ. ವ್ಯಾಪಾರದಲ್ಲಿ ಸಹಜವಾಗಿ ಕೊಡುವುದು, ತೆಗೆದು ಕೊಳ್ಳುವುದು ಇರುತ್ತದೆ. ಇಲ್ಲಿ ಆತ್ಯಂತಿಕ ಭಕ್ತಿಯನ್ನು ಕೊಟ್ಟು ಭಗವಂತನ ಅನುಗ್ರಹದಿಂದ ಮುಕ್ತಿಯನ್ನು ಪಡೆದುಕೊಳ್ಳುವ ವ್ಯಾಪಾರ ನಡೆಯುತ್ತದೆ. ಉದ್ದೇಶಿತ ತತ್ವ ಅಥವಾ ಸಿದ್ಧಾಂತದ ಪ್ರತಿಪಾದನೆಗೆ ಅನ್ಯ ವಲಯವೊಂದನ್ನು ಹೋಲಿಕೆಗೆ ಆರಿಸಿಕೊಂಡು, ಆ ವಲಯದ ಪರಿಭಾಷೆಗಳನ್ನು ಬಿಡಿಬಿಡಿಯಾಗಿ ಲೌಕಿಕತೆ ಯೊಂದಿಗೆ ಸಮೀಕರಣಗೊಳಿಸುವುದು ಇಲ್ಲಿನ ವಿಧಾನವಾಗಿದೆ.

ಬೈಗುಳ : ಬೈಯಿರೋ ಬೈಯಿರೋ
ಮನಮುಟ್ಟ ಬೈಯಿರೋ ಪ।

ಚೆನ್ನಾಗಿ ಬೈದೆನ್ನ ಧನ್ಯನ ಮಾಡಿರೋ ಅ।
ಅವರು ಇವರು ಬೈವರೆಂಬೊ
ಹೀನಬುದ್ಧಿ ನನಗಿಲ್ಲ
ನಾ ಮಾಡಿದಷ್ಟು ಪಾಪವನ್ನು
ಅಳೆದು ಹಾಕಿ ಹಂಚಿಕೊಳ್ಳಿರೋ ೧।

ಇರುವೆ ನೊಣ ಕೊಂದ ಪಾಪ
ಪರನಿಂದೆಯ ಮಾಡಿದ ಪಾಪ
ಹೊಲೆಯ ಪಾಪ ಕೆಲವು ಉಂಟು
ಅಳೆದು ಹಾಕಿ ಹಂಚಿಕೊಳ್ಳಿರೋ ೨।

ಅತ್ತೆ ಮಾವನ ಬೈದ ಪಾಪ
ಮತ್ತೆ ಹಿರಿಯರ ಜರಿದ ಪಾಪ
ಕರ್ತ ಶ್ರೀ ಪುರಂದರವಿಠಲನ್ನ
ಚಿತ್ತದಲ್ಲಿ ನೆನೆಯದ ಪಾಪ ೩। (೭೧)

ಬೈಗುಳ ಒಂದು ಭಾವ ಪ್ರತಿಮೆ. ಅದು ಬೈಗುಳದಿಂದ ನಮ್ಮ ತಪ್ಪುಗಳು ತಿಳಿದು ಮನಶುದ್ಧಿಯಾಗುವ ಕಾರ್ಯವನ್ನು ಸಂಕೇತಿಸುತ್ತದೆ. ಮಾಡಿದ ಕೆಟ್ಟ ಕೆಲಸದ ಕಾವು ಅವನನ್ನು ಕಂಡು ಬೈಯುವವರಿಂದ ಕಡಿಮೆಯಾಗುತ್ತದೆ. ಒಬ್ಬ ಮಾಡಿದ ಪಾಪ ಬೇರೆಯವರು ಮಾಡುವ ನಿಂದನೆಯಿಂದ ಪರಿಹಾರವಾಗುವುದೆಂದೂ, ಅದು ನಿಂದಕರಿಗೆ ಒದಗುವದೆಂದೂ ಅಗ್ನಿಪುರಾಣದ ಮಾತಿದೆ. 'ಮಾಡಿದವರ ಪಾಪ ಆಡಿದವರಿಗೆ" ಎಂಬ ಕನ್ನಡ ಗಾದೆಗೆ ಇದೇ ಮೂಲ ಅದಕ್ಕಾಗಿ ಯಾರಾದರು ಬಯ್ದರೆ ಕೋಪಿಸಿಕೊಳ್ಳದೆ ಅದನ್ನು ಧನಾತ್ಮಕವಾಗಿ ತೆಗೆದುಕೊಳ್ಳಬೇಕೆಂಬ ಸಂದೇಶ ಇಲ್ಲಿ ಮೂಡಿದೆ.

ಮಾರಿ : ಪತಿ ಭಕುತಿ ಇಲ್ಲದಿರು ಸತಿಯ ಸಂಗ
ವ್ರತಗೆಟ್ಟು ಸುಖ ಪಡೆಯಲಿಲ್ಲವೊ ರಂಗ ಪ।
. . . . . . . . . . . . . . . . . . . . .
ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ
ತಂದರೆ ಹತ್ತು ಮನೆಯೊಳಗೊಂದು ಮಾಡಿ
ಇಂದೇನಿಲ್ಲವು ಎಂದು ಮುಖ ಮೂರು ಕಡೆ ತಿರುವಿ
ಕೊಂಡು ಹೋಗುವನಾರಿ ಬಹುದೊಡ್ಡ ಮಾರಿ ೨।
. . . . . . . . . . . . . . . . . . . . .
ತಾಯನ್ನು ಹೊರಡಿಸು ತಂದೆಯನು ತೆರಳಿಸು
ದಾಯಾದಿಯನು ಮನೆಯಲಿರಿಸಬೇಡ
ಬಾಯಿನ್ನು ಮನೆಕಟ್ಟಿ ಬೇರಿರುವ ನಾವೆಂಬ
ಮಾಯಕಾತಿಯ ಸಂಗ ಅಭಿಮಾನ ಭಂಗ ೫। (೭೨)
. . . . . . . . . . . . . . . . . . . . .

'ಮಾರಿ' ಪ್ರತಿಮೆ ಕೆಟ್ಟ ಸ್ವಭಾವದ ಸ್ತ್ರೀಯನ್ನು ಸಂಕೇತಿಸುತ್ತದೆ. ಸಮಾಜದಲ್ಲಿ ಸಾತ್ವಿಕ, ರಾಜಸ ಹಾಗು ತಾಮಸ ಸ್ವಭಾವದ ಜನರಿರುತ್ತಾರೆ. ಅದಕ್ಕೆ ಲಿಂಗಬೇಧವಿಲ್ಲ. ಅಂತೆಯೆ ತಾಮಸ ಸ್ವಭಾವದ ಸ್ತ್ರೀಯರಿಂದ ಬೇರೆಯವರೀಗೆ ಹೇಗೆ ಕೆಡುಕಾಗುವದೆಂಬ ಅಂತರಾರ್ಥ ಇಲ್ಲಿದೆ. ಗೃಹಕೃತ್ಯದಲ್ಲಿ ಒಪ್ಪವಿಲ್ಲದೆ ತುಂಬ ಖರ್ಚು ಮಾಡಿಸುವ ಮಕ್ಕಳಿಗೆ ಒಡವೆ ವಸ್ತುವಿಲ್ಲವೆಂದು ಹಂಗಿಸುವ, ವಯಸ್ಸಾದ ಗಂಡನೆಂದು ಮೇಲಿಂದ ಮೇಲೆ ನೆನಪಿಸುವ ಅತ್ತೆ ಮಾವಂದಿರು ನೆಂಟರು ಉಳ್ಳ ಅವಿಭಕ್ತ ಕುಟುಂಬವನ್ನು ಒಡೆಸುವ ಇಂಥ ಎಷ್ಟೋ ಸ್ತ್ರೀಯರು ಸಮಾಜದಲ್ಲಿರುತ್ತಾರೆ. ಅಂತಹವರನ್ನು ಕಂಡು ನೊಂದು ಈ ಮೇಲಿನಂತೆ ನುಡಿದಿದ್ದಾರೆ ಪುರಂದರದಾಸರು.

**ಮಣ್ಣು :** ಮಣ್ಣಿಂದ ಕಾಯ ಮಣ್ಣಿಂದ ಪ।

ಮಣ್ಣಿಂದ ಸಕಲ ದೇಶಗಳಲ್ಲಿ
ಮಣ್ಣಿಂದ ಸಕಲ ವಸ್ತುಗಳಲ್ಲಿ
ಮಣ್ಣ ಬಿಟ್ಟವರಿಗೆ ಆಧಾರವಿಲ್ಲ
ಅಣ್ಣಗಳಿರೆಲ್ಲರೂ ಕೇಳಿರಯ್ಯ ಅ।

ಅನ್ನ ಉದಕ ಊಟವೀಯೋದು ಮಣ್ಣು
ಬಣ್ಣ ಬಂಗಾರ ಬೊಕ್ಕಸವೆಲ್ಲ ಮಣ್ಣು
ಉನ್ನತವಾದ ಪರ್ವತವೆಲ್ಲ ಮಣ್ಣು
ಕಣ್ಣು ಮಾರುಳ್ಳನ ಕೈಲಾಸ ಮಣ್ಣು ೧।

ದೇವರ ಗುಡಿ ಮಠ ಮನೆಯಲ್ಲ ಮಣ್ಣು
ಆವಾಗ ಅಡುವ ಮಡಕೆಯು ತಾ ಮಣ್ಣು
ಕೋವಿದರಸರ ಕೋಟೆಗಳೆಲ್ಲ ಮಣ್ಣು
ಪಾವನ ಗಂಗೆಯ ತಡಿಯೆಲ್ಲ ಮಣ್ಣು ೨।

ಬತ್ತ ಭರಣ ಧಾನ್ಯ ಬೆಳೆಯುವುದೇ ಮಣ್ಣು
ಸತ್ತವರನು ಹೂಳಿಸಿಡುವುದೆ ಮಣ್ಣು
ಉತ್ತಮವಾದ ವೈಕುಂಠವೇ ಮಣ್ಣು
ಪುರಂದರವಿಠಲನ ಪುರವೆಲ್ಲ ಮಣ್ಣು ೩। (೭೩)

ಮಣ್ಣು ಪ್ರತಿಮೆ ಇಲ್ಲಿ ಮೂಲ ಪ್ರಕೃತಿಯನ್ನು ಸಂಕೇತಿಸುತ್ತದೆ. ಪ್ರತಿಯೊಂದು ವಸ್ತುವಿನ ನಿರ್ಮಾಣಕ್ಕೆ ಅವಶ್ಯವಾಗಿರುವ ಮೂಲದ್ರವ್ಯದ ಮಹತ್ವವನ್ನು ಇಲ್ಲಿ ತಿಳಿಸಲಾಗಿದೆ. ದೈವತ್ವವು ಸೃಷ್ಟಿಯ ಪ್ರತಿಯೊಂದು ಕಣಕಣದಲ್ಲಿಯೂ ಅಡಗಿರುವ ಭಾವನೆಯನ್ನು ಮೂರ್ತಗೊಳಿಸುತ್ತದೆ.

**ಮಾಯಾಪಾಶ :** ಹರಿನಾರಾಯಣ ಜಯ ಪುರುಷೋತ್ತಮ
ಹರಿ ನಾರಾಯಣ ಎನು ಮನವೆ ಪ।

ದುರಿತ ಭಯವನುತ್ತರಿಸ ಬೇಕಾದರೆ
ಸಿರಿಯರಸನ ಸ್ಮರಿಸೆಲೆ ಮನವೆ ಅ।
. . . . . . . . . . . . . . . . . .
. . . . . . . . . . . . . . . . . .

ಮಡದಿ ಮಕ್ಕಳ ಮಮಕಾರಕೆ ಮನ
ಒಡಂಬಡುತ ನಗುತ್ತಲಿರಬೇಡ
ಬಿಡಲಾರದೆ ಮಾಯಾಪಾಶಕೆ ಸಿಲುಕಿ
ಕಡೆಗಾಣದೆ ನೀ ಕೆಡಬೇಡ
ಹುಡುಕುತ ಬಂಧುಮನವರು ಹೊರಡೆನ್ನುತ
ತಡೆಯದೆ ಕೊಂಡೊಯ್ವರು ಗಾಢ
ಕಡಲ ಶಯನನ ಮನ ಮುಟ್ಟಿ ಭಜಿಸಲು
ಕಡೆಯಲಿ ಮುಕ್ತಿ ಬಹುದು ನೋಡ ॥೩॥
.................... (೭೪)

ಮಾಯಾಪಾಶವು ಸಂಸಾರವನ್ನು ಸಂಕೇತಿಸುತ್ತದೆ. ಮಾನವನ ಸಂಸಾರವೆಂಬುವ ಕಷ್ಟ ಕಾರ್ಪಣ್ಯಗಳ ಆಗರ. ಸಂಸಾರವನ್ನು ತ್ಯಜಿಸಿ ಸಂನ್ಯಾಸಿಯಾಗು ಎಂದು ಹೇಳದೆ, ಪುರಂದರದಾಸರು ಸಂಸಾರದಲ್ಲಿ "ಇರಬೇಕು ಇರದಂತಿರಬೇಕು" ಎಂದಿದ್ದಾರೆ. ಮಾನವನು ಹೆಚ್ಚಿನ ಆಸೆ ಮೋಹಗಳಿಗೆ ಸಿಲುಕಿಕೊಂಡರೆ ಅದು ಮಾಯದ ಬಲೆಯಲ್ಲಿ ಸಿಕ್ಕಿಕೊಂಡಂತೆ ಅದಕ್ಕಾಗಿ ಪ್ರತಿಯೊಬ್ಬ ಜೀವಿಯು ತನ್ನ ಕರ್ತವ್ಯಗಳನ್ನು ವಿಶ್ವಾಸವಿಟ್ಟು ಮಾಡುತ್ತ ಪರಮಾತ್ಮನ ಧ್ಯಾನದಲ್ಲಿದ್ದರೆ ಕಡೆಯಲ್ಲಿ ಮುಕ್ತಿ ಹೊಂದಬಹುದು ಎಂಬುದು ಅವರ ಸಂದೇಶ.

**ಮೂರ್ಖ :** ಯಾಕೆ ಮೂರ್ಖನಾದ್ಯೋ ನೀನು
ಯಾಕೆ ಮೂರ್ಖನಾದ್ಯೋ ॥ಪ॥

ಯಾಕೆ ಮೂರ್ಖನಾಧ್ಯೋ ನೀನು
ಕಾಕು ಬುದ್ಧಿಯನ್ನು ಬಿಟ್ಟು
ಲೋಕನಾಥನನ್ನು ನೆನೆ ಕಂಡ್ಯ ಮನುಜ ॥ಅ॥

ಸಾದು ಸಜ್ಜನ ಸಂಗ ಮಾಡು
ಭೇದಾಭೇದ ತಿಳಿದು ನೋಡು
ವಾದ ಬುದ್ಧಿ ಮಾಡುವರೆನೋ ಮನುಜ ॥೧॥

ದಾನ ಧರ್ಮವನ್ನು ಮಾಡು
ಜ್ಞಾನದಿಂದ ತಿಳಿದು ನೋಡು
ಹೀನ ಬುದ್ಧೀ ಮಾಡುವರೆನೋ ಮನುಜ ॥೨॥

ಮಕ್ಕಳು ಹೆಂಡಿರು ತನ್ನವರೆಂದು
ರೊಕ್ಕವನ್ನು ಗಳಿಸಿಕೊಂಡು
ಸೊಕ್ಕಿನಿಂದ ತಿರುಗುವರೇನೋ ಮನುಜ ॥೩॥

ಅಂತಕನ ದೂತರು ಬಂದು
ಕಂತೆ ಕಟ್ಟಿ ಹೊರಡು ಎಂದು
ನಿಂತರೆಲ್ಲರು ಬಿಡಿಸುವರೇನೋ ಮನುಜ ॥೪॥

ಅರಿಷಡ್ವರ್ಗದ ಆಟವ ಬಿಟ್ಟು
ಪುರಂದರವಿಠಲನ ಧ್ಯಾನದೊಳಿಟ್ಟು

ಪರಗತಿ ದಾರಿಯ ನೋಡೋ ಮನುಜ ಅ॥ (೭೫)

ಪರಮಾತ್ಮನ ನಾಮಸ್ಮರಣೆಯನ್ನು ಬಿಟ್ಟು ಸಂಸಾರದಲ್ಲಿ, ಹಣಗಳಿಸುವುದರಲ್ಲಿ ಮಗ್ನನಾಗಿರುವವನನ್ನು ದಾಸರು ಮೂರ್ಖನೆಂದು ಕರೆಯುತ್ತಾರೆ. ಸಾತ್ವಿಕರು ಹಾಗೆ ಮೂರ್ಖರಾಗದೆ ಸುಜ್ಞಾನಿಗಳ ಸಂಗದಲ್ಲಿ ಪಂಚಬೇಧ (ಊ) ಗಳನ್ನು ತಿಳಿದು ಅರಿಷದ್ವರ್ಗಗಳನ್ನು ಮೆಟ್ಟಿ ಪರಮಾತ್ಮನ ಧ್ಯಾನದೊಳಿರಲು ಕರೆ ನೀಡುತ್ತಾರೆ.

**ಮೂಢ :** ಯಾವಾಗಲೂ ಹೇಳಬಾರದೆ ವಾಸು
ದೇವನೆ ಕೈಬಿಡಬೇಡವೆಂದೆನುತಲಿ ಪ॥
. . . . . . . . . . . . . . . . . . . . .
. . . . . . . . . . . . . . . . . . . . .
ಮಾಡಿಟ್ಟ ಮನೆಯಲ್ಲಿ ಕೂಡಿಟ್ಟ ಧನವಿಲ್ಲ
ಆಡಿಸಿಕೊಳ್ಳಲು ಮಕ್ಕಳಿಲ್ಲ
ಪಾಡಿ ನಿನ್ನನು ಸ್ತುತಿ ಮಾಡುವೆನೆಂದರೆ
ಮೂಢರೊಳಗೆ ಬಲು ಮೂಢನಾಗಿಹೆನೆಂದು ।೧।
. . . . . . . . . . . . . . . . . . . . .
. . . . . . . . . . . . . . . . . . . . . (೭೬)

ಇಲ್ಲಿ ಪುರಂದರದಾಸರ ಆತ್ಮನಿವೇದನೆಯಿದೆ. ಎಲ್ಲರ ಮನಸಿನಂತೆ ತಮ್ಮ ಮನಸು ಕೂಡ ಚಂಚಲವಾಗಿ ಹರಿಯ ಧ್ಯಾನಕ್ಕೆ ಹಿಂದೆ ಸರಿದಾಗ ತಮ್ಮನ್ನು ಮೂಢ ಎಂದು ಕರೆದುಕೊಂಡಿದ್ದಾರೆ. ಪುರಂದರ ದಾಸರು ಕೇವಲ ಇತರರಿಗೆ ಹೇಳುವ ಕೆಲಸವನ್ನು ಮಾತ್ರ ಮಾಡಿಲ್ಲ ತಮ್ಮನ್ನು ತಾವು ತಿದ್ದಿಕೊಳ್ಳುವುದಕ್ಕಾಗಿ ತಮ್ಮ ಮನಸ್ಸಿಗೂ ನೀತಿ ಬೋಧಿಸಿದ್ದಾರೆ. ಮೂಢ ಪ್ರತಿಮೆಯ ಅರ್ಥವು ಹರಿನಾಮಸ್ಮರಣೆ ಮರೆತ ಎಲ್ಲ ಜೀವಿಗಳಿಗೂ ಅನ್ವಯಿಸುತ್ತದೆ.

**ರೊಕ್ಕ :** ರೊಕ್ಕ ಎರಡಕ್ಕೂ ದುಃಖ ಕಾಣಕ್ಕ ಪ॥
. . . . . . . . . . . . . . . . . . . .
ನೆಂಟರ ಇಷ್ಟರ ಮರೆಸೋದು ರೊಕ್ಕ
ಕಂಟಕಗಳ ಪರಿಹರಿಸೋದು ರೊಕ್ಕ
ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ
ತುಂಟತನಗಳನು ಬಲಿಸೋದು ರೊಕ್ಕ ।೨।

ಇಲ್ಲದ ಗುಣಗಳತರಿಸೋದು ರೊಕ್ಕ
ಸಲ್ಲದ ನಾಣ್ಯವ ನಡಿಸೋದು ರೋಕ್ಕ
ಬೆಲ್ಲಕ್ಕಿಂತಲು ಬಹು ಸವಿ ರೊಕ್ಕ
ಇಲ್ಲದಿರಲು ಬಹು ದುಃಖ ಕಾಣಕ್ಕ ೩।
. . . . . . . . . . . . . . . . . . . . .
ವಿದ್ಯದ ಮನುಜರ ಕರೆಸೋದು ರೊಕ್ಕ
ಹೊದ್ದಿದ ಜನರನ್ನು ಬಿಡಿಸೋದು ರೊಕ್ಕ
ಮುದ್ದು ಪುರಮದರವಿಠಲನ ಮರೆಸುವ
ಬಿದ್ದು ಹೋಗೋ ರೊಕ್ಕವ ಸುಡು ನೀನಕ್ಕ ೫॥ (೭೭)

ರೊಕ್ಕ ಪ್ರತಿಮೆ ಇಲ್ಲಿ ಹಣದ ಪ್ರಭಾವವನ್ನು ಮೂರ್ತಗೊಳಿಸುತ್ತದೆ. ರೊಕ್ಕ ಇದ್ದರೂ ದುಃಖ, ಇಲ್ಲದಿದ್ದರೂ ದುಃಖ ಅದಕ್ಕಾಗಿ ದಾಸರು ಇದನ್ನು ಎರಡಕ್ಕೂ ದುಃಖ ಕಾಣಕ್ಕ ಎಂದಿದ್ದಾರೆ. ಹಣದಿಂದ ಅನುಕೂಲಗಳಿದ್ದ ಹಾಗೆಯೆ ಇದು ಅನೀತಿ ಮಾರ್ಗದಲ್ಲಿ ನಡೆಯಲೂ ದಾರಿ ಮಾಡಿಕೊಡುವುದು. ರೊಕ್ಕ ಮನುಷ್ಯನ 'ತುಂಟತನ' ಗಳನ್ನು ಬೆಳೆಸುತ್ತ ಹೋಗುತ್ತದೆ. ಅದು ತನ್ನ ಅಂತರಿಕ ಮೌಲ್ಯವನ್ನು ತೋರ ಗೊಡದೆ ತನ್ನ ಅಸ್ತಿತ್ವ ಎಷ್ಟು ಪ್ರಭಾವಶಾಲಿಯಾದ್ದೆಂಬುದನ್ನು ದರ್ಪದಿಂದ ತೋರಿಸಿಕೊಡುತ್ತ ಸಾಗುತ್ತದೆ. ಬರಿಯ ದುಃಖ ಕಳವಳಗಳನ್ನೇ ತರುವ ಈ ರೊಕ್ಕವನ್ನು ಕವಿ ತಿರಸ್ಕರಿಸಿದ್ದಾನೆ.

**ಲೊಳಲೊಟ್ಟೆ :** ಲೊಳಲೋಟ್ಟೆ ಎಲ್ಲಾ ಲೊಳಲೊಟ್ಟೆ ಪ।

ಆನೆ ಕುದುರೆ ಒಂಟೆ ಲೊಳಲೊಟ್ಟೆ ಬಹು
ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ, ದೊಡ್ಡ
ಕ್ಷೋಣೀಶನೆಂಬುದು ಲೊಳಲೊಟ್ಟೆ ೧।

ಮುತ್ತು ಮಾಣಿಕ್ಯ ಲೊಳಲೊಟ್ಟೆ ಚಿನ್ನ
ಛತ್ರ ಚಾಮರ ಧ್ವಜ ಲೊಳಲೊಟ್ಟೆ
ಸುತ್ತಗಲ ಕೋಟೆ ಲೊಳಲೊಟ್ಟೆ
ಮತ್ತೆ ಉತ್ತಮ ಪ್ರಭುತ್ವ ಲೊಳಲೊಟ್ಟೆ ೨।

ಕಂಟಕರೆಂಬುದು ಲೊಳಲೊಟ್ಟೆ ನಿನ್ನ
ನೆಂಟರು ಇಷ್ಟರು ಲೊಳಲೊಟ್ಟೆ
ಉಂಟಾದ ಗುಣನಿಧಿ ಪುರಂದರವಿಠಲನ
ಬಂಟನಾಗದವ ಲೊಳಲೊಟ್ಟೆ ೩। (೭೮)

ಲೊಳಲೊಟ್ಟೆ (ಜೊಳ್ಳು) ಎಂಬ ಪ್ರತಿಮೆಯು ಸಂಸಾರವು ನಶ್ವರ ಎಂಬುದನ್ನು ತಿಳಿಸುತ್ತದೆ. ಪ್ರತಿಯೊಬ್ಬ ಜೀವಿಯು ಸಂಸಾರ ಸುಖವನ್ನು ಸ್ಥಿರವೆಂದು ನಂಬಿ ಭಗವಂತನ ಸ್ಮರಣೆ ಮಾಡದೆ ಬಾಳನ್ನೆಲ್ಲಾ ಭೋಗಕ್ಕಾಗಿ ಸವೆಸುತ್ತಾನೆ. ಮುಪ್ಪು ಬಂದಾಗ ಮೃತ್ಯುವಿನ ಸನಿಹ ನಿಂತು ನೋಡಿದಾಗ ಹೆಣ್ಣು, ಮಣ್ಣು, ಧನಕನಕ, ರಾಜವೈಭವ, ಎಲ್ಲವೂ ಅನಿತ್ಯ ಅಸ್ಥಿರವೆಂದು ತಿಳಿಯುತ್ತದೆ. ಇದನ್ನು ತಿಳಿಸುವ ಈ ಕೀರ್ತನೆಯು ದೇಶೀ ಭಾಷೆಯಲ್ಲಿ ಪ್ರಭಾವಯುತವಾಗಿ ಮೂಡಿ ಬರುತ್ತದೆ.

**ವಾರಿಧಿ : (ಸಮುದ್ರ)**

ಘೋರತನದ ಸಂಸಾರ ದುಃಖದ
ವಾರಿಧಿ ಇದರೊಳಗೇನುಂಟು
ಮೂರುದಿವಸ ನೀ ಬಾಳುವ ಬಾಳಿಗೆ
ಹಾರೈಸುವುದೇತರ ನಂಟು
ತೋರುವ ಸಿರಿ ಸಂಪತ್ತಿನ ನೆಲೆಯ
ವಿಚಾರಿಸಲದು ಕನಸಿನ ಗಂಟು
ಮಾರರಮಣನ ಮನಮುಟ್ಟಿ ಭಜಿಸಲು
ಕಾರುಣ್ಯದ ಮುಕುತಿಯು ಉಂಟು. (೭೯)

ದಾಸರು ಸಮುದ್ರವನ್ನು ಸಂಸಾರಕ್ಕೆ ಹೋಲಿಸಿದ್ದಾರೆ. ಸುಖ ದುಃಖಗಳು ಸಮುದ್ರದ ತೆರೆಗಳಂತೆ, ಕೆಲವೇ ದಿನ ಬಾಳಿ ಹೋಗುವ ಮನುಷ್ಯನು ಮೋಹದಿಂದ ಮುಕ್ತನಾಗಿರಬೇಕೆಂಬುದು ಅವರ ಆಶಯ. ಶ್ರೀಮಂತಿಕೆಯ ಸೊಕ್ಕು ತಲೆಗೇರಬಾರದೆಂಬುದು ಅವರ ಹಿತವಾದ ಅದಕ್ಕಾಗಿ ಸಿರಿ ಸಂಪತನ್ನು ಕನಸಿನ ಗಂಟು ಎಂದ ಅವರು ಹರಿನಾಮಸ್ಮರಣೆಯಿಂದ ಪರಮಾತ್ಮನ ಕರುಣೆ ಪಡೆಯಲು ಉಪದೇಶಿಸುತ್ತಾರೆ.

**ಶುದ್ಧಿ :** ಮನಶುದ್ಧಿಯಿಲ್ಲದವಗೆ ಮಂತ್ರದ ಫಲವೇನು
ತನುಶುದ್ಧಿಯಿಲ್ಲದವಗೆ ತೀರ್ಥದ ಫಲವೇನು
ಮಿಂದಲ್ಲಿ ಫಲವೇನು ಮೀನು ಮೊಸಳೆಯಂತೆ
ನಿಂದಲ್ಲಿ ಫಲವೇನು ಶ್ರೀ ಶೈಲದ ಕಾಗೆಯಂತೆ
ಹೊರಗೆ ಮಿಂದು ಒಳಗೆ ಮೀಯದವರ ಕಂಡು
ಬೆರಗಾಗಿ ನಗುತ್ತಿದ್ದ ಪುರಂದರವಿಠಲ. (೮೦)

ಢಂಬಾಚಾರ, ಬೂಟಾಟಿಕೆಗಳ ಬಗ್ಗೆ ದಾಸರು ಅನೇಕ ಕೀರ್ತನೆಗಳಲ್ಲಿ ಉಲ್ಲೇಖಿಸಿದ್ದಾರೆ. ಅವುಗಳಲ್ಲಿ "ಮಡಿ ಮಡಿ ಮಡಿಯೆಂದು ಅಡಿಗಡಿ ಹಾರುವೆ ಮಡಿ ಮಾಡುವ ಬಗೆ ಬೇರುಂಟು", "ಮಲವ ತೊಳೆಯ ಬಲ್ಲರಲ್ಲದೆ ಮನವ ತೊಳೆಯಬಲ್ಲರೆ" "ಸತ್ಯವೆಂಬುದೇ ಸ್ನಾನ ಉಪವಾಸ ಜಪ ನೇಮ". ಮುಂತಾದವು ಮನಶುದ್ಧಿಯನ್ನು ಬೋಧಿಸುತ್ತವೆ. ಇಲ್ಲಿ ಮೀನು ಮೊಸಳೆ ಮುಂತಾದ ಉಪಮೆಗಳ ಮೂಲಕ ದಾಸರು ಮನಶುದ್ಧಿಯಿಲ್ಲದೆ ಮಾಡಿದ ಸ್ನಾನ ವ್ಯರ್ಥ ಎಂದು ತಿಳಿಸುತ್ತಾರೆ. ಶ್ರೀ ಶೈಲದ ದೇಗುಲದಲ್ಲಿ ಕಾಗೆ ನಿಂತೇ ಇರುತ್ತದೆ ಭಕ್ತಿಯಿಂದಲ್ಲ ತಿನ್ನಲು ಏನಾದರು ದೊರೆತೀತೋ ಎಂದು ಅದರಂತೆ, ತೋರಿಕೆಯ ಭಕ್ತಿ ಇರಬಾರದು ಎಂಬುದು ಅವರ ಉಪದೇಶ.

**ಶ್ವಾನಕುಳಿ :** ಎಲ್ಲಾನು ಬಲ್ಲೆನೆಂಬುವಿರಲ್ಲ, ಅವಗುಣಬಿಡಲಿಲ್ಲ ಪ।
ಸೊಲ್ಲಿಗೆ ಶರಣರ ಕಥೆಗಳ ಪೇಳುತ

ಅಲ್ಲದ ನುಡಿಯನು ನುಡಿಯುವಿರಲ್ಲ ।ಅ।

ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ
ನೇಮನಿಷ್ಠಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ
ತಾವೊಂದರಿಯದೆ ಆಗಮತಿಳಿಯದೆ
ಶ್ವಾನನ ಕುಳಿಯಲಿ ಬೀಳುವಿರಲ್ಲ ।೧।
. . . . . . . . . . . . . . . . . . . . .
. . . . . . . . . . . . . . . . . . . . . (೮೧)

ಶ್ವಾನಕುಳಿ ತಿಪ್ಪೆಗುಂಡಿ ಎಂಬ ಅರ್ಥದೊಂದಿಗೆ ಪಾಪವನ್ನು ಸಂಕೇತಿಸುತ್ತದೆ. ಸಮಾಜದಲ್ಲಿ ಪೂಜ್ಯ ಸ್ಥಾನದಲ್ಲಿರುವ ಸನ್ಯಾಸಿಗಳೂ ಕೂಡ ಬೂಟಕತನ ತೋರಿಸುವುದನ್ನು ನೋಡಿ ಪುರಂದರದಾಸರು "ಕಾವಿಯ ನುಟ್ಟು ತಿರುಗುವಿರಲ್ಲ, ಕಾಮವ ಬಿಡಲಿಲ್ಲ' ಎಂದು ಆಪಾದಿಸುತ್ತಿದ್ದಾರೆ. ಸಮಾಜವು ಬಯಸುವ ಆದರ್ಶಗಳ ಎತ್ತರಕ್ಕೆ ಏರುವ ಸಾಮರ್ಥ್ಯ ಇಲ್ಲದವರು ಇಂತಹ ಕೆಲಸ ಮಾಡುವರು ಆದರೆ ಲೌಕಿಕ ಪ್ರಯೋಜನಗಳಿಗಾಗಿ ತಾವು ದೊಡ್ಡವರೆಂದು ತೋರಿಸುವ ಇಂಥಹ ಜನರ ದ್ವಂದ್ವ ನೀತಿಯಿಂದ ಸಮಾಜಕ್ಕೆ ಹೆಚ್ಚಿನ ಅಪಾಯವಿದೆ.

ಸಂಗ : ಭಾಷೆ ಹೀನರ ಸಂಗದಭಿಮಾನ ಭಂಗ ಪ

ಬೇಸತ್ತು ಬೇಲಿಯ ಮೆಲೊರಗಿದಂತೆ ಅ

ಹಸಿವೆಗಾರದೆ ಬೆಕ್ಕು ಹತ್ತಿಯನು ಮೆದ್ದಂತೆ
ತೃಷಗಾರದೆ ಜೋಗಿ ತೆವರ ತೋಡಿದಂತೆ
ಬಿಸಿಲಿಗಾರದೆ ಕೋತಿ ಬಂಡೆ ಮೆಲ್ಕುಳಿತಂತೆ
ಕುಸುಮೆಯ ಹೊಲದಲ್ಲಿ ಕಳ್ಳ ಹೊಕ್ಕಂತೆ ೧

ಮಳೆಯ ರಭಸಕೆ ಅಂಜಿ ಮರವೇರಿ ಕುಳಿತಂತೆ
ಛಳಿಯ ತಾಳದೆ ಜಲದಿ ಮುಳುಗಿದಂತೆ
ಹುಳು ನಂಜಿಕೆಗೆ ಹೋಗಿ ಹುತ್ತದಲಿ ಕುಳಿತಂತೆ
ಎಳೆನರಿಯು ಒಂಟೆಯ ತುಟಿಗೆ ಜೋತಂತೆ ೨

ಭಾಷೆ ಹೀನರ ಆಸೆ ಪುರುಷನಾರಿಯ ವೇಷ
ಬಿಸಿಲು ಹಣ್ಣನು ಮೆದ್ದು ಬಳಲುತಿಹರು
ವಸುಧೆಯೊಳು ಪುರಂದರವಿಠಲನ ನೆರೆನಂಬಿ
ಕುಶಲದಲಿ ಸುಖಿಯಾಗಿ ಬಾಳೆಲವೊ ಮನುಜ ೩ (೮೨)

ಸಜ್ಜನರ ಸಂಗವು ಸುಗಂಧವಿದ್ದಂತೆ, ದುರ್ಜನರ ಸಂಗವು ದರ್ಗಂಧವಿದ್ದಂತೆ ತನ್ನ ಪರಿಣಾಮ ವನ್ನು ಬೀರುವುದು. ದುರ್ಜನರು ಮಾತಿಗೆ ತಪ್ಪಿ ನಡೆಯುವವರು. ಹೆಣ್ಣು ವೇಷದಲ್ಲಿರುವ ಗಂಡಸನ್ನು ನಂಬಿದಂತೆ ಅಂತಹವರ ಸಂಗವು ತೊಂದರೆಗಳನ್ನು ತಂದುಕೊಡುತ್ತದೆ ಎಂಬುದನ್ನು ಪುರಂದರದಾಸರು ಅನೇಕ ಉಪಮೆಗಳ ಮುಲಕ ತಮ್ಮ ಲೋಕಾನುಭವವನ್ನು ತಿಳಿಸುತ್ತಾರೆ.

ಸ್ನಾನ : ಸ್ನಾನ ಮಾಡಿರಯ್ಯ ಜ್ಞಾನತೀರ್ಥದಲಿ
ನಾನು ನೀನೆಂಬಹಂಕಾರವ ಬಿಟ್ಟು ಪ

ತನ್ನೊಳು ತಾನೆ ತಿಳಿದರೊಂದು ಸ್ನಾನ
ಅನ್ಯಾಯಗಾರಿ ಕೆಳೆದಸರೊಂದು ಸ್ನಾನ
ಅನ್ಯಾಯಮಾಡದಿದ್ದರೊಂದು ಸ್ನಾನ
ಚೆನ್ನಾಗಿ ಹರಿಯ ನೆನೆದರೊಂದು ಸ್ನಾನ ೧

ಪರಸತಿಯ ಬಯಸದಿದ್ದರೆ ಒಂದು ಸ್ನಾನ
ಪರನಿಂದೆ ಮಾಡದಿದ್ದರೆ ಒಂದು ಸ್ನಾನ
ಪರದ್ರವ್ಯ ಅಪಹರಿಸದಿದ್ದರೆ ಒಂದು ಸ್ನಾನ
ಪರತತ್ವ ತಿಳಿದುಕೊಂಡರೆ ಒಂದು ಸ್ನಾನ ೨

ತಂದೆ ತಾಯಿಗಳ ಸೇವೆ ಒಂದು ಸ್ನಾನ
ಮುಂದಿನ ಮಾರ್ಗ ತಿಳಿದರೊಂದು ಸ್ನಾನ
ಬಂಧನವನು ಬಿಡಿಸಿದರೊಂದು ಸ್ನಾನ
ಸಂಧಿಸಿ ತಿಳಿದುಕೊಂಡರೆ ಸೇತು ಸ್ನಾನ ೩

ಅತ್ತೆ ಮಾವನ ಸೇವೆಯೊಂದು ಸ್ನಾನ
ಭರ್ತನ ಮಾತು ಕೇಳುವುದೊಂದು ಸ್ನಾನ
ಕ್ಷೇತ್ರ ಪಾತ್ರರ ಸಹವಾಸ ಒಂದು ಸ್ನಾನ
ಪಾರ್ಥಸಾರಥಿ ನಿಮ್ಮ ಧ್ಯಾನವೇ ಸ್ನಾನ ॥೪॥

ವೇದ ಶಾಸ್ತ್ರಗಳ ನೋದಿದರೊಂದು ಸ್ನಾನ
ಭೇದಾಭೇದ ತಿಳಿದರೊಂದು ಸ್ನಾನ
ಸಾದು ಸಜ್ಜನರ ಸಂಗ ಒಂದು ಸ್ನಾನ
ಪುರಂದರವಿಠಲನ ಧ್ಯಾನವೆ ಸ್ನಾನ ॥೫॥ (೭೩)

ಸ್ನಾನ ಪ್ರತಿಮೆ ಇಲ್ಲಿ ಅಜ್ಞಾನವೆಂಬ ಕೊಳೆಯನ್ನು ತೊಳೆದುಕೊಳ್ಳುವುದು ಎಂಬ ಅರ್ಥದಲ್ಲಿ ಮೂಡಿ ಬಂದಿದೆ ಮೇಲೆ ಹೇಳಿದ ನೀತಿ ವಿಷಯಗಳನ್ನು ತಿಳಿಯದೆ; ಕೃತಿಯಲ್ಲಿ ತರದೆ, ಕೇವಲ ಜಲದಿಂದ ಸ್ನಾನ ಮಾಡಿದರೆ ಮಲವನ್ನು ತೊಳೆಯಬಹುದೇ ಹೊರತು ಮನವನ್ನು ತೊಳೆದಂತೆ ಆಗಲಾರದು. ಸ್ನಾನಕ್ಕಿಂತ ಮನಃ ಶುದ್ಧಿಯೇ ಮುಖ್ಯ ಎಂದು ದಾಸರ ಅಭಿಪ್ರಾಯ, ಅದನ್ನೆ 'ತನುವ ನಿರೊಳಗೆದ್ದಿ ಫಲವೇನು ತನ್ನ ಮನದಲ್ಲಿ ದೃಢಭಕ್ತಿಯಿಲ್ಲದ ಮನುಜನು' ಎಂದಿದ್ದಾರೆ.

**ಸಂಬಳ :** ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ
ಪೆರ್ಮೆಯಿಂದ ದೇಹವ ನಂಬಬೇಡಿ ಕಾಣಿರೊ ॥ಪ॥

ಅಟ್ಟ ಅಡುಗೆ ಉಣಲು ಬಿಡನು
ಕೊಟ್ಟ ಸಾಲ ಕೇಳಬಿಡನು
ಪೆಟ್ಟಿಗೆಯೊಳಿದ್ದ ಚಿನ್ನವ
ತೊಟ್ಟೆನೆಂದರೆ ಯಮನು ಬಿಡನು ॥೧॥

ಅಕ್ಕನಿಲ್ಲಿ ಕರೆಯಲಿಲ್ಲ
ಮಕ್ಕಳನ್ನು ಪಡೆಯಲಿಲ್ಲ
ದುಃಖಗೊಂಡ ಕಣ್ಣೀರನು
ಉಕ್ಕಿಸಿದರೆ ಬಿಡನು ಯಮನು ॥೨॥

ಪೆಳ್ಳಿ ನೆಂಟರಿಗೆ ಕರೆದು
ಬೇಳೆಬೆಲ್ಲವನ್ನು ತಂದು
ನಾಳೆ ಮಗನ ಮದುವೆಯೆಂದು
ತಾಳು ಎಂದರೆ ಯಮನ ಬಿಡನು ॥೩॥

ಮಾಳಿಗೆ ಮನೆಯಿರಲಿ
ಜಾಳಿಗೆ ತುಂಬ ಹೊನ್ನಿರಲಿ
ಆಳು ಮಂದಿ ಶಾನೆಯಿರಲಿ
ಕಾಲನು ತಾ ಬೆನ್ನ ಬಿಡನು ॥೪॥

ಅರ್ತಿಯಿಂದ ಸಂಸಾರವ

ವ್ಯರ್ಥವಾಗಿ ನೆಚ್ಚಬೇಡಿ
ಕರ್ತು ಪುರಂದರವಿಠಲನ್ನ
ಭಕ್ತಿಯಿಂದ ಭಜಿಸಿರೊ ॥೬॥ (೮೪)

ಸಾವಿನ ಅನಿವಾರ್ಯತೆಯ ಬೆಳಕಿನಲ್ಲಿ ಧರ್ಮದ ಉಜ್ವಲ ಪಾತ್ರವನ್ನು ಇಲ್ಲಿ ಚಿತ್ರಿಸಲಾಗಿದೆ. ಮಾನವನು ಬದುಕಿರುವ ಅಲ್ಪಾವಧಿಯಲ್ಲೇ ತನಗೆ ಸಾಧ್ಯವಿರುವ ಉತ್ತಮ ಕಾರ್ಯಗಳನ್ನು ಮಾಡಿ ಮುಗಿಸ ಬೇಕೆಂಬ ತುಡಿತವು. ಇಂತಹ ಕೀರ್ತನೆಗಳನ್ನು ರಚಿಸಲು ಪುರಂದರದಾಸರಿಗೆ ಪ್ರೇರಕವಾಗಿರ ಬಹುದು.

ಪುರಂದರದಾಸರು ಸಂಸಾರವೆಂಬ ಪದವನ್ನು ಸಾಮಾನ್ಯ ಸಂದರ್ಭದಲ್ಲಿ 'ಕುಟುಂಬ' ಎಂಬ ಅರ್ಥದಲ್ಲಿ ಬಳಸಿದ್ದಾರೆ. ಹಾಗೂ ಸಂಸಾರವೆಂಬಂಥ ಭಾಗ್ಯವಿರಲಿ ಎಂಬಲ್ಲಿ ಇದೇ ಅರ್ಥವನ್ನು ಅನುಸರಿಸಿ ದ್ದಾರೆ.

**ಸಂಸಾರ:** ಸಂಸಾರವೆಂಬಂಥ ಭಾಗ್ಯವಿರಲಿ
ಕರಿಸಾರಿ ನೆನೆವೆಂಬ ಸೌಭಾಗ್ಯವಿರಲಿ ॥ಪ॥

ತಂದೆ ನೀನೆ ಕೃಷ್ಣ ತಾಯಿ ಇಂದಿರೆದೇವಿ
ಪೊಂದಿದ ಅಣ್ಣನು ವನಜ ಸಂಭವನು
ಇಂದುಮುಖಿ ಸರಸ್ವತಿ ದೇವಿಯೇ ಅತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು ॥೧॥
. . . . . . . . . . . . . . . . . . . . .
. . . . . . . . . . . . . . . . . . . . . (೮೫)

ರೋಗ, ದಾರಿದ್ರ ಏಕಾಕಿತನ, ಸುಖಃ–ದುಃಖ ಗಳನ್ನೊಂಡ ಸಂಸಾರವನ್ನು ಬಿಟ್ಟು ದೈವಗಳೊಂದಿಗೆ ಬೆಸೆದುಕೊಂಡ ಸಂಸಾರವನ್ನು ಪುರಂದರದಾಸರು ಬಯಸುತ್ತಾರೆ ಮಗನ ಪಾತ್ರ ವಹಿಸಬಯಸುವ ದಾಸರು ತುಂಬು ಸಂಸಾರದಲ್ಲಿ ವಿಷ್ಣುವನ್ನು ತಂದೆಯಾಗಿ, ಲಕ್ಷ್ಮೀಯನ್ನು ತಾಯಿಯಾಗಿ ಬ್ರಹ್ಮನನ್ನು ಅಣ್ಣನಾಗಿ ಸರಸ್ವತಿಯನ್ನು ಅತ್ತಿಗೆಯಾಗಿ, ವಾಯು–ಭಾರತಿಯರನ್ನು ಗುರು–ಗುರುಪತ್ನಿಯರನ್ನಾಗಿ ಗರುಡ ಶೇಷಾದಿಗಳನ್ನು ಗುರುಸೋದರರಾಗಿ ಹರಿದಾಸರನ್ನು ನಂಟರಾಗಿ ಪಡೆಯಬಯಸುತ್ತಾರೆ. ಹರಿಭಜನೆ ನಡೆಯುವ ದೈವ ಮಂದಿರವೇ ಅವನ ಕುಟುಂಬದ ವಾಸದ ಮನೆಯಾಗುತ್ತದೆ.

ದೇಹ ಪ್ರತಿಮೆಯ ಬಗ್ಗೆ ಈ ಹಿಂದೆ ವಿವರವಾಗಿ ತಿಳಿಸುತ್ತಾ ವೈರಾಗ್ಯ ಮೂಡಿಸಿದ ದಾಸರು ಇಲ್ಲಿ ಸಂಸಾರದಲ್ಲಿಯ ದುಃಖದ ಬಗ್ಗೆ ತಿಳಿಸುತ್ತಾರೆ. ಈ ಸಂಸಾರದಲ್ಲಿ ತಾವು ವ್ಯರ್ಥವಾಗಿ ಸಮಯ ಕಳೆದೆನೆಂದು ಪರಿತಪಿಸುತ್ತಾ ಹೀಗೆ ಹೇಳುತ್ತಾರೆ.

**ಸಂಸಾರ:** ಬಾಲ್ಯದಲ್ಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನ ಮದದಿ ಮುಂದರಿಯದಿದ್ದೆ
ಜಾಲ ಸಂಸಾರದಲ್ಲಿ ಸಿಲುಕಿ ಬಳಲಿದೆನಯ್ಯ
ಪಾಲಿಸೋ ಪರಮಾತ್ಮ ಭಕ್ತಿಯ ಕೊಟ್ಟ ॥೨॥ (೮೬)

ಅಸ್ಥಿರವಾದ ಈ ಸಂಸಾರವನ್ನು ನೆಚ್ಚಬೇಡ ಎಂಬ ಕರೆ ಕೊಡುತ್ತಾರೆ. ಈ ನರ ಜನ್ಮದ ಅಸ್ಥಿರತೆಯ ಬಗ್ಗೆ ಹೀಗೆ ನುಡಿದಿದ್ದಾರೆ.

**ಸಂಸಾರ:**

ನೆಚ್ಚಬೇಡ ಪ್ರಾಣಿ ಸಂಸಾರ ಸ್ಥಿರವೆಂದು
ಹುಚ್ಚು ಬುದ್ಧಿಲಿ ನೀನು ಕೆಡಬೇಡ ಕಂಡ್ಯ
ಸ್ವೇಚ್ಛೆಯಿಂದಿರದೆ ಧರ್ಮದಿ ನೀನು ನಡೆ ಕಣ್ಣ
ಮುಚ್ಚಿದ ಮೇಲುಂಟೆ ನರ ಜನ್ಮ ಸ್ಥಿರವೆಂದ ೨। (೮೭)

ಸಂಸಾರದಲ್ಲಿ ದಾನ ಧರ್ಮ ಮಾಡಲು ಕರೆ ನೀಡುತ್ತಾ ಸಂಸಾರದಲ್ಲಿ ಮಾಡುವ ಧಾರ್ಮಿಕ ಕರ್ಮಗಳ ಬಗ್ಗೆ ತಿಳಿಸುತ್ತಾರೆ.

**ಸಂಸಾರ:**

ಎನು ಇಲ್ಲವೋ ಎರಡು ದಿನದ ಸಂಸಾರ ಪ।

ದಾನ ಧರ್ಮವ ಮಾಡು ಇದನರಿತು ಮನುಜ ಅ।

ಹಸಿದು ಬಂದವರಿಗೆ ಆಶನವೀಯಲುಬೇಕು
ಶಿಶುಗಳಿಗೆ ಪಾಲ್ಬೆಣ್ಣೆ ನಡೆಸಬೇಕು
ಹಸನಾದ ಭೂಮಿಯನು ಧಾರೆಯೆರೆಯಲು ಬೇಕು
ಭಾಷೆಕೊಟ್ಟರೆ ಮಾತು ನಿಜವಿರಲಿಬೇಕು ೧।

ಕಳ್ಳತನವ ಮಾಡಿ ಒಡಲ ಹೊರೆಯಲು ಬೇಡ
ಸುಳ್ಳನಾಗಿ ನೀನು ತಿರುಗಲುಬೇಡ
ಒಳ್ಳೆ ಜನಗಳ ನಿಂದೆಯನು ನೀನು ಮಾಡಬೇಡ
ಒಳ್ಳೆಯವನೆಂದರೆ ಹಿಗ್ಗಬೇಡ ೨।

ದೊರೆತನವು ಬಂದಾಗ ಕೆಟ್ಟು ನುಡಿಯಲು ಬೇಡ
ಸಿರಿ ಬಂದ ಕಾಲಕ್ಕೆ ಮೆರೆಯಬೇಡ
ಪರಮ ಪಾವನ ನಮ್ಮ ಪುರಂದರವಿಠಲನ
ಚರಣ ಸೇವೆ ಮಾಡಿ ಸುಖಿಯಾಗೋ ಮನುಜ ೩। (೮೮)

ಈ ಸಂಸಾರದಲ್ಲಿ ಸುಖವಾಗಿರಲು ಸಾಧ್ಯವಿಲ್ಲ ಅದಕ್ಕಾಗಿ ಒಲ್ಲೆ ಈ ಒಗೆತನ ಎಂದಿದ್ದಾರೆ ದಾಸರು.

**ಸಂಸಾರ:**

ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗೆತನದ ಪ।
ಆರು ಮಂದಿ ಗಂಡರಾಳುವರು ಎನ್ನ
ಆರು ಮಂದಿಗೆ ಮಾರು ಸುತರೆನಗೆ
ಆರು ಮೂರೇಳವರು ಭಾವ ಮೈದುನರೆಲ್ಲ
ಆರೇನೆಂದರೆ ಬಿಡರು ಆರಿಗುಸಿರಲಮ್ಮ ೧।

ಹತ್ತು ಮಂದಿ ಬೆನ್ನ ಮುತ್ತಿಕೊಂಡಿಹರೆ
ಮತ್ತೆ ಬಿಟ್ಟೇನೆಂದರೆ ಬಿಡಗೊಡರು
ಅತ್ತಿಗೆ ನೆಗೆಹೆಣ್ಣಿ ಹೊತ್ತು ಹೊತ್ತಿನ್ನೊಳೆನ್ನ
ನೆತ್ತಿಯೊಳು ಹಸ್ತವಿಟ್ಟೆನ್ನ ಸೆಣೆವರಮ್ಮ ೨।
. . . . . . . . . . . . . . . . . . . . .

. . . . . . . . . . . . . . . . . . . . . .  (೮೯)

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ವೆಂಬ ಆರು ಮಂದಿ ಗಂಡರು, ತಾಪತ್ರಯಗಳೆಂಬ ಮೂರು ಸುತರು, ಆರು+ಮೂರು ಒಂಬತ್ತು ನವದ್ವಾರಗಳು ಎನೆಂದರು ಬಿಡದ ಇವರ ಒಗೆತನ ಒಲ್ಲೆನೆಂದ ದಾಸರು ಹತ್ತುಮಂದಿ–ಮದ್ಯಪಾನ, ಧನಮದ, ಉನ್ಮತ್ತತೆ ಬಳಲಿಕೆ, ಕೋಪ, ಹಸಿವೆ, ಅತ್ಯವಸರ, ಲೋಭ, ಭೀತಿ, ಕಾಮಕತೆ ಇವರೆಲ್ಲರು ಬೆನ್ನ ಮುತ್ತಿಕೊಂಡಿಹರು ಹಾಗೂ ಸಂಚಿತ ಕರ್ಮನವ್ರಣಿಸುವ ಪಂಚೇಂದ್ರಿಯಗಳು ಇವರೆಲ್ಲರೊಂದಿಗೆ ಸಂಸಾರ ಕಷ್ಟಕರವಾಗಿದೆ ಅದಕ್ಕಾಗಿ ಒಲ್ಲೆ ಈ ಸಂಸಾರ ಎಂದಿದ್ದಾರೆ. ದೇಹವನ್ನು ಒಂಬತ್ತು ಬಾಗಿಲುಳ್ಳ ಮನೆ ಎಂದ ಅವರು ಇಂತಹ ದೇಹದಲ್ಲಿ ಆತ್ಮವೆಂಬ ಒಂದು ದೀಪ ಹಚ್ಚಿ ವೈರಾಗ್ಯದಿಂದ ಸಂಸಾರ ಮಾಡಿದೆ ಎಂದು ಈ ಕೆಳಗಿನಂತೆ ಹೇಳಿದ್ದಾರೆ.

**ಸಂಸಾರ:** ಒಂಬತ್ತು ಬಾಗುಲೊಳು ಒಂದೇ ದೀವಿಗೆ ಹಚ್ಚಿ
ನಂಬಿಕಿಲ್ಲದ ಸಂಸಾರ ಮಾಡಿದೆನೆ ಸೂವಿಯಾ ಬೀಬಿ ಪ। (೯೦)

ಇಲ್ಲಿ ಮನಸ್ಸನ್ನು ಹೆಂಗಳೆಯರ ಒಳಕೋಣೆಯಲ್ಲಿ ಊಳಿಗಮಾಡುವ ಹೆಣ್ಣು ಸೂವಿಯಾ ಬೀಬಿ, ಸೌವಿದ ಎಂದು ಕರೆದಿದ್ದಾರೆ. ಪುರಂದರದಾಸರೇ ಸ್ವತಃ ಸಂಸಾರದಲ್ಲಿ ವಿರಕ್ತಿ ಹೊಂದಿ ಹರಿದಾಸ ದೀಕ್ಷೆ ತೆಗೆದುಕೊಂಡ ನಂತರ ಹೀಗೆ ಹೇಳಿದ್ದಾರೆ.

**ಸಂಸಾರ:** ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು ಪ।
ತೋಯಜಾಕ್ಷನ ದಯ ನಮಗೀಗ ದೊರೆಯಿತು ಇನ್ನೇನಿನ್ನೇನು ಅ। (೯೧)

ಹರಿದಾಸ ದೀಕ್ಷೆಯಾಗುವ ಮೊದಲು ಸಂಸಾರದ ವಿವರಗಳೇ ಪರಮ ಸತ್ಯವೆಂದು ಭಾವಿಸಿ, ವಿಷಯ ಸುಖಗಳಲ್ಲೇ ತೊಡಗಿದ್ದರು; ತಾನು, ತನ್ನದು ಎಂಬ ಅಹಂಕಾರ ಮಮಕಾರಗಳೇ ಮುಖ್ಯ ವೃತ್ತಿಯಾಗಿದ್ದವು. ಆದರೆ ಗುರುಗಳಿಂದ ಹರಿದಾಸದೀಕ್ಷೆ ಪಡೆದುಕೊಂಡ ಮೇಲೆ ಇವರಲ್ಲಿ ತಟಕ್ಕನೆ ಬದಲಾವಣೆ ಬಂದಿತು. ತಮ್ಮ ಅನುಭವವನ್ನು ಲೋಕದಲ್ಲಿ ಹಂಚುತ್ತಾ ಸಂಸಾರದಲ್ಲಿ ವಿರಕ್ತಿ ಹೊಂದಿ ಪರಮಾತ್ಮನಲ್ಲಿ ಭಕ್ತಿಯಿಡಲು ಕರೆಕೊಟ್ಟಿದ್ದಾರೆ.

ಸಮಾಜದಲ್ಲಿ ಎಂಥಹವರೊಡನೆ ಸ್ನೇಹ ಮಾಡಬೇಕು ಎಂಬುದನ್ನು ಈ ಪ್ರತಿಮೆ ವಿವರಿಸುತ್ತದೆ.

**ಸ್ನೇಹ:** ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡ ಜಗಳವೆ ಲೇಸು ಪ।

ಉಂಬುಡುವುದಕ್ಕಿರುವ ಅರಸನೊಲುಗಕ್ಕಿಂತ
ತುಂಬಿದೂರೊಳಗೆ ತಿರಿದುಂಬುವುದೇ ಲೇಸು
ಹಂಬಲಿಸಿ ಹಾಳು ಹರಟೆ ಹೊಡೆವುದಕ್ಕಿಂತ
ನಂಬಿ ಹರಿದಾಸರೊಳು ಮೊಂದಿ ಹಾಡುವುದೆ ಲೇಸು ।೧।

. . . . . . . . . . . . . . . . . . . . . .

ಮಸೆದು ಮತ್ಸರಿಪ ಸತಿಯೊಡನೆ ಸಂಸಾರಕ್ಕಿಂತ
ಹಸನಾದ ಹಾಳು ಗುಂಡಿಯೆ ಲೇಸು
ಬಿಸಜಾಕ್ಷ ಪುರಂದರ ವಿಠಲನ ನೆನೆನೆನೆದು

ವಸುಧೆಯೊಳು ಚಿರಕಾಲವಿರುವುದೆ ಲೇಸು ಹಿ (೯೨)

ಕೆಟ್ಟದ್ದನ್ನು ಬಿಡು ಎಂದಾಗ ಒಳ್ಳೆಯದು ಯಾವುದು ಎಂಬುದನ್ನು ಹೇಳಲೇಬೇಕಲ್ಲವೇ? ಅಂಥವನೇ ನಿಜವಾದ ಹಿತಚಿಂತಕನು. ಅಜ್ಞಾನಿಗಳ ಸಂಗ, ಹಾಳು ಹರಟೆಗಿಂತ ಪರಮಾತ್ಮನ ಅನು ಭವಿಸುವ ಉದಾಹರಣೆಗಳನ್ನಿತ್ತು ದಾಸರು ಜನತೆಯನ್ನು ಎಚ್ಚರಿಸಿದ್ದಾರೆ ಸರಿಯಾದ ಮಾರ್ಗವನ್ನು ತೋರಿಸಿದ್ದಾರೆ.

**ಹಡಗು :** ಸಂದಿತಯ್ಯ ಪ್ರಾಯವು ಸಂದಿತಯ್ಯ
ಒಂದು ದಿನವು ಸುಖವು ಇಲ್ಲ ಕುಂದಿಹೋದೆ ಕಷ್ಟದಿಂದ
ಬಂಧನವನು ಬಿಡಿಸುತೆನ್ನ ತಂದೆ ನೀನೇ ರಕ್ಷಿಸಯ್ಯ ಅ।
. . . . . . . . . . . . . . . . . . . . .
. . . . . . . . . . . . . . . . . . . . .
ಎಡೆಬಿಡದೆ ಅನುದಿನದಿ ಪಾಪದ ಕಡಲೊಳಗೆ ನಾ ಬಿದ್ದೆನೋ
ದಡವ ಕಾಣದೆ ದುಃಖದೊಳು ಬೆಂದೊಡಲೊಳಗೆ ನಾ ನೊಂದೆನೋ
ಬಿಡದೆ ನಿನ್ನಯ ಧ್ಯಾನವೆಂದೆಂಬ ಹಡಗವೇರಿಸು ಎಂದೆನೋ
ದೃಢದಿ ನಿನ್ನಯ ಪಾದ ಸೇರಿಸೊ ಒಡೆಯ ಪುರಂದರವಿಠಲ ಓ।
(೯೩)

ಇಲ್ಲಿ ಭಾವನೆ ಸತ್ವಯುತವಾಗಿದೆ. ಸಂಸಾರವೆಂಬ ದುಃಖದ ಕಡಲಲ್ಲಿ ಬಿದ್ದ ಭಕ್ತನು ದಡವ ಕಾಣದೆ ಅಸಹಾಯಕತೆಯಿಂದ ಒದ್ದಾಡುತ್ತಾ ಪೂರ್ಣವಾಗಿ ಶರಣಾಗತಿಯಿಂದ ಧ್ಯಾನವೆಂಬ ಹಡಗವೇರಿಸೋ ಎಂದು ಕೇಳಿಕೊಳ್ಳುತ್ತಾರೆ. ಇಲ್ಲಿ ಹಡಗು ಪ್ರತೀಕದಲ್ಲಿ ನಮ್ಮ ಮನಸ್ಸನ್ನು ಕಡೆದಿಟ್ಟಂತೆ ಕಾಣುತ್ತದೆ. ಸಮುದ್ರದ ತೆರೆಗಳಲ್ಲಿ ಹೊಯ್ದಾಡುತ್ತಾ ದಡವ ಸೇರುವ ಹಡಗು ಧ್ಯಾನದ ಸಮಯದಲ್ಲಿ ಆಚೀಚೆ ಓಲಾಡುವ ಮನಸ್ಸನ್ನು ಸಂಕೇತಿಸುತ್ತದೆ.

**ಹಮ್ಮು (ಅಹಂಕಾರ) :**

ಹಮ್ಮು ಮಾಡಲಿಬೇಡಿ ಹಮ್ಮು ಈಡ್ಯಾಡುವುದು
ಹಮ್ಮಿನಿಂದಲಿ ನಿವು ಕೆಡಬೇಡಿರಯ್ಯ ಪ।

ಮುನ್ನೊಬ್ಬ ರಾವಣನು ಜನಕನ ಸಭೆಯಲ್ಲಿ
ತನ್ನಳವನರಿಯದೆ ಧನುವೆತ್ತಲು
ಉನ್ನತವಾದ ಧನುವು ಎದೆ ಮೇಲೆ ಬೀಳಲು
ಬನ್ನ ಬಟ್ಟದ್ದೆಲ್ಲ ಕೇಳಿ ಬಲ್ಲಿರಯ್ಯ ೧।
. . . . . . . . . . . . . . . . . . . . .
. . . . . . . . . . . . . . . . . . . . . (೯೪)

ರಾವಣ, ಕೌರವ ಮುಂತಾದವರು ಗರ್ವದಿಂದ ಬದುಕಿ ಕೊನೆಗೆ ಏನಾದರು ಎಂಬುದನ್ನು ಪ್ರತಿಯೊಂದು ನುಡಿಯಲ್ಲಿ ಉದಾಹರಿಸುತ್ತಾ, ಗರ್ವ ಬಿಟ್ಟರೆ ಪುರಂದರವಿಠಲ ಒಲಿಯುವನು ಎನ್ನುವರು ದಾಸರು.

**ಹಾಲು-ನೀರು :** ಇಂದ್ರಿಯಗಳ ಸುಖವ ನೆಚ್ಚದಿರು ಕಂಡ್ಯ ಪ।
. . . . . . . . . . . . . . . . . . . . .
ದುರ್ಜನರ ಮನೆಯೊಳಿಹ ಹಾಲ ಸವಿಗಿಂತ

ಸಜ್ಜನರ ಮನೆಯೊಳಿಹ ನೀರು ಲೇಸು
ದುರ್ಜನರ ಸಂಗದೆಡೆಕೂಡಿ ಯಾಟದಕ್ಕಿಂತ
ಸಜ್ಜನರ ಕೂಡೆ ಕಾದಾಡುವುದೆ ಲೇಸು ೩।
..................... (೯೫)

ಸಜ್ಜನರ ಸಂಗದಿಂದ ನೀರು ದೊರೆತರೂ ಅದು ಶುದ್ಧವಾಗಿರುತ್ತದೆ. ಹಾಗೂ ಸರ್ವಜ್ಞನ ಹೇಳಿಕೆಯಂತೆ ಸಜ್ಜನರ ಸಂಗವು ಹೆಜ್ಜೇನು ಸವಿದಂತೆ ಫಲದಾಯಕವಾಗಿರುತ್ತದೆ. ದುರ್ಜನರ ಸಂಗವು ದುರ್ಗಂಧದಂತೆ ಹರಡಿ ಮನಸ್ಸಿನಲ್ಲಿ ಕೆಟ್ಟ ಯೋಚನೆಗಳು ಬರುವಂತೆ ಮಾಡಿ ತಪ್ಪುದಾರಿಗೆ ಸೆಳೆಯುವದರಿಂದ ಸರಿ–ತಪ್ಪುಗಳ ವಿವೇಚನೆಯಿಂದ ಸ್ನೇಹವನ್ನು ಮಾಡಬೇಕು ಎಂಬುದು ಸಂದೇಶ.

**ಹೆಣ್ಣು :** ಹೆಣ್ಣಿಗಿಚ್ಚೈಸುವರೆ ಮೊಢ ಇದನು
ಕಣ್ಣು ಮೈಮನಗಳಿಂ ಸೋಂಕಲೇ ಬೇಡ ಪ।

ತಾಯಾಗಿ ಮೊದಲೆ ಪಡೆದಿಹುದು ಮತ್ತು
ಜಾಯೆ ಎಂದೆನಿಸಿ ಕಾಮದಿ ಕೆಡಹುವುದು
ಕಾಯದೊಳು ಜನಿಸುತ್ತಲಿಹುದು ಇಂತು
ಮಾಯೆಯಂ ನಿನ್ನ ಬಹು ವಿಧದಿ ಕಾಡುತಲಿಹುದು ೧।

ಹಿತಶತ್ರುವಾಗಿ ಪೊಂದುವುದು ನಿಮಿಷ
ರತಿಗೊಟ್ಟು ನಿತ್ಯ ಮುಕ್ತಿಯ ಕಳೆಯುವದು
ಕ್ಷಿತಿಯ ಪೂಜ್ಯತೆ ಕೆಡಿಸುವುದು ಮುಂದೆ
ಶತ ಜನ್ಮಂಗಳಿಗೆ ಹೊಣೆಯಾಗಿ ನಿಲ್ಲುವುದು ೨।

ಬಗೆ ಬಗೆ ತನು ಎಲುಬುನರ ಖಂಡ ಅದ–
ರೊಳಗೆ ವಾಯು ರಂಧ್ರ ಕೊಳೆಯುದ್ದಂಡ
ಭಗವೆಂಬುದು ಮಾತ್ರದ ಭಾಂಡ ಅದ–ಅ
ವಗಡಿಸದೆ ನಿಜಸುಖವಿಲ್ಲ ಕಂಡ್ಯ ೩।

ವಶವಾದ ವಾಲಿಯ ಕೊಲಿಸಿಹುದು ಹೀಗೆ
ಹೆಸರು ಮಾತ್ರದಿ ದಶಕಂಠನನ್ನುಳಿಸಿಹುದು
ಶಚಿಪತಿಯಂಗದಿ ಭಗಕ್ಷಯೆ ಹೀಗೆ
ಹೆಸರು ಪಡೆದ ಕೀಚಕನನಗಳಿಸಿಹುದು ೪।

ಪಶುಪತಿ ದೆಸೆಗೆಡಿಸಿಹುದು ಹೀಗೆ
ವಸುಧೆಯೊಳು ಜೀವನ ಹಸಗೆಡಿಸಿಹುದು
ವಸುಧಿಶನ ನಾಮಮರೆಸಿ ನಮ್ಮ
ಅಸಮ ಪುರಂದರವಿಠಲನ ತೊರೆಸುವುದು ೫। (೯೭)

ಸುಗ್ರೀವನ ಹೆಂಡತಿಯಾದ 'ರುಮೆ'ಯನ್ನು ಮೋಹಿಸಿದ್ದೇ ವಾಲಿಯವಧೆಗೆ ಕಾರಣವಾಯಿತು. ಇಂದ್ರನು ಗೌತಮಪತ್ನಿಯಾದ ಅಹಿಲ್ಯೆಯನ್ನು ಕಾಮಿಸಿ ಯೋನಿನಾಶವಾಗಲಿ (ಭಗಕ್ಷಯ) ಎಂಬ ಶಾಪವನ್ನು ತಳೆದ ಪ್ರಸಂಗಗಳನ್ನು ತಿಳಿಸುತ್ತಾ ಸ್ತ್ರೀ ಮೋಹದಿಂದ ದೂರವಿರಲು ತಿಳಿಸಿದ್ದಾರೆ ದಾಸರು.

**ಹೊಲೆಯ :** ಹೊಲೆಯ ಹೊರಗಿಹನೆ ಊರೊಳಗಿಲ್ಲವೆ
ಹರಿಯ ಭಕ್ತರು ಪೇಳಿ ಮತ್ತಿದನು ಪ।

ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ
ಹೇಳಿದ ಹರಿಕತೆಯ ಕೇಳದವ ಹೊಲೆಯ
ಆಳಾಗಿ ಅರಸಂಗೆ ಕೇಡುಬಗೆವವ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ ೧।

ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ
ಲಂಡತನದಲಿ ನಡೆವ ನರ ಭಂಡ ಹೊಲೆಯ
ಉಂಡ ಮನೆಗೆರಡನನ್ನು ಬಗೆವಾತನೇ ಹೊಲೆಯ
ಹೆಂಡತಿಯ ಇಚ್ಚೆಯವ ಹೇಡಿ ಹೊಲೆಯ ೨।

ಇದ್ದಾಗ ದಾನ ಧರ್ಮವ ಮಾಡದವ ಹೊಲೆಯ
ಲೇಸು ಉಪಕಾರಗಳ ಮಾಡದವ ಹೊಲೆಯ
ಮೋಸದಲಿ ಜೀವನವ ಮುಗಿದು ಕೆಡಿಸುವ ಹೊಲೆಯ
ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ ೩।

ಅರಿತು ಆಚಾರವನು ನಡೆಸದಾತನೆ ಹೊಲೆಯ
ಪರಸತಿಗೆ ಅಳುಕಿದವ ಪಾಪಿ ಹೊಲೆಯ
ಗುರುಹಿರಿಯರನು ಕಂಡು ನಮಿಸದಾತನೆ ಹೊಲೆಯ
ಪುರಂದರವಿಠಲನ ನೆನೆಯದವ ಹೊಲೆಯ ೪। (೯೭)

ಪುರಂದರದಾಸರ ಹಲವು ಕೃತಿಗಳು ಸಮಾಜದಲ್ಲಿ ನಡೆಯುತ್ತಿರುವ ಹಲವು ಬೇಧಗಳನ್ನು ಎತ್ತಿತೋರಿಸುತ್ತವೆ. ಸಮಾಜವಲ್ಲಿ ಅಂದಿನಿಂದ ಇಂದಿನವರೆಗೆ ಹೊತ್ತಿ ಬೇಯುತ್ತಿರುವ ಜಾತಿಯತೆ ಮತ್ತು ಮಡಿ–ಮೈಲಿಗೆಗಳ ವಿಚಾರಗಳಲ್ಲಿ ಪುರಂದರರ ದೃಷ್ಟಿ ಬಹು ಉದಾರವಾಗಿದೆ. ಮಾನವ ಶ್ರೇಷ್ಠನಾ ಗುವುದು ಜನ್ಮದಿಂದಲ್ಲ, ಗುಣಕರ್ಮಗಳಿಂದ ಎಂಬುದು ಅವರ ಉದಾತ್ತ ತತ್ವ. ಹೊಲೆತನ ನಡತೆಯಿಂದ ಬಂದದ್ದು. ಆಚಾರವಿಲ್ಲದ ವ್ಯಕ್ತಿಗಳು ಎಲ್ಲ ಸಮಾಜದಲ್ಲೂ ಇದ್ದಾರೆ ಅಂತಹವರು ದಾಸರ ದೃಷ್ಟಿಯಲ್ಲಿ ಹೊಲೆಯರು "ಹೊಲೆಯ ಹೊರಗಿಹನೆ? ಊರೊಳಗಿಲ್ಲವೆ?" ಎಂಬ ಪ್ರಶ್ನೆಗಳನ್ನು ಹಾಕಿಕೊಂಡು ಎಂತಹ ಗುಣವುಳ್ಳವನು ಹೊಲೆಯ ನಾಗುತ್ತಾನೆಂದು ದೊಡ್ಡದೊಂದು ಪಟ್ಟಿಯನ್ನು ಕೊಡುತ್ತಾರೆ. ಶೀಲವನ್ನು ಕೈಗೊಂಡು ನಡೆಸದಾತ, ಆಳಾಗಿ ಅರಸಂಗೆ ಕೇಡುಬಗೆವವ, ಕೊಂಡ ಸಾಲಗಳನ್ನು ತೀರಿಸದಾತ, ಉಂಡಮನೆಗೆರಡನ್ನು ಬಗೆವಾತ, ಇದ್ದಾಗ ದಾನಧರ್ಮ ಮಾಡದವ, ಮದ್ದಿಕ್ಕಿ ಕೊಲ್ಲುವವ, ಆಸೆ ಮಾತನು ಕೊಟ್ಟು ಭಾಷೆ ತಪ್ಪುವವ ಲೇಸು ಉಪಕಾರಗಳ ಮಾಡದವ, ಅರಿತು ಆಚಾರವನು ಮಾಡದವ ಇವರೆಲ್ಲ ಹೊಲೆಯರೇ ಹೀಗಿರುವಾಗ ಹೊಲೆಯ ಹೊರ

ಗಿದ್ದಾನೆಯೇ? ಸಮಾಜದ ಒಳಗೆ ಹೊಲೆತನವಿರುವುದು. ಅಷ್ಟು ಮಾತ್ರವಲ್ಲ ದಾಸರ ಪ್ರಕಾರ ಹೊಲೆತನ ನಮ್ಮೊಳಗೆ ಇದೆ. ಇದೊಂದು ಅವರ ಉಗಾಭೋಗ.

ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ
ಘಣ ಘಣ ಘಂಟೆ ಬಾರಿಸುತ
ತನುವಿನ ಕೋಪ ಹೊಲೆಯಲಲ್ಲವೇನಯ್ಯ
ಮನಸಿನ ವಂಚನೆ ಹೊಲೆಯಲ್ಲವೇನಯ್ಯ
ಇಂಥಾ ಹೊರಗಿದ್ದ ಹೊಲೆಯನ್ನ ಒಳಗೆ
ತುಂಬಿಟ್ಟು ಕೊಂಡರೆ
ಇದಕೇನು ಮದ್ದೋ ಪುರಂದರವಿಠಲ. (೯೮)

ಪುರಂದರದಾಸರು ತಮ್ಮ ಕಾಲದ ಸಮಾಜದ ಕುಂದು ಕೊರತೆಗಳನ್ನು ಕಂಡು ತಿದ್ದಲು ಪ್ರಯತ್ನಿಸಿದವರು. ಅವರು ಬದುಕಿ ಬಾಳಿದ ಕಾಲ ವಿಜಯನಗರದ ಸಾಮ್ರಾಜ್ಯದ ಕಡೆಗಾಲಕ್ಕೆ ಸೇರಿದುದು. ಜನರ ನಡತೆಯ ಬಗ್ಗೆ, ಜಾತಿ ವೈಷಮ್ಯದ ಬಗ್ಗೆ, ದೇಹ, ಸಂಸಾರಗಳ ಬಗ್ಗೆ ಹೇಳುತ್ತಾ ಜನರ ಮನಸ್ಸಿನಲ್ಲಿ ನೀತಿ ನಿಯಮಗಳು ನಿಲ್ಲುವಂತೆ ಮಾಡಿದ ಅವರ ಕಾರ್ಯ ಶ್ಲಾಘನೀಯ.

ಪುರಂದರದಾಸರ ರೂಪಕಜಗತ್ತು ತುಂಬ ರಮ್ಯವಾದುದು ಅಪಾರವಾದ ಲೋಕಾನುಭವ ಅದ್ಭುತ ಪುರಾಣ ಪ್ರಜ್ಞೆಗಳಿಂದ ತುಂಬಿಕೊಂಡ ಅವರ ಕೀರ್ತನೆಗಳು ಅರ್ಥಪೂರ್ಣವಾಗಿವೆ. ಸೂಕ್ತ ಹೋಲಿಕೆ, ಶಬ್ದ ಚಿತ್ರ ಸಂಕೇತ ಪ್ರತಿಮಾರೂಪಗಳಿಂದ ಅವರ ಕೀರ್ತನೆಗಳು ಜನರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ.

## -: ಕೊನೆ ಟಿಪ್ಪಣಿಗಳು :-

(ಅ) **ಶ್ರೀ.ವಿಜಯದಾಸರು:** ಜೀವನ ಮತ್ತು ಕೃತಿಗಳ ಸಮೀಕ್ಷೆ (೧೯೭೭) ಲೆ.ಕೆ.ಗೋಕುಲನಾಥ: ಪು-೧೨೦.

(ಆ) **ಹರಿಸರ್ವೋತ್ತಮತತ್ವ:** ಶ್ರೀ.ಮನ್ಮದ್ವಮತೇ ಹರಿ ಪರತರ: ಎಂದು ವ್ಯಾಸರಾಜಗುರುಗಳು ಹೇಳಿದ್ದಾರೆ. ಇದರ ಅರ್ಥ ಶ್ರೀಹರಿಯು ಜಡ ಹಾಗೂ ಚೇತನ ಪ್ರಕೃತಿಗಳ ಉತ್ಪತ್ತಿಗೆ ಮೂಲ ಕಾರಣನು ಅವನಿಗಿಂತ ಪರಮೋಚ್ಚ ಕಾರಣವಾದ ಬೇರೆ ವಸ್ತುವು ಈ ಜಗತ್ತಿನಲ್ಲಿ ಇಲ್ಲ ಹಾಗೂ ಶ್ರೀಹರಿಯು ಲಕ್ಷ್ಮೀದೇವಿಗಿಂತಲೂ ಉತ್ಕೃಷ್ಟನಾದವನು ಅಥವಾ ಪರಮೋತ್ಕೃಷ್ಟನು.

(ಇ) **ಲಿಂಗಾಂಗ ಸಾಮರಸ್ಯ:** ನೂರೊಂದು ಸ್ಥಳಗಳಲ್ಲಿ ನಲವತ್ತು ನಾಲ್ಕು ಅಂಗ ಸ್ಥಳಗಳು. ಐವತ್ತೇಳು ಲಿಂಗ ಸ್ಥಳಗಳು; ಅಂಗದಿಂದ ಪ್ರಾರಂಭವಾಗಿ ಲಿಂಗದಲ್ಲಿ ಪರಿವರ್ತನವಾಗುವುದು ಸಾಧನೆ ಹೀಗೆ ಸಿದ್ಧಿಯನ್ನು ಪಡೆದವರು ಲಿಂಗಾಂಗಿಗಳು. ಲಿಂಗನೊಂದಿಗೆ ಅಂಗ ಬೆರೆಯುವುದು ಲಿಂಗಾಂಗ ಸಾಮರಸ್ಯವೆಂದೆನಿಸಿಕೊಳ್ಳುತ್ತದೆ.

(ಈ) **ಅಲಾಯಿಕುಣಿ:** ಮುಸ್ಲಿಮರ ಹಬ್ಬ ಮೊಹರಮ್ ಬಂದಾಗ, ಹಸ್ತದಾಕಾರದ ದೈವಗಳಾದ ಮೋಹರಮ್ ಪಿರ್ಲುಗಳಿಗೆ ಎಲ್ಲರೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ ಅಂತಹ ಸಮಯದಲ್ಲಿ ಮಸೀದಿಯ ಎದುರು ಒಂದು ತಗ್ಗು ತೋಡಿರುತ್ತಾರೆ. ರಾತ್ರಿಯ ಕಾಲಕ್ಕೆ ಅದರ ಮಧ್ಯೆ ಬೆಂಕಿಯನ್ನು ಹಚ್ಚುತ್ತಾರೆ. ಇದನ್ನು 'ಅಲಾಯಿಕುಣಿ' ಎನ್ನುತ್ತಾರೆ. ಇದರ ಮುಂದೆ ರಾತ್ರಿಯ ಹೊತ್ತು ಭಕ್ತರು ಕುಣಿಯುವುದು ಸಂಪ್ರದಾಯ.

(ಉ) **ಬಿಂಬೋಪಾಸನೆ:** ಬಿಂಬ ಎಂದರೆ ಚೇತನ, ಪ್ರತಿಬಿಂಬ ಎಂದರೆ ಅವನ ನೆರಳು. ಪರಮಾತ್ಮನು ಬಿಂಬ, ಜೀವನು ಅವನ ಪ್ರತಿಬಿಂಬ. ಪ್ರತಿಬಿಂಬವು ಸರ್ವಕಾಲದಲ್ಲಿಯೂ ಪರಮಾತ್ಮನ ಆಧೀನನೇ ಆಗಿದ್ದಾನೆ. ಇದನ್ನು ತಿಳಿದು ಪರಮಾತ್ಮನ ಪೂಜೆ ಮಾಡುವುದೇ ಬಿಂಬೋಪಾಸನೆ (ಭಗವದ್ಗೀತೆ ೨-೧೨).

(ಊ) **ಪಂಚಭೇದಗಳು:** ಈ ಐದೂ ಬೇಧಗಳು ದ್ವೈತ ಸಿದ್ಧಾಂತದ ತತ್ವವನ್ನು ಒಳಗೊಂಡಿವೆ. ಅವು ಈ ರೀತಿಯಾಗಿದೆ.

೧) ಜೀವ ಜೀವರ ಭೇದ
೨) ಜಡ ಜಡಗಳ ಭೇದ
೩) ಜೀವ ಜಡಗಳ ಭೇದ
೪) ಜಡ ಜೀವರ ಭೇದ ಹಾಗೂ
೫) ಜೀವ ಜಡರಿಂದ ಈಶ ಭೇದ

(ಶ್ರೀಮದ್ಧರಿಕಥಾಮೃತ ಸಾರ ಪ್ರವೇಶಿಕೆ: ಲೇ.ಆರ್.ಎಚ್.ಕುಲಕರ್ಣಿ)

ಈ ಅಧ್ಯಾಯದಲ್ಲಿ ಬರುವ ೧-೯೮ ಕೀರ್ತನೆಗಳನ್ನು ಪುರಂದರ ಸಾಹಿತ್ಯ ದರ್ಶನ ಸಂಪುಟ ೧, ೨, ೩ ಮತ್ತು ೪ ರಿಂದ ಆಯ್ದುಕೊಳ್ಳಲಾಗಿದೆ. ಸಂ: ಸಾ.ಕೃ.ರಾಮಚಂದ್ರರಾವ್.

## ಅಧ್ಯಾಯ –೬
## ಸಸ್ಯ ಪ್ರತಿಮೆಗಳು

ಪುರಂದರದಾಸರು ತೆರೆದ ಮನಸ್ಸಿನಿಂದ ಪ್ರಪಂಚವನ್ನು ಸ್ವೀಕರಿಸಿದ್ದರು ಹಾಗಾಗಿ ಸಸ್ಯಗಳನ್ನು ಪ್ರತಿಮೆಗಳಾಗಿ ರಚಿಸಿ ಒಂದು ಅಮೂರ್ತ ವಿಷಯ ಅಥವಾ ಒಂದು ಸತ್ಯ ಸಂಗತಿಯನ್ನು ತಿಳಿಸಲು ಅವುಗಳನ್ನು ಮಾಧ್ಯಮಗಳನ್ನಾಗಿ ಬಳಸಿಕೊಂಡರು.

ಪ್ರತಿಮೆ ಒಂದು ವಸ್ತುವನ್ನು ಪುನರ್‌ಸೃಷ್ಟಿ ಮಾಡಲಾಗದಿದ್ದರೂ ಒಂದು ವಸ್ತುವಿನ ಹಿಂದಿನ ಜೀವಂತಿಕೆಯನ್ನು ಹಾಗೂ ಅದರ ಗುಣ ಸ್ವಭಾವಗಳನ್ನೂ ಮೂರ್ತಗೊಳಿಸಲು ಸಹಾಯವಾಗುತ್ತದೆ. ಕವಿಗೆ ಪ್ರಪಂಚದ ಸತ್ಯತೆಯನ್ನು ಸಂಕೇತಗಳ ಮೂಲಕ ಬಿತ್ತರಿಸಲು ಉಪಮೆ, ರೂಪಕ, ಪ್ರತಿಮೆಗಳ ಅವಶ್ಯಕತೆಯಿದೆ. ಇಲ್ಲಿ ಕವಿಯು ಪ್ರತಿಮೆಗಳ ಮೂಲಕ ತನ್ನ ಅಮೂರ್ತ ಕಲ್ಪನೆಗಳನ್ನು ಇಂದ್ರಿಯ ಗೋಚರ ಸಸ್ಯ ಪ್ರತಿಮೆಗಳ ಮೂಲಕ ಕಾವ್ಯಾರ್ಥವನ್ನು ಧ್ವನಿಸುತ್ತಾರೆ. ಪುರಂದರದಾಸರ ಗಮನಸೆಳೆದ ಸಸ್ಯಲೋಕದ ಕೆಲವು ವಿಶೇಷತೆಗಳು ಅವರ ಕೀರ್ತನೆಗಳಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ಸೂಚಿಸುವ ಸ್ವಾಭಾವಿಕ ಸಂಕೇತಗಳಾಗಿ ನಿರೂಪಿತಗೊಂಡಿವೆ. ದಾಸರು ಹರಿನಾಮಸ್ಮರಣೆಯನ್ನು ಕಲ್ಪವೃಕ್ಷಕ್ಕೆ ಮತ್ತು ಭಕ್ತಿಯನ್ನು ಕಬ್ಬಿನಲ್ಲಿರುವ ಸಿಹಿಯಾದ ರಸಕ್ಕೆ ಹೋಲಿಸಿದ್ದಾರೆ ಮತ್ತು ಸಂಸಾರದಲ್ಲಿ ಗೇರುಹಣ್ಣಿನಲ್ಲಿರುವ ಬೀಜದಂತೆ ವೈರಾಗ್ಯದಿಂದ ಇರಬೇಕು ಎಂದು ಉಪದೇಶಿಸುತ್ತಾರೆ.

**ಕಮಲ:** ಶಕ್ತನಾದರೆ ನೆಂಟರೆಲ್ಲ ಹಿತರು ।ಪ।

ಶಕ್ತನಾದರೆ ನೊಡಲವರೆ ವೈರಿಗಳು ।ಅ।

ಕಮಲ ಅರ್ಕನಲ್ಲಿರುವ ಕಡುನಂಟತನದಿಂದ
ವಿಮಲ ಜಲದೊಳಗೆ ಓಲಾಡುತಿಹುದು
ಕ್ರಮಗೆಟ್ಟು ನೀರಿಂದ ಕಡೆಗೆ ಬೀಳಲು ರವಿಯ
ಅಮಿತ ಕಿರಣಗಳಿಂದ ಕುಂದಿ ಹೋಗುವುದು. ।೧। (೧)

. . . . . . . . . . . . . . . . . .

ಕಮಲ ಮತ್ತು ಸೂರ್ಯರ ನಡುವೆ ಎಲ್ಲಿಲ್ಲದ ನಂಟಿದೆ, ಕಮಲವು ನೀರಲ್ಲಿ ಹುಟ್ಟಿ ಸುಂದರವಾಗಿ ಅರಳಿನಿಂತಿರುವತನಕ ಸೂರ್ಯ ಅದನ್ನು ರಮಿಸುತ್ತಾನೆ. ಅದೇ ಹೂವು ನೀರಿನ ನಂಟನ್ನು ಬಿಟ್ಟು ನೀರಿನಿಂದ ಉದುರಿ ಬಿದ್ದರೆ ಅದೇ ಸೂರ್ಯನ ಕಿರಣಗಳಿಂದ ಒಣಗಿ ಹೋಗುತ್ತದೆ. ಇಲ್ಲಿ ಸೂರ್ಯ ಮತ್ತು ಕಮಲದ ನಡುವಿನ ನಂಟು ಅಶಾಶ್ವತ ಎಂಬುದನ್ನು ತಿಳಿಸುತ್ತದೆ ಅದೇ ರೀತಿ ಮನುಷ್ಯನು ಶ್ರೀಮಂತನು, ಆಶ್ರಯದಾತನು ಆಗಿರುವಾಗ ಅವನಿಗೆ ನೆಂಟರೆಲ್ಲ ಹಿತವಾಗಿ ನಡೆದುಕೊಳ್ಳುತ್ತಾರೆ, ಅದೇ ಅವನಲ್ಲಿರವ ಸಂಪತ್ತು, ಆಶ್ರಯ ನೀಡುವ ಶಕ್ತಿ ಇಲ್ಲವಾದರೆ ಅದೇ ನೆಂಟರು ವೈರಿಗಳಾಗುತ್ತಾರೆ. ಕಮಲವು ಜೀವನವನ್ನು ಸಂಕೇತಿಸುತ್ತದೆ. ಹಾಗೂ ಸೂರ್ಯನು ಸಂಪತ್ತು ಮತ್ತು ಅಧಿಕಾರವನ್ನು ಸಂಕೇತಿಸುತ್ತಾನೆ. ಪುರಂದರವಿಠಲನು ಒಲಿದಿರಲು ಜನರೆಲ್ಲ ಹಿತವರು ಎಂದು ಕೊನೆ ನುಡಿಯಲ್ಲಿ ಸಂದೇಶವನ್ನು ಪುರಂದರದಾಸರು ನಿಡುತ್ತಾರೆ 'ಶಕ್ತನಾದರೆ ನೆಂಟರೆಲ್ಲ

ಓತರು ಅಶಕ್ತನಾದರೆ ನೋಡಲವರೇ ವೈರಿಗಳು' ಎಂಬ ಪಲ್ಲವಿಯಿಂದ ಕೂಡಿ ಜೀವನ ಹಾಗೂ ತತ್ವಗಳನ್ನು ಕುರಿತ ಜಿಜ್ಞಾಸೆಯನ್ನು ಮಂಡಿಸುವ ಕೀರ್ತನೆಇದಾಗಿದೆ.

**ಕಬ್ಬು:** ಆವ ಕುಲವಾದರೇನು ಆವನಾದರೇನು ಆತ್ಮ
ಭಾವ ವರಿತ ಮೇಲೆ ಪ।

ಹಸಿ ಕಬ್ಬು ಡೊಂಕೇನೊ ಅದರ
ರಸ ತಾ ಡೊಂಕೆನೋ
ವಿಷಯಾಸೆಗಳ ಬಿಟ್ಟು
ಹಸನಾದ ಗುರು ಭಕ್ತಿ ಮಾಡೊ ೧।
. . . . . . . . . . . . . . . . . . . . (೨)

ಪುರಂದರದಾಸರು ಕಬ್ಬಿನ ಸಿಹಿಯಾದ ರಸವನ್ನು ಭಕ್ತಿ ಮತ್ತು ಜ್ಞಾನಕ್ಕೆ ಹೋಲಿಸಿದ್ದಾರೆ. ಇಲ್ಲಿ ಕಬ್ಬಿನ ರಸವು 'ಕಬ್ಬು' ಪ್ರತಿಮೆಯ ಮೂಲಕ ಬಿಚ್ಚಿಕೊಂಡು ಬಾಹ್ಯದ ಡೊಂಕನ್ನು ತುಳಿದು ಮೇಲೇರುತ್ತದೆ. 'ಆವಕುಲ ವಾದರೇನು, ಆವನಾದರೇನು, ಆತ್ಮಭಾವವರಿತ ಮೇಲೆ' ಎಂಬ ಪಲ್ಲವಿಯೊಡನೆ ಶುರುವಾಗುವ ಈ ಕೀರ್ತನೆ ಯಲ್ಲಿ ಕುಲ, ಜಾತಿ, ಮತಗಳು ಮುಖ್ಯವಲ್ಲ ಭಕ್ತಿಯ ಭಾವ ಜ್ಞಾನಗಳು ಮುಖ್ಯ ಮತ್ತು ಅವು ಯಾವ ಕುಲ ದಲ್ಲದ್ದರೂ ಅವು ಮಾನ್ಯವೇ, ಮನುಷ್ಯನ ಯೋಗ್ಯತೆ ಅವನಲ್ಲಿರುವ ಭಕ್ತಿ ಹಾಗೂ ಜ್ಞಾನದ ತಿರುಳನ್ನು ಅವಲಂಬಿ ಸಿರುತ್ತದೆ ಎಂಬ ಸತ್ಯವನ್ನು 'ಕಬ್ಬು' ಪ್ರತಿಮೆಯ ಮೂಲಕ ತಿಳಿಸುತ್ತಾರೆ. ಸಮಾಜ ಸುಧಾರಣೆಗಾಗಿ ಅಡಚಣೆ ಯಾಗಿರುವ ಮೇಲು–ಕೀಳು ಎಂಬ ದೌರ್ಬಲ್ಯಗಳನ್ನು ಬಿಟ್ಟು ಗುರುಭಕ್ತಿಮಾಡಿ ಜ್ಞಾನ ಸಂಪಾದನೆ ಮಾಡಬೇಕೆಂಬ ಸಂದೇಶ ನೀಡುತ್ತಾರೆ.

**ಕಾನನ (ಕಾಡು):** ಹೀನ ಮಾನಿನಿಯರ ಧ್ಯಾನ ಕಾನನದೊಳು
ನರಳದಿರೆಚ್ಚರಿಕೆ
ನಾನೆಂಬ ಅಹಂಕಾರ ಮಾಡಿ ನರಕದೊಳು
ನರಳದಿರೆಚ್ಚರಿಕೆ
ಜಾಹ್ನವಿ ಸ್ನಾನ ಸಂಧ್ಯಾನಿಷ್ಟಾನ ಸುಜ್ಞಾನ
ಕೇಳೆಚ್ಚರಿಕೆ
ಜಾನಕಿ ರಮಣನ ಧ್ಯಾನವೇ ಧರ್ಮಸಂತಾನ
ಮುಂದೆಚ್ಚರಿಕೆ (೩)

ಹೀನ ಸ್ತ್ರೀಯರ ಧ್ಯಾನವನ್ನು ಕಾಡಿಗೆ ಹೋಲಿಸಿ, ವಿಷಯಾಸೆಗಳ ಸುಳಿಯಲ್ಲಿ ಸಿಕ್ಕವನಿಗೆ ಸ್ತ್ರೀಯರ ಅತಿಯಾದ ಮೋಹ ಕಾಡಿನಲ್ಲಿ ದಾರಿಕಾಣದೇ ನರಳುತ್ತಾ ನಿಂತಿರುವ ಸ್ಥಿತಿಯನ್ನು ತರುತ್ತದೆ. ಅದಕ್ಕಾಗಿ ಎಚ್ಚರಿಕೆ ಎಂಬ ಸಂದೇಶವಿಲ್ಲಿದೆ, ನಾನು ನನ್ನದೆಂಬ ಅಹಂಕಾರದಲ್ಲಿರುವುದು, ನರಕಕ್ಕೆ ಸಮಾನವೆಂದು, ತಿಳಿಸುತ್ತಾ ಗಂಗೆಯಲ್ಲಿ ಸ್ನಾನ, ಜಪ, ತಪ ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು ಮಾಡುತ್ತಾ ಸುಜ್ಞಾನವನ್ನು ಪಡೆಯುವುದು ಜಾನಕಿರಮಣನಾದ ಶ್ರೀರಾಮನ ಧ್ಯಾನವನ್ನು ಮಾಡುವುದು ಇವೆಲ್ಲ ಧರ್ಮಸಂತಾನವೆಂದು ಮುಕ್ತಿಗೆ ಕಾರಣವೆಂದು ದಾಸರು ಕಾಡು ಪ್ರತಿಮೆಯ ಮೂಲಕ ತಿಳಿಸುತ್ತಾರೆ.

'ನಾರಾಯಣನೆಂಬ ನಾಮವ ಮನದಲಿ ನೆನೆಯುತಿರಚ್ಚರಿಕೆ' ಎಂಬ ಎಚ್ಚರಿಕೆಯ ಕರೆಘಂಟೆ ಪಲ್ಲವಿಯಲ್ಲಿ ಕೀರ್ತನೆಯ ಸಂದೇಶವನ್ನು ತಿಳಿಸುತ್ತದೆ. ದಾಸರು ಮಾಡಬಾರದ ಕೆಲಸಗಳನ್ನು ಒಂದೊಂದಾಗಿ ತಿಳಿಸುತ್ತಾ, ಹರಿನಾಮಸ್ಮರಣೆಯ ಮಹತ್ವದ ಬಗ್ಗೆ ಸ್ಪಷ್ಟವಾಗಿ ತಿಳಿಸುತ್ತಾರೆ. ಪುನರುಕ್ತಿ ಪ್ರಾಸಗಳ ಮೂಲಕ ತಮ್ಮ ಸಂದೇಶವನ್ನು ಅದ್ಭುತವಾಗಿ ಮೂಡಿಸಿದ್ದಾರೆ.

**ಕಲ್ಪವೃಕ್ಷ:** ನರವೃಂದವೆಂಬೋ ಕಾನನದಲಿ ಶ್ರೀ
ಹರಿನಾಮವೆಂಬಂಥ ಕಲ್ಪವೃಕ್ಷ ಹುಟ್ಟಿತಯ್ಯ
ನೆರಳು ಸೇರಲುಂಟು ಫಲವು ಮೆಲ್ಲಲುಂಟು
ಒರೆವ ನಾಲಿಗೆಯಲಿ ನಾಮತ್ರಯಗಳುಂಟು
ಇದೇ ಮುನಿಜನರ ಮನೆಯ ಕೊನೆಯ ಠಾವು
ಇದೇ ಬ್ರಹ್ಮಾದಿಗಳ ಸದಮಲಹೃದಯಪೀಠ
ಇದೇ ದ್ವಾರಾವತಿ ಇದೇ ಕ್ಷೀರಾಂಬುಧಿ
ಇದೇ ಪುರಂದರವಿಠಲನ ವೈಕುಂಠಮಂದಿರ (೪)

ಹರಿನಾಮವನ್ನು ಬೇಡಿದ್ದನ್ನು ಕೊಡುವ ಕಲ್ಪವೃಕ್ಷಕ್ಕೆ ಹೋಲಿಸಿ, ಕಲ್ಪವೃಕ್ಷಪ್ರತಿಮೆಯ ಮೂಲಕ ಏನೆಲ್ಲಾ ಪಡೆಯಬಹುದೆಂದು ಪುರಂದರದಾಸರು ವಿವರಿಸುತ್ತಾರೆ. ಭಗವಂತನನ್ನು ಆಶ್ರಯಿಸಿದರೆ ತಂಪಾದ ನೆರಳಿನಂತೆ ಜೀವನವು ಸುಗಮವಾಗುವುದೆಂದು ಕಲ್ಪವೃಕ್ಷವು ಸುಖ, ಆನಂದ ಮುಂತಾದ ಫಲಗಳನ್ನು ನೀಡುವುದೆಂದು ತಿಳಿಸುತ್ತಾರೆ. ಹರಿಯ ನಾಮವು ಮುನಿಜನರ ಮನೆಯಲ್ಲಿ, ಬ್ರಹ್ಮಾದಿಗಳ ಹೃದಯಪೀಠದಲ್ಲಿ ಇರುವುದು. ಇದೇ ದ್ವಾರಾವತಿ, (ಅ) ಇದೇ ಕ್ಷೀರಾಂಬುಧಿ, (ಆ) ಇದೇ ಪುರಂದರವಿಠಲನ ವೈಕುಂಠಮಂದಿರವೆಂದು ಪುರಂದರದಾಸರು ಹೇಳುತ್ತಾರೆ. ನವವಿಧಭಕ್ತಿಗಳಲ್ಲಿ ಒಂದಾದ ಕೀರ್ತನಭಕ್ತಿಯ ಸ್ವರೂಪವು ಭಗವಂತನ ರೂಪ, ಗುಣ, ಪ್ರಭಾವ, ಚರಿತ್ರೆ ಮತ್ತು ತತ್ವವನ್ನು ನಾಮಸ್ಮರಣೆಯ ಮೂಲಕ ತಿಳಿಯುವಂತಹದ್ದಾಗಿದೆ. ಹರಿನಾಮಸ್ಮರಣೆಯನ್ನು ಇಲ್ಲಿ ಕಲ್ಪವೃಕ್ಷಕ್ಕೆ ಹೋಲಿಸುವ ಕಾರಣವೇನೆಂದರೆ, ಕಲ್ಪವೃಕ್ಷವು ಸುರಾಸುರರು ಅಮೃತಕ್ಕಾಗಿ ಕ್ಷೀರಸಮುದ್ರದಲ್ಲಿ ಮಂಥನಮಾಡುವ ಸಮಯದಲ್ಲಿ ಹುಟ್ಟಿತೆಂದು, ಬೇಡಿದ್ದನ್ನು ಕೊಡುವ ಶಕ್ತಿ ಇದಕ್ಕಿದೆಯೆಂದು ಭಾಗವತ ಪುರಾಣದಲ್ಲಿ ಬರುತ್ತದೆ.

**ಕಲ್ಪವೃಕ್ಷ:** ಕಲ್ಪವೃಕ್ಷ ನೋಡಿರೈ ಕಲ್ಪಭೂರುಹರ ।ಪ।

ನಾಡೊಳಗಚ್ಯುತದಾಸರು ನರರೇ ।ಅ।

ಕ್ಷೀರಕೂಡಿದ ಜಲವ ನೀರೆನ್ನಬಹುದೆ
ನೀರೊಳುದಿಸಿದ ಮುತ್ತು ನೀರಾಗುವುದೆ
ಆರಿದ ಭಾಂಡ ಮೃತ್ತಿಕೆ ಕೂಡಲರಿವುದೆ
ಶೌರಿಯ ಶರಣರ ನರರೆನ್ನಬಹುದೆ ।೧।

ಹರಿಗೆರೆದ ನೀರು ತೀರ್ಥವೆನಿಸಿತು ನರ
ಹರಿವುಂಡ ಚರುವು ಪ್ರಸಾದವಾಯ್ತು
ಹರಿದಾಸರುಗಳೆಂಬ ನಾಮಧಾರಕನನ್ನು

ನರರೆನ್ನಬಹುದೇನೋ ಸುರಂಗಧಿಕರನ್ನು ೧।

ಪರಬ್ರಹ್ಮ ವಿಷ್ಣುವು ಚರಬ್ರಹ್ಮ ವೈಷ್ಣವ
ಪರಕಿಸಲರಿಯರು ಮತಿಭ್ರಷ್ಟರು
ಧರೆಯೊಳು ಪುರಂದರವಿಠಲನ ದಾಸರ
ನರರೆಂದವರಿಗೆ ಘೋರ ರೌರವ ನರಕ ೨। (೫)

ಪುರಂದರದಾಸರು ಕಲ್ಪಭೂರುಹರ–ಕಲ್ಪವೃಕ್ಷ (ಭೂರುಹ) ವೆಂದರೆ ಬಯಸಿದ್ದನ್ನೆಲ್ಲ ಈಡೇರಿಸುವ ದೇವಲೋಕದ ಮರ. ಹರಿದಾಸರನ್ನು ಕಲ್ಪವೃಕ್ಷಕ್ಕೆ ಹೋಲಿಸುತ್ತಾ ಅಚ್ಯುತನದಾಸರಾದ ಅವರು ನರರಿಗಿಂತ ಶ್ರೇಷ್ಠರೆಂದು ಹೊಗಳುತ್ತಾರೆ. ಹೇಗೆ ಕಲ್ಪವೃಕ್ಷ ಬೇರೆ ವೃಕ್ಷಗಳಿಂದ ಭಿನ್ನವೋ ಶ್ರೇಷ್ಠವೋ ಹಾಗೆಯೇ ಹರಿ ದಾಸರು, ನೀರು ಹಾಲಿನೊಂದಿಗೆ ಬೆರೆತರೆ ಅದು ಹಾಲೇ. ನೀರಲ್ಲಿ ತೋರಿದ ಮುತ್ತು ಕಲ್ಲಾಗಿರುತ್ತದೆ ಹೊರತು ನೀರಲ್ಲ. ಮಣ್ಣಿನಿಂದ ಮಡಕೆಯನ್ನುಮಾಡಿ ಬೆಂಕಿಯಲ್ಲಿ ಕಾಯಿಸಿ ಒಣಗಿದ ಮೇಲೆ ಮತ್ತೇ ಅದನ್ನು ಮಣ್ಣಿನಲ್ಲಿ ಇಟ್ಟರೆ ಅದು ಮಣ್ಣಾಗುವುದಿಲ್ಲ, ಮಣ್ಣಿನೊಂದಿಗೆ ಬೆರೆಯುವುದಿಲ್ಲ. ಭಗವಂತನ ಪ್ರತಿಮೆಗೆ ಹಾಕಿದ ನೀರು ತೀರ್ಥವೆನಿಸುತ್ತದೆ. ಭಗವಂತನಿಗೆ ನೀಡಿದ ನೈವೇದ್ಯ ಪ್ರಸಾದವಾಗುತ್ತದೆ. ಹೀಗೆ ಹರಿದಾಸರೆಂಬ ಹೆಸರನ್ನು ಪಡೆದುಕೊಂಡವರು ಸಾಧಾರಣ ಮನುಷ್ಯರಲ್ಲ, ಸುರರಿಗಧಿಕರು ಎಂದರೆ ದೇವತೆಗಳಿಗಿಂತ ಅಧಿ ಕರು ಎಂಬ ತಾತ್ಪರ್ಯವಿಲ್ಲಿ ಗೋಚರಿಸುತ್ತದೆ. ತಾರತಮ್ಯ ಜ್ಞಾನವು ದ್ವೈತಸಿದ್ಧಾಂತದ ಹೃದಯಭಾಗ ಅದರ ಬಗ್ಗೆ ತಿಳಿಸುತ್ತಾ ಪರಬ್ರಹ್ಮನಾದ ಹರಿ ಹಾಗೂ ಚರಬ್ರಹ್ಮನಾದ ಚತುರ್ಮುಖಬ್ರಹ್ಮರ ನಡುವಿನ ತಾರತಮ್ಯವನ್ನು ಮಂದಮತಿಯರು ತಿಳಿಯಲಾರರು ಎನ್ನುತ್ತಾರೆ ಪುರಂದರದಾಸರು. ಇಲ್ಲಿ ಚರ ಎಂದರೆ ಸೃಷ್ಟಿ, ಪರಮಾತ್ಮನ ಆಜ್ಞಾನುಸಾರ ಸೃಷ್ಟಿಕಾರ್ಯ ಮಾಡುವ ಚರಬ್ರಹ್ಮನು ವಿಷ್ಣುಭಕ್ತನಾದ್ದರಿಂದ ವೈಷ್ಣವನೆಂದು ಕರೆದಿದ್ದಾರೆ. ಧರೆ ಯೊಳು ಪುರಂದರವಿಠಲನ ದಾಸರನ್ನು ಸಾಮಾನ್ಯನರರೆಂದವರಿಗೆ ರೌರವನರಕವೇ ಪ್ರಾಪ್ತಿ ಎಂದು ಇಲ್ಲಿ ತಿಳಿಸಲಾಗಿದೆ.

**ಕುಮುದನೈದಿಲೆ:** ವಾಸುದೇವನ ಚರಣವನಜ ವಂದಿಪೆನೆ, ಸ
ನ್ಯಾಸಿರತ್ನಾಕರನೆ ವ್ಯಾಸಮುನಿರಾಯ ಪ।

. . . . . . . . . . . . . . . . . . . .

ವೈಷ್ಣವೋತ್ತಮನೆ ಸದ್ವೈಷ್ಣವಪ್ರವ್ರಜಾನಂದ
ವೈಷ್ಣವಾಗಮಭರಿತ ವೈಷ್ಣವಸುಪ್ರೀತ
ವೈಷ್ಣವಕಮಲಸೂರ್ಯ ವೈಷ್ಣವಕುಮುದಚಂದ್ರ
ವೈಷ್ಣವಕುಲೋತ್ಕೃಷ್ಟ ವೈಷ್ಣವವಿಶಿಷ್ಟ ೧। (೬)

ಪುರಂದರದಾಸರು ತಮ್ಮ ಗುರುಗಳಾದ ವ್ಯಾಸರಾಯರನ್ನು ಚಂದ್ರೋದಯವಾದಾಗ ಅರಳುವ ನೈದಿಲೆ ಅಥವಾ ಕುಮುದ ಎಂದಿದ್ದಾರೆ. ಅವರನ್ನು ವೈಷ್ಣವೋತ್ತಮರೆಂದು, ವಿಷ್ಣುಭಕ್ತರಗುಂಪಿಗೆ (ವ್ರಜ) ಸುಖವನ್ನುಂಟು ಮಾಡುವವರೆಂದು, ವೈಷ್ಣವರಿಗೆ ಕಮಲವೆಂದು, ನೈದಿಲೆಯೆಂದು ಹೊಗಳಿದ್ದಾರೆ. ವೈಷ್ಣವಧರ್ಮವನ್ನು ಭಾರತಾದ್ಯಂತ ಚಲಿಸಿ ಪ್ರಸಾರಮಾಡಿದ ಗುರುಗಳನ್ನು ಕತ್ತಲೆಯಲ್ಲಿ ಚಂದ್ರನು ಬಂದಾಗ ಅರಳುವ ನೈದಿಲೆಗೆ ಹೋಲಿಸಿದ್ದು ಸಮಂಜಸ ಎನಿಸುತ್ತದೆ.

**ಗೇರುಹಣ್ಣು:** ದಾರಿ ಯಾವುದಯ್ಯಾ ವೈಕುಂಠಕೆ ದಾರಿ ತೋರಿಸಯ್ಯ ॥ಪ॥

ಗೇರುಹಣ್ಣಿನಲ್ಲಿ ಬೀಜ
ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ
ಧೀರ ಕೃಷ್ಣನ ಭಕುತರೆಲ್ಲ
. . . . . . . . . . . . . (೭)

ಗೇರುಹಣ್ಣು ಸಂಸಾರವನ್ನು ಸಂಕೇತಿಸಿದರೆ ಅದರಲ್ಲಿರುವ ಬೀಜ ಜೀವಿಯನ್ನು ಸಂಕೇತಿಸುತ್ತದೆ. ಹೇಗೆ ಗೇರುಹಣ್ಣಿನಲ್ಲಿ ಬೀಜ ಅಂಟಿಯೂ ಅಂಟಿದಂತೆ ಇರುತ್ತದೆಯೋ ಹಾಗೆ ಸಾಧಕನು ಕುಟುಂಬದಲ್ಲಿ ಎಲ್ಲವೂ ಪರಮಾತ್ಮನ ಇಚ್ಛೆಯಂತೆ ನಡೆಯುತ್ತದೆ ಎಂದು ತಿಳಿದು ಅತೀ ಆಸೆಪಡದೆ ಬಾಳಬೇಕು. ಮನುಷ್ಯನು ಕುಟುಂಬ ಪೋಷಣೆಯಲ್ಲಿ ಮಗ್ನನಾಗಿ ಅರ್ಧ ಆಯುಷ್ಯವನ್ನು ವ್ಯಯ ಮಾಡುತ್ತಾನೆ. ಆದ್ದರಿಂದ ಜ್ಞಾನ, ಭಕ್ತಿ ಸಂಪಾದಿಸಲು ವೈರಾಗ್ಯದಾರಿಯಲ್ಲಿ ಮುನ್ನಡೆದು ಧೀರಕರಷ್ಣನ ಭಕ್ತರೆನಿಸಿಕೊಳ್ಳುವುದು ಮುಖ್ಯ.

**ಗೋಪಾಳಬುಟ್ಟಿ:** ಆದದ್ದೆಲ್ಲ ಒಳಿತೆ ಆಯಿತು, ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ॥ಪ॥

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತ್ತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳಬುಟ್ಟಿ ಹಿಡಿಸಿದಳಯ್ಯ
. . . . . . . . . . . . . . . . . . . . (೮)

ಗೋಪಾಳಬುಟ್ಟಿ ಎಂದರೆ ಹರಿದಾಸರು ಹೆಗಲಿಗೇರಿಸಿಕೊಂಡು, ಉಪಾದಾನದಿಂದ ಪಡೆಯುತ್ತಿದ್ದ ದವಸಧಾನ್ಯಗಳನ್ನು ಹಾಕಿಕೊಳ್ಳುತ್ತಿದ್ದ ಬಿದಿರಿನ ಅಥವಾ ಲೋಹದ ಬುಟ್ಟಿ. ಇದು ಇಲ್ಲಿ ಹರಿದಾಸ ಸಂಸ್ಕೃತಿಯನ್ನು ಸಂಕೇತಿಸುತ್ತದೆ. ತನ್ನದೆಲ್ಲವನ್ನು ಬಿಟ್ಟು ನಾಳೆಗಾಗಿ ಸಂಗ್ರಹಿಸದೆ ಇಂದಿಗಾಗುವಷ್ಟು ಮಾತ್ರ ಧಾನ್ಯವನ್ನು ದಾನದಿಂದ ಪಡೆದು ಸಾಧನಾಮಾರ್ಗದಲ್ಲಿ ಜೀವನ ನಡೆಸುವುದು ಅಷ್ಟು ಸುಲಭವಲ್ಲ. ಹರಿದಾಸರು ಇಂದ್ರಿಯನಿಗ್ರಹದಿಂದ, ವಿಷಯದ ವಿಚಾರ ಬಿಟ್ಟು, ವಿಹಿತಕರ್ಮವ ಮಾಡಿ, ವೈರಾಗ್ಯಭಾಗ್ಯ ದಿಂದ, ವಿನಯದಿ ಸಜ್ಜನರ ಸಹವಾಸದಲ್ಲಿ ಜನಹಿತಸಂದೇಶಕ್ಕಾಗಿಯೇ ತಮ್ಮನ್ನು ತೊಡಗಿಸಿಕೊಂಡವರು. ಪುರಂದರದಾಸರ ಬದುಕಿನಲ್ಲಿ ಒಂದು ಮಹತ್ತರ ಘಟನೆ ನಡೆದು ಅವರ ಆಂತರಿಕವಿಕಾಸವಾಯಿತು. ಅದಕ್ಕಾಗಿ ಸಹಾಯಕಳಾಗಿ ನಿಂತ ಪತ್ನಿಯನ್ನು ಹೊಗಳಿ ಬರೆದ ಕೀರ್ತನೆಯಿದು. ಪತಿಯ ಬೆಳವಣಿಗೆಯಲ್ಲಿ ಸಹಾಯಕಳಾಗುವ ಇಂತಹ ಹೆಂಗಳೆಯರ ಸಂತತಿ ಸಾವಿರವಾಗಲಿ ಎಂದು ಪುರಂದರದಾಸರು ಇಲ್ಲಿ ಹಾರೈಸುತ್ತಾರೆ.

**ಜಾಲಿಮರ:** ಜಾಲಿಯ ಮರದಂತೆ ಧರೆಯೊಳು ದುರ್ಜನರು ॥ಪ॥
ಮೂಲಾಗ್ರ ಪರಿಯಂತ ಮುಳ್ಳುಕೂಡಿಪ್ಪಂತೆ ॥ಅ॥

ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣು ಇಲ್ಲ

ಕುಸುಮವಾಸನೆಯಿಲ್ಲ ಕೂಡಲು ಸ್ಥಳವಿಲ್ಲ
ರಸದಲ್ಲಿ ಸ್ವಾದವು ವಿಷದಂತೆ ಇರುತಿಹ ।೧।

ಊರಹಂದಿಗೆ ಷಡ್ರಸಾನ್ನವನಿಕ್ಕಲು
ನಾರುವ ದುರ್ಗಂಧ ಬಿಡಬಲ್ಲುದೆ
ಘೋರಪಾಪಿಗೆ ತತ್ವಜ್ಞಾನವ ಪೇಳಲು
ಕ್ರೂರಕರ್ಮವ ಬಿಟ್ಟು ಸುಜನನಾಗುವನೆ ।೨।

ತನ್ನಿಂದ ಉಪಕಾರ ತೋಟಕಾದರು ಇಲ್ಲ
ಬಿನ್ನಾಣದ ಮಾತಿಗೆ ಕೊನೆಯಿಲ್ಲ
ಅನ್ನಕ್ಕೆ ಸೇರಿದ ಕುನ್ನಿ ಮಾನವರಂತೆ
ಇನ್ನಿವರ ಕಾರ್ಯವು ಪುರಂದರವಿಠಲ ।೩। (೯)

ಜಾಲಿಮರವು ದುರ್ಜನರನ್ನು ಸಂಕೇತಿಸುತ್ತದೆ. ಜಾಲಿಯಮರದಂತೆ ಯಾರ ಪೋಷಣೆಯು ಇಲ್ಲದೆ ಎಲ್ಲೆಂದರಲ್ಲಿ ಬೆಳೆಯುತ್ತ ಹೋಗುವ ದುರ್ಜನರು ಸಮಾಜಕ್ಕೆ ಕಂಟಕರಾಗಿರುತ್ತಾರೆ. ಜಾಲಿಯ ಮರದ ಹಿನ್ನೆಲೆಯಲ್ಲಿ ದುರ್ಜನರ ಗುಣಗಳನ್ನು ಬೆಳಕಿಗೆ ತರುವ ಕಾರ್ಯ ಈ ಕೀರ್ತನೆಯಲ್ಲಿ ಆಗಿದೆ. ದಣಿದು ಬಂದವರಿಗೆ ನೆರಳು ನೀಡದ, ಹಸಿದು ಬಂದವರಿಗೆ ಹಣ್ಣು ಸಿಗದ ಹೂಗಳಲ್ಲಿ ಪರಿಮಳ ಇಲ್ಲದ ಇದರ ರಸವು ವಿಷದಂತೆ ಯಾವುದಕ್ಕೂ ಉಪಯೋಗವಿಲ್ಲ. ಹಾಗೆಯೆ ದುರ್ಜನರಲ್ಲಿಯೂ ಕೂಡ ಒಳ್ಳೆಯ ವ್ಯಕ್ತಿತ್ವಕ್ಕೆ ಬೇಕಾಗುವ ಯಾವ ಗುಣಗಳು ಇಲ್ಲದೆ ಸುಳ್ಳು, ಮೋಸ, ವಂಚನೆ, ದುರಾಚಾರ ಮುಂತಾದ ಋಣಾತ್ಮಕ ಗುಣಗಳಿಂದ ಕೂಡಿ ತೊಂದರೆ ಕೊಡುವ ಸ್ವಭಾವವಿರುತ್ತದೆ. ಇಲ್ಲಿ ಪುರಂದರದಾಸರಿಗೆ ಒಳ್ಳೆಯ ಸಮಾಜ ನಿರ್ಮಾಣದ ಚಿಂತನೆ ಇದ್ದಂತೆ ಕಾಣುತ್ತದೆ. ಅವರ ತಾತ್ವಿಕಚಿಂತನೆಗಳು ಒಳ್ಳೆಯ ಸಮಾಜನಿರ್ಮಾಣಕ್ಕಾಗಿ ಮೂಡಿ ಬಂದಿದ್ದು ಮತ್ತು ಅವರಿದ್ದ ಪರಿಸರದಲ್ಲಿಯೂ ಬದಲಾವಣೆಗಳನ್ನು ರೂಪಿಸಿರಬಹುದು. ಈಗಲೂ ಕೂಡ ಅವರ ದೃಷ್ಟಿಕೋನವು, ತಾತ್ವಿಕಚಿಂತನೆಗಳು ಪ್ರಸ್ತುತ ಸಮಾಜಕ್ಕೂ ಅನ್ವಯಿಸುವಂತಹವು ಎಂದರೆ ತಪ್ಪಿಲ್ಲ. ಸಮಾಜದಲ್ಲಿ ಕಾಣುವ ಕುಲ, ಜಾತಿ, ಢಾಂಬಿಕತೆ, ಧನಪ್ರಧಾನಮೌಲ್ಯಗಳು ಮುಂತಾದ ವಿಷಯಗಳಲ್ಲಿ ತಮ್ಮ ನೈಜಭಾವನೆಗಳನ್ನು ವ್ಯಕ್ತಪಡಿಸಿ ಸಾರ್ಥಕಸಮಾಜಕ್ಕೆ ಆದರ್ಶವಾಗಿ ಪ್ರಭಾವವನ್ನು ಬೀರಿದ್ದ ಅವರನ್ನು ಸಮಾಜಸಂಶೋಧಕರೆನ್ನಲು ಅಡ್ಡಿಯಿಲ್ಲ.

**ತಾವರೆ ಎಲೆ:** ಈಸಬೇಕು ಇದ್ದು ಜಯಿಸಬೇಕು ।ಪ।

ಹೇಸಿಗೆ ಸಂಸಾರದಲ್ಲಿ ಆಸೆ ಲೇಶ ಇಡದ ಹಾಗೆ ।ಅ।

ತಾಮರಸ ಜಲದಂತೆ
ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮ ಎನುತ ಪಾಡಿ
ಕಾಮಿತ ಕೈಗೊಂಬರೆಲ್ಲ (೧೦)

ತಾವರೆ ಎಲೆ ನೀರಿನಲ್ಲಿ ಬೆಳೆದರೂ ನೀರಿಗೆ ಅಂಟದೆ ಒಂದುಹನಿ ನೀರನ್ನೂ ಇಂಗಿಸಿಕೊಳ್ಳದೆ ಹೊರಚೆಲ್ಲುತ್ತದೆ. ಅಂಥ ನಿರ್ಲಿಪ್ತಸ್ಥಿತಿಯನ್ನು ಪ್ರತಿಯೊಬ್ಬ ಸಾಧಕನು ತಂದುಕೊಳ್ಳಬೇಕು. ಸಂಸಾರದಲ್ಲಿ

ಅತಿಯಾದ ಮೋಹ ಬೆಳೆಸಿಕೊಳ್ಳದೆ ರಾಮನಾಮ ಜಪಸುತ್ತ ಸಂಸಾರದ ಜವಾಬ್ದಾರಿಗಳನ್ನು ನಿಭಾಯಿಸಬೇಕು ಎಂಬ ಚಿಂತನೆ ಮೂಡಿಬಂದಿದೆ.

**ತಾವರೆ:**

. . . . . . . . . . . . . . . . . . .
ಇತ್ತ ಬಾರೆಂಬರಿಲ್ಲ ಇರವು ಕೇಳುವರಿಲ್ಲ
ಹತ್ತಿರ ಕುಳ್ಳಿರಿಸಿ ಆದರಿಪರಿಲ್ಲ
ತತ್ತರ ಪಡುತ್ತೇನೆ ತಾವರೆ ಜಲದಂತೆ
ಚಿತ್ತ ಭ್ರಮಿಸಿ ಕಣ್ಣು ಕತ್ತಲಾಯಿತು ಹರಿಯೆ.
. . . . . . . . . . . . . . . . . . . (೧೧)

ಉಪಾದಾನಕ್ಕಾಗಿ ಮನೆ ಮನೆ ತಿರುಗುತ್ತಾ ಸಂಚಾರದಲ್ಲಿರುವ ಪುರಂದರದಾಸರು ಜನರ ತಿರಸ್ಕಾರವನ್ನು ಅನುಭವಿಸಿರಬಹುದು ತೀರ್ಥಯಾತ್ರೆಯ ಸಂದರ್ಭದಲ್ಲಿ ಆಶ್ರಯ ಸಿಗದೆ ಪರಿತಪಿಸಿರಬಹುದು. ಹಾಗೆಯೆ ಅವರೂ ಕೂಡ ಅನಾಥಪ್ರಜ್ಞೆಯಿಂದ ಬಳಲಿ ತಮ್ಮನ್ನು ಕರೆದು ಕುಳ್ಳಿರಿಸಿ ಆದರ ಪಡಿಸುವರಿಲ್ಲ ಎಂದಿದ್ದಾರೆ ತಾವರೆಯ ಜಲದಲ್ಲಿ ಹೇಗೆ ನೀರರಿದ್ದರೂ ಇಲ್ಲದಂತಿರುವುದೋ, ಅದೇ ರೀತಿ ತಾವೂ ಕೂಡ ಸಂಸಾರದಲ್ಲಿ ಯಾರಿಗೂ ಹತ್ತಿರವಾಗಿಲ್ಲ ಎಂಬ ಅನಾಥ ಪ್ರಜ್ಞೆಯನ್ನು ವ್ಯಕ್ತಪಡಿಸುತ್ತಾ ಭಗವತ್ ಕೃಪೆಗಾಗಿ ಶರಣಾಗತ ಭಾವದಿಂದ ಯಾಚಿಸುವ ನಿರ್ಮಲ ಭಕ್ತಿಯ ಆತ್ಮನಿವೇದನೆ ಸಹಜ ಸುಂದರವಾಗಿ ಇಲ್ಲಿ ಅಭಿವ್ಯಕ್ತಿಗೊಂಡಿದೆ.

**ತೃಣ(ಹುಲ್ಲು):**

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದೆ ಭವದಿ ನೊಂದಿಹೆ ನಾನು
ಸನಕಾದಿ ಮುನಿವಂದ್ಯ ವನಜ ಸಂಭವನಕ
ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀ ಕೃಷ್ಣ (೧೨)

ಕಷ್ಟಕಾಲದಲ್ಲಿ ಪುರಂದರದಾಸರು ನೊಂದು ತಮ್ಮನ್ನು ತೃಣಕ್ಕಿಂತ ಕಡೆಯಾಗಿ ಹೋಲಿಸಿಕೊಂಡಿದ್ದಾರೆ. ಹುಲ್ಲನ್ನು ಎಲ್ಲರೂ ತುಳಿಯುತ್ತ ಮುನ್ನಡೆಯುವವರೆ ಅದಕ್ಕೆ ನೋವಾದೀತು ಎಂದು ಯಾರೂ ಗಮನಿಸುವದಿಲ್ಲ. ತನ್ನದೆಲ್ಲವ ತೊರೆದು ತೀರ್ಥಯಾತ್ರೆ ಮಾಡುತ್ತಾ ಊರೂರು ಸುತ್ತುತ್ತ, ಹರಿಕೀರ್ತನೆ ಮಾಡುತ್ತ ಮುನ್ನಡೆಯುವ ಪುಂದರದಾಸರೂ ಕೂಡ ಸುಸ್ತಾಗಿ ನೊಂದು ಕುಳಿತ ಸಂದರ್ಭದಲ್ಲಿ ರಚಿಸಿದ ಕೀರ್ತನೆಯಿದು, ಕ್ಷಣವೊಂದು ಯುಗವೆನಿಸಬೇಕಾದರೆ ಬಹಳ ಕಷ್ಟದಲ್ಲಿರಬೇಕು. ದಾಸರು 'ಈಸಬೇಕು ಇದ್ದು ಜಯಿಸಬೇಕು', 'ಕಲ್ಲಾಗಿ ಇರಬೇಕು ಕಠಿಣಭವ ತೊರೆಯೊಳಗೆ' ಎನ್ನುತ್ತಾ 'ಧರ್ಮವೇ ಜಯವೆಂಬ ದಿವ್ಯ ಮಂತ್ರವೆಂದು' ಪಠಿಸುತ್ತಾ 'ಬಂದದ್ದೆಲ್ಲಾ ಬರಲಿ ಗೋವಿಂದನ ದಯೆಯೊಂದಿರಲಿ' ಎಂದು ಹೇಳಿದ ಪುರಂದರದಾಸರೇ ಇಲ್ಲಿ ನೊಂದ ಧ್ವನಿಯಲ್ಲಿ ಪ್ರಹ್ಲಾದಗೊಲಿದ ಶ್ರೀಕೃಷ್ಣನೆ ನನ್ನನ್ನು ಕಾಪಾಡು ಎಂದು ದೈನ್ಯದಿಂದ ಮೊರೆ ಹೋಗುತ್ತಾರೆ. ಜೀವನಪೂರ್ತಿ ದಾರಿಯುದ್ದಕ್ಕೂ ವರ್ಣರಂಜಿತ ಕಾಮನಬಿಲ್ಲೇ ಇರುತ್ತದೆಂದು ಭ್ರಮಿಸುವ ಜನರಿಗೆ ತಮ್ಮ ಕೀರ್ತನೆಗಳ ಮೂಲಕ ಕಷ್ಟಸುಖಗಳು ಯಾರಿಗೂ ತಪ್ಪಿದ್ದಲ್ಲ ಎಂದು ತೋರಿಸಿಕೊಟ್ಟಿದ್ದಾರೆ. ಪುರಂದರದಾಸರು ಸಾಮಾನ್ಯ ಜನರ ನಡುವೆ ಇದ್ದವರು. ಜನಜೀವನದ ಅಂತರಂಗವನ್ನು ಸ್ಪಂದಿಸಿ ಅದನ್ನು ಮೃದುಗೊಳಿಸುವ ಹವಣಿಕೆ ಅವರ ಕಾವ್ಯದ್ದು ದಾಸರ ಹಾಡುಗಳಿಗೆ ಸಾರ್ವಕಾಲಿಕ ಶಕ್ತಿ ಬರಲು ಅವರ ಆದರ್ಶ ವ್ಯಕ್ತಿತ್ವವೇ ಕಾರಣ್ವ ತೃಣಕ್ಕೆ ಸಂಬಂಧಿಸಿದ ಇನ್ನೊಂದು ಕೀರ್ತನೆ ಹೀಗಿದೆ

**ತೃಣ(ಹುಲ್ಲು):** ಇದು ಭಾಗ್ಯ ಇದು ಭಾಗ್ಯವಯ್ಯ ಪ

ಪದುಮನಾಭನ ಪಾದ ಭಜನೆ ಸುಖವಯ್ಯ ಅ

ವಿಷಯ ಭೋಗದ ತೃಣಕ್ಕೆ ಉರಿಯಾಗಿ ಇರಬೇಕು
ನಿಶಿಹಗಲು ಶ್ರೀ ಹರಿಯ ಭಜಿಸಬೇಕು
ವಸುಧೆಯೊಳು ಪುರಂದರವಿಠಲನ ನಾಮವ
ಹಸನಾಗಿ ನೆನೆ ನೆನೆದು ಸುಖಿಯಾಗಬೇಕು. (೧೩)

ಸುಖವನ್ನು ಅನುಭವಿಸಬೇಕೆಂದು ಹುಟ್ಟುವ ನಾನಾ ಆಸೆಗಳನ್ನು ತೃಣ ಎಂದರೆ ಹುಲ್ಲಿಗೆ ಹೋಲಿಸಿದ್ದಾರೆ ಪುರಂದರದಾಸರು. ಹುಲ್ಲು ಬೆಳೆದಾಗ ಅದನ್ನು ಎಷ್ಟುಸಾರಿ ಕಿತ್ತು ಬಿಸಾಡಿದರೂ ಮತ್ತೆ ಮತ್ತೆ ಹುಟ್ಟುತ್ತಾ ಇರುತ್ತದೆ, ಅದೇ ರೀತಿ ಮನಸ್ಸಿನ ಆಸೆಗಳು ಕೂಡ ಹೆಣ್ಣು, ಹೊನ್ನು, ಮಣ್ಣಿನ ಆಸೆಗಳಿಗೆ ಬಯಸಿದ್ದನ್ನೆಲ್ಲಾ ನೀಡಿದರೂ ಸಾಕೆನ್ನುವ ಭಾವ ಹೊಂದುವದಿಲ್ಲ ಇಂದ್ರಿಯಗಳಲ್ಲಿ ಶಕ್ತಿ ಕಡಿಮೆಯಾದರೂ ಇಚ್ಛೆಗಳು ಕುಂದುವದಿಲ್ಲ, ಅದರಂತೆ ಇಂದ್ರಿಯನಿಗ್ರಹ ಹರಿನಾಮಸ್ಮರಣೆಗಳು ಮಾತ್ರ ಆಸೆಗಳಿಗೆ ಉರಿಯಾ ಗಬಲ್ಲವು ಎಂಬ ಜೀವನಾನುಭವದ ಮಾತನ್ನು ಹೇಳಿದ್ದಾರೆ.

**ತುಳಸಿ:** ಇರುವುದಾದರೆ ಮುಗುಳು ತೆನೆ
ಅದಿಲ್ಲದಿದ್ದರೆ ಚಿಗುರೆಲೆ
ಅದೂ ಇಲ್ಲದಿದ್ದರೆ ಬರಲು ಕಟ್ಟಿಗೆ
ಇಲ್ಲದಿದ್ದರೆ ಬೇರು ಮಣ್ಣು
ಅದೊಂದು ಇರದಿರೆ ತುಳಸಿ ತುಳಸಿ
ಎಂದೊರಲಿದರೆ ಸಾಕು
ಎಲ್ಲ ವಸ್ತುಗಳನೀಡಾಡುವ ಪುರಂದರವಿಠಲ (೧೪)

ತುಳಸಿ (ಇ) ದಾಸರಿಗೆ ಪ್ರಿಯವಾದುದು. ಅದನ್ನು ಪೂಜಾ ಸಮಯದಲ್ಲಿ ಉಪಯೋಗಿಸುವುದು ವೈಷ್ಣವ ಸಂಪ್ರದಾಯದಲ್ಲಿ ಮೊದಲಿನಿಂದಲೂ ಬಂದಿದೆ. ಸ್ಕಂದಪುರಾಣದಲ್ಲಿ ತುಳಸಿಯ ಮಹಿಮೆಯ ಬಗ್ಗೆ ಹೇಳಲಾಗಿದೆ. ತುಳಸಿಯ ತೆನೆ ಇದ್ದರೆ ಶ್ರೇಷ್ಠ ಅದಿಲ್ಲದಿದ್ದರೆ, ಚಿಗುರೆಲೆ, ಅದಿಲ್ಲದಿದ್ದರೆ ತುಳಸಿ ಗಿಡದ ಒಣಗಿದ ಕಟ್ಟಿಗೆ ಅಥವಾ ಅದರ ಬೇರು ಅಥವಾ ತುಲಸಿ ಗಿಡ ಇದ್ದ ಸ್ಥಳದ ಮಣ್ಣನ್ನಾದರೂ ಉಪಯೋಗಿಸಬಹುದು ಇದಾವುದೂ ಇಲ್ಲದಿದ್ದರೆ ತುಳಸಿ ತುಳಸಿ ಎಂದು ಬಾಯಿಂದ ಹೇಳಿದರೂ ಸಾಕು ಹರಿಯು ಸುಪ್ರಸನ್ನನಾಗುವನು. ತುಳಸಿಯು ಎಲ್ಲ ಪಾಪಗಳನ್ನು ಪರಿಹರಿಸುತ್ತದೆ. ತುಳಸಿಯು ಎಲ್ಲಾ ಇಷ್ಟಗಳನ್ನು ಕೊಡುತ್ತದೆ ಎಲೆಲ್ಲಿ ತುಳಸಿಯ ವನಗಳಿವೆಯೋ ಅಲ್ಲಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು ಯಾವ ಮನೆಯಲ್ಲಿ ತುಳಸಿಯ ವನವಿದೆಯೋ ಅದು ಒಂದು ದೊಡ್ಡ ತೀರ್ಥಕ್ಷೇತ್ರವೆನಿಸುತ್ತದೆ.

**ತುಳಸಿಮಾಲೆ:** . . . . . . . . . . . . . .
ತುಳಸಿಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸಿಮಾಲೆ ಹಾಕಿಸಿದನು.

. . . . . . . . . . . . . (೧೫)

ಹೃದಯದಲ್ಲಿ ಶಾಂತಿಯನ್ನೂ, ಸಮಾಧಾನವನ್ನು ಮಾಡಿಸಿಕೊಂಡು ಹರಿಸ್ಮರಣೆ ಮಾಡುತ್ತ ಹರಿ ಮುದ್ರೆಯೇ ಆಭರಣವಾಗಿ, ಅಂದಿನ ಕೂಳನ್ನು ಅಂದಂದು ಗಳಿಸಿ ನಾಳೆಗೆಂದು ಏನೂ ಉಳಿಸದೆ ಊರೂರು ಅಲೆಯುವ ಮಧುಕರವೃತ್ತಿ ಹರಿದಾಸರದು ಅವರಿಗೆ ಕೊರಳಿನ ಹಾರ, ಆಭರಣವೆಂದರೆ ತುಲಸಿಮಾಲೆಯೇ, ತುಲಸಿಮಾಲೆ ಹರಿಭಕ್ತಿಯನ್ನು ಜೀವನ ವೈರಾಗ್ಯವನ್ನು ಸಂಕೇತಿಸುತ್ತದೆ. ಅಂತಹ ವೃತ್ತಿಗೆ ಮನಸು ಮಾಡದೆ ತಮ್ಮ ಪೂರ್ವಾಶ್ರಮದಲ್ಲಿ ಶ್ರೀಮಂತರಾಗಿ ಮೆರೆಯುತ್ತಿದ್ದ ಕಾಲವನ್ನು ನೆನಸಿಕೊಂಡು ಈ ಕೀರ್ತನೆ ರಚಿಸಿರಬಹುದು 'ಆದದ್ದೆಲ್ಲಾ ಒಳಿತೇ ಆಯಿತು, ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾ ಯಿತು' ಎಂಬ ಪಲ್ಲವಿ ಅನುಪಲ್ಲ ವಿಯೊಡನೆ ಶುರುವಾಗುವ ಈ ಕೀರ್ತನೆಯಲ್ಲಿ ತುಳಸಿಮಾಲೆ ಪ್ರತಿಮೆ ಹರಿ ಸೇವೆಗಾಗಿ ಬದುಕು ಮುಡುಪು ಎಂಬುದನ್ನು ಸಂಕೇತಿಸುತ್ತದೆ. ಭಾಗವತರಿಗೂ ಹರಿದಾಸರಿಗೂ ದೀಕ್ಷೆ ದೊರೆ ತಾಗ ಗುರುವಿನಿಂದ ಹಾಕಲ್ಪಡುವ ಕಂಠಮಾಲೆಯೇ ತುಳಸಿಮಾಲೆ.

**ತುಳಸಿ ಮಾಲೆ:** ಇಂದ್ರಿಯಗಳ ಸುಖವ ನೆಚ್ಚದಿರು ಕಂಡ್ಯ ಪ।
. . . . . . . . . . . . . . . . . . .
ಎಳೆ ತುಳಸಿ ವನಮಾಲೆ ಧರಿಸಿಕೊಳ್ಳಬೇಕು
ಫಳಿಲನೇ ಹರಿಯ ಪೂಜಿಸುತಿರಲುಬೇಕು
ಕಳಕಳನೆ ಎಕಮನ ಕರಗುತಿರಬೇಕು
ನಳಿನ ನಾಭನ ಪಾದ ಪೊಗಳುತಿರಬೇಕು.
. . . . . . . . . . . . . . . . . . . (೧೬)

ಇಲ್ಲಿ ತುಳಸಿಮಾಲೆ ಕೇವಲ ಹರಿದಾಸದೀಕ್ಷೆಯ ಸಂಕೇತವಾಗಿರದೆ ಕಾಯಾ, ವಾಚಾ, ಮನಸಾ ಹರಿದಾಸರಾಗಿ ಪರಿವರ್ತನೆಯಾಗಲು ನಿಷ್ಠೆಯಿಂದ, ವೈರಾಗ್ಯದಿಂದ ತಮ್ಮ ಸತ್ವ ಶುದ್ಧಿಯನ್ನು ಮಾಡಿಕೊಳ್ಳ ಬೇಕೆಂಬ ಸಂದೇಶವನ್ನು ಸೂಚಿಸುತ್ತದೆ. ನಿಜ ಭಕ್ತಿಯಿಂದ ಹರಿಯ ಪೂಜಿಸಿ ವಿರಕ್ತಿಯಿಂದ ಮನಸ್ಸನ್ನು ಕರಗಿಸಿ ಭಗವಂತನ ನಾಮಸ್ಮರಣೆ ಮಾಡುತ್ತಾ ಸಾಧನ ಮಾರ್ಗದಲ್ಲಿ ಮುಕ್ತಿಯನ್ನು ಸಾಧಿಸಿಕೊಳ್ಳುವ ತವಕವನ್ನು ಇಲ್ಲಿ ಕಾಣಬಹುದು.

**ದಂಡಿಗೆ ಬೆತ್ತ:** ಆದದ್ದೆಲ್ಲಾ ಒಳಿತೆ ಆಯಿತು ನಮ್ಮ ಪ।

ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಅ।

ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ
. . . . . . . . . . . . . . . . . . (೧೭)

ಗೀತ ನರ್ತನಕ್ಕೆ ಅನುಕೂಲವಾಗುವಂತೆ ಕೈಯಲ್ಲಿ ದಂಡಿಗೆ ಎಂದರೆ ತಂಬೂರಿ (ಸಣ್ಣ ತಂತೀವಾದ್ಯ) ಯನ್ನು ಹಿಡಿದುಕೊಂಡು ಹರಿದಾಸರು ಉಪಾದಾನಕ್ಕೆ ಹೊರಡುತ್ತಿದ್ದರು. ತಲೆಗೆ ದೇವರ ಶೇಷವಸ್ತ್ರವನ್ನು

ಸುತ್ತಿಕೊಂಡು ಕಾಲಲ್ಲಿ ಗೆಜ್ಜೆಕಟ್ಟಿ, ತಾಳಕ್ಕೆ ಚಿಟಗೆ ಹಿಡಿದುಕೊಳ್ಳುತ್ತಿದ್ದರು. ಇದು ಹರಿದಾಸರ ವೇಷಭೂಷಣ ವಾಗಿತ್ತು. ಹರಿದಾಸ ವೃತ್ತಿಯನ್ನು ದಂಡಿಗೆಬೆತ್ತ ಇಲ್ಲಿ ಸಂಕೇತಿಸುತ್ತದೆ. ಅನೇಕ ಶಾಸ್ತ್ರಗಳ ಸಾರವನ್ನು ತಿಳಿ ಗನ್ನಡದಲ್ಲಿ ಹೃದಯಂಗಮವಾಗಿ ಹಾಡಿ ಲೋಕವನ್ನು ಸನ್ಮಾರ್ಗಕ್ಕೆ ತಿರುಗಿಸಿ ಆತ್ಮೋದ್ಧಾರವನ್ನು ಮಾಡಿ ಕೊಂಡವರು ಹರಿದಾಸರು. ಇಂತಹ ಹರಿದಾಸ ವೃತ್ತಿಯನ್ನು ಸ್ವೀಕರಿಸಲು ಅಳುಕುತ್ತಿದ್ದೆ ಎಂದು ಪುರಂದರ ದಾಸರು ಇಲ್ಲಿ ತಿಳಿಸುತ್ತಾರೆ. ಹಾಗೂ ತಮ್ಮ ವ್ಯಕ್ತಿತ್ವ ಪರಿವರ್ತನೆಗೆ ಕಾರಣಳಾದ ತಮ್ಮ ಪತ್ನಿಯಂತಹ ಮಹಿಳೆ ಯರ ಸಂತತಿ ಬೆಳೆಯಲಿ ಎಂದು ಹರಸುತ್ತಾರೆ.

**ನವ ಬೆಳೆ:**

ಒಂಬತ್ತು ಬಾಗಿಲೊಳು ಒಂದೇ ದೀವಿಗೆ ಹಚ್ಚಿ
ನಂಬಿಕಿಲ್ಲದ ಸಂಸಾರ ಮಾಡಿದೆನೆ ಸೊವಿಯಾ ಬೀಬಿ ಪ।

ತನುವೆಂಬ ಕಲ್ಲಿನೊಳು ಮನವೆಂಬ ಧಾನ್ಯವ ತುಂಬಿ
ವನವನದು ನವಬೇಳೆ ಬೀಸಿದೆನೆ
ಅಷ್ಟಕರ್ತಗಳೆಂಬೋ ಅಷ್ಟನವಧಾನ್ಯವ ತಂದು
ಕುಟ್ಟಿ ಕುಟ್ಟಿ ಕಜ್ಜಾಯ ಕರೆದೇನೆ.
. . . . . . . . . . . . . . . . . . . (೧೮)

ಶರೀರವೆಂಬ ಚೀಲದಲ್ಲಿ ಮನಸ್ಸೆಂಬ ಧಾನ್ಯವ ತುಂಬಿ ಜರಡಿ ಹಿಡಿದು ಒಂಬತ್ತು ಬಗೆಯ ಬೇಳೆಗಳಾದ ನವವಿಧ ಭಕ್ತಿಯನ್ನು ಬೀಸುವ ಚಿತ್ರ ಇಲ್ಲಿ ಮೂಡಿದೆ. ಒಂಬತ್ತು ಬಗೆಯ ಬೇಳೆಗಳು ಭಗವಂತನ ನಾಮ ರೂಪ, ಗುಣ ಮತ್ತು ಮಹಿಮೆಯ ಶ್ರವಣ, ಕೀರ್ತನೆ ಮತ್ತು ಸ್ಮರಣೆ ಹಾಗೂ ಭಗವಂತನ ಪಾದಸೇವೆ, ಪೂಜೆ, ವಂದನೆ ಹಾಗೂ ಭಗವಂತನಲ್ಲಿ ದಾಸ್ಯಭಾವ, ಸಖ್ಯಭಾವ ಮತ್ತು ತನ್ನನ್ನು ಸಮರ್ಪಿಸಿಕೊಳ್ಳುವುದು ಈ ಒಂಬತ್ತು ಪ್ರಕಾರದ ಭಕ್ತಿಯನ್ನು ಸಂಕೇತಿಸುತ್ತವೆ. ಮನುಷ್ಯನು ಕೆಲಸ ಮಾಡಲು ಕಾರಣವಾದ 'ಅಷ್ಟಕತೃಗಳು' ಭೂತ, ತನ್ಮಾತ್ರ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಅಂತಃಕರಣ, ಗುಣ, ಪ್ರವೃತ್ತಿ, ಕಾಲಗಳು. 'ಅಷ್ಟ ನವಧಾನ್ಯ ಗಳೆಂದರೆ, ಎಂಟು ಭಾವಗಳಾದ ಧರ್ಮ, ಅಧರ್ಮ, ವೈರಾಗ್ಯ, ಅವೈರಾಗ್ಯ, ಐಶ್ವರ್ಯ, ಅನೈಶ್ವರ್ಯಗಳು. ಕುಟ್ಟಿ ಕುಟ್ಟಿ, 'ಕಜ್ಜಾಯ ಕರಿದೆನೆ' ಎಂದರೆ ಸಾಧನಾ ಮಾರ್ಗದಿಂದ ಮೋಕ್ಷ ವನ್ನು ಪಡೆಯುವುದು ಎಂದು ಅರ್ಥ. ನವವಿಧ ಭಕ್ತಿ, ಅಷ್ಟಕರ್ತೃಗಳು ಹಾಗೂ ಅಷ್ಟಭಾವಗಳ ಸಹಾಯ ವನ್ನು ಪಡೆದು ಮೋಕ್ಷ ಹೊಂದುವ ದಾರಿ ತೋರಿಸಿದ್ದಾರೆ ಪುರಂದರದಾಸರು.

**ಬೀಜ:**

ನಾರಾಯಣನೆಂಬ ನಾಮದ ಬೀಜವ
ನಾಲಿಗೆ ತುದಿಯಲಿ ಬಿತ್ತಿರಯ್ಯ ಪ।

ಹೃದಯ ಹೊಲವ ಮಾಡಿ ಮನವನೇಗಿಲ ಮಾಡಿ
ಶ್ವಾಸೋಚ್ಛ್ವಾಸ ಎರಡೆತ್ತು ಮಾಡಿ
ಜ್ಞಾನವೆಂಬ ಹಗ್ಗ ಕಣ್ಣಿಯ ಮಾಡಿ
ನಿರ್ಮಮವೆಂಬ ಗುಂಟೆಲಿ ಹರವಿರಯ್ಯ ೧।

ಮದ ಮತ್ಸರಗಳೆಂಬ ಮರಗಳನೆ ತಂದು

ಕಾಮ ಕ್ರೋಧಗಳೆಂಬ ಕಳೆಯ ಕೀತ್ತಿ
ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ
ಚಂಚಲವೆಂಬ ಹಕ್ಕಿಯ ಹೊಡೆಯಿರಯ್ಯ ೨।

ಉದಯಾಸ್ತಮಾನವೆಂಬ ಎರಡು ಕೊಳಗದಲ್ಲಿ
ಆಯುಷ್ಯವೆಂಬ ರಾಶಿ ಅಳೆಯುತಿರೆ
ಸ್ವಾಮಿ ಶ್ರೀ ಪುರಂದರವಿಠಲನ ನೆನೆದರೆ
ಪಾಪರಾಶಿಯ ಪರಿಹರಿಸುವನಯ್ಯ ೩।
. . . . . . . . . . . . . . . . . . . (೧೯)

ಹರಿ ನಾಮಸ್ಮರಣೆಯನ್ನು ಬೇಸಾಯದ ರೂಪಕದ ಮೂಲಕ ಹೇಳಬಯಸಿದ ಕೀರ್ತನೆಯಿದು. ನಾರಾಯಣನೆಂಬ ನಾಮಸರಣೆಯೇ ಬೀಜ ಅದನ್ನು ನಾಲಿಗೆಯ ತುದಿಯಲ್ಲಿ ಬಿತ್ತಿ, ಹೃದಯವನ್ನೇ ಹೊಲವನ್ನಾಗಿ ಮಾಡಿ, ಮನಸ್ಸನ್ನೇ ನೇಗಿಲನ್ನಾಗಿ ಮಾಡಿ, ಶ್ವಾಸೋಚ್ಛ್ವಾಸ ಎಂಬೆರಡು ಎತ್ತುಗಳ ಸಹಾಯ ದಿಂದ ಜ್ಞಾನವೆಂಬ ಹಗ್ಗದಿಂದ ನಿರಹಂಕಾರದ ಗೂಟಕ್ಕೆ ಕಟ್ಟಿರಯ್ಯ ಎನ್ನುತ್ತಾರೆ ಪುರಂದರದಾಸರು. ಇನ್ನೂ ಮುಂದುವ ರೆದು ಮದ, ಮತ್ಸರಗಳೆಂಬ ಮರಗಳನೆ ತರಿದು, ಕಾಮ ಕ್ರೋಧಗಳೆಂಬ ಕಳೆಯ ಕಿತ್ತಿ ಇಂದ್ರೀಯ ನಿಗ್ರಹವೆಂಬ ಮಂಚಿಕೆ (ಈ) ಹಾಕಿ ಚಂಚಲತೆ ಎಂಬ ಹಕ್ಕಿಯ ಹೊಡೆಯಿರಯ್ಯ ಎಂದು ಹರಿಯ ನಾಮ ಸ್ಮರಣೆಯೆಂಬ ಬೀಜ ಬಿತ್ತಿ ಬೆಳೆಯುವ ಬಗ್ಗೆ ಹೇಳುತ್ತಾ ಆಯುಷ್ಯ ಕಳೆದು ಹೋಗುವ ಮೊದಲು ಪುರಂದರವಿಠಲನನ್ನು ಸ್ಮರಿಸುವ ಬೆಳೆಯನ್ನು ಬೆಳೆದುಕೊಳ್ಳಬೇಕು ಎಂದು ದಾಸರು ಎಚ್ಚರಿಸುತ್ತಾರೆ.

**ಬೀಜ:** ನಾರಾಯಣನೆಂಬ ನಾಮದ ಬೀಜವ
ನಾರದ ಬಿತ್ತಿದ ಧರೆಯೊಳಗೆ ಪ।

ತರಳ ಧೃವನಿಂದ ಅಂಕುರಿಸಿತು ಅದು
ವರ ಪ್ರಹ್ಲಾದನಿಂದ ಮೊಳಕೆಯಾಯ್ತು
ಧರಣೀಶ ರುಕುಮಾಂಗದನಿಂದ ಚಿಗುರಿತು
ಕುರು ಪಿತಾಮಹನಿಂದ ಹೂವಾಯ್ತು ೧।

ವಿಜಯನ ಸತಿಯಿಂದ ಕಾಯಾಯಿತು ಅದು
ಗಜೇಂದ್ರನಿಂದ ದೋರೆ ಹಣ್ಣಾಯ್ತು
ಶ್ರೀ ಶುಕಮುನಿಯಿಂದ ಪರಿಪಕ್ವವಾಯ್ತು
ಅಜಾಮಿಳ ತಾನುಂಡು ರಸ ಸವಿದ. ೨। (೨೦)

ಹರಿನಾಮಸ್ಮರಣೆಯೆಂಬ ಭಕ್ತಿಯ ಬೀಜವನ್ನು ನಾರದರು ಬಿತ್ತಿದರು ಎಂದು ಭಾಗವತ ಪುರಾಣ ೨ನೇ ಸ್ಕಂದದಲ್ಲಿ ಬರುತ್ತದೆ. ಹರಿನಾಮಸ್ಮರಣೆಯಿಂದಲೇ ಮುಕ್ತರಾದ ಧ್ರುವ ಪ್ರಹ್ಲಾದ ರುಕ್ಮಾಂಗದ ಹಾಗೂ ಭೀಷ್ಮ ದ್ರೌಪತಿ, ಗಜೇಂದ್ರ ಅಜಾಮಿಳ ಶುಕ ಮುನಿಗಳು ಮುಂತಾದ ಭಗವದ್ಭಕ್ತರನ್ನು ಉಲ್ಲೇಖಿಸುತ್ತಾ ಈ ಭಕ್ತಿಯೆಂಬ ಫಲವು ಬೆಳೆಯುವ ಬಗೆಯನ್ನು ತಿಳಿಸುತ್ತಾರೆ ಪುರಂದರದಾಸರು. ಅವರ ವೈಶಿಷ್ಟ್ಯ ಏನೆಂದರೆ ಒಂದು ವಿಷಯವನ್ನು ತಿಳಿಸಲು ಬಳಸುವ ಶೈಲಿ. ರೂಢಿಯಲ್ಲಿ, ವ್ಯವಹಾರದಲ್ಲಿ ಬರುವ 'ಬೀಜ' ಪ್ರತಿಮೆಯು ನವೀನ

ವಿಧಾನದಲ್ಲಿ ಧ್ರುವನಿಂದ ಹುಟ್ಟಿ, ಪ್ರಹ್ಲಾದನಿಂದ ಮೊಳಕೆಯಾಗಿ ರುಕ್ಮಾಂಗನಿಂದ ಚಿಗುರಿತೆಂದು, ಕುರುಪಿತಾಮಹರಿಂದ ಹೂವಾಯಿತೆಂದು, ವಿಜಯನ (ಅರ್ಜುನ) ಸತಿಯಾದ ದ್ರೌಪತಿಯಿಂದ ಕಾಯಾಯಿತೆಂದು, ಗಜೇಂದ್ರನಿಂದ ಹಣ್ಣಾಗಿ ಶ್ರೀ ಶುಕಮುನಿಯಿಂದ ಪರಿ ಪಕ್ವವಾಯಿತೆಂದು ತಿಳಿಸುತ್ತಾರೆ. ಅಜಾಮಿಳನು ನಾಮಸ್ಮರಣೆಯಿಂದಲೇ ಮೋಕ್ಷ ಪಡೆದುದನ್ನು ತಿಳಿಸುತ್ತಾ ಭಕ್ತಿಯೆಂಬ ಹಣ್ಣಿನರಸ ಸವಿದೆ ಎಂದು ತಿಳಿಸುತ್ತಾರೆ.

**ಬೇವು:** ಬೇವಿನಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ
ಜೇನ ಮಳೆಗೆರೆದರೆ ವಿಷ ಹೋಹುದೇನಯ್ಯ
ಏನು ಓದಿದರೇನು, ಏನು ಕೇಳಿದರೇನು
ಮನದೊಳಗಿನ ತಾಮಸ ಮಾಣದನಕ
ಕೊಳಲದನಿಗೆ ಸರ್ಪ ತಲೆದೂಗು ವಂದದಿ
ಎನ್ನೊಡೆಯ ಕೇಳಯ್ಯ ಶ್ರೀಪತಿ ಪುರಂದರವಿಠಲ (೨೧)

ಬೇವಿನಬೀಜ ತುಂಬ ಕಹಿ ಗುಣವನ್ನು ಹೊಂದಿದ್ದು ಅದಕ್ಕೆ ಬೆಲ್ಲದಕಟ್ಟೆಯ ಕಟ್ಟಿ, ಜೇನಿನರಸದ ಮಳೆಗೆರೆದರೂ ಅದು ತನ್ನ ಮೂಲಗುಣವಾದ ಕಹಿಯನ್ನು ಬಿಡುವುದಿಲ್ಲ. ಅದಕ್ಕಾಗಿ ಮನಶುದ್ಧಿ ಇಲ್ಲದೆ ಮಾಡಿದ ಪೂಜೆ, ಕೀರ್ತನೆ ಮುಂತಾದ ಆಚರಣೆಗಳಿಂದ ಭಕ್ತಿ ಹುಟ್ಟಲು ಸಾಧ್ಯವಿಲ್ಲ. ಇಲ್ಲಿ ಬೇವಿನ ಕಹಿ ಯನ್ನು ಅಜ್ಞಾನಕ್ಕೂ, ದುರ್ಗುಣಗಳಿಗೂ ಹೋಲಿಸಲಾಗಿದೆ. ಮೊದಲು ಮನಸ್ಸಿನಲ್ಲಿ ಭಕ್ತಿಯೆಂಬ ಶ್ರೇಷ್ಠ ಬೀಜ ಬಿತ್ತಬೇಕು. ನಂತರ ಅದಕ್ಕೆ ಸಾತ್ವಿಕತೆಯ ಕಟ್ಟೆ ಕಟ್ಟಿ ಹರಿನಾಮಸ್ಮರಣೆಯೆಂಬ ಮಳೆ ಸುರಿಸಬೇಕು. ಆಗ ಅದರ ಫಲವೂ ಸಿಹಿ. ಎಷ್ಟು ಶಾಸ್ತ್ರಗಳನ್ನು ಓದಿದರೇನು, ಎಷ್ಟು ಪುರಾಣ ಪ್ರವಚನಗಳನ್ನು ಕೇಳಿದರೇನು ಮನಶುದ್ಧಿ ಇಲ್ಲದೆ ಮಾಡಿದ ಕೆಲಸಗಳೆಲ್ಲವೂ ಕೊಳಲ ದನಿಗೆ ಸರ್ಪವು ತಲೆದೂಗಿದಂತೆ ವ್ಯರ್ಥವಾಗುತ್ತದೆ.

**ಮರ:** ಮರ ವಿದ್ದರೇನಯ್ಯ ನೆರಳಿಲ್ಲದನಕ
ನೆರಳಿದ್ದರೇನಯ್ಯ ನೀರಿಲ್ಲದನಕ
ನೀರಿದ್ದು ಫಲವೇನು ಒರೆತಿಲ್ಲತನಕ
ಧನವಿದ್ದು ಫಲವೇನು ಕೊಡುವ ಮನವಿಲ್ಲದನಕ
ಮನವಿದ್ದು ಫಲವೇನು ಜ್ಞಾನವಿಲ್ಲದನಕ
ದೇವ ಪುರಂದರವಿಠಲರಾಯನ
ಊಳಿಗ ಮಾಡದವನ ಬಾಳುವೆಯಿದ್ದರೇನು (೨೨)

ವ್ಯರ್ಥ ಕೆಲಸಗಳನ್ನು ಒಂದೊಂದಾಗಿ ಹೇಳುತ್ತಾ 'ಮರ' ಪ್ರತಿಮೆ ಸಹಾಯ ಮಾಡುವ ಗುಣವನ್ನು ಎತ್ತಿಹಿಡಿಯುತ್ತದೆ. ನೆರಳಿಲ್ಲದ ಮರದಂತೆ, ಒರೆತಿಲ್ಲದ ನೀರಿನಂತೆ, ದಾನ ಮಾಡದ ಮನುಷ್ಯನ ಹತ್ತಿರ ವಿರುವ ಹಣದಂತೆ, ಅಜ್ಞಾನಿ ಮಾನವನು ಪರುಂದರವಿಠಲನ ಸ್ಮರಣೆ ಮಾಡದಿದ್ದರೆ ಮನುಷ್ಯನ ಜೀವನವೇ ವ್ಯರ್ಥ ಎಂದು ಪುರಂದರದಾಸರು ಹೇಳಿದ್ದಾರೆ. ಪ್ರತಿಯೊಬ್ಬ ಜೀವಿಯು ಬೇರೆಯವರಿಗೆ ಆಶ್ರಯ ಕೊಡುವ ಸಹಾಯ ಮಾಡುವ ಸಾಮರ್ಥ್ಯ ಬೆಳೆಸಿಕೊಳ್ಳುವುದರ ಜೊತೆಗೆ ಭಗವಂತನ ಸೇವೆ ಮಾಡಬೇಕೆಂಬುದು ಇಲ್ಲಿಯ ಸಂದೇಶ.

**ಮರದ ಬಳ್ಳಿ:** ಜತನ ಮಾಡೋ ಜೀವನವ ಮುಂದೆ
ಮತಿ ಭ್ರಷ್ಟನಾಗಿ ನೀ ಕೆಡಬೇಡ ಮನುಜ ಪ।
. . . . . . . . . . . . . . . . . . .

ಮಲ ಮಾಂಸಾದಿ ಮೂತ್ರ ಅದರ
ಸುತ್ತಿಕೊಂಡಿರುವ್ಹೋದು ಆ ಮರದ ಬಳ್ಳಿ
ಇಟ್ಟೆಡೆಯಲಿ ಬಾಹೊ ರಭಸ ಅದರ
ಹುಟ್ಟು ನೋಡಿದರೆ ಕುಂಬಾರನ ತಿಮಿರಿ
. . . . . . . . . . . . . . . . . . . (೨೩)

'ಜತನ ಮಾಡೋ ಜೀವನವ ಮುಂದೆ ಮತಿಭ್ರಷ್ಟನಾಗಿ ನೀ ಕೆಡಬೇಡ ಮನುಜ' ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಈ ಕೀರ್ತನೆಯಲ್ಲಿ ತಾಯಿಯ ಹೊಟ್ಟೆಯಲ್ಲಿ ಮಗು ಅವಳ ಹೊಕ್ಕುಳ ಬಳ್ಳಿಯ ಜೊತೆ ಸೇರಿರುವುದನ್ನು 'ಮರದಬಳ್ಳಿ' ಎಂದಿದ್ದಾರೆ ಪುರಂದರದಾಸರು. ಮಗು ತಾಯಿ ಗರ್ಭದಲ್ಲಿ ತಲೆಬಾಗಿ ಒಂಬತ್ತು ತಿಂಗಳವರೆಗೆ ಗರ್ಭವಾಸ ಅನುಭವಿಸಿ ಹೊರಬರುತ್ತದೆ. ಹಾಗೆ ಇದೇ ತರಹ ಕುಂಬಾರನ ಚಕ್ರದಂತೆ ಜನ್ಮಗಳನ್ನು ಹೊಂದುತ್ತಾ ಇರುತ್ತದೆ. ಅದಕ್ಕಾಗಿ ಇಂತಹ ಕಠಿಣವಾದ ಸಂಸಾರದಿಂದ ಹೊರ ಬರಲು ಸಾಧನವಾದ ಈ ಮಾನವ ಜನ್ಮವನ್ನು ಮತಿಭ್ರಷ್ಟನಾಗಿ ವ್ಯರ್ಥ ಮಾಡದೆ, ಬ್ರಹ್ಮಾನಂದವನ್ನು ಪಡೆಯಲು ಪುರಂದರವಿಠಲನನ್ನು ಸ್ಮರಿಸು ಎಂದಿದ್ದಾರೆ.

ವೀಳ್ಯ: ವ್ಯಾಪಾರ ನಮಗಾಯಿತು ಪ।

ಶ್ರೀಪತಿ ಪಾದಾರವಿಂದ ಸೇವೆಯೆಂಬೋ ಅ।
. . . . . . . . . . . . . . . . . . .
ಕಂಡ ಕಂಡವರಿಗೆ ಕಾರ್ಪಣ್ಯವ ಬಿಟ್ಟು
ಮುಂದೆ ಅಡ್ಡಾಗಿ ನಾ ಬೀಳಲಿಲ್ಲ
ಪುಂಡರೀ ಕಾಕ್ಷ ಶ್ರೀ ಪುರಂದರ ವಿಠಲನು
ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ (೨೪)

ಕಂಡ ಕಂಡವರಲ್ಲಿ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುವ ಪರಿಸ್ಥಿತಿಯಿಂದ ಪಾರುಮಾಡಿ ಶ್ರೀ ಪುರಂದರ ವಿಠಲನು ಅವರನ್ನು ಕರೆದು ಹರಿದಾಸದೀಕ್ಷೆ ತೆಗೆದುಕೊಳ್ಳುವಂತೆ ಮಾಡಿದ ಎಂಬ ಅರ್ಥಇಲ್ಲಿದೆ. ಸ್ವಾಮಿಯ ಭದ್ರ ಆಶ್ರಯದಲ್ಲಿ ತಮ್ಮ ಕ್ಷೇಮ ಅಡಗಿದೆ ಎಂಬ ಭಾವ ಇಲ್ಲಿ ಮೂಡಿದೆ. ವೀಳ್ಯ ಪದವು ಸಂಪ್ರದಾಯಿಕವಾಗಿ ಮಾತು ಕೊಡುವುದು, ನೇಮಿಸಿಕೊಳ್ಳುವುದು ಎಂಬ ಅರ್ಥದಲ್ಲಿ ಮೂಡಿ ಭಗವಂತನು ಭಕ್ತಿಯ ಪ್ರಚಾರಕ್ಕಾಗಿ ತಮ್ಮನ್ನು ನೇಮಿಸಿಕೊಂಡನು ಎಂಬ ಅರ್ಥ ವ್ಯಕ್ತವಾಗುತ್ತದೆ.

ಸರಸಿಜ (ಕಮಲ): ನೆರೆ ನಂಬಿರೋ ಎಲೆ ಅಣ್ಣ ಪ।

ಸಿರಿಯರಸನ ಕರುಣಾಳುವ ಸರಸಿಜ ಸಂಭವನ ಪಿತನ
ಸುರರೊಡೆಯನ ಸಕಲವೇದ ಒರಲೊ ಹರಿಯ
ಪರದೇವತೆ ಇದೆ ಇದೆ ಎಂದು ಕರಕಮಲದೊಳಿಟ್ಟು ಮೆರೆವ
ಪರಮ ಹಂಸರಾದ ವ್ಯಾಸರಾಯರ
. . . . . . . . . . . . . . . . . . . (೨೫)

ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನಿಗೆ ತಂದೆಯಂತಿರುವ ಲಕ್ಷ್ಮಿಯ ಗಂಡನಾದ ವಿಷ್ಣುವನ್ನು ಎಲ್ಲಾ ವೇದಗಳು ಇವನೇ ಪರದೈವವೆಂದು ಹೇಳುತ್ತವೆ. ಇಂತಹ ಪರಮಾತ್ಮನನ್ನು ತಮ್ಮ ಕಮಲದಂತಹ ಕೈಗಳಿಂದ ಪೂಜಿಸುವ ಪೂಜ್ಯರಾದ ವ್ಯಾಸರಾಯರನ್ನ ನಂಬಿ ಎಂದು ಪುರಂದರದಾಸರು ಹೇಳುತ್ತಾರೆ. 'ಸರಸಿಜ' ಎಂದರೆ ಬ್ರಹ್ಮ ಎಂದು ತಿಳಿಯಬೇಕು. ಈ ಕೀರ್ತನೆ ಪುರಂದರದಾಸರು ವ್ಯಾಸರಾಯರಿಂದ ದೀಕ್ಷೆ ತೆಗೆದುಕೊಂಡ ನಂತರ ಅವರನ್ನು ಕುರಿತು ರಚಿಸಿದ್ದರು.

**ಸೊಂಪಳಿದಳಿ(ದುಂಬಿ):**

ಇನ್ನೇನು ಗತಿ ಎನಗೆಲೋ ಹರಿಯಾ ಪ।

ನಿನ್ನವನೆನ್ನದೆ ಮೋಸ ಹೋದೆನೊ ರಂಗ ಅ।

ಲಂಪಟನಾಗಿ ನಾರೇರ ಮುಖಾಬ್ಜದ
ಸೊಂಪಿನ ಕಂಪನಾಘ್ರಾಣಿಸುತ
ಸಂಪಿಗೆ ಯೆಸಳಿನ ಮೇಲೆ ಕುಳಿತಿರ್ದು
ಸೊಂಪಳಿದಳಿಯಂತೆ ಆದನಲ್ಲೋ ಕೃಷ್ಣ"
. . . . . . . . . . . . . . . . . . (೨೬)

ಸಂಪಿಗೆ ಎಸಳಿನ ಮೇಲೆ ಕುಳಿತ ದುಂಬಿಯು, ಸಂಸಾರದಲ್ಲಿ ಅತೀಯಾಗಿ ಆಸಕ್ತನಾದ ಜೀವಿಯನ್ನು ಸಂಕೇತಿಸುತ್ತದೆ. ಸಂಸಾರವೆಂಬ ಮೋಹದಲ್ಲಿ ಅತಿಯಾಗಿ ಸಿಲುಕಿ ಹರಿಯ ನಾಮಸ್ಮರಣೆ ಮಾಡದೆ ಜೀವನ ವನ್ನು ಕಳೆದೆನಲ್ಲ ಎಂದು ಪರಿತಪಿಸುತ್ತಾ 'ಇನ್ನೇನು ಗತಿ ಎನಗೆಲೋ ಹರಿಯೇ. ನಿನ್ನವನೆನ್ನದೆ ಮೋಸ ಹೋದೆನೋ ರಂಗ' ಎಂದು ದೈನ್ಯದಿಂದ ಬೇಡುವ ಬಗೆ ಇಲ್ಲಿ ಚಿತ್ರಿತವಾಗಿದೆ.

**ಹಣ್ಣು:** ಸಾಕು ಸಂಸಾರ ತೆರೆಯ ನೂಕಲಾರೆನು
ಬೇಕು ನಿನ್ನ ಚರಣ ಕಮಲ ಬೇರೆ ಅನ್ಯತ್ರ ಗತಿಯ ಕಾಣೆ ಪ।

ಹುಟ್ಟಿದಂದಿನಿಂದ ಕಷ್ಟ
ಪಟ್ಟು ಕಂಗೆಟ್ಟು ಮನದಿ
ಗುಟ್ಟು ಪಳ್ವೆನಯ್ಯ ಒಂದಿಷ್ಟು
ಲಾಲಿಸೊ ಕಳಿತ ಹಣ್ಣುನೆಲಕೆ
ತಟ್ಟದಲ್ಲದೆ ಬಿಡದು ಮೊರೆಯಿಟ್ಟೆ
ಕಾಯದಿರೆ ದೂರು ಮುಟ್ಟುವುದು ಶ್ರೀ ಲಕ್ಷ್ಮೀರಮಣ (೨೭)

ಹಣ್ಣು ಇಲ್ಲಿ ಮನುಷ್ಯನ ದೇಹವನ್ನು ಸಂಕೇತಿಸುತ್ತವೆ. ಹುಟ್ಟಿನಿಂದ ಕಷ್ಟಪಟ್ಟು ಸಂರಕ್ಷಿಸಿದರೂ, ಪರಿಪರಿ ಯಿಂದ ನೋಡಿಕೊಂಡರೂ ಈ ದೇಹವು ವೃದ್ಧಾಪ್ಯವನ್ನು ಹೊಂದಿ (ಕಳಿತು) ಬಿದ್ದು ಹೋಗುವುದು. ಆದ್ದರಿಂದ, ಇಂತಹ ಸಂಸಾರದಲ್ಲಿ ಮತ್ತೆ ಜನ್ಮವಾಗದಂತೆ ನಿನ್ನ ಚರಣ ಕಮಲದಲ್ಲಿ ಬೇಡುವೆ. ನೀ ಕಾಯ ದಿದ್ದರೆ ನನಗಿನ್ಯಾರು ಗತಿ ಎಂದು ಪರಮಾತ್ಮನಲ್ಲಿ ದೂರು ಹೇಳುತ್ತಿದ್ದಾರೆ ಪುರಂದರದಾಸರು.

**ಹೂವು:** ಹೂವ ತರುವರ ಮನೆಗೆ ಹುಲ್ಲ ತರುವ ಪ।

ಅಷ್ಟೆ ಲಕುಮಿ ರಮಣ ಇವಗಿಲ್ಲ ಗರುವ ॥೫॥

ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು
ಪುಂಡರೀಕಾಕ್ಷ ತಾ ಹುಲ್ಲ ತಂದ
ಅಂಡಜಾಧಿಪ ನಮ್ಮ ಪುರಂದರವಿಠಲನು
ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು (೨೮)

ಹೂವು ಭಕ್ತಿಯಿಂದ ಮಾಡುವ ಪೂಜೆಗೆ ಸಂಕೇತವಾಗುತ್ತವೆ. ಭಕ್ತಿಯಿಂದ ಸುಲಭ ಪೂಜೆಯನ್ನು ಮಾಡಿದರೆ ಅಂತಹವರಿಗೆ ಒಲಿದು ಅವರ ಬದುಕಿನ ಎಲ್ಲಾ ಭಾರವನ್ನು ಹೊತ್ತುಕೊಳ್ಳುವವ ಪರಮಾತ್ಮ. ಅವನು ಪಾಂಡವರ ಮನೆಯಲ್ಲಿ ಕುದುರೆ ತೊಳೆದವನು, ಭಕ್ತರಿಗೆ (ತೊಂಡರಿಗೆ) ಭಕ್ತನಾಗುವ ಜಗತ್ತಿನ ಅಧಿದೇವತೆಯಾದ ಲಕ್ಷ್ಮೀಯ ಗಂಡನಾದರೂ ಅವನಿಗೇನು ಹೆಮ್ಮೆಯಿಲ್ಲ, ಬಿಂಕವಿಲ್ಲ, ಬಿಗುಮಾನ ವಿಲ್ಲ. ಭಕ್ತಿಯಿಂದ ಪೂಜಿಸಿದಲ್ಲಲ್ಲಿ ಅವನು ನೆಲೆಸಿರುವನು. ಹೂವು ಪ್ರತಿಮೆ ಇಲ್ಲಿ ಭಗವಂತನಲ್ಲಿ ತೋರಿಸುವ ಅನನ್ಯ ಭಕ್ತಿಯನ್ನು ಸಂಕೇತಿಸುತ್ತದೆ.

ಸಸ್ಯಲೋಕದ ವೈವಿಧ್ಯತೆಗಳು ಪ್ರತಿಮೆಗಳಾಗಿ ರೂಪಿತಗೊಂಡು ಜೀವನಮೌಲ್ಯಗಳನ್ನು ಮೂರ್ತಗೊಳಿಸಲು ಸಹಾಯಕವಾಗುತ್ತವೆ. ಪುರಂದರದಾಸರ ಸಾಹಿತ್ಯದಲ್ಲಿ ಸಸ್ಯಪ್ರತಿಮೆಗಳು ಮನುಷ್ಯನ ಅಂತರಂಗದ ವಿವಿಧ ಅನುಭವಗಳನ್ನು ನೇರವಾಗಿ ಅಭಿವ್ಯಕ್ತಿಸುವುದರಿಂದ ಸಸ್ಯಪ್ರತಿಮೆಗಳ ಸೊಬಗು ದಾಸರ ರಚನೆಗಳಿಗೆ ಸಾಹಿತ್ಯದ ಸೊಗಸನ್ನು ತಂದುಕೊಟ್ಟಿವೆ.

**–: ಕೊನೆ ಟಿಪ್ಪಣಿಗಳು :–**

ಅ) **ದ್ವಾರಾವತಿ:** ಶ್ರೀ ಕೃಷ್ಣನು ನರಕಾಸುರನು ಬಂಧಿಸಿಟ್ಟಿದ್ದ ಹದಿನಾರು ಸಾವಿರ ಸ್ತ್ರೀಯರನ್ನು ಬಿಡಿಸಿ ಕರೆದುಕೊಂಡು ಬಂದು ಗುಣವತಿಯರಾದ ಅವರನ್ನು ವಿವಾಹವಾಗಿ ಆನಂದದಿಂದ ಇರುತ್ತಿದ್ದ ಸ್ಥಳ ದ್ವಾರಾವತಿ.

[ಶ್ರೀ ಹರಿವಂಶ ಮಹಾಪುರಾಣ:– ಸಂ; ಪಂಢರಿನಾಥಾಚಾರ್ಯ ಗಲಗಲಿ ಹುಬ್ಬಳ್ಳಿ]

ಆ) **ಕ್ಷೀರಾಂಬುಧಿ:** ಸುರಾಸುರರು ಅಮೃತ ಪ್ರಾಪ್ತಿಗಾಗಿ ಮಂದರಾಚಲವನ್ನು ಕಡಗೋಲನ್ನಾಗಿ ಸರ್ಪರಾಜ ವಾಸುಕಿಯನ್ನು ಹಗ್ಗವನ್ನಾಗಿ ಮಾಡಿ ಮಂಥನ ಮಾಡಿದ ಸಮುದ್ರ ಕ್ಷೀರಸಮುದ್ರ.

ಇ) **ತುಲಸಿ:** ಒಂದು ಗಿಡ: ದುರ್ವಾಸನ ಶಾಪದಿಂದ ಪದಭ್ರಷ್ಟನಾದ ಇಂದ್ರ ಪಾಲ್ಗಡಲನ್ನು ಕಡೆದಾಗ ಐರಾವತ ಮೊದಲಾದ ೧೪ ರತ್ನಗಳು ಹೊರಹೊಮ್ಮಿದ ಬಳಿಕ ಅಮೃತ ಕಲಶ ಹೊರಬಂತು. ವಿಷ್ಣು ಅದನ್ನು ಕೈಗೆ ತೆಗೆದುಕೊಂಡನು. ಆತನ ಕಣ್ಣುಗಳಿಂದ ಮಿಡಿದ ಆನಂದ ಬಾಷ್ಪಗಳು ಕಲಶದಲ್ಲಿ ಬಿದ್ದು ಒಂದು ಸಣ್ಣಗಿಡ ಹುಟ್ಟಿತು. ಇದಕ್ಕೆ ತುಲಸಿ(ಹೋಲಿಕೆ) ಇಲ್ಲದಾಗಿ ತುಲಸಿ ಎಂದು ಹೆಸರಿಟ್ಟು ಲಕ್ಷ್ಮೀಯೊಂದಿಗೆ ತುಲಸಿಯನ್ನು ವಿಷ್ಣು ಮದುವೆಯಾದ.

[ಪುರಾಣ ನಾಮ ಚೂಡಾಮಣಿ: ಪ್ರಧಾನ ಸಂಪಾದಕರು ಬಿ.ಎಮ್.ಶ್ರೀಕಂಠಯ್ಯ.

ಲೇ:– ಬೆನಗಲ್ ರಾಮರಾವ್ ಮತ್ತು ವಿದ್ವಾನ್ ಪಾನ್ಯಂ ಸುಂದರಶಾಸ್ತ್ರಿ: ಪ್ರಸಾರಾಂಗ ಮೈಸೂರು ವಿ.ವಿ.೨೦೦೩. ಪುಟ:೨೫೧.]

ಈ) **ಮಂಚಿಗೆ:** ಹೊಲದಲ್ಲಿ ಹಕ್ಕಿಗಳು ಬಂದು ಬೆಳೆಯನ್ನು ಹಾಳು ಮಾಡದಂತೆ, ಹೊಲ ಕಾಯಲು ಎತ್ತರವಾಗಿ ಕಟ್ಟಿರುವ ಬಿದಿರು ಮೊದಲಾದವುಗಳಿಂದ ಮಾಡಿರುವ ಅಟ್ಟಣೆ.

ಈ ಅಧ್ಯಾಯದಲ್ಲಿ ಬರುವ ೧–೨೮ ಕೀರ್ತನೆಗಳನ್ನು ಪುರಂದರ ಸಾಹಿತ್ಯದರ್ಶನ ಸಂಪುಟ ೧, ೨, ೩, ೪ ರಿಂದ ಆಯ್ದುಕೊಲಾಗಿದೆ. ಸಂಪಾದಕರು:– ಪ್ರೊ.ಸಾ.ಕೃ.ರಾಮಚಂದ್ರರಾವ್.

## ಅಧ್ಯಾಯ ೭
## ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಪೌರಾಣಿಕ ಪ್ರತಿಮೆಗಳು.

ಪುರಂದರದಾಸರು ಹರಿದಾಸರು, ಹರಿಯ ಸೇವೆಗೆಂದು ತಮ್ಮ ಬದುಕನ್ನೆಲ್ಲ ಮೀಸಲಾಗಿ ಇರಿಸಿದರು. ತಮಗೆ ದೊರೆತಿರುವ ಶರೀರವು ಸಾಧನಾಶರೀರವೆಂದೂ ಅದರ ಸಂಪೂರ್ಣ ಪ್ರಯೋಜನವನ್ನು ಪಡೆದು ಕೊಂಡು ಮಾನವಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಅವರ ನಂಬಿಕೆ. ಪುರಂದರದಾಸರು ಹರಿದಾಸರಾ ಗುವ ಮೊದಲು ಅವರ ನಿಷ್ಠೆ ಯಾವ ಧರ್ಮದಲ್ಲಿತ್ತು ಎಂದು ತಿಳಿಯದು. ಅವರು ವ್ಯಾಸರಾಯ ರಿಂದ ಹರಿದಾಸ ದೀಕ್ಷೆ ಸ್ವೀಕರಿಸಿದ ನಂತರ ಮಾಧ್ವ ಸಂಪ್ರದಾಯವನ್ನು ಹಿಡಿದದ್ದು ಸಹಜವಾಗಿ ಅವರ ಅನೇಕ ಕೃತಿಗಳಲ್ಲಿ ಕಾಣಬರುತ್ತದೆ. ಅವರ ಕೃತಿಗಳಲ್ಲಿ ಮಾಧ್ವ ಮತದ, ದ್ವೈತ ದರ್ಶನದ, ಮಧ್ವಾಚಾರ್ಯರ ಹಿರಿಮೆಯನ್ನು ಹೇಳುವ ಕೀರ್ತನೆಗಳು ಹಲವಾರು ಇವೆ. ಪುರಂದರದಾಸರ ಪಾಲಿಗೆ ಸಿದ್ಧಾಂತಕ್ಕಿಂತ ಸಾಧನೆ ಮುಖ್ಯವಾದುದು ಅವರು ಅನೇಕ ಪ್ರತಿಮೆಗಳ ಮೂಲಕ ನವವಿಧ ಭಕ್ತಿ, ವಿಶೇಷವಾಗಿ ಹರಿನಾಮಸ್ಮರಣೆ, ಹರಿಸರ್ವೋತ್ತಮ ತತ್ವ ಹಾಗೂ ಬಿಂಬೋಪಾಸನೆ ಮುಂತಾದ ವಿಷಯಗಳನ್ನು ಸುಲಭವಾಗಿ ಎಲ್ಲರಿಗೂ ತಿಳಿಯುವಂತೆ ಮೂರ್ತಗೊಳಿಸಿ ದ್ದಾರೆ.

**ಮಧುಕರ (ಜೇನು ನೊಣ):**

ಮಧುಕರ ವೃತ್ತಿ ಎನ್ನದು ಅದು ಬಲು ಚೆನ್ನದು
ಪದುಮನಾಭನ ಪಾದಪದುಮ ಮಧುಪವೆಂಬ

ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ
ಆಲಾಪಿಸುತ್ತ ಬಲು ಓಲಗ ಮಾಡುವಂಥ ೧।

ರಂಗನಾಥನ ಗುಣ ಹಿಂಗದೆ ಪಾಡುತ್ತ
ಶೃಂಗಾರ ನೋಡುತ್ತ ಕಂಗಳಾನಂದವೆಂಬ ೨।

ಇಂದಿರಾಪತಿ ಪುರಂದರವಿಠಲನಲ್ಲಿ
ಚೆಂದದ ಭಕ್ತಿಯಿಂದಾನಂದವ ಪಡುವಂಥ ೩। (೧)

ಜೇನುನೊಣವು ಹರಿದಾಸ ವೃತ್ತಿಯ ಸಂಕೇತವಾಗಿದೆ. ಹರಿದಾಸರು ಲೌಕಿಕರಂತೆ ಯಾವ ಉದ್ಯೋಗ ವನ್ನೂ ಹಿಡಿಯುವದಿಲ್ಲ ಅವರು ಹರಿಸಂಕೀರ್ತನ ಮಾಡುತ್ತ ಊರೂರು, ಕೇರಿ ಕೇರಿ ಅಲೆದಾಡುತ್ತಾರೆ, ಅವರಿವರು ಕೊಡುವ ಆಹಾರ ಸಾಮಗ್ರಿಗಳನ್ನು ಪಡೆದುಕೊಂಡು ಹೋಗುತ್ತಾರೆ. ಇದನ್ನು ಇಲ್ಲಿ ದುಂಬಿಯ ಅಲೆದಾಟಕ್ಕೆ ಹೋಲಿಸಿದ್ದಾರೆ.

ಪುರಂದರದಾಸರು ವ್ಯಾಸತೀರ್ಥರಿಂದ ಮಂತ್ರೋಪದೇಶ, ಕಾವ್ಯಾಂಕಿತ ಪಡೆದು ಹರಿಯ ದಾಸರಾದರು. ಹರಿದಾಸ ವೃತ್ತಿಯಲ್ಲಿ ಆನಂದವನ್ನು ಕಾಣತೊಡಗಿದರು ಅಂತಹ ಸಮಯದಲ್ಲಿ ರಚಿಸಿದ ಕೀರ್ತನೆಯಿದು.

**ಇನ್ನೇನು:** ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು ಪ।

ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು ಅ।

ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲಸಿತು ಇನ್ನೇನಿನ್ನೇನು ೧।
. . . . . . . . . . . . . . . . . . . . . . . . . .
. . . . . . . . . . . . . . . . . . . . . . . . . . (೨)

'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದ ಪುರಂದರದಾಸರು ವ್ಯಾಸರಾಜರ ಅನುಗ್ರಹಕ್ಕೆ ಪಾತ್ರರಾಗಿ ಹೀಗೆ ಹೇಳುತ್ತಾರೆ. ಇನ್ನೇನು? ಪ್ರತಿಮೆ ಇನ್ನು ಯಾವ ಅಡ್ಡಿಯೂ ಇಲ್ಲ ಎಂಬ ಅರ್ಥವನ್ನು ತಿಳಿಸುತ್ತದೆ. ಇನ್ನೇನು ಪ್ರತಿಮೆಯು ಗುರುವಿನ ಅನುಗ್ರಹ ದೊರೆತ ಮೇಲೆ ಹರಿಯ ಕರುಣೆಗೆ ಯಾವ ಅಡ್ಡಿಯೂ ಇರದು ಇನ್ನೇನಿನ್ನೇನು ಎನ್ನುವುದು ಯಾವ ಚಿಂತೆಗೂ ಕಾರಣವಿಲ್ಲ ಎಂಬ ಅರ್ಥ ಕೊಡುತ್ತದೆ.

**ಸನ್ಯಾಸಿ:** ಮಂಡೆ ಬೋಳಾದ ಸನ್ಯಾಸಿಯು ಮನೆ ಬಂದ್ಹೊಕ್ಕನಮ್ಮ ಎನ್ನ ಪ।

ಗಂಡನ ಕಿವಿಯೂದಿ ಮರುಳು ಮಾಡಿ ಮನಗೊಂಡನಮ್ಮ ಅ।

ಮಡಿಯ ಮಾಡಿ ಮೈತೊಳೆದು ನಾವುಣ್ಣಲಾರೆವಮ್ಮ
ನಡತೆ ತಪ್ಪಿತೆಂದೊಬ್ಬರು ನಮ್ಮನ್ನು ದಂಡಿಸಿದ್ದಿಲ್ಲವಮ್ಮ
ನುಡಿಯಲೆಷ್ಟೆಂದ ವೈಷ್ಣವತನ ಬೇಸರವಿಟ್ಟಿತಮ್ಮ
ಕಡು ಮೂರ್ಖ ಸನ್ಯಾಸಿ ಬಂದಿವ ಬಿಡಿಸಿದ ನೋಡಿರಮ್ಮ ೧।
. . . . . . . . . . . . . . . . . . . . . . . . . .
. . . . . . . . . . . . . . . . . . . . . . . . . . (೩)

'ಸನ್ಯಾಸಿ' ಪ್ರತಿಮೆಯು ವ್ಯಾಸರಾಯರನ್ನು ಸಂಕೇತಿಸುತ್ತದೆ. ಈ ಕೀರ್ತನೆಯು ಪುರಂದರದಾಸರ ಪೂರ್ವಜೀವನವನ್ನು ಕುರಿತು ಪ್ರಸ್ತಾಪಿಸುವುದು. ಪುರಂದರದಾಸರು ಅವರ ಹೆಂಡತಿಯ ಮೂಲಕ ಈ ವಿಷಯವನ್ನು ಅರುಹುತ್ತಾರೆ. ಹರಿದಾಸರಾಗುವ ಮೊದಲು ಅವರೂ ಅವರ ಮನೆಯವರೂ ದಿನದಿನದ ಆಚಾರದಲ್ಲಿ ಅತಿಯಾದ ನಿರ್ಬಂಧವನ್ನು ಕಂಡರಿಯರೆಂದೂ, ಹರಿದಾಸ ದೀಕ್ಷೆ ವಹಿಸಿದ ಮೇಲೆ ಬದುಕು ತುಂಬ ಕಟ್ಟುನಿಟ್ಟಾಯಿತೆಂದೂ ಪದದ ತಾತ್ಪರ್ಯ.

**ಭಾಗ್ಯ:** ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ ಪ।

ಸಮ್ಮತಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ ಅ।

ಹೇಮಹೊನ್ನು ಹಣಗಳಿಗೆ ಹೇರಳ ಭಯಗಳುಂಟು
ರಾಮನಾಮ ದ್ರವ್ಯಕಿನ್ನು ಯಾರ ಭಯವಿಲ್ಲವಯ್ಯ ೧।

ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು
ಅಡವಿ ತುಳಸಿ ಮಾಲೆಗಿನ್ನು ಆರ ಅಂಜಿಕಿಲ್ಲವಯ್ಯ ೨।
. . . . . . . . . . . . . . . . . . . . . . . . . .
. . . . . . . . . . . . . . . . . . . . . . . . . .
ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ನಾರಾಯಣನು
ನಮ್ಮ ನಿಮ್ಮ ಭಾಗ್ಯದೊಡೆಯ ಪುರಂದರವಿಠಲನು (೪)

ಇಲ್ಲಿ 'ಸುಗ್ಗಿ' ಪ್ರತಿಮೆ ಭಗವಂತನಲ್ಲಿ ಇಟ್ಟಿರುವ ಭಕ್ತಿಯನ್ನು ಕುರಿತು ಹೇಳುತ್ತದೆ. ವಿಜಯನಗರದ ಅರಸರಾದ ಶ್ರೀ ಕೃಷ್ಣದೇವರಾಯನು ಪುರಂದರದಾಸರಿಗೆ ಒಮ್ಮೆ ಭೇಟಿಯಾಗಿ ಅವರಿಗೆ ಯೋಗ್ಯವಾದ ವಸ್ತ್ರಾಭರಣಗಳನ್ನು ಉಡುಗೊರೆಯಾಗಿ ಇತ್ತನು. ಪುರಂದರದಾಸರನ್ನು ಪರಿಕ್ಷಿಸಬೇಕೆಂದು ಅವನ ಆಶಯವಾಗಿತ್ತು. ಆಗ ದಾಸರು ಆ ಉಡುಗೊರೆಯನ್ನು ಬಡವರಿಗೆ ಕೊಟ್ಟು ಮೇಲಿನ ಹಾಡನ್ನು ಹಾಡಿ ತಮ್ಮ ಧೈರ್ಯ ಮತ್ತು ವೈರಾಗ್ಯವನ್ನು ತೋರಿಸಿಕೊಟ್ಟಿದ್ದಾರೆ. ದಾಸರು ಹಾಡುವ ಮೇಲಿನ ಹಾಡು ಇಂದಿನ ಶ್ರೀಮಂತ ವರ್ಗದವರಿಗೂ ಒಂದು ಸವಾಲಾಗಿ ನಿಂತಿದೆ.

ಹರಿದಾಸರ ಪ್ರೀತಿಯ ದೈವ ಪಾಂಡುರಂಗವಿಠಲ ಕನ್ನಡದ ಹರಿದಾಸರೆಲ್ಲ ಪಂಡರಪುರದ ಅಧಿದೇವತೆ ವಿಠಲನ ಅಭಿಮಾನಿಗಳು. ಪುರಂದರದಾಸರು ಕೀರ್ತನೆಯಲ್ಲಿ ಪಾಂಡುರಂಗ ವಿಠಲನನ್ನು 'ಕೂಸು' ಎಂದು ಕರೆಯುತ್ತಾ ಅವನನ್ನು ಯಾರಾದರು ಕಂಡಿರಾ? ಎಂದು ಪ್ರಶ್ನಿಸುತ್ತಿದ್ದಾರೆ.

ಕೂಸಿನ ಕಂಡಿರಾ ಗೋಪಾಲಕೃಷ್ಣನ ಕಂಡಿರಾ      ಪ॥
. . . . . . . . . . . . . . . . . . . . . . .
. . . . . . . . . . . . . . . . . . . . . . .
ಪಂಢರಪುರದಲ್ಲಿ ನೆಲೆಸಿತ್ತು ಕೂಸು
ಪಾಂಡವರೈವರ ಸಲಹಿತು ಕೂಸು
ಅಂಡದೊಳಗೆ ಹರಿದಾಡುವ ಕೂಸು ಪ್ರ
ಚಂಡ ಪುರಂದರವಿಠಲ ಕೂಸು.      (೫)

ಕೂಸು ಪ್ರತಿಮೆ ಪರಮಾತ್ಮನನ್ನು ಸಂಕೇತಿಸುತ್ತದೆ. ಅಷ್ಟೇ ಅಲ್ಲದೆ ನೀವೆಲ್ಲರೂ ಪರಮಾತ್ಮನ ಸಾಕ್ಷಾತ್ಕಾರ ವನ್ನು ಮಾಡಿಕೊಂಡಿರಾ ಎಂದು ಪ್ರಶ್ನಿಸುವಂತಿದೆ. ದಾಸರು ಪರಮಾತ್ಮನ ನಾಮಸ್ಮರಣೆಯಿಂದ ಸಂತೃಪ್ತಿ ಪಡೆದುಕೊಂಡ ಬಗ್ಗೆ ಈ ಕೆಳಗಿನಂತೆ ಹೇಳುತ್ತಾರೆ.

**ರಂಗ:** ರಂಗ ಬಂದ ಮನೆಗೆ ಶೃಂಗಾರ ನೋಡಿರೊ
ಹಿಂಗದಂಥ ಬಡತನ ಭಂಗವಾಗಿ ಹೋಯಿತೊ      ಪ॥
. . . . . . . . . . . . . . . . . . . . . . .
. . . . . . . . . . . . . . . . . . . . . . .
ಹಿಂದೆ ರಂಗನ ಭಜಿಸದೆ ಅನೇಕ ಭಂಗವ ಪಟ್ಟೆ
ಮುಂದೆ ರಂಗನ ಭಜಿಸಲು ಸುಕೃತ ಫಲವು
ತಂದೆ ಪುರಂದರ ವಿಠಲನ್ನ ಹೊಂದಿ ಭಜಿಸಲಾಗಿ
ಬಂದನು ಭಾಗ್ಯದ ಸಿರಿಲಕುಮಿಯನೊಡಗುಡಿ      (೬)

ದಾಸತ್ವ ಸ್ವೀಕರಿಸುವ ಮೊದಲು ಅನೇಕ ಕಷ್ಟಗಳನ್ನು ಅನುಭವಿಸಿದೆ, ಎಂದು ಅವರು ಹೇಳಿಕೋಳ್ಳುತ್ತಾರೆ. ಅಷ್ಟೆ ಅಲ್ಲದೆ ಪುರಂದರವಿಠಲನ ನಾಮಾಂಕಿತದೊಂದಿಗೆ ಪರಮಾತ್ಮನನ್ನು ಭಜಿಸಲಾರಂಭಿಸಿದ ಮೇಲೆ ತಮ್ಮ ಭಾಗ್ಯವು ತೆರೆಯಿತೆಂಬ ಭಾವವಿಲ್ಲಿ ಮೂಡಿಬಂದಿದೆ. 'ರಂಗ' ಪ್ರತಿಮೆ ಪರಮಾತ್ಮನ ಅನುಗ್ರಹವನ್ನು ಸಂಕೇತಿಸು ತ್ತದೆ. ಮಧುಕರ ವೃತ್ತಿಯಲ್ಲಿ ಸುಖ ಕಂಡುಕೊಂಡ ಬಗೆಯನ್ನು ಹೀಗೆ ಹೇಳಿದ್ದಾರೆ.

**ಸುಖ:** ಭಳಿರೆ ಭಳಿರೆ ಎನ್ನ ಸುಖವೆಂಬುದೇ ಸುಖವು

ಹಲಕಾಲಕಿದೆ ಇರಲೊ ಕಾವೇರಿರಂಗ ಪ।

. . . . . . . . . . . . . . . . . . . . . .

ನಿನ್ನ ಪಾದಾಂಬುರುಹ ಭಜಿಸುವುದೇ ಸೌಭಾಗ್ಯ
ನಿನ್ನ ನಿರ್ಮಾಲ್ಯಗಳೇ ಭೋಗದ್ರವ್ಯ
ನಿನ್ನ ಕಥೆ ಕೇಳುವುದೆ ಮಂಗಳಸುವಾದ್ಯಗಳು
ನಿನ್ನಂಥ ಅರಸೆನಗೆ ಪುರಂದರವಿಠಲ (೭)

ಪರಮಾತ್ಮನೇ ತನ್ನ ಬಂದುಬಳಗ ಎಂದು ಸಾಧಕನು ಅರಿತುಕೊಂಡೊಡನೆ ಭವಬಂಧನದ ಕ್ಲೇಶವು ಕಡಿದು ಬೀಳುತ್ತದೆ. ಸುಖಾನುಭವ ಅದರ ಫಲ. ಪುರಂದರದಾಸರು ಸರ್ವವನ್ನೂ ತ್ಯಾಗ ಮಾಡಿ ಭಗವಂತನ ಚಿಂತನೆಯನ್ನೇ ಅವಿರತ ಮಾಡುತ್ತ ಭಗವಂತನೇ ತನ್ನ ಯೋಗಕ್ಷೇಮವನ್ನು ವಹಿಸಿಕೊಳ್ಳುವನೆಂಬ ಧೃಡ ನಿಶ್ಚಯ ತಾಳಿ ಉಲ್ಲಾಸ ಮನಸ್ಸಿನಿಂದ ಕೀರ್ತನೆಗಳನ್ನು ರಚಿಸುತ್ತಿದ್ದರು. ಅವರು ಭಕ್ತಿಮಾರ್ಗದಲ್ಲಿ ನಡೆಯಲು ಎಲ್ಲರನ್ನು ಪ್ರಚೋದಿಸಿದವರು. ಭಕ್ತಿಯು ಎಲ್ಲರೂ ಸುಗಮವಾಗಿ ಮಾಡಬಹುದಾದ ಸಾಧನೆಯಾಗಿದೆ ಮತ್ತು ಅದರಲ್ಲಿ ಎಲ್ಲರಿಗೂ ಅಧಿಕಾರವಿದೆ. ಆತ್ಮೋದ್ಧಾರಕ್ಕಾಗಿ ಭಕ್ತಿಗೆ ಸಮಾನವಾದ ಬೇರೆ ಸುಗಮವಾದ ಉಪಾಯ ಇಲ್ಲ. ಭಕ್ತಿಯೆಂದರೆ ಮಹರ್ಷಿ ಶಾಂಡಿಲ್ಯರು ಹೇಳಿದಂತೆ–'ಸಾ ಪರಾನುರಕ್ತಿರೀಶ್ವರೆ' (ಅ) ಈಶ್ವರನಲ್ಲಿ ಪರಮ ಅನುರಾಗ ಅಂದರೆ ಪರಮ ಪ್ರೇಮವೇ ಭಕ್ತಿಯಾಗಿದೆ. ಪರಮಾತ್ಮನ ಅನುಗ್ರಹವಾಗಬೇಕಾದರೆ ಭಕ್ತಿಯೇ ಮೊದಲ ಮೆಟ್ಟಿಲು ಹಾಗಾದರೆ ಭಕ್ತಿ ಇದ್ದವನೇ ಭಕ್ತನು ಎಂದು ಬೇರೆ ಹೇಳಬೇಕಾಗಿಲ್ಲ. ಹಾಗಾದರೆ ಭಕ್ತನ ಲಕ್ಷಣಗಳೇನು ಎಂಬುದನ್ನು ಪುರಂದರದಾಸರು ಹೇಳಿದಂತೆ ಭಕ್ತನು ಭಗವಂತನನ್ನು ಸರ್ವತ್ರ ಕಾಣುತ್ತಿರುತ್ತಾನೆ. ದುರ್ಜನರ ಸಂಗದಿಂದ ದೂರಸರಿದು ಸಜ್ಜನರ ಸಹವಾಸ ಮಾಡುತ್ತಾನೆ. ಆಸೆಗಳಿಲ್ಲದೆ, ದೇಹದ ಮೇಲೆ ಮೋಹವಿಲ್ಲದೆ, ಪರಮಾತ್ಮನು ತನ್ನ ಕಷ್ಟಗಳನ್ನು ದೂರಮಾಡಿ ಚಿತ್ಸುಖ ಆತ್ಮಾನಂದವನ್ನು ಇತ್ತು ರಕ್ಷಿಸುತ್ತಾನೆ ಎಂಬ ನಂಬಿಕೆ ಯಿಂದ ಸಂತೋಷವಾಗಿ ಇರುತ್ತಾನೆ.

ಪ್ರತಿಯೊಬ್ಬ ಜೀವಿಯ ಪರಿಪೂರ್ಣ ಭಕ್ತನಾಗಲು ಪ್ರಯತ್ನಿಸಬೇಕು. ತನ್ನಲ್ಲಿರುವ ದೋಷಗಳನ್ನು ತಿದ್ದಿಕೊಳ್ಳಬೇಕು. ತನ್ನ ದೋಷಗಳನ್ನು ಹೋಗಲಾಡಿಸಿ ಪರಮಾತ್ಮನ ಚರಣ ಸೇವೆಯಲ್ಲಿ ಸೇರಿಸಿಕೊಳ್ಳಬೇಕೆಂದು ದಾಸರು ಹೀಗೆ ಹೇಳಿದ್ದಾರೆ.

**ಮನದ ಡೊಂಕ:** ಎನ್ನ ಮನದ ಡೊಂಕ ತಿದ್ದಿಸೋ ಹೇ ಶ್ರೀನಿವಾಸ ಪ।

ಇನ್ನು ಸಂಶಯವೇಕೆ ನಿನ್ನ ಚರಣದಲ್ಲಿ ಸೇರಿಸೊ ಅ।

ಉದಯವಾದರೆ ಊಟದ ಚಿಂತೆ
ಅದರ ಮೇಲೆ ಭೋಗದ ಚಿಂತೆ
ಹದಿನಾಲ್ಕು ಲೋಕವಾಳಬೇಕೆಂಬ ಚಿಂತೆ
ಇದು ಪುಣ್ಯ ಇದು ಪಾಪವೆಂದು
ಹೃದಯದಲಿ ಭಯವಿಲ್ಲದೆ
ಮದನ ಮೋಹನ ನಿನ್ನ ಪಾದವ ನಂಬಿದೆ ದೀನದಯಾಳೋ ೧।
. . . . . . . . . . . . . . . . . . . . . . (೮)

ಮನಸ್ಸಿನ ದೋಷಗಳನ್ನು 'ಡೊಂಕ' ಪ್ರತಿಮೆ ಮೂರ್ತಗೊಳಿಸುತ್ತದೆ. ಅನ್ನ ಭೋಗ, ಅಧಿಕಾರ, ಕಾಮ, ಅಸೂಯೆ ಗುರುದೂಷಣೆ, ದೈವನಿಂದೆ ಈ ಜಾಲದಲ್ಲಿ ಸಿಕ್ಕಿಕೊಳ್ಳುವ ಮನಸ್ಸು ದೋಷಗಳಿಂದ ಕೂಡಿರುತ್ತದೆ. ಅದಕ್ಕಾಗಿ ದಾಸರು ಇವೆಲ್ಲವುಗಳನ್ನು ದೂರ ಮಾಡಲು ಭಗವಂತನಲ್ಲಿ ಪ್ರಾರ್ಥಿಸುತ್ತಾರೆ.

ಅಹಂಕಾರವುಳ್ಳವನು ಭಕ್ತನಾಗಲಾರ. ಮೋಹ, ಗರ್ವ ಮುಂತಾದುವುಗಳಿಗೆ ದಾಸನಾಗಿ ಭಗವಂತನನ್ನು ಮರೆಯಬಾರದು. ಭಕ್ತನು ಅಷ್ಟ ಮದಗಳನ್ನು ತನ್ನ ದಾಸನಾಗಿ ಮಾಡಿಕೊಂಡಿರುತ್ತಾನೆ, ಇಂದ್ರಿಯಗಳನ್ನು ನಿಗ್ರಹ ದಲ್ಲಿಟುಕೊಂಡಿರುತ್ತಾನೆ. ಭಗವಂತನಲ್ಲಿ ಭಕ್ತಿ ಇಡದೆ ಭ್ರಷ್ಟರಾದ ಜನರನ್ನು ಕುರಿತು ದಾಸರು ಹೀಗೆ ಹೇಳುತ್ತಾರೆ.

**ಭ್ರಷ್ಟ :** ಭ್ರಷ್ಟರಾದರು ಮನುಜರು ಪ।

ಅಷ್ಟಮದ ಗರ್ವದಲಿ ಹರಿಸ್ಮರಣೆಯನು ಮರೆತು ಅ।

ಮಡದಿ ಮಾತನು ಕೇಳಿ ನಡೆದುಕೊಂಬನು ಭ್ರಷ್ಟ
ಪಡೆದ ಜನನಿಯನು ಬೈಯುವನು ಭ್ರಷ್ಟ
ಕಡವ ಕೊಟ್ಟವರೊಡನೆ ಧಡಿತನ ಮಾಡುವ ಭ್ರಷ್ಟ
ಬಡವರಿಗೆ ಕೊಟ್ಟ ನುಡಿ ನಡೆಸದವ ಭ್ರಷ್ಟ ೧।
. . . . . . . . . . . . . . . . . . . . . . . . .
. . . . . . . . . . . . . . . . . . . . . . . . . (೯)

ಭ್ರಷ್ಟ ಜನರು ಹರಿನಾಮವನ್ನು ಸ್ಮರಿಸದೆ ಹರಿಯ ಶರಣರನ್ನು ನಿಂದಿಸುವವರು ಮತ್ತು ಅವರು, ಗುರುಹಿರಿಯರ ಪಾದಕ್ಕೆರಗದೆ ತಮ್ಮ ದುಷ್ಟಬುದ್ಧಿಯನ್ನು ತೋರಿಸುತ್ತಾರೆ ಅಂತಹವರನ್ನು ಮರುಳರೆಂದು ಕರೆಯುತ್ತಾರೆ ದಾಸರು.

**ಮರುಳೆ:** ಕಾಮಕ್ರೋಧ ಬಿಡದನ್ನಕ ಪರ
ಬೊಮ್ಮ ನೊಲಿಮೆಯೆತ್ತ ನೀನೆತ್ತ ಮರುಳೆ
ಕಾಮ ಅಹಂಕಾರ ಮಮಕಾರವಳಿಯದೆ
ಶರಧಿಶಯನ ದೊರಕೊಂಬೋನೆ ಮರುಳೆ
ವಿಹಂಗವಾಹನ ದೊರಕೊಂಬೋನೆ ಮರುಳೆ
ಆ ಹರಿದಾಸರ ಪದ ಪದ್ಮಕ್ಕೆರಗದೆ
ಪುರಂದರವಿಠಲನು ಸುಲಭನೆ ಮರುಳೆ. (೧೦)

ಇಂದ್ರಿಯ ನಿಗ್ರಹವಿಲ್ಲದೆ ಹರಿಯು ದೊರಕನು ಎಂಬುದನ್ನು ಅಜ್ಞಾನಿಯು ತಿಳಿಯನು ಅಂತಹವನ್ನು 'ಮರಳು' ಪ್ರತಿಮೆಯು ಸಂಕೇತಿಸುತ್ತದೆ. ಜನರು ಮನಸ್ಸು, ದೇಹಗಳನ್ನು ನಿಯಂತ್ರದಲ್ಲಿಡಲು ಸದಾಚಾರ, ವ್ರತನಿಯಮಗಳನ್ನು ಆಚರಿಸುತ್ತಾರೆ. ಆದರೆ ಭಗವಂತನಲ್ಲಿ ಭಕ್ತಿ ಇಲ್ಲದ ವ್ರತ ನಿಯಮಗಳು ವ್ಯರ್ಥ ಎಂದು ಈ ಕೆಳಗಿನಂತೆ ಹೇಳುತ್ತಾರೆ.

**ವ್ರತ:** ಏನು ವ್ರತವೇನು ಸಾಧನಗಳೇನೊ ಪ।

ಸ್ವಾನುಭವದ ಜ್ಞಾನಿ ಹೀನ ಮಾನವನೆ ಅ।

ಶಾಕವ್ರತವೆನುತ ಫಲ ಶಾಕಗಳ ಬಿಡುವಂತೆ

ಬೇಕಾದ ಆಕಾಂಕ್ಷೆ ಬಿಡಬಾರದೆ
ಸಾಕೆನಿಸದೆ ರತಿಗೆ ಸತತ ಮನ ಕೊಡುವಂತೆ
ಶ್ರೀಕಾಂತನೊಳು ಮನವನಿಡಬಾರದೆ ೧।

ನೇಮಗಳನು ಮಾಡಿ ಪರಿಪಾಕವನು ಬಿಡುವಂತೆ
ಕಾಮ ಕ್ರೋಧಂಗಳನು ಬಿಡಬಾರದೆ
ತಾಮಸರ ಕಣ್ಣಿಂದ ನೋಡೆನೆಂಬುವ ನಿಷ್ಠೆ
ನೇಮವನು ಪರಸತಿಯೊಳಿಡಬಾರದೆ ೨।
. . . . . . . . . . . . . . . . . . . . .
. . . . . . . . . . . . . . . . . . . . . (೧೧)

'ವ್ರತ' ಪ್ರತಿಮೆ ಕಾಮ, ಕ್ರೋಧ, ಲೋಭ ಮುಂತಾದವುಗಳನ್ನು ಬಿಡುವೆ ಎಂದು ಗಟ್ಟಿಯಾಗಿ ಪ್ರತಿಜ್ಞೆ ಮಾಡಬೇಕು ಎಂಬ ವಿಷಯವನ್ನು ಮೂರ್ತಗೊಳಿಸುತ್ತದೆ. ಹಿಂದೂ ಸಂಪ್ರದಾಯದಲ್ಲಿ ವರ್ಷದಲ್ಲಿ ನಾಲ್ಕು ತಿಂಗಳು ಕೆಲವು ಆಹಾರ ಧಾನ್ಯಗಳನ್ನು ವರ್ಜಿಸುವ ನಿಯಮ ಪಾಲಿಸುತ್ತಾರೆ. ಕೆಲವುದಿನ ಹಾಲು. ಮೊಸರು ತರಕಾರಿಗಳನ್ನು ವರ್ಜಿಸುತ್ತಾರೆ ಹಾಗೂ ಕೆಲವುದಿನ ಬೇಳೆ ಕಾಳುಗಳನ್ನು ವರ್ಜಿಸುತ್ತಾರೆ. ಇದರ ಹಿಂದೆ ಒಳ್ಳೆಯ ಆರೋಗ್ಯ ಭಾಗ್ಯ ಇದೆ ಎಂಬ ವೈಜ್ಞಾನಿಕ ಕಾರಣವೂ ಇದೆ. ಕೇವಲ ದೈಹಿಕವಾಗಿ ವ್ರತಮಾಡಿದರೆ ಸಾಲದು, ಮನಸ್ಸು ಕೂಡ ಆ ವಿಷಯಗಳ ಬಗ್ಗೆ ವೈರಾಗ್ಯ ತಾಳಬೇಕು ಎಂಬ ಅರ್ಥ ಮೂಡಿಬಂದಿದೆ. ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಪರಮಾತ್ಮನಲ್ಲಿ ನಿಜವಾದ ಭಕ್ತಿಯನ್ನು ಮಾಡಬೇಕಾದರೆ ಭಕ್ತಿಯ ಸ್ವರೂಪವನ್ನು ತಿಳಿದುಕೊಳ್ಳುವುದು ಮುಖ್ಯ.

**ನವವಿಧ ಭಕ್ತಿ:** ಲೋಕಗುರುಗಳಾದ ಶ್ರೀ.ಮದ್ವಾಚಾರ್ಯರು ಪ್ರತಿಷ್ಠಾಪಿಸಿರುವ ಸಿದ್ಧಾಂತ ತತ್ವದ ದೃಷ್ಟಿಯಿಂದ 'ದ್ವೈತ ಸಿದ್ಧಾಂತ' ಎಂದು ಪ್ರಸಿದ್ಧವಾದರೂ ಭಾವನಾ ದೃಷ್ಟಿಯಿಂದ ಅದು 'ಭಕ್ತಿ ಸಿದ್ಧಾಂತ' ಎಂದರೆ ತಪ್ಪಿಲ್ಲವೆನಿಸುತ್ತದೆ. ಭಗವಂತನ ಕುರಿತಾದ ಭಕ್ತಿಯ ಸ್ಥಾನವನ್ನು ಗುರುತಿಸಿಕೊಡುವಲ್ಲಿ ಭಕ್ತಿಯ ಸ್ವರೂಪ ಲಕ್ಷಣಗಳನ್ನು ನಿಷ್ಕರಿಸುವಲ್ಲಿ ಭಕ್ತಿಯ ಪಾತ್ರ ಫಲಗಳನ್ನು ಸ್ಪಷ್ಟಪಡಿಸುವಲ್ಲಿ ಈ ಸಿದ್ಧಾಂತದ ಪಾತ್ರವು ಮಹತ್ವವಾಗಿದೆ.

ಭಕ್ತಿಯ ಪ್ರಕಾರಗಳನ್ನು ಭಾಗವತ ಪುರಾಣದಲ್ಲಿ ವಿವರವಾಗಿ ಹೇಳಲಾಗಿದೆ ಅವು ಹೀಗಿವೆ.

ಶ್ರವಣಂ ಕೀರ್ತನಂ ವಿಷ್ಣೋಃಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್ ।
[ ಭಾಗವತ ೭/೫/೨೩ ](೧೨)

ಶಾಸ್ತ್ರಕಾರರು ಭಕ್ತಿಯ ಒಂಬತ್ತು ಮಜಲುಗಳನ್ನು ಗುರುತಿಸಿದ್ದಾರೆ. ಶ್ರೀ ವಿಷ್ಣುವಿನ ಬಗ್ಗೆ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಹಾಗೂ ಆತ್ಮನಿವೇದನ. ಇವು ಅರಳಿದ ಭಕ್ತಿಯ ಕಂಪನ್ನು ಸೂಸುವುದಕ್ಕೆ ಸಹಾಯಕವಾಗಿವೆ ಅದಕ್ಕಾಗಿ ಇವುಗಳನ್ನು ಭಕ್ತಿಯ ಲಕ್ಷಣಗಳು ಎಂದು ಕರೆಯಲಾಗಿದೆ. ಇಂತಹ ಭಗವದ್‌ಭಕ್ತಿಯ ಆವಿಷ್ಕಾರವಾಗಿ ಹೊರಹೊಮ್ಮಿರುವ 'ದಾಸ ಸಾಹಿತ್ಯ' ದಲ್ಲಿ ಶ್ರವಣ

ವಂದನ ಹಾಗೂ ಅರ್ಚನ ಇವುಗಳಿಗೆ ಸಂಬಂಧಿಸಿದ ವಿಚಾರಗಳು ವಿರಳವಾಗಿವೆ. ಒಟ್ಟಿನಲ್ಲಿ ಭಕ್ತಿಯ ಲಕ್ಷಣಗಳ ಬಗ್ಗೆ ಪುರಂದರದಾಸರು ಏನು ಹೇಳುತ್ತಾರೆ ನೋಡುವ.

**ಸಾಧನ:** ಸಕಲ ಸಾಧನಕ್ಕೆಲ್ಲ ಸಿದ್ಧಿಗೊಳಿಸುವುದು
ಭಕುತಿ ಕಾರಣವಲ್ಲದೆ ಬೇರೆ ಸಾಧನ ವುಂಟೆ ಪ।

ಯುಕುತಿ ಜನರೆಲ್ಲ ಕೇಳಿ ಇತರ ಸಾಧನಕೆಲ್ಲ ಅ।

ಭಕುತಿಗಭಿಮಾನಿ ಭಾರತೀದೇವಿಯರ ಕರುಣ
ಯುಕುತಿ ಸಾಧನವೆಂದು ಮನದಿ ಭಜಿಜಿ
ಅಖಿಲೇಶ ಪುರಂದರವಿಠಲ ತಾನೊಲಿವ ೧। (೧೩)

ಭಕ್ತಿಯೇ ಮುಖ್ಯ ಸಾಧನವೆಂದೂ ಸಾಧಕರ ಭಕ್ತಿಗೆ ಭಾರತೀದೇವಿಯೇ ಆಭೀಮಾನಿದೇವತೆಯೆಂದೂ ಭಕ್ತರು ಭಾರತಿದೇವಿಯನ್ನು ಭಜಿಸಬೇಕೆಂದೂ ಈ ಪ್ರತಿಮೆಯ ಭಾವ.

**ಭಕ್ತಿ:** ಸುಮ್ಮನೆ ಬರುವುದೆ ಮುಕ್ತಿ ಪ।

ನಮ್ಮ ಅಚ್ಯುತಾನಂತನ ನೆನಯದೆ ಭಕ್ತಿ ಅ।

ಮನದಲ್ಲಿ ಧೃಡವಿರಬೇಕು ಪಾಪಿ
ಜನರ ಸಂಸರ್ಗವ ನೀಗಲಿ ಬೇಕು
ಅನುಮಾನವನು ಬಿಡಬೇಕು ತನ್ನ
ತನುಮನ ಧನವನೊಪ್ಪಿಸಿಕೊಡಬೇಕು ೧।

ಕಾಮಕ್ರೋಧವ ಬಿಡಬೇಕು
ಕಾಮಿನಿಯರ ಹಂಬಲ ಬಿಡಬೇಕು
ಹೇಮದಾಸೆಯ ಸುಡಬೇಕು ಹರಿ
ನಾಮ ಸಂಕೀರ್ತನೆ ಮಾಡಬೇಕು ೨।

ಸಂದಣಿಗಳ ಬಿಡಬೇಕು ದೇಶ
ಬಂಧು ಬಾಂಧವರ ಸ್ನೇಹವ ಬಿಡಬೇಕು
ನಿಂದಿಸಿದರೆ ಹಿಗ್ಗಬೇಕು ಕೋಪ
ಬಂದಾಗ ಸೈರಣಿ ಬಿಡದಿರಬೇಕು. (೧೪)

ಭಕ್ತಿಯು ಬೇರೂರಲು ಧೃಡಮನಸ್ಸು ಇರಬೇಕು, ಹೊನ್ನಿನ ಆಸೆ ಬಿಡಬೇಕು ತನ್ನವರೆಂಬ ಅಭಿಮಾನ ದೂರಮಾಡಬೇಕು. ಮಾನ–ಅಪಮಾನವನ್ನು ಸಮನಾಗಿ ಕಾಣಬೇಕು. ಸಹನೆ ಬಿಡಬಾರದು ಎಂದು ಭಕ್ತಿಯು ಬೇರೂರಲು ಅಗತ್ಯವಾದ ಸಾಧನೆಗಳನ್ನು 'ಭಕ್ತಿ' ಪ್ರತಿಮೆಯು ಮೂರ್ತಗೊಳಿಸುತ್ತದೆ.

**ಆಣೆ:** ಎನಗು ಆಣೆ ರಂಗ ನಿನಗೂ ಆಣೆ ಪ।

ಎನಗು ನಿನಗೂ ಇಬ್ಬರಿಗೂ ಭಕ್ತರಾಣೆ ಅ।

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ
ಎನ್ನ ನೀ ಕೈ ಬಿಟ್ಟು ಪೋದರೆ ನಿನಗೆ ಆಣೆ ೧।

ತನುಮನದಲಿ ವಂಚಕನಾದರೆ ಎನಗೆ ಆಣೆ, ರಂಗ
ಮನಸು ನಿನ್ನಲಿ ನಿಲ್ಲಿಸದಿದ್ದರೆ ನಿನಗೆ ಆಣೆ ೨।

. . . . . . . . . . . . . . . . . . . . (೧೫)

ಪುರಂದರದಾಸರು ಭಕ್ತಿಯಿಂದ ತಮ್ಮ ಮನಸ್ಸನ್ನು ಭಗವಂತನಲ್ಲಿ ನಿಲ್ಲಿಸಲು ಕೇಳಿಕೊಳ್ಳುತ್ತಿದ್ದಾರೆ. ಹಾಗೆ ಮಾಡದಿದ್ದರೆ ವಿಠಲನ ಭಕ್ತರಾಣೆಯನ್ನು ಇಡುತ್ತಿದ್ದಾರೆ. 'ಆಣೆ' ಪ್ರತಿಮೆ ಭಗವಂತನಲ್ಲಿ ಆತ್ಮೀಯತೆ ಪ್ರೀತಿಯ ಭಾವವನ್ನು ವ್ಯಕ್ತಪಡಿಸುತ್ತದೆ.

**ಶ್ರವಣ:** ಭಕ್ತನು ಭಗವಂತನ ನಾಮ, ರೂಪ, ಗುಣ, ಪ್ರಭಾವ, ಲೀಲೆ, ತತ್ವ ಮತ್ತು ರಹಸ್ಯಮಯ ಕಥೆಗಳನ್ನು ಶ್ರದ್ಧಾ ಪ್ರೇಮ ಪೂರ್ವಕ ಶ್ರವಣ ಮಾಡುವುದು ಹಾಗೂ ಆ ಅಮೃತಮಯ ಕಥೆಗಳನ್ನು ಕೇಳಿ, ವೀಣೆ ಯನ್ನು ಕೇಳಿದ ಜಿಂಕೆಯು ಮುಗ್ಧವಾಗುವಂತೆ ಪ್ರೇಮದಲ್ಲಿ ಮುಗ್ಧವಾಗುವುದೇ ಶ್ರವಣ ಭಕ್ತಿಯ ಸ್ವರೂಪವಾಗಿದೆ. ಇದನ್ನೇ ಪುರಂದರದಾಸರು ಹರಿಯ ಕಥೆ ಕೇಳುವ ಕಿವಿಯು ಕೇದಾರ ಕ್ಷೇತ್ರಕ್ಕೆ ಸಮ ಎಂದಿದ್ದಾರೆ.

**ಸ್ಮರಣೆ:** ಹರಿ ಸ್ಮರಣೆ ಮಾಡೋ ನಿರಂತರ ಪ।

ಪರಗತಿಗೆ ಇದು ನಿಧಾನ ಅ।

ದುರಿತಗಜಕ್ಕೆ ಕಂಠಿರವನೆನಿಸಿದ
ಶರಣಾಗತ ರಕ್ಷಕ ಪಾವನ ನೀ ೧।
ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ
ದುರುಳ ಹಿರಣ್ಯಕನುದರವ ಸೀಳಿದ ೨।
. . . . . . . . . . . . . . . . . . (೧೬)

ಪಾಪಗಳೆಂಬ ಆನೆಗೆ ಸಿಂಹದಂತಿರುವ ಪ್ರಹ್ಲಾದ, ದ್ರೌಪದಿ, ಅಜಾಮಿಳಳ ಮುಂತಾದ ಭಕ್ತರನ್ನು ಸಲುಹಿದ ಹರಿ ಮಹಿಮೆಯನ್ನು ಕೇಳುವುದು ಮೋಕ್ಷಕ್ಕೆ ಆಸರೆಯಾಗಿದೆ ಎಂಬ ಅರ್ಥದಲ್ಲಿ 'ಸ್ಮರಣೆ' ಪ್ರತಿಮೆಯು ಮೂಡಿದೆ.

**ಕೀರ್ತನೆ:** ಭಗವಂತನ ನಾಮ, ರೂಪ, ಗುಣ ಪ್ರಬಾವ, ಚರಿತ್ರೆ, ತತ್ವ ಮತ್ತು ರಹಸ್ಯವನ್ನು ಶ್ರದ್ಧಾ-ಪ್ರೇಮಪೂರ್ವಕ ಉಚ್ಚರಿಸುತ್ತಾ, ಶರೀರದಲ್ಲಿ ರೋಮಾಂಚನ ಹೃದಯ ಪ್ರಫುಲ್ಲತೆ ಉಂಟಾಗುವುದು ಕೀರ್ತನ ಭಕ್ತಿಯ ಸ್ವರೂಪವಾಗಿದೆ. ಭಗವಂತನ ಅಂಗಗಳನ್ನು, ಅವನ ಮಹಿಮೆಯನ್ನು ಸ್ತುತಿಸುವ ನೂರಾರು ಕೀರ್ತನೆ ಗಳನ್ನು ದಾಸರು ರಚಿಸಿದ್ದಾರೆ.

ಆನಂದ ಪ್ರತಿಮೆಯು ಭಗವಂತನ ಅವಯುವಗಳ ಸೌಂದರ್ಯವನ್ನು ಮೂರ್ತಗೊಳಿಸುತ್ತದೆ.

ಈ ಪಾದವಾನಂದ ಆ ನಖವಾನಂದ
ಆ ಜಾನು ಆ ಜಂಘ ಆನಂದಮಯವಯ್ಯ

ಆ ಊರು ಆನಂದ ಆ ಕಟಿ, ಆ ಊರ ಆನಂದ ಆ ಭುಜ ಆನಂದ
ಆ ಕಂಠ ಆ ಮುಖ ಆನಂದಮಯವಯ್ಯ
ಆ ಶಿರೋಮಹಗಳು ಆನಂದಮಯವಯ್ಯ
ಆ ಸರ್ವಾಂಗದ ಅವಯವಗಳೆಲ್ಲ ಆನಂದಮಯವಯ್ಯ ಪುರಂದರವಿಠಲ (೧೭)

ಈ ರೀತಿ ಆನಂದ ಸುಳಾದಿಯಲ್ಲಿ ಭಗಂತನ ಕೀರ್ತನೆ ಅದ್ಭುತವಾಗಿ ಮೂಡಿಬಂದಿದೆ.

**ಸ್ಮರಣೆ:** ಹರಿನಾಮವನ್ನು ಅವನ ಪ್ರೀತಿ, ದಯೆ, ಕರುಣೆ ಮುಂತಾದ ಭಾವಗಳನ್ನು ಪ್ರೀತಿಯಿಂದ ಮನನ ಮಾಡುವುದು ಅಥವಾ ಸ್ಮರಿಸುವುದು ಇದು ಸ್ಮರಣಭಕ್ತಿಯಾಗಿದೆ. ಈ ಎರಡೂ ಲಕ್ಷಣಗಳ ಭಾವವನ್ನು ದಾಸ ಸಾಹಿತ್ಯದ ಹರಿನಾಮಸ್ಮರಣೆಯನ್ನು ಹೇಳುವ ಕೀರ್ತನೆಗಳಲ್ಲಿ ಕಾಣಬಹುದು.

**ಸಾರಾಮೃತ:** ನಾರಾಯಣ ನಿನ್ನ ನಾಮದ ಸ್ಮರಣೆಯ
ಸಾರಾಮೃತವೆನ್ನ ನಾಲಿಗೆ ಬರಲಿ ಪ।

ಕೂಡುವಾಗಲಿ ನಿಂತಾಡುವಾಗಲಿ ಮತ್ತೆ
ಹಾಡುವಾಗಲಿ ಹರಿದಾಡುವಾಗಲಿ
ಖೋಡಿ ವಿನೋದದಿ ನೋಡದೆ ನಾ ಬಲು
ಮಾಡಿದ ಪಾಪ ಬಿಟ್ಟೋಡಿ ಹೋಗೋ ಹಾಂಗೆ ೧।

. . . . . . . . . . . . . . . . . . . . . . .
ಹಸಿದಿದ್ದಾಗಲಿ ಹಸಿವಿಲ್ಲದಾಗಲಿ
ಕಸಿವಿಸಿಯಿರಲಿ ಹರುಷಿರಲಿ
ವಸುದೇವಾತ್ಮಕ ಶಿಶುಪಾಲಕ್ಷಯ
ಅಸುರಾಂತಕ ನಿನ್ನ ಹೆಸರು ಮರೆಯದಾಂಗ ೩।
. . . . . . . . . . . . . . . . . . . . . . .
ಸಂತತ ಹರಿ ನಿನ್ನ ಸಾಸಿರನಾಮವ
ಅಂತರಂಗದ ಒಳಗಿರಿಸಿ
ಎಂತೋ ಪುರಂದರವಿಠಲರಾಯನೆ
ಅಂತ್ಯಕಾಲದಲ್ಲಿ ಚಿಂತಿಸೋಹಾಗೆ ೭ (೧೮)

ಪುರಂದರದಾಸರು ಹರಿನಾಮ ಸ್ಮರಣೆಯನ್ನು ಅಮೃತಕ್ಕೆ ಹೋಲಿಸಿದ್ದಾರೆ. ಅಮೃತ ಕುಡಿದವರಿಗೆ ಹೇಗೆ ಸಾವಿಲ್ಲವೋ ಹಾಗೆ ಹರಿಯ ನಾಮಸ್ಮರಣೆಯನ್ನು ಯಾವಾಗಲೂ ಮಾಡುತ್ತಿರುವವರಿಗೆ ಯಾವ ಕಷ್ಟವೂ ಇರುವುದಲ್ಲ ಎಂಬುದು ತಾತ್ಪರ್ಯ. ಹುಟ್ಟಿನಿಂದ ಸಾವಿನವರೆಗೆ ನಮ್ಮ ಸಾಮಾಜಿಕ ವ್ಯವಹಾರಗಳಲ್ಲಿ ದೈನಂದಿನ ಜೀವನದಲ್ಲಿ ದೈವಚಿಂತನವು ಹಾಸುಹೊಕ್ಕಾಗಿ ನೆಯ್ದುಕೊಂಡು ಬರಬೇಕೆಂಬುದು ಪರುಂದರದಾಸರ ಆಶಯವಾಗಿದೆ.

**ನಾಮಾಮೃತ:** ಹರಿಯೆಂಬ ನಾಮಾಮೃತದ ಸುರುಚಿಯು ಪರಮ ಭಕ್ತರಿಗಲ್ಲದೆ ಪ।
ಅರಿಯದ ಕಡುಮೂರ್ಖ ನೀಚ ಜನರಿಗೆಲ್ಲ ಹರುಷವಾಗಬಲ್ಲದೆ ಅ।(೧೯)

ಹರಿಯ ನಾಮವೆಂಬ ಅಮೃತದ ರುಚಿಯು ಭಕ್ತನಿಗಷ್ಟೇ ಗೊತ್ತು ಎನ್ನುವ ಪುರಂದರದಾಸರಿಗೆ ಸಾಮಾನ್ಯ ಮನುಷ್ಯನ ಉದ್ಧಾರವೇ ಮುಖ್ಯವಾಗಿತ್ತು ಅದಕ್ಕಾಗಿ ಮಾನವನು ಭಕ್ತಿಯಿಂದ ಭಜನೆಯನ್ನು ಮಾಡಿದರೆ

ಸಾಕೆಂದು ನಿಶ್ಚಯಿಸಿ ಕೀರ್ತನೆಗಳ ರಚನೆ ಮಾಡಿದರು. ಬೆಳಗಿನ ವೇಳೆಯಲ್ಲಿ ಬ್ರಾಹ್ಮೀ ಮಹೂರ್ತದಲ್ಲಿ ಸ್ತ್ರೀಪುರುಷರು ಇಬ್ಬರೂ ಎದ್ದು ಪರಮಾತ್ಮನ ಸಂಕೀರ್ತನ ಮಾಡುವುದು ಪೂರ್ವದಿಂದಲೂ ನಡೆದುಬಂದ ಭಾರತೀಯರ ಪದ್ಧತಿ. ಅದಕ್ಕೆ ಹರಿಯನಾಮವು ಗಂಗಾದಿ ತೀರ್ಥಗಳಿಗಿಂತ ಅಧಿಕವಾಗಿ ಪುಣ್ಯಪ್ರದವಾದುದು ಎಂದು ಈ ಕೆಳಗಿನಂತೆ ಹೇಳುತ್ತಾರೆ.

**ನಾಮ:** ಗಂಗಾಧಿಸಕಲ ತೀರ್ಥಗಳಧಿಕ ಶ್ರೀ ಹರಿಯನಾಮ ।ಪ।

ಹಿಂಗದೆ ನೆನೆವರಿಗೆ ಮಂಗಳ ಫಲವೀವ ಹರಿಯನಾಮ ।ಅ।

ಸ್ನಾನಜಪಂಗಳ ಸಾಧಿಸಿದವನಿಗೆ ಹರಿಯ ನಾಮ
ಜ್ಞಾನವರಿಯದ ಮೂಢಾತ್ಮನಿಗೆ ಇದು ಹರಿಯ ನಾಮ ।೧।

ವೇದಶಾಸ್ತ್ರಂಗಳನ್ನೋದದ ಮನುಜಗೆ ಹರಿಯ ನಾಮ
ಸಾಧನಗಳ ನಾಲ್ಕು ಸಾಧಿಸದವನಿಗೆ ಹರಿಯ ನಾಮ ।೨।

ಕಾಲನ ದೂತರು ತರಿದು ಬಿಸಾಡುವುದು ಹರಿಯ ನಾಮ
ಲೋಲ ಶ್ರೀ ಪುರಂದರವಿಠಲನ ಒಲುಮೆಗೆ ಹರಿಯ ನಾಮ ।೩। (೨೦)

ಪರಮಾತ್ಮನ ದಯವಾಗಬೇಕಾದರೆ ಅವನ ನಾಮ ಒಂದಿದ್ದರೆ ಸಾಕೆಂದು ತಿಳಿಸುವ ಪ್ರಚಲಿತ ನಿಂದಾ ಸ್ತುತಿ ಹೀಗಿದೆ.

**ನಾಮ:** ನೀನ್ಯಾಕೋ, ನಿನ್ನ ಹಂಗ್ಯಾಕೋ ।ಪ।
ನಿನ್ನ ನಾಮದ ಬಲವೊಂದಿದ್ದರೆ ಸಾಕೋ ।ಅ। (೨೧)

ಹರಿನಾಮದಿಂದ ಸಕಲದುರಿತಗಳು ದೂರವಾಗುವವು ಎಂಬುದನ್ನು ಕೆಳಗಿನ ಕೀರ್ತನೆಯಿಂದ ತಿಳಿಯಬಲ್ಲೆವು.

**ನಾಮ:** ಒಂದೇ ನಾಮವು ಸಾಲದೆ ಶ್ರೀ ಹರಿಯೆಂಬ
ಒಂದೇ ನಾಮವು ಸಾಲದೆ ।ಪ।

ಒಂದೇ ನಾಮವು ಭವ ಬಂಧನ ಬಿಡಿಸುವುದೆಂದು ।ಅ।
ಶ್ರುತಿಗಳು ಆನಂದದಿ ಸ್ತುತಿಸುವ
. . . . . . . . . . . . . . . . . . . . . . (೨೨)

ಪುರಂದರದಾಸರು ಅನೇಕ ರೂಪಕಗಳನ್ನು ಬಳಸಿ ಹರಿ ನಾಮಸ್ಮರಣೆಯ ಮಹತ್ವವನ್ನು ತಿಳಿಸುತ್ತಾರೆ.

**ಹಣ್ಣು:** ಹಣ್ಣು ಬಂದಿದೆ ಜನರು ಹಣ್ಣು ಕೊಳ್ಳಿರೋ ।ಪ।

ಹಣ್ಣು ಎಂಬೊ ಹರಿನಾಮ ಎಂಬೋ ಶ್ರುತಿಯ ನಿಂಬೆಯ ।ಅ।
ಮನದ ಬೂಮಿಯಲ್ಲಿ ಪುಟ್ಟಿ ಮತಿಗಳಿಂದ ಪಲ್ಲವಿಸಿ
ತಮಗೆ ತಮಗೆ ತಿಳಿದ ಹೊತ್ತು ಭಕುತಿಯಿಂದಲಿ
ಒಲಿದುಗೊಂಚಲಾದ ಹಣ್ಣು ಜ್ಞಾನವೆಂಬೊ ಪಂಜರದ

ಲಿಳಿದು ನಾಲಿಗೆಯ ಮೇಲೆ ಬಂದು ಕುಳಿತ ಬಾಳೆಯ ೧।
. . . . . . . . . . . . . . . . . . . . . . . . (೨೩)

ಹಣ್ಣು ಇಲ್ಲಿ ಭಕ್ತಿಯನ್ನು ಸಂಕೇತಿಸುತ್ತದೆ.

**ಹಣ್ಣು:** ಹಣ್ಣು ಬಂದಿದೆ ಕೊಳ್ಳಿರೋ ನೀವಿಗ
ಹಣ್ಣು ಬಂದಿದೆ ಕೊಳ್ಳಿರೋ ಪ।

ಚಿನ್ನ ಬಾಲಕೃಷ್ಣನೆಂಬೋ ಚೆನ್ನಾದ ಬಾಳೆಯ ಅ।

ಹವ್ಯ ಕವ್ಯದ ಹಣ್ಣು ಸವಿವ ಸಕ್ಕರೆ ಹಣ್ಣು
ಭವರೋಗಗಳನೆಲ್ಲ ಕಳೆವ ಹಣ್ಣು
ನವನೀತ ಚೋರನೆಂಬ ಜವನ ಅಂಜಿಪ ಹಣ್ಣು
ಅವನಿಯೊಳು ಶ್ರೀ ರಾಮನೆಂಬೊ ಹಣ್ಣು ೧।
. . . . . . . . . . . . . . . . . . . . . . . (೨೪)

ಇಲ್ಲಿ 'ಹಣ್ಣು' ಪ್ರತಿಮೆ ಶ್ರೀ ಕೃಷ್ಣನಾಮವನ್ನು ಸಂಕೇತಿಸುತ್ತದೆ. ಶ್ರೀ ಕೃಷ್ಣನನ್ನು 'ಚೆನ್ನಾದ ಬಾಳೆಯ ಹಣ್ಣು' ಶ್ರೀ ಹರಿ ಎಂಬೋ ಮಾವಿನ ಹಣ್ಣು ಮತ್ತು ಶ್ರೇಷ್ಠವಾದ ಹಣ್ಣು ಎಂದು ಸಂಬೋಧಿಸಿದ್ದಾರೆ. ಇದು ಸಾಮಾನ್ಯ ಹಣ್ಣಲ್ಲ, ಲೋಕದಲ್ಲಿ ನಾವು ನೋಡುವ, ಮೊದಲು ಮಿಡಿಯಾಗಿ, ಒಗರಾಗಿ, ಕಾಯಾಗಿ ಆಮೇಲೆ ಹುಳಿಯಾಗಿ ಕೊನೆಗೆ ಮಾಗಿ ಹಣ್ಣಾದಾಗ ಸಿಹಿ ಆಗುತ್ತದೆ. ಆದರೆ ಈ ಶ್ರೀ ಹರಿಯೆಂಬ ಮಾವಿನ ಹಣ್ಣು ಮೂಲತ: ಸಿಹಿ ಇದು ಕೊಳೆತು ಹೋಗುವದಿಲ್ಲ, ಹಿಳಿತು ಕೆಟ್ಟು ನಾರುವುದಿಲ್ಲ, ಬಿತ್ತಿ ಬೆಳೆಯುವುದಿಲ್ಲ, ಗಿಳಿ ಕಚ್ಚಿ ತಿಂಬೋದಿಲ್ಲ ಪುರಂದರವಿಠಲನೆಂಬೊ ಶ್ರೇಷ್ಠವಾದ ಹಣ್ಣು.

ಹರಿನಾಮ ಸ್ಮರಣೆಯನ್ನು ಸಿಹಿಯಾದ ಮಿಠಾಯಿ ಎಂದು ಹೊಗಳುತ್ತಾ ಭವರೋಗಗಳನ್ನು ನೀಗುವ, ಕಷ್ಟಗಳನ್ನು ತರಿವ ಆನಂದವಾದ ಮಿಠಾಯಿ ಎಂದಿದ್ದಾರೆ.

**ಮಿಠಾಯಿ:** ನಂದನ ತನಯ ಗೋವಿಂದನ ಭಜಿಪುದಾ
ನಂದವಾದ ಮಿಠಾಯಿ ಪ।

ಬಂಧುಗಳನು ಭವರೋಗಗಳಲ್ಲವ
ನಿಂದಿಪುದೀ ಮಿಠಾಯಿ ಅ।

ಧಧಿ ಘೃತ ಕ್ಷೀರಕ್ಕಿಂತಲಯ ಇದು ಬಹು
ಅಧಿಕವಾದ ಮಿಠಾಯಿ
ಕದಳಿ ದ್ರಾಕ್ಷ ಖರ್ಜೂರ ರಸಗಳನು
ಮೀರುವುದೀ ಮಿಠಾಯಿ
. . . . . . . . . . . . . . . . . . . (೨೫)

ಇಲ್ಲಿ ದೇವರ ನಾಮವನ್ನು ಸಿಹಿಯಾದ ಮಿಠಾಯಿಗೆ ಹೋಲಿಸಿದ್ದಾರೆ.

**ಪಾಯಸ:** ರಾಮನಾಮ ಪಾಯಸಕ್ಕೆ
ಕೃಷ್ಣನಾಮ ಸಕ್ಕರೆ ಪ।

ವಿಠಲನಾಮ ತುಪ್ಪವ ಬೆರೆಸಿ

ಬಾಯಿ ಚಪ್ಪರಿಸಿರೋ ॥೨॥

ಒಮ್ಮನ ಗೋದಿಯ ತಂದು
ವೈರಾಗ್ಯ ಕಲ್ಲಲಿ ಬೀಸಿ
ಸುಮ್ಮನ ಸಜ್ಜಿಗೆ ತೆಗೆದು
ಸಣ್ಣ ಸೇವಗೆ ಹೊಸೆದು ॥೧॥

ಹೃದಯವೆಂಬೊ ಪಾತ್ರೆಯೊಳಗೆ
ಭಾವವೆಂಬೊ ಎಸರು ಇಟ್ಟು
ಬುದ್ಧಿಯಿಂದ ಪಕ್ವವ ಮಾಡಿ
ಹರಿವಾಣದೊಳಗೆ ನೀಡಿ ॥೨॥

ಆನಂದ ಆನಂದ ವೆಂಬೊ
ತೇಗು ಬಂದ ಪರಿಯಲಿ
ಆನಂದ ಮೂರುತಿ ನಮ್ಮ
ಪುರಂದರವಿಠಲನ ನೆನೆಯಿರೋ ॥೩॥ (೨೬)

'ಪಾಯಸ' ಪ್ರತಿಮೆಯು ಹರಿಯ ನಾಮಸ್ಮರಣೆಯನ್ನು ಹೇಗೆ ಮಾಡಬೇಕೆಂಬುದನ್ನು ವಿವರಿಸುತ್ತದೆ. ಜ್ಞಾನ ಭಕ್ತಿ ವೈರಾಗ್ಯಗಳು ಭಗವಂತನ ದಿವ್ಯ ಸಾನಿಧ್ಯ ಪಡೆಯಲು ಕಾರಣಗಳು. ಹರಿಯ ವಿಷಯ ತಿಳಿದುಕೊಂಡು, ಸಂಸಾರದಲ್ಲಿ ವೈರಾಗ್ಯ ಹೊಂದಿ, ಭಕ್ತಿಭಾವವನ್ನು ಬೆಳೆಸಿಕೊಂಡು ಹೃದಯದಲ್ಲಿ ಹರಿಯನ್ನು ಭಜಿಸಬೇಕು ಎಂಬುದು ತಾತ್ಪರ್ಯ.

**ಕಲ್ಲುಸಕ್ಕರೆ:ಕಲ್ಲು** ಸಕ್ಕರೆ ಕೊಳ್ಳಿರೋ ನೀವೆಲ್ಲರು
ಕಲ್ಲು ಸಕ್ಕರೆ ಕೊಳ್ಳಿರೋ ॥ಪ॥

ಕಲ್ಲು ಸಕ್ಕರೆ ಸವಿ ಬಲ್ಲವರೆ ಬಲ್ಲರು
ಫುಲ್ಲಲೋಚನ ಶ್ರೀ ಕೃಷ್ಣ ನಾಮವೆಂಬ ॥ಅ॥

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೋಳು ತುಂಬುವುದಲ್ಲ
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿ ಲಾಭ ಬರುವಂಥ ॥೧॥
. . . . . . . . . . . . . . . . . . . . (೨೭)

'ಕಲ್ಲುಸಕ್ಕರೆ' ಪ್ರತಿಮೆ ಹರಿನಾಮದ ಮಹತ್ವವನ್ನು ತಿಳಿಸುತ್ತದೆ. ಇಲ್ಲಿ ದೇವರನಾಮ ಬರೀ ಸಕ್ಕರೆ ಎಂದು ಹೇಳದೇ 'ಕಲ್ಲು ಸಕ್ಕರೆ' ಎನ್ನುವ ಧ್ವನಿ ಎಕೆಂದರೆ, ಇದು ಹೆಪ್ಪುಗಟ್ಟಿದ ಸಕ್ಕರೆ, ಕೃಷ್ಣನಾಮವು ಸಕಲ ಶಾಸ್ತ್ರದ ಸಾರವಾಗಿದೆ, ಮಧುರವಾಗಿದೆ ಅದಕ್ಕೆ ಇದು ಕಲ್ಲು ಸಕ್ಕರೆ. ಈ ಸಕ್ಕರೆಯ ಸವಿ ಬಲ್ಲವರೇ ಬಲ್ಲರು ಎಂದರೆ ಕಲ್ಲುಸಕ್ಕರೆ ಜಗಿದು ತಿನ್ನುವಂಥದ್ದಲ್ಲ. ಅದನ್ನು ಮೆಲ್ಲನೆ ಸವಿಯಬೇಕು. ಅವಸರದಲ್ಲಿ ನುಂಗಿದರೆ ಗಂಟಲಲ್ಲೇ ಸಿಕ್ಕಿ ಬೀಳುತ್ತದೆ ಹಾಗೆ ಬ್ರಹ್ಮ ವಸ್ತುವಿನ ಮಹಿಮೆ ತಿಳಿದು ಮೆಲ್ಲ ಮೆಲ್ಲನೆ ಅರಗಿಸಿಕೊಳ್ಳಬೇಕು.

ಮುತ್ತು: ಮುತ್ತು ಕೊಳ್ಳಿರೋ ಜನರು
ಮುತ್ತು ಕೊಳ್ಳಿರೋ ॥ಪ॥

ಮುತ್ತು ಬಂದಿದೆ ಕೊಳ್ಳಿ
ಸಚ್ಚಿದಾನಂದ ದಿವ್ಯ ॥ಅ॥

ಜ್ಞಾನವೆಂಬೋ ದಾರದಲಿ
ಪೋಣಿಸಿದ ದಿವ್ಯ ಮುತ್ತು
ಜ್ಞಾನದಿಂದ ಕೊಂಬುದಿದನು
ದೀನರಾದ ಭಕ್ತ ಜನರು ॥೧॥

ಕಟ್ಟಲಾಗದು ಮೂಗಿನಲಿ
ಇಟ್ಟು ಮರೆಯಲಾಗದಿದು
ಭ್ರಷ್ಟ ಜನಕೆ ಕಾಣಿಸದಂಥ
ಕಷ್ಟವೆಂಬೋ ಅಣಿಮುತ್ತು ॥೨॥

ಹಿಡಿಯಲಿಕ್ಕೆ ನಿಲುಕದದು
ಕಡೆ ಕಾಣದೆಂದು ಬೆಲೆಯು
ಪೊಡವಿಗೆಲ್ಲ ಪುರಂದರವಿಠಲ
ಒಡೆಯನೆಂಬೊ ದಿವ್ಯ ಮುತ್ತು ॥೩॥ (೨೮)

ಪರಮಾತ್ಮನ ನಾಮಸ್ಮರಣೆಯೆಂಬ ಮುತ್ತು ಜ್ಞಾನವೆಂಬ ದಾರದಲ್ಲಿ ಪೋಣಿಸಿದ್ದರಿಂದ ಧ್ಯಾನಕ್ಕೆ ಮಾತ್ರ ಗೋಚರಿಸುತ್ತದೆ. ಪರಮಾತ್ಮನ ಮಹಾತ್ಮದ ಜ್ಞಾನ ಉಳ್ಳವರಿಗೆ ಮಾತ್ರ ಈ ಅಣಿಮುತ್ತು ಕೊಳ್ಳಲು ಸಾಧ್ಯ. ಮುತ್ತು ರತ್ನಗಳನ್ನು ಚಿನ್ನದಲ್ಲಿ ಕಟ್ಟಿದರೆ ಅವುಗಳು ಪ್ರಕಾಶಿಸುತ್ತವೆ. ಅವು ಹೊಳೆಯಬೇಕಾದರೆ ಇತರ ವಸ್ತುಗಳ ಅವಲಂಬನೆ ಬೇಕು. ಆದರೆ ಕೃಷ್ಣನೆಂಬ ಈ ಮುತ್ತಿಗೆ ಯಾವುದರ ಅವಲಂಬನೆಯೂ ಬೇಕಿಲ್ಲ. ಇದನ್ನು ಮೂಗಿನಲ್ಲಿ ಧರಿಸುವುದಲ್ಲ, ಹೃದಯದಲ್ಲಿ ಧರಿಸಬೇಕು. ಧರಿಸಿ ಮರೆಯಬಾರದು. ಅದು ಪ್ರದರ್ಶಿಸುವಂಥದಲ್ಲ, ಗುಟ್ಟಾಗಿರಬೇಕು.

'ನಾರಾಯಣನೆಂಬ ನಾಮದ ಬೀಜವ ನಾರದ ಬಿತ್ತಿದ ಧರೆಯೊಳಗೆ'. ಎಂದ ಪುರಂದರದಾಸರು ಹರಿ ನಾಮಸ್ಮರಣೆಯನ್ನು ಬೀಜಕ್ಕೆ ಹೋಲಿಸಿ ಅದರ ಬೆಳೆಯನ್ನು ಬೆಳೆಯುವ ರೀತಿ ಹೇಳಿಕೊಡುತ್ತಿದ್ದಾರೆ.

ಬೀಜ: ನಾರಾಯಣನೆಂಬ ನಾಮದ ಬೀಜವ ನಿಮ್ಮ
ನಾಲಿಗೆ ತುದಿಯಲಿ ಬಿತ್ತಿರಯ್ಯ ॥ಪ॥

ಹೃದಯ ಹೊಲವ ಮಾಡಿ, ಮನವ ನೇಗಿಲ ಮಾಡಿ
ಶ್ವಾಸೋಚ್ಛ್ವಾಸ ಎರಡೆತ್ತು ಮಾಡಿ
ಜ್ಞಾನವೆಂಬ ಹಗ್ಗಕಣ್ಣಿಯ ಮಾಡಿ
ನಿರ್ಮಮವೆಂಬ ಗುಂಟಿಲಿ ಹರವಿರಯ್ಯ ॥೧॥

ಮದ ಮತ್ಸರಗಳೆಂಬ ಮರಗಳಿನೆ ತರಿದು

ಕಾಮ ಕ್ರೋಧಗಳೆಂಬ ಕಳೆಯ ಕಿತ್ತಿ
ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ
ಚಂಚಲವೆಂಬ ಹಕ್ಕಿಯ ಹೊಡೆಯಿರಯ್ಯ ೭।

ಉದಯಾಸ್ತಮಾನವೆಂಬ ಎರದು ಕೊಳಗದಲ್ಲಿ
ಆಯುಷ್ಯವೆಂಬ ರಾಶಿ ಅಳೆಯುತಿರೆ
ಸ್ವಾಮಿ ಶ್ರೀ ಪುರಂದರವಿಠಲನ ನೆನೆದರೆ
ಪಾಪ ರಾಶಿಯ ಪರಿಹರಿಸುವನಯ್ಯ ೮। (೨೯)

ಹರಿನಾಮ ಸ್ಮರಣೆಯನ್ನು ಮೂರ್ತಗೊಳಿಸುವ 'ಬೇಸಾಯ'ದ ರೂಪಕವು ಅದ್ಭುತವಾಗಿ ಮೂಡಿಬಂದಿದೆ. ಇಲ್ಲಿ ನಾರಾಯಣವೆಂಬ ನಾಮವೇ ಬೀಜ ಅದನ್ನುಚ್ಚರಿಸುವ ನಾಲಗೆಯೇ ಬೀಜವನ್ನು ಬಿತ್ತುವ ಸಾಧನ, ಅಂತರಂಗವೇ ಹೊಲ ಅಲ್ಲಿ ಉತ್ತಮ ಸಂಸ್ಕಾರಗಳಿಂದ ಊಳುವ ನೇಗಿಲು ಮನಸ್ಸು, ಅದಕ್ಕೆ ಹೂಡಿರುವ ಎತ್ತುಗಳು ಶ್ವಾಸಕ್ರಿಯೆಗಳು, ಹರಿ ಮಹಾತ್ಮ್ಯ ಜ್ಞಾನವೇ ಎತ್ತುಗಳನ್ನು ಕಟ್ಟಿರುವ ಹಗ್ಗ, ಅಹಂಕಾರ ಮಮಕಾರಗಳನ್ನು ಬಿಡುವುದೇ ಹಗ್ಗವನ್ನು ಕಟ್ಟುವ ಗೂಟ. ಪೈರು ಬೆಲೆಯುವುದಕ್ಕೆ ಅಡ್ಡಿಯಾಗುವ ಗಿಡಮರಗಳು ಮದ-ಮತ್ಸರಗಳು. ಕಳೆ ಕಾಮಕ್ರೋಧ. ಮನಸ್ಸಿನ ಚಂಚಲವೆಂಬುದೇ ನಾಮಸ್ಮರಣೆಯ ಪೈರನ್ನು ಹಾಳು ಮಾಡುವ ಹಕ್ಕಿ. ಇಂದ್ರಿಯ ಗಳನ್ನು ಹಿಡಿತದಲ್ಲಿಡುವುದೇ ಹಕ್ಕಿಗಳನ್ನು ಹಿಡಿಯುವ ಮಂಚಿಕೆ. ಮನಷ್ಯನ ಆಯುಷ್ಯ ಮುಂಜಾನೆ-ಸಂಜೆಗಳಿಂದ ಸವಿಯುತ್ತ ಬರುತ್ತದೆ ಹೀಗೆ ಬದುಕು ಮುಗಿದು ಹೋಗುವ ಮೊದಲು ನಾಮಸ್ಮರಣೆಯೆಂಬ ಬೆಳೆಯನ್ನು ಬೆಳೆದುಕೊಳ್ಳಬೇಕು ಎಂಬುದು ತಾತ್ಪರ್ಯ.

**ಬಂಗಾರ:** ಬಂಗಾರ ವಿಡಬಾರೆ ನಿನಗೊಪ್ಪುವ
ಬಂಗಾರವಿಡಬಾರೆ ಪ।

ರಂಗನಾಥನ ದಿವ್ಯ ಮಂಗಳನಾಮ
ವೆಂಬ ಬಂಗಾರವಿಡಬಾರೆ.
ಮುತ್ತೈದೆತನವೆಂಬ ಮುಖದಲಿ ಕುಂಕುಮದ
ಕಸ್ತೂರಿಯ ಬೊಟ್ಟನಿಡೆ ನಿನ್ನ ಫಣಿಗೆ
ಹೆತ್ತವರ ಕುಲಕೆ ಕುಂದು ಬಾರದ ಹಾಗೆ
ಮುತ್ತಿನ ಮೂಗುತಿಯನಿಡೆ ೧।
. . . . . . . . . . . . . . . . . . .
. . . . . . . . . . . . . . . . . . .
ಅರಗಳಿಗೆ ಪತಿಯ ಅಗಲಬಾರದು ಎಂಬ
ಅಚ್ಚ ಮಂಗಳಸೂತ್ರ ಕಟ್ಟಿ ನಿನ್ನ ಕೊರಳಿಗೆ
ಪರ ಪುರುಷನು ನಿನ್ನ ಪಡೆದ ತಂದೆಯೆಂಬ
ಪದಕ ಸರವ ಹಾಕೆ ೮।
. . . . . . . . . . . . . . . . . . .
. . . . . . . . . . . . . . . . . . .
ಜ್ಞಾನನಿಧಿಗಳಾದ ಗುರುಗಳ ಪಾದಕೆ
ಅನತಳಾಗಿ ಬಾಳೆ
ಮೌನಿಗಳೊಡೆಯ ಶ್ರೀ ಪುರಂದರವಿಠಲನ

'ಬಂಗಾರ' ಪ್ರತಿಮೆ ಪಲ್ಲವಿಯಲ್ಲಿ ಹರಿನಾಮ ಸ್ಮರಣೆಯನ್ನು ಸಂಕೇತಿಸುತ್ತದೆ ಹಾಗೂ ಚರಣಗಳಲ್ಲಿ ಸ್ತ್ರೀಯ ವ್ಯಕ್ತಿತ್ವವನ್ನು ಸಂಕೇತಿಸುತ್ತದೆ. ಸಾಮಾನ್ಯವಾಗಿ ಪುರಂದರದಾಸರ ಕೀರ್ತನೆಗಳಲ್ಲಿ ಮುಖ್ಯ ವಿಷಯವು ಪಲ್ಲವಿಯಲ್ಲಿದ್ದರೆ ಅದರ ವಿವರಗಳು ಚರಣದಲ್ಲಿರುತ್ತದೆ. ಆದರೆ ಈ ಕೀರ್ತನೆ ಸ್ವಲ್ಪ ವಿಭಿನ್ನವಾಗಿದೆ. ಪಲ್ಲವಿಯಲ್ಲಿ ಹರಿನಾಮವೆಂಬ ಬಂಗಾರವನ್ನು ಧರಿಸಲು ಕೇಳುವ ದಾಸರು ಚರಣಗಳಲ್ಲಿ ಗೃಹಣಿಯು ಶೀಲವನ್ನು ಕಾಪಾಡಿಕೊಂಡು, ವಂಶ ಗೌರವವನ್ನು ಕಾಪಾಡುವ ಹೊಣೆ ಹೊತ್ತುಕೊಂಡು ಪತಿಯನ್ನು ನೆರೆಯವರನ್ನು ಪರಪುರುಷರನ್ನು ಗುರು–ಹಿರಿಯರನ್ನು ಚೆನ್ನಾಗಿ ಕಾಣಬೇಕೆಂದು ತಿಳಿಸುತ್ತಾರೆ.

**ಅಮೃತಾನ್ನ:** ನಿನ್ನ ನಾಮವೆ ಎನಗೆ ಅಮೃತಾನ್ನವು
ಇನ್ನು ಹಸಿದಿರಲೇಕೆ ಎನಗೆ ನೀನೊಲಿದಿರಲು ಪ

ಓಂಕಾರವೆಂಬ ನಿನ್ನ ನಾಮ ಉಪ್ಪಿನಕಾಯಿ
ಶಂಖಪಾನಿಯ ನಾಮ ಶಾಕಾದಿ ಸೂಪ
ಸಂಕರುಷಣ ಎಂಬನಾಮ ದಿವ್ಯ ಶಾಲ್ಯಾನ್ನವು
ಪಂಕಜಾಕ್ಷ ನಿನ್ನ ನಾಮ ಪಳ್ಳದ ಸಾರು ೧

ಕೇಶವನೆಂಬ ನಾಮ ಕರಿದ ಹೂರಣಕಡುಬು
ವಾಸುದೇವನ ನಾಮ ವಡೆ ಶ್ಯಾವಿಗೆ
ಸಾಸಿರವೆಂಬ ನಾಮ ಶಾವಿಗೆ ಪರಮಾನ್ನ
ದೊಷದೂರನ ನಾಮ ಸೂಲ ಕಡುಬು ೨

ನಾರಾಯಣ ನಿನ್ನ ನಾಮ ನೊರೆಹಾಲು ಸಕ್ಕರೆ
ಶ್ರೀ ರಾಮನಾಮ ಸರವಳಿಗೆ ಸಜ್ಜಿಗೆ
ಕಾರುಣ್ಯನಿಧಿ ನಾಮ ಕರಿದ ಹಪ್ಪಳ ಸಂಡಿಗೆ
ನಾರಾಯಣ ನಾಮ ಪರಿಪರಿಯ ಪರಮಾನ್ನ ೩

ಯದುಪತಿಯೆಂಬ ನಾಮ ಎಣ್ಣೂರಿಗೆ ರಾಶಿ
ಮದುಸೂದನನೆಂಬ ನಾಮ ಮಂಡಿಗೆಯು
ಚದುರ ಗೋವಳನಾಮ ಚೆಲುವ ಬೀಸೂರಿಗೆ
ಪದುಮನಾಭ ನಿನ್ನ ನಾಮ ಪರಿಪರಿಯ ಭಕ್ಷ ೪

ದೇವಕೀ ಸುತನಾಮ ದಧ್ಯನ್ನದ ಮುದ್ದೆ
ಗೋವಿಂದನ ನಾಮ ಗುಳ್ಳೋರಿಗೆ
ಮಾವ ಮರ್ದನ ನಾಮ ಕಲಸು ಮೇಲೊಗರ
ರಾವಣಾರಿಯ ನಾಮ ದೋಸೆ ಸುಕ್ಕಿನುಂಡೆ ೫

ಗರುಡವಾಹನ ನಾಮ ಘತ ಪಯೋದಧಿ ತಕ್ರ
ಪರಮ ಪುರುಷನ ನಾಮ ಪನ್ನೀರುಪಾನ
ಕರಿವರದ ನಿನ್ನ ನಾಮ ಕರ್ಪೂರದ ವೀಳ್ಯ

ಶರಧಿಶಯನ ನಾಮ ಶಯನ ಪರ್ಯಂಕ ೬

ಈ ಪರಿಯ ನಾಮವಳಿಯನು ನೆರೆ ಸವಿದುಂಬೆ
ಆಪತ್ತು ಬಿಡಿಸೆನ್ನ ಕ್ಷುದೆಯ ನೂಕಿ
ಗೋಪಾಲ ಉರಗಾದ್ರಿ ಪುರಂದರವಿಠಲನೆ
ಶ್ರೀಪಾದವ ನಂಬಿ ಅಪವರ್ಗವ ಸೇರುವೆ (೩೧)

ದಾಸರು ಹರಿನಾಮವನ್ನು ಬಗೆ ಬಗೆಯ ಖಾದ್ಯಗಳಿಗೆ ಹೋಲಿಸಿದ್ದಾರೆ. ಜನಸಾಮಾನ್ಯರ ಉದ್ಧಾರದ ಕಡೆ ಅವರ ದೃಷ್ಟಿಯಿದ್ದಿತು ಅದಕ್ಕಾಗಿ ದಿನವೂ ಉಪಯೋಗಿಸುವ ಖಾದ್ಯದ ಬಗೆಗಳನ್ನು ಸುಲಭ ಶೈಲಿಯಲ್ಲಿ ಬಳಸಿ ಈ ಕೃತಿಯಲ್ಲಿ ನಾಮಸ್ಮರಣೆಯ ಮಹತ್ವ ತಿಳಿಸಿದ್ದಾರೆ.

**ಯಂತ್ರ:** ಯಂತ್ರ ದೊರಕಿತು ಎನಗೆ
ಯಂತ್ರ ದೊರಕಿತು ಪ।

ಯಂತ್ರ ವಾಹಕ ನಾರಾಯಣನ
ಅಂತರಂಗದಿ ನೆನೆಸುವಂಥ ಅ।

ಆಸೆಯಿಂದ ಮುಳುಗೋದಲ್ಲ
ಕ್ಲೇಶ ಬಿಟ್ಟು ತಿರುಗೋದಲ್ಲ
ವಾಸುದೇವ ಕೃಷ್ಣನೆಂಬ
ಶಾಶ್ವತವಾದ ದಿವ್ಯನಾಮ ೧।
. . . . . . . . . . . . . . . . . . (೩೨)

ಹರಿನಾಮಸ್ಮರಣೆಯು ಕೇವಲ ಬಾಯಿಯಿಂದ ನಡೆವಂಥ ಕ್ರಿಯೆಯಲ್ಲ. ಅಂತರಂಗದಲ್ಲಿ ಭಕ್ತಿಯೂ ಇರಬೇಕು. ಆಗ ಇದು ಒಂದು ಯಂತ್ರ ಅಥವಾ ಸಾಧನವಾಗಿ ಪರಿಣಮಿಸುತ್ತದೆ. ಈ ನಾಮಸ್ಮರಣೆ ಎಂಬ ಸಾಧನವೂ ಕೂಡ ಹರಿಯ ಪ್ರೇರಣೆಯಿಂದಲೇ ನಡೆಯುವಂತಹದ್ದು ಅದಕ್ಕಾಗಿ ಪರಮಾತ್ಮನನ್ನು 'ಯಂತ್ರವಾಹಕ' ಎಂದಿದ್ದಾರೆ.

**ರಾಗಿ:** ರಾಗಿ ತಂದಿರಾ ಭಿಕ್ಷಕೆ ರಾಗಿ ತಂದಿರಾ ಪ।
ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ ನೀವು ಅ।

ಅನ್ನದಾನವ ಮಾಡುವರಾಗಿ
ಅನ್ನ ಛತ್ರವನಿಟ್ಟವರಾಗಿ
ಅನ್ಯ ವಾರ್ತೆಯ ಬಿಟ್ಟವರಾಗಿ
ಅನುದಿನ ಭಜನೆಯ ಮಾಡುವರಾಗಿ ೧।
. . . . . . . . . . . . . . . . . . . . .
. . . . . . . . . . . . . . . . . . . . .
ಸಿರಿರಮಣನ ಸದಾ ಸ್ಮರಿಸುವರಾಗಿ
ಗುರುತಿಗೆ ಬಾಹೋರಂಥವರಾಗಿ
ಕರೆಕರೆ ಸಂಸಾರ ನೀಗುವರಾಗಿ
ಪುರಂದರವಿಠಲನ ಸೇವಿಪರಾಗಿ ೯ (೩೩)

ದಾಸರು ಉಪಾದಾನಕ್ಕೆ ಬಂದಾಗ ಅವರಿಗೆ ಒಂದು ಬಾರಿ ರಾಗಿ ಸಿಕ್ಕಿತು. ಆಗ ರಾಗಿ ತಂದವರನ್ನು ಹರಸುತ್ತಾ ಹರಿನಾಮಸ್ಮರಣೆಯಿಂದ ಯೋಗ್ಯವಾದ ಭಕ್ತಿಯೆಂಬ ದಾರಿಯಲ್ಲಿ ನಡೆಯಬೇಕೆಂದು ತಿಳಿಸುತ್ತಾರೆ. ಒಟ್ಟು ಒಂಬತ್ತು ನುಡಿಗಳಲ್ಲಿ ರಾಗಿ ತರುವವರು ಎಂಥವರಾಗಿರಬೇಕು ಎಂಬುದನ್ನು ತಿಳಿಸುತ್ತಾರೆ. 'ರಾಗಿ' ಇಲ್ಲಿ ಒಂದು ರೂಪಕವೂ, ಉಪಮೆಯೋ ಆಗಿರದೆ ಜೀವನ ಮೌಲ್ಯಗಳನ್ನು ಬಿಂಬಿಸುತ್ತಾ ಅಂತರ ದರ್ಶನ ಮಾಡಿಸುತ್ತಾ ಪ್ರತಿಮೆಯಾಗಿ ಮೂಡಿಬಂದಿದೆ.

**ರತ್ನಹಾರ:** ರಾಮನಾಮ ರತ್ನಹಾರ ದೊರಕಿತೆನಗೆ ಪ।
ಪೂರ್ವ ಪುಣ್ಯದ ಫಲಕೆ

ಮಚ್ಛನೆಂಬೋ ಮಾಣಿಕ್ಯದ ಹರಳು
ಕೂರ್ಮನೆಂಬೋ ಕುಸುರಿಗಳು
ವರಹನೆಂಬೊ ಹೊಸ ಮೋಹನದ ಚೆನ್ನ
ನರಹರಿಯೆಂಬೋ ನಾಮದ ಸರ ಮುತ್ತು ೧।
. . . . . . . . . . . . . . . . . . . . (೩೪)

ದಾಸರು ಹರಿನಾಮವೆಂಬ ರತ್ನಹಾರ ದೊರತಿದ್ದು ತಮ್ಮ ಪುಣ್ಯವೆಂದು ತಿಳಿಸುತ್ತಾರೆ. ರತ್ನಹಾರವು ಪರಮಾತ್ಮನನಾಮಗಳನ್ನು ಸಂಕೇತಿಸುತ್ತದೆ. ಪಚ್ಚೆ ಹರಳು ಮುತ್ತು ಮುಂತಾದ ನವರತ್ನಗಳು ಹರಿಯ ಒಂಬತ್ತು ಅವತಾರದಲ್ಲಿಯ ಮತ್ಸ್ಯ, ಕೂರ್ಮ, ವರಾಹ ಮುಂತಾದ ನಾಮಗಳನ್ನು ಸಂಕೇತಿಸುತ್ತವೆ.

**ಭಂಡಾರ (ಖಜಾನೆ):**

ನಿನ್ನ ನಾಮ ಭಂಡಾರ ಕದ್ದ ಕಳ್ಳ ನಾನು
ನಿನ್ನ ಭಕುತಿಯೆಂಬ ಸಂಕೋಲೆಯನಿಕ್ಕಿ
ನಿನ್ನ ದಾಸರ ಕೈಯಲ್ಲಿ ಒಪ್ಪಿಸಿಕೊಟ್ಟು
ನಿನ್ನ ಮುದ್ರಿಕೆಯಿಂದ ಕಾಸಿ ಬಡಿಸು ದೇವ
ನಿನ್ನ ವೈಕುಂಠ ದುರ್ಗದೊಳು
ಎನ್ನ ಸೆರೆಯನಿಟ್ಟು ಸಲಹೋ ಶ್ರೀ ಪುರಂದರವಿಠಲ. (೩೫)

ಭಂಡಾರ ಅಥವಾ ಖಜಾನೆ ಭಗವಂತನ ನಾಮಸ್ಮರಣೆಯಿಂದ ದೊರಕುವ ಅನುಗ್ರಹವನ್ನು ಸಂಕೇತಿಸುತ್ತದೆ. ಇಲ್ಲಿ ದಾಸರು ತಮ್ಮನ್ನು ಕಳ್ಳನೆಂದು ಕರೆಯುತ್ತಾ, ಹರಿನಾಮಸ್ಮರಣೆಯು ಮುಕ್ತಿಗೆ ಮಾರ್ಗವೆಂದು ತೋರಿಸಿಕೊಡುತ್ತಾರೆ.

**ವಜ್ರ:** ಹರಿಯೆಂದು ಮನದಲಿ ಮರೆದೊಮ್ಮೆ ನೆನೆದರೆ
ದುರಿತ ಪರ್ವತಗಳ ಖಂಡಿಪುದು ವಜ್ರದಂತೆ ಪ।

ಮೇರು ಸುವರ್ಣದಾನವ ಮಾಡಲು ಪುಣ್ಯ
ನೂರು ಕನ್ಯಾದಾನವ ಮಾಡಲು
ದಾರುಣಿಯೆಲ್ಲವ ಧಾರೆಯನೆರೆಯಲು
ನಾರಾಯಣ ಸ್ಮರಣೆಗೆ ಸರಿಯೆಹುದೆ ೧।
. . . . . . . . . . . . . . . . . . . . (೩೬)

ಹರಿನಾಮಸ್ಮರಣೆಯನ್ನು ದಾಸರು ವಜ್ರಕ್ಕೆ ಹೋಲಿಸಿದ್ದಾರೆ. ಹರಿನಾಮಸ್ಮರಣೆಯೆಂಬ ವಜ್ರದಿಂದ ಎಂಥಹ ಕಷ್ಟಗಳನ್ನು ತರಿಯಬಹುದು ಎಂದೂ, ನಾಮಸ್ಮರಣೆಯು ಭೂದಾನ, ಗೋದಾನ, ಕನ್ಯಾದಾನ ಮುಂತಾದುವುಗಳಿಗಿಂತಲೂ ಶ್ರೇಷ್ಠವೆಂದು ತಿಳಿಸಿದ್ದಾರೆ.

**ಕಿಡಿ:**

ಬೆಟ್ಟದಂಥ ದುರಿತಮ ಸುತ್ತಮುತ್ತಲೊಟ್ಟಿರೆ
ಕೃಷ್ಣನಾಮದ ಕಿಡಿ ಬಿದ್ದು ಬೆಂದು ಹೋದದ್ದು ಕಂಡೆ
ಎಲೆ ಎಲೆ ದುರಿತವೆ ತಿರುಗಿ ನೋಡದೆ ಹೋಗು
ಎಲೆ ಎಲೆ ದುರಿತವೆ ಮರಳಿ ನೋಡದೆ ಹೋಗು
ನಿನ್ನ ಕಂಡರೆ ಶಿಕ್ಷಿಸದೆ ಬಿಡ
ಇನ್ನೊಮ್ಮೆ ಕಂಡರೆ ಶಿರವ ಚೆಂಡಾಡುವನು
ಪುಂಡರೀಕಾಕ್ಷ ನಮ ಪುರಂದರವಿಠಲ. (೩೭)

'ಕಿಡಿ' ಪ್ರತಿಮೆಯು ಹರಿನಾಮಸ್ಮರಣೆಯ ಅಗಾಧ ಶಕ್ತಿಯನ್ನು ಸಂಕೇತಿಸುತ್ತದೆ. ಬೆಟ್ಟದಷ್ಟು ವಸ್ತುಗಳು ಕೇವಲ ಒಂದು ಬೆಂಕಿಯ ಕಿಡಿಯಿಂದ ಸುಟ್ಟು ಹೋಗುವಂತೆ ಎಲ್ಲ ಕಷ್ಟಗಳು ಪರಮಾತ್ಮನ ನಾಮಸ್ಮರಣೆಯಿಂದ ದೂರವಾಗುವವು ಎಂಬ ಸಂದೇಶ ಇಲ್ಲಿದೆ. ಹರಿನಾಮಸ್ಮರಣೆಯ ಮಹತ್ವವನ್ನು ತಿಳಿಸುತ್ತಾ ನಾಟಕೀಯವಾಗಿ ದುರಿತದ (ಕಷ್ಟ) ಜೊತೆ ಸಂವಾದ ಮಾಡುವಂತಿರುವ ಈ ಅಭಿವ್ಯಕ್ತಿ ಕ್ರಮವು ಅದ್ಭುತವಾಗಿ ಮೂಡಿಬಂದಿದೆ.

**ತಾಸು:**

ತಾಸುಬಾರಿಸುತಿದೆ ಕೇಳಿ ಹರಿದಾಸರೆಲ್ಲ ॥ಪ॥

ಶ್ರೀಶನ ಭಜನೆಯ ಮಾಡದ ಮನುಜನ
ಆಯುಷ್ಯ ವೃಥಾ ಹೋಯಿತು ಎಂದು ॥ಅ॥

ಹಾಸು ಮಂಚ ಸುಪತ್ತಿಗೆಯಲ್ಲಿ ಹಗಲು ಇರುಳು
ಹೇಸರ ಕತ್ತೆಯಂತೆ ಹೊರಳಿ ಸ್ತ್ರೀಯರ ಕೂಡಿ
ಬೇಸರದೆ ನಿತ್ಯ ಉರುಳಿ ಈ ಪರಿಯಿಂದಲಿ ಮನುಷ್ಯ ಆಯುವು
ವೃಥಾ ಹೋಯಿತು ಹೋಯಿತು ಎಂದು ॥೧॥
. . . . . . . . . . . . . . . . . . . . . . (೩೮)

'ತಾಸು' ಪ್ರತಿಮೆ ಸಮಯದ ಪ್ರತೀಕವಾಗಿ ನಿಂತು ಹರಿನಾಮಸ್ಮರಣೆ ಮಾಡದ ಮನುಷ್ಯನ ಆಯುಷ್ಯವು ವ್ಯರ್ಥವಾಗುವುದು ಎಂಬ ಅರ್ಥಕೊಡುತ್ತದೆ. ದಾಸರು ಗಂಟೆಯ ಶಬ್ದವನ್ನೇ ಉಪಯೋಗಿಸಿ ಪದದ ಮೂಲಕ ಮಾನವನಿಗೆ ಎಚ್ಚರ ಕೊಟ್ಟಿದ್ದಾರೆ. ಮುತ್ತು ಒಡೆದರೆ ಹೋಯಿತು, ಹೊತ್ತು ಕಳೆದರೆ ಹೋಯಿತು ಎಂಬುದನ್ನು ಮರೆಯದೆ ಸಮಯವನ್ನು ಸದುಪಯೋಗ ಮಾಡಿಕೊಳ್ಳಬೇಕು ಎಂದು ದಾಸರು ಬೋಧಿಸಿದ್ದಾರೆ.

**ಬಲ:**

ಜಯ ಜಯ ಹರಿಯೆಂಬುವುದೇ ಸುದಿನವು
ಜಯ ಜಯ ಹರಿಯೆಂಬುದೇ ತಾರಾಬಲವು
ಜಯ ಜಯ ಹರಿಯೆಂಬುದೇ ಚಂದ್ರಬಲವು
ಜಯ ಜಯ ಹರಿಯೆಂಬುದೇ ವಿದ್ಯಾಬಲವು
ಜಯ ಜಯ ಹರಿಯೆಂಬುವುದೇ ದೈವಬಲವು
ಜಯ ಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ (೩೯)

ಉಳಿದೆಲ್ಲ ಬಲಗಳೂ ಸರ್ವೋತ್ತಮನಾದ ಹರಿಯ ನಾಮಸ್ಮರಣೆಯ ಬಲದಿಂದಲೇ ದೊರಕುವವು ಎಂಬ ತಾತ್ಪರ್ಯ ಮೂಡಿಬಂದಿದೆ. ಹರಿಯನಾಮಸ್ಮರಣೆ ಮಾಡಲೂ ಪುಣ್ಯ ಒದಗಿ ಬರಬೇಕೆಂಬ ಭಾವದಿಂದ ದಾಸರು ಹೀಗೆ ಹೇಳಿದ್ದಾರೆ.

**ನಾಮ:** ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯನಾಮವು ಪ।
ಜನ್ಮ ಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ (೪೦)

ಹರಿನಾಮಸ್ಮರಣೆ ಬೇಡವಾದವರ ಆಕ್ಷೇಪ ದೂರ ಮಾಡಲು ಈ ಕೆಳಗಿನಂತೆ ಹೇಳುತ್ತಾರೆ.

**ನಾಮ:** ಮೂಕ ತಾಮಾತಿನ ಸವಿ ಎನು ಬಲ್ಲ
ಲೌಕಿಕ ಬೇನೆ ಸನ್ಯಾಸೇನು ಬಲ್ಲ
ಕಾಕು ಮಾನವ ಪುಣ್ಯ ಪಾಪೇನು ಬಲ್ಲ
ಶ್ರೀ ಕೃಷ್ಣನ ನೆನೆಯದವ ಮಾನವನಲ್ಲ (೪೧)

ಹರಿನಾಮಸ್ಮರಣೆ ಮಾಡದಿದ್ದರೆ ಆಣೆ ಇಡುತ್ತಾ

ಹರಿಯೆನ್ನು ಹರಿಯೆನ್ನು ಹರೆಯೆನ್ನು ಪ್ರಾಣಿ
ಹರಿಯೆನ್ನದಿದ್ದರೆ ನರಹರಿಯಾಣಿ ಪ। (೪೨)

ಎಂದು ಹರಿನಾಮಸ್ಮರಣೆಯ ಅವಶ್ಯಕತೆ ಫಲಗಳನ್ನು ತಿಳಿಸುತ್ತಾರೆ.

**ಪಾದಸೇವನ:** ಭಕ್ತಿ ಎಂಬುದರ ಅರ್ಥವು 'ಪ್ರೀತಿ' ಎಂದು ಕೂಡ ಹೇಳಲ್ಪಡುತ್ತದೆ. ಪದೇ ಪದೇ ಅತೃಪ್ತ ನಯನಗಳಿಂದ ಭಗವಂತನ ಚರಣಾರವಿಂದದ ದರ್ಶನ ಮಾಡುವುದು ಕೈಗಳಿಂದ ಭಗವಂತನ ಪೂಜೆ ಹಾಗೂ ಚರಣ ತೀರ್ಥ ತೆಗೆದುಕೊಳ್ಳುವುದು ಮನಸ್ಸಿನಿಂದ ಭಗವಂತನ ಚರಣಗಳ ಚಿಂತನೆ ಹಾಗೂ ಎಲ್ಲೆಲ್ಲಿ ಭಗವಂತನ ಚರಣಗಳು ನೆಲೆಸಿವೆಯೊ ಅದನ್ನು ಪರಮತೀರ್ಥವೆಂದು ತಿಳಿದುಕೊಳ್ಳುವುದು ಪಾದಸೇವನ ಭಕ್ತಿಯಾಗುತ್ತದೆ. ಮಮತೆ ಅಹಂಕಾರ ಮತ್ತು ಅಭಿಮಾನ ಮೊದಲಾದವುಗಳು ನಾಶವಾಗಿ ಪ್ರಭುವಿನ ಚರಣಗಳಲ್ಲಿ ಅನನ್ಯ ಪ್ರೇಮದ ಪ್ರಾಪ್ತಿ ಉಂಟಾಗುವ ಉದ್ದೇಶದಿಂದ ಪಾದಸೇವನ ಭಕ್ತಿಯು ಮಾಡಲಾಗುತ್ತದೆ. (೮)

**ಪಾದ:** ಬಿಡೆ ನಿನ್ನ ಪಾದ ಬಿಂಕವಿನ್ನೇಕೋ
ಕೊಡು ಮನದಿಷ್ಟವ ಕೋಪವಿದೇಕೋ ಪ।

ನೀರ ಪೊಕ್ಕರು ಬಿಡೆ ಬೆನ್ನಿನೊಳಗೆ ಬಹು
ಭಾರ ಪೊತ್ತನೆಂದರು ಬಿಡೆನು
ಕೋರೆಯ ಮಸೆಯುತ ಕೊರಿಕೊಂಡರು ಬಿಡೆ
ಘೋರ ರೂಪವ ತಾಳಿ ಘರುಘರಿಸಲು ನಾನು ೧।

ತಿರುಕನೆಂದರು ಬಿಡೆ ತಿಳಿದು ತಾಯ ಕೋರಳ
ತಂದೆನೆಂದರು ನಿನ್ನ ನಾ ಬಿಡೆನೂ
ಪೊರೆಯ ಪಿತನ ವಾಕ್ಯ ಕಾಡ ಸೇರಲು ಬಿಡೆ
ಗರಳ ಮಡುವಿನಲ್ಲಿ ಧುಮುಕಿದರು ನಾನು ೨।

ಕಡು ಬತ್ತಲಾಗಿ ಕೈಲಿ ಕಾಸಿಲ್ಲೆಂದರು ಬಿಡೆ
ಒಡನೆ ಹಯವೇರಿ ಓಡಿದರೆ ಬಿಡೆನು
ಪೊಡವಿಯೊಳಗೆ ನಮ್ಮ ಪುರಂದರವಿಠಲನೆ
ಕಡೆ ಹಾಯಿಸುವ ಭಾರ ನಿನ್ನದನಕೆ ನಾನು ೩ (೪೩)

ಇಲ್ಲಿ 'ಪಾದ' ಪ್ರತಿಮೆಯು ಪರಮಾತ್ಮನ ಅನುಗ್ರಹವನ್ನು ಸಂಕೇತಿಸುತ್ತದೆ. ಮೊದಲನೇ ನುಡಿಯಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಹಾಗೂ ಎರಡನೆಯ ನುಡಿಯಲ್ಲಿ ವಾಮನ, ಪರಶುರಾಮ, ರಾಮ ಹಾಗೂ ಕೃಷ್ಣಾವತಾರಗಳ ಬಗ್ಗೆ ಹಾಗೂ ಮೂರನೆ ನುಡಿಯಲ್ಲಿ ಬುದ್ಧ ಹಾಗೂ ಕಲ್ಕಿ ಅವತಾರಗಳ ವರ್ಣನೆ ಮಾಡಲಾಗಿದೆ.

ಭಗವಂತನ ಭಕ್ತರಿಂದ ಕೇಳಿರುವ ಶಾಸ್ತ್ರಗಳಲ್ಲಿ ಓದಿರುವ, ಧಾತು ಮೊದಲಾದುವುಗಳಿಂದ ಮೂಡಿದ ಮೂರ್ತಿ ಅಥವಾ ಭಾವಚಿತ್ರದ ರೂಪದಲ್ಲಿ ನೋಡಿದ ತನ್ನ ಮನಸ್ಸಿಗೆ ರುಚಿಸಿದ ಯಾವುದೇ ಭಗವಂತನ ಸ್ವರೂಪದ ಬಾಹ್ಯ ಸಾಮಗ್ರಿಗಳಿಂದ, ತನ್ನ ಮನಸ್ಸಿಗೆ ಮೆಚ್ಚಿದ ಭಗವಂತನ ಮಾನಸಿಕ ಮೂರ್ತಿಯನ್ನು ಗೈದು ಮಾನಸಿಕ ಸಾಮಗ್ರಿಗಳಿಂದ ಅಥವಾ ಸಂಪೂರ್ಣ ಪ್ರಾಣಿಗಳಲ್ಲಿ ಪರಮಾತ್ಮನು ಸ್ಥಿತನೆಂದು ತಿಳಿದುಕೊಂಡು ಎಲ್ಲರ ಆದರ ಸತ್ಕಾರವನ್ನು ಮಾಡುತ್ತಾ, ಯಥಾಯೋಗ್ಯ ನಾನಾವಿಧ ಉಪಚಾರಗಳಿಂದ ಶ್ರದ್ಧಾ-ಭಕ್ತಿ ಪೂರ್ವಕ ಅವನ ಸೇವೆ ಪೂಜೆ ಮಾಡುವುದು ಮತ್ತು ಅವನ ತತ್ವ ರಹಸ್ಯ ಪ್ರಭಾವವನ್ನು ತಿಳಿದುಕೊಂಡು ಪ್ರೇಮದಲ್ಲಿ ಮುಗ್ಧನಾಗುವುದು ಅರ್ಚನ ಭಕ್ತಿಯಾಗಿದೆ. ಭಗವಂತನ ಅರ್ಚನೆಯನ್ನು ಪೂಜೆಎಂದು ಸಹ ಹೇಳುವುದುಂಟು.

**ಪೂಜೆ:** ಪುರಂದರದಾಸರು ಬಾಹ್ಯ ಪೂಜೆಗಿಂತ ಆಂತರಿಕ ಪೂಜೆಗೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ದೇಹೆಂದ್ರಿಯ ಮನಸ್ಸುಗಳಿಂದ ಮಾಡುವ ಎಲ್ಲ ಕೆಲಸವೂ ಪೂಜೆ ಎಂದೇ ಭಾವಿಸಬೇಕೆಂದು ತಿಳಿಸುತ್ತಾ ಈ ಕೆಳಗಿನಂತೆ ಹೇಳಿದ್ದಾರೆ.

ಸುಲಭ ಪೂಜೆಯ ಮಾಡಿ ಬಲವಿಲ್ಲದವರು
ಮರೆ ಮಾಡುವ ವಸ್ತ್ರ ಪರಮ ಮಡಿಯು
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು
ಹೊರಳಿ ಮಲಗುವದೆಲ್ಲ ಹರಿಗೆ ವಂದನೆಯು ೧

ನುಡಿವ ಮಾತುಗಳೆಲ್ಲ ಕಡಲಶಯನನ ಜಪವು
ಮಡದಿ ಮಕ್ಕಳು ಮತ್ತೆ ಒಡನೆ ಪರಿವಾರ
ನಡುಮನೆಯು ಅಂಗಳವು ಉಡುಪಿ ವೈಕುಂಠಗಳು
ಎಡಬಲದ ಮನೆಯವರು ಕಡುಭಾಗವತರು ೨

ಹೀಗೆ ಅನುದಿನ ತಿಳಿದು ಹಿಗ್ಗುವ ಜನರ ಭವ
ರೋಗ ಪರಿಹರವು ಮೂಜಗದಿ ಸುಖವು
ಹೋಗುತಿದೆ ಈ ಆಯು ಬೇಗದಿಂದಲಿ ನಮ್ಮ
ಯೋಗೇಶ ಪುರಂದರವಿಠಲನ ನೆನೆನೆನೆದು ೩ (೪೪)

ಸುಲಭ ಪೂಜೆಯೆಂದರೆ ಹಣ್ಣು, ಹೂ, ಮುಂತಾದ ಹೊರಗಿನ ಪರಿಕರಗಳು, ಧನದ ವಿಧಿನಿಯಮಗಳ ಅಗತ್ಯವಿರದೆ, ಅಂತರಂಗದಲ್ಲಿ ನಡೆಸುವ ಪೂಜೆ, ಬಲವಿಲ್ಲದವರು, ಎಂದರೆ ವಿದ್ಯಾಬಲ, ಜ್ಞಾನಬಲ, ಸಂಸ್ಕಾರ ಬಲ, ಧನಬಲ, ದೇಹಬಲ ಎಂಬ ಬಲಪಂಚಕವಿಲ್ಲದವರೂ ಕೂಡ ಇದನ್ನು ಮಾಡಬಹುದು. ಆದರೆ ಭಕ್ತಿಯೊಂದು ಅನಿವಾರ್ಯವಾಗಿ ಇದ್ದೇ ಇರಬೇಕು. ಆಂತರಿಕ ಭಕ್ತಿ ಇಲ್ಲದೆ ಭಗವಂತನಲ್ಲಿ ಮನಸ್ಸು ನಿಲ್ಲಿಸದೇ ಪೂಜೆ ಮಾಡುವುದು ವ್ಯರ್ಥ ಎಂದು ಈ ಕೆಳಗಿನಂತೆ ಹೇಳಿದ್ದಾರೆ.

**ಪೂಜೆ:** ಪೂಜೆ ಯಾತಕೋ ಮನುಜ ಪೂಜೆ ಯಾತಕೋ ಪ।

ಪೂಜೆಯಲಿ ನಿನ್ನ ಮನ ನಿಲ್ಲದಿದ್ದ ಮೇಲೆ ನಿನಗೆ ಅ।
. . . . . . . . . . . . . . . . . . . . . . . .
ಪೂಜೆಯಲಿ ಪಾಪ ಬುದ್ಧಿ
ಜಾಜಿ ತುಳಸಿ ಕೈಯಲಿ
ಮೂಜಗದೊಡೆಯ ಅವನು ಎಲ್ಲಿ
ಮಾರ್ಜಾಲದಂತೆ ನೋಟದಲಿ ೩।
. . . . . . . . . . . . . . . . . . . . . . . . (೪೫)

ಡಾಂಬಿಕ ಪೂಜೆಯನ್ನು ತಿರಸ್ಕರಿಸುತ್ತಾ ದಾಸರು ಹೀಗೆ ಹೇಳಿದ್ದಾರೆ.

**ಪೂಜೆ:** ಉದರ ವೈರಾಗ್ಯವಿದು, ನಮ್ಮ
ಪದಮನಾಭನಲಿ ಲೇಶ ಭಕುತಿಯಿಲ್ಲ ಪ।

ಕಂಚುಗಾರನ ಬಿಡಾರದಿಂದದಿ
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ
ಮಿಂಚಬೇಕೆಂದು ಬಲು ಜ್ಯೋತಿಗಳನ್ನು ಹಚ್ಚಿ
ವಂಚನೆಯಿಂದಲಿ ಪೂಜೆ ಮಾಡುವುದು ೨। (೪೬)

ಕಂಚು ಹಿತ್ತಾಳೆ ಕೆಲಸಗಾರರು ತಾವು ಮಾಡಿ ಎರಕ ಹೊಯ್ದ ಪೂಜಾ ಮೂರ್ತಿಗಳನ್ನು ಮಾರಾಟಕ್ಕೆಂದು ತಮ್ಮ ಮನೆಗಳಲ್ಲಿ ಸಾಲಾಗಿ ಜೋಡಿಸಿರುತ್ತಾರೆ. ಅವನ್ನು ಅವರೇನು ಪೂಜಿಸುವುದಿಲ್ಲ ಅದರಂತೆ ಮನೆಯಲ್ಲಿ ದೇವರ ಅನೇಕ ಪ್ರತಿಮೆಗಳನ್ನು ಇಟ್ಟುಕೊಂಡು ಭಕ್ತಿಯಿಲ್ಲದೆ ಬಾಹ್ಯಸಾಧನಗಳಿಂದ ಪೂಜಿಸುವುದು ವ್ಯರ್ಥ ಎಂದು ದಾಸರು ಹೇಳಿರುತ್ತಾರೆ. ಪರಮಾತ್ಮನ ಪೂಜೆಯಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳು ಮುಖ್ಯವಾಗಿವೆ. ಪೂಜೆ ಮಾಡುವಾಗ ಮಡಿ [ಶುದ್ಧವಾದ] ಬಟ್ಟೆಯನ್ನು ಉಡುವುದು ಸಾಮಾನ್ಯ ಸದಾಚಾರಕ್ಕಾಗಿ ಬೇಗನೆ ಒದಗುವಂತಹ 'ಲಂಗೋಟಿ'ಯನ್ನು ವೈರಾಗ್ಯದ ಸಂಕೇತವಾಗಿ ಬಳಸಿ ಅದರ ಮಹತ್ವವನ್ನು ಹೀಗೆ ತಿಳಿಸಿದ್ದಾರೆ.

**ಲಂಗೋಟಿ:** ಲಂಗೋಟಿ ಬಲು ಒಳ್ಳೆದಣ್ಣ, ಒಬ್ಬರ
ಹಂಗಿಲ್ಲದಂತೆ ಆಚಾರಕ್ಕೆ ಒದಗುವ ಪ।

ಬಡವರಿಗಾಧಾರವಣ್ಣ ಈ ಲಂಗೋಟಿ
ಬೈರಾಗಿಗಳ ಭಾಗ್ಯವಣ್ಣ
ಕಡು ಕಳ್ಳರಿಗೆ ಗಂಡ, ಮಡಿ ಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ ೧।

. . . . . . . . . . . . . . . . . . . . . .
. . . . . . . . . . . . . . . . . . . . . . (೪೭)

ಇಲಿ ಲಂಗೋಟಿಯೆಂದರೆ ಮೊಳಕಾಲಿನಿಂದ ಮೇಲೆ ಸೊಂಟಕ್ಕೆ ಸುತ್ತುವ ತುಂಡು ಬಟ್ಟೆ. ಇದನ್ನು ಸನ್ಯಾಸಿಗಳೂ, ವ್ರತವುಳ್ಳ ಬ್ರಹ್ಮಚಾರಿಗಳೂ ಧರಿಸುತ್ತಾರೆ. ಇದಕ್ಕೆ ದುಡ್ಡು ಕಡಿಮೆ, ಕಳ್ಳಕಾಕರ ಭಯವಿಲ್ಲ, ಮಡಿವಾಳರಿಗೆ ಕೊಟ್ಟು ತೊಳಿಸಬೇಕೆಂಬುದಿಲ್ಲ. ಬಡವರಿಗಾಧಾರವಾದ ಈ ಲಂಗೋಟಿಯನ್ನು ವಾಮನಾವತಾರ ದಲ್ಲಿ ಶ್ರೀ ಹರಿಯು ಬ್ರಹ್ಮಚಾರಿಯ ವೇಷದಲ್ಲಿ ಧರಿಸಿದ್ದನು. ಬೇಗನೆ ಮಡಿಗೆ ಒದಗುವಂಥ ಈ ಲಂಗೋಟಿ ವಸ್ತ್ರಗಳ ಮೇಲಿನ ವೈರಾಗ್ಯವನ್ನು ಸಂಕೇತಿಸುತ್ತದೆ.

**ವಂದನೆ** : ಶಾಸ್ತ್ರಗಳಲ್ಲಿ ವರ್ಣಿತವಾದ ಭಗವಂತನ ಸ್ವರೂಪ, ಭಗವಂತನನಾಮ, ಭಗವಂತನ ಮೂರ್ತಿ, ಭಾವಚಿತ್ರ ಅಥವಾ ಮಾನಸಿಕ ಮೂರ್ತಿಯನ್ನು ತನು, ಮನದಿಂದ ಶ್ರದ್ಧಾಸಹಿತ ನಮಸ್ಕಾರ ಮಾಡುವುದು ವಂದನೆ ಭಕ್ತಿಯಾಗಿದೆ. ಪುರಂದರದಾಸರು ಗಣೇಶನನ್ನು ವಂದಿಸುತ್ತಾ ಅವನನ್ನು ಕುರಿತು ರಚಿಸಿರುವ ಪದವೊಂದು ಇಲ್ಲಿದೆ.

**ಗಜವದನ :** ಗಜವದನ ಬೇಡುವೆ ಗೌರೀತನಯ ।ಪ।

ತ್ರಿಜಗ ವಂದಿತನೆ ಸುಜನರ ಪೊರೆವನೆ ।ಅ।

ಪಾಶಾಂಕುಶಧರ ಪರಮ ಪವಿತ್ರ
ಮೂಷಿಕ ವಾಹನ ಮುನಿಜನ ಪ್ರೇಮ ।೧।

ಮೋದದಿ ನಿನ್ನಯ ಪಾದವ ತೋರೋ
ಸಾಧುವಂದಿತನೆ ಆದರದಿಂದಲಿ ।೨।

ಸರಸಿಜನಾಭ ಶ್ರೀ ಪುರಂದರವಿಠಲನ
ನಿರುತ ನೆನೆಯುವಂತೆ ದಯಮಾಡೋ ।೩। (೪೮)

ಸಾಮಾನ್ಯ ಅರ್ಥದಲ್ಲಿ ಈ ಕೀರ್ತನೆಯಲ್ಲಿ ದಾಸರು ಗಣೇಶನಿಗೆ ವಂದಿಸಿದ್ದಾರೆ. ಸಾದುಗಳಿಂದ ವಂದಿತನಾದಸುಜನರ ಪೊರೆವ ಗಣೇಶನ ವಾಹನವು ಮೂಷಕ ಎಂದರೆ ಇಲಿ. ಇಲಿಯು ಧಾನ್ಯಗಳನ್ನು, ತಿಂಡಿಯನ್ನು ಕದ್ದೊಯ್ಯುವುದು. ಅದು ಮನಸ್ಸನ್ನು ಸಂಕೇತಿಸುತ್ತದೆ. ವಿಶಯಸುಖಗಳನ್ನು ಆಸೆ ಪಡುವ ಮನಸ್ಸು ಇಂದ್ರಿಯಗಳನ್ನು ಇಲಿಗೆ ಹೋಲಿಸಿದ್ದಾರೆ.

ನಾಶಕ್ಕೆ ಸೆಳೆಯುವ ಆಕರ್ಷಣೆಗಳನ್ನು ಪಾಶವು ಸಂಕೇತಿಸಿದರೆ,ಮನಸ್ಸಿನ ಸ್ಥಿರತೆಯನ್ನು ಅಂಕುಶವು ಸಂಕೇತಿಸುತ್ತದೆ.

**ದಾಸ್ಯ:** ಭಗವಂತನ ಗುಣ, ತತ್ವ, ರಹಸ್ಯ ಮತ್ತು ಪ್ರಭಾವವನ್ನು ತಿಳಿದುಕೊಂಡು ಶ್ರದ್ಧಾ ಪ್ರೇಮ ಪೂರ್ವಕ ಅವನ ಸೇವೆ ಮಾಡುವುದು ಮತ್ತು ಅವನ ಆಜ್ಞೆಯ ಪಾಲನೆ ಮಾಡುವುದು ದಾಸ್ಯ ಭಕ್ತಿಯಾಗಿದೆ. 'ಜೀವಗಣಾಃ ಹರೇರನುಚರಾಃ'ಎಂದು ವ್ಯಾಸರಾಯರು ಹೇಳಿದ್ದಾರೆ. ಸಕಲಜಗದೊಡೆಯನಾದ ಸರ್ವೋತ್ತಮ

ನಾದವನು ಶ್ರೀ ಹರಿಯು ಹಾಗೂ ಜೀವಸಮೂಹವು ಅವನ ದಾಸರು. ಪುರಂದರದಾಸರು ಕೂಡ ಈ ದಾಸಪರಂಪರೆಯ ಆದರ್ಶಗಳನ್ನು ಪಾಲಿಸಿಕೊಂಡು ಬಂದವರು. ಭಗವಂತನಲ್ಲಿ ಭಕ್ತಿಯಿಲ್ಲದೆ ಈ ದಾಸತ್ವ ಸಾಧ್ಯವಿಲ್ಲ ಆದನ್ನೇ ಪುರಂದರದಾಸರು ಹೀಗೆ ಹೇಳಿದ್ದಾರೆ.

**ದಾಸ:** ದಾಸನೆಂತಾಗುವನು ಧರೆಯೊಳಗೆ ನಾನು ಪ।
ವಾಸುದೇವನಲಿ ಲೇಶಭಕುತಿ ಕಾಣೆ ಅ। (೪೯)

ಪರಮಾತ್ಮನನ್ನು ತಮ್ಮ ಒಡೆಯನೆಂದು ತಿಳಿದ ದಾಸರು ಅವನನ್ನು ಸೇವಿಸುವ ಬಗೆಗಳನ್ನು ಒಡೆಯ ಸುಳಾದಿಯಲ್ಲಿ ಈ ಕೆಳಗಿನಂತೆ ಹೇಳಿದ್ದಾರೆ.

**ದಾಸ:** ಒಡೆಯ ನೀನಡಿಯಿಡೆ ಹಾವಿಗೆಯವನಾಮ
ಒಡೆಯ ಮೆಲ್ಲಡಿಯಿಡಲು ಕಟ್ಟಿಗೆಯವ ನಾನು
ಒಡೆಯ ತಾಂಬೂಲವನುಗುಳುವೆಡೆಯಲ್ಲಿ
ಪಡಿಗ ಕಾಳಂಜಿ ಪಿಡಿಯುವವ ನಾನು
ಒಡೆಯನೊಡ್ಡೊಲಗದಿ ಒಪ್ಪುತಲಿರೆ ಕನ್ನಡಿ
ಛತ್ರ ಚಾಮರ ಪಿಡಿಯುವವ ನಾನು
ಒಡೆಯ ಪುರಂದರವಿಠಲರಾಯನ
ಉಗುರು ಇಟ್ಟಲ್ಲಿ ಶಿರವ ಕೊಡುವೆ ನಾನು ೧।
. . . . . . . . . . . . . . . . . . . . (೫೦)

ಹರಿಯು ನಡೆಯುತಿರಲು ತಾನು ಮೆಟ್ಟ ಹಾವುಗೆ ಇಡುವವನೆಂದು ಹರಿಯು ಮೆಲ್ಲಡಿಯಿಡಲು ತಾನು ಬೆಳ್ಳಿಯಕೋಲನ್ನು ಹಿಡಿದು ದಾರಿಬಿಡಿಸುತ್ತ ಮುಂದೆ ಸಾಗುವವ [ಕಟ್ಟಿಗೆಯವ] ನೆಂದೂ ಹೇಳುತ್ತಾ ಪರಮಾತ್ಮನು ಈ ಜಗತ್ತಿಗೆ ಒಡೆಯನೆಂದು ತಿಳಿಸುತ್ತಾರೆ.

**ದಾಸ:** ಒಡೆಯ ನೀನೆನಗೆ ಅನಾದಿ ಕಾಲದಿಂದ
ಬಡವನು ನಾ ನಿನ್ನ ದಾಸನು ಸತ್ಯ
ಕಡುಕರುಣದಿಂದ ಬರಲಿಬೇಕೋ ಗ
ರುಡಗಮನ ವೆಂಕಟೇಶ ಎನ್ನಮನೆಗೆ
. . . . . . . . . . . . . . . . . (೫೧)

ಪುರಂದರದಾಸರು ಪರಮಾತ್ಮನನ್ನು ತನ್ನ ಮನೆಗೆ ಬರಬೇಕೆಂದು ಕರೆಯುತ್ತಾ, ಕರುಣಾಸಂಪನ್ನನಾದ ತಾನು ಎನ್ನ ಮನಸ್ಸನ್ನು ನೋಯಿಸದೇ ದಾಸನ್ನ ಮಾಡಿಕೋ ಎನ್ನುತ್ತಿದ್ದಾರೆ.

**ದಾಸ:** ದಾಸನ್ನ ಮಾಡಿಕೊ ಎನ್ನ, ಇಷ್ಟು
ಘಾಸಿ ಮಾಡುವರೇನೊ ಕರುಣಾಸಂಪನ್ನ ಅ।
ದುರುಳ ಬುದ್ಧಿಗಳೆಲ್ಲ ಬಿಡಿಸೋ ನಿನ್ನ
ಕರುಣ ಕವಚವೆನ್ನ ಹರಣಕ್ಕೆ ತೊಡಿಸೊ
ಚರಣ ಸೇವೆ ಎನಗೆ ಕೊಡಿಸೊ
ಅಭಯಕರ ಪುಷ್ಪ ಎನ್ನಯ ಶಿರದೊಳು ಮುಡಿಸೊ ೧।
. . . . . . . . . . . . . . . . . . . . . . (೫೨)

ಪರಮಾತ್ಮನ ಅಭಯವೆಂಬ ಹೂವನ್ನು ತನ್ನ ಶಿರದಲ್ಲಿ ಧರಿಸಬೇಕೆಂದು ಬಯಸಿದ ಪುರಂದರದಾಸರು ಹರಿದಾಸರಿಗೆ ಮಾನ, ಅಪಮಾನ, ಕಷ್ಟಗಳ ಭಯವಿಲ್ಲವೆಂದು ಈ ಕೆಳಗಿನಂತೆ ಹೇಳಿದ್ದಾರೆ.

**ದಾಸ:** ಯಾರು ಒಲಿದರೇನು ನಮಗಿನ್ನಾರು ಮುನಿದರೇನು ಪ।

ಕ್ಷೀರಸಾಗರ ಶಾಯಿಯಾದವನ ಸೇರಿದಂತೆ ಹರಿದಾಸರಿಗೆ ಅ।

ಊರನಾಳುವದೊರೆಗಳು ನಮ್ಮನ್ನು ದೂರ ಅಟ್ಟಿದರೇನು
ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು
ಮಾರಿಹಿಂಡು ಮತ್ತೆ ಮುಸುಕಿನ ದಂಡು ಮೈಗೆ ಮುತ್ತಿದರೇನು
ವಾರಿಜನಾಬನ ವಸುದೇವಸುತನ ಸಾರುವಂಥ ಹರಿದಾಸರಿಗೆ ೧।(೫೩)

**ಸಖ್ಯ:** ಶ್ರೀ ಭಗವಂತನ ಪ್ರಭಾವ, ಮಹಿಮೆಗಳನ್ನು ತಿಳಿದುಕೊಂಡು ಪರಮ ವಿಶ್ವಾಸಪೂರ್ವಕ ಮಿತ್ರಭಾವದಿಂದ ಅವನನ್ನು ಅನನ್ಯ ಭಜಿಸುವುದು ಸಖ್ಯ ಭಕ್ತಿಯಾಗಿದೆ. ಈ ಶರೀರವೆಂಬ ಮರದಲ್ಲಿ ಜೊತೆಗೆ ಇರುವ ಗೆಳೆಯರಾದ ಎರಡು ಹಕ್ಕಿಗಳೆಂದು ಜೀವಾತ್ಮ ಪರಮಾತ್ಮರನ್ನು ಉಲ್ಲೇಖಿಸುವ ಮೂಲಕ ಪರಮಾತ್ಮನು ಜೀವಾತ್ಮನ ಜೊತೆಗೆ ಇರುವ ಗೆಳೆಯನೆಂದು (ಅಥರ್ವಣೋಪನಿಷತ್ತು) ಅಭಿಪ್ರಾಯಪಟ್ಟಿದೆ. ಪರಮಾತ್ಮನ ಈ ಗೆಳೆತನವನ್ನು ಗುರುತಿಸಿಕೊಂಡಾಗ ಅವನು ಕೃಷ್ಣಾವತಾರದಲ್ಲಿ ಪಾಂಡವರು, ಸುದಾಮ ಮುಂತಾದವರಿಗೆ ಹೇಗೆ ಗೆಳೆಯನಾಗಿ ಅನುಗ್ರಹಿಸಿರುವನೋ ಅಂತೆಯೆ ನಮ್ಮ ಪಾಲಿಗೂ ಅವನ ಗೆಳೆತನವನ್ನು ಗುರುತಿಸಿಕೊಳ್ಳಬೇಕು. ಪುರಂದರದಾಸರ ನಿಂದಾಸ್ತುತಿಯಲ್ಲಿ ಅಂತಹ 'ಸಖ್ಯ' ಭಕ್ತಿಯ ಉಲ್ಲೇಖ ಕಾಣುವೆವು.

**ಸಖ್ಯ:** ಹೂವತರುವರ ಮನೆಗೆ ಹುಲ್ಲ ತರುವ ಪ।
ಅವ್ವೆ ಲಕುಮಿ ರಮಣ ಇವಗಿಲ್ಲ ಗರುವ (೫೪)

ಜಗತ್ತಿನ ಐಶ್ವರ್ಯಕ್ಕೆಲ್ಲ ಅಧಿದೇವತೆಯಾದ ಲಕ್ಷ್ಮೀಯ ಗಂಡನಾದರೂ ಅವನಿಗೇನು ಹೆಮ್ಮೆಯಿಲ್ಲ. ಬಿಂಕವಿಲ್ಲ, ಬಿಗುಮಾನವಿಲ್ಲ. ಭಕ್ತಿಯಿಂದ ಸ್ನೇಹಿತನಾಗಿ ಕರೆದರೂ ಬಂದು ಸಹಾಯ ಮಾಡುವ ಪರಮಾತ್ಮನು ಪ್ರೀತಿಯಿಂದ ಜನರನ್ನು ಸಲಹುವನು.

**ಆತ್ಮನಿವೇದನ:** ಭಕ್ತನು ತನು, ಮನ, ಧನ, ಜನಸಹಿತ ತನ್ನನ್ನು ಹಾಗೂ ತಾನು ಮಾಡುವ ಕರ್ಮಗಳನ್ನು ಶ್ರದ್ಧಾ ಪರಮ ಪ್ರೇಮ ಪೂರ್ವಕ ಭಗವಂತನಿಗೆ ಅರ್ಪಿಸಿಬಿಡುವುದು ಆತ್ಮನಿವೇದನೆ ಭಾವರೂಪೀ ಭಕ್ತಿಯಾಗಿದೆ. ಪುರಂದರದಾಸರು ಪರಮಾತ್ಮನ ಅನುಗ್ರಹಕ್ಕಾಗಿ ಈ ಕೆಳಗಿನಂತೆ ಕೇಳುತಿದ್ದಾರೆ.

**ಬಲೆ:** ಜಯ ಪಾಂಡುರಂಗ ನಾನಿನ್ನ ಮನಕೆ ಬಾರೆನೆ ರಂಗ ಪ।

ನಾ ನಿನ್ನ ಮನಕೆ ಬಾರನೆ, ಬಂದರೆ ಈ ಭವದ
ಬಲೆಯೊಳು ಸಿಲುಕುವೆನೆ, ಜಯ ಪಾಂಡುರಂಗ ಅ।

ಕೆಟ್ಟ ಕಿರಾತಕನ, ಬೆಟ್ಟದಂಥ ಪಾಪವ
ಸುಟ್ಟ ವಾಲ್ಮಿಕಿ ಎನಿಸಿದ್ಯೋ, ಜಯಪಾಂಡುರಂಗ ೧।

ಅತಿ ಭ್ರಷ್ಟ ಅಜಾಮಿಳನ, ಅಂತ್ಯಸಮಯದಲ್ಲಿ
ಅಂತಕನ ಬಾಧೆ ಬಿಡಿಸಿದ್ಯೋ, ಜಯಪಾಂಡುರಂಗ ೨।(೫೫)

ಈ ಪದದಲ್ಲಿ ವಾಲ್ಮಿಕಿ, ಅಜಾಮಿಳ, ಕುಬ್ಜೆ, ಶಬರಿ, ದ್ರೌಪದಿ, ಗಂಡಕಿ ಮತ್ತು ವಿದುರ ಇವರನ್ನು ಹರಿಯು ಉದ್ಧರಿಸಿದುದನ್ನು ಹೇಳುತ್ತಾ ತಮ್ಮನ್ನು ಕೂಡಾ ಉದ್ಧರಿಸಲು ನಿವೇದನೆ ಮಾಡಿಕೊಳ್ಳುತ್ತಿದ್ದಾರೆ. ಭವದ ಭಲೆಯೆಂಬುದು ಇಲ್ಲಿ ಸಂಸಾರವನ್ನು ಸಂಕೇತಿಸುತ್ತದೆ. ಇಂಥಹ ಸಂಸಾರವನ್ನು ನೀಗಿಸಲಾರೆನೆಂದು ಹೀಗೆ ಹೇಳುತ್ತಾರೆ.

**ತೆರೆ:** ಸಾಕು ಸಂಸಾರ ತೆರೆಯೆ ನೂಕಲಾರೆನು
ಬೇಕು ನಿನ್ನಚರಣ ಕಮಲ ಬೇರೆ ಅನ್ಯತ್ರಗತಿಯ ಕಾಣೆ
. . . . . . . . . . . . . . . . . . . (೫೬)

ಸಂಸಾರವನ್ನು, ತೆರೆಗೆ ಹೋಲಿಸಿ. ಅದರಿಂದ ಮುಕ್ತಿ ಹೊಂದಲು ಭಗವಂತನ ಅನುಗ್ರಹಕ್ಕಾಗಿ ದಾಸರು ಮೊರೆ ಇಡುತ್ತಿದ್ದಾರೆ.

**ಸಿಕ್ಕು:** ಮರ್ಕಟನ ಕೈನೂಲ ಕುಕ್ಕಡಿಯ ತೆರನಂತೆ
ಸಿಕ್ಕಿಕೊಂಡು ಕಾಮಕ್ರೋಧ ಮೋಹಗಳನ್ನ
ಹಕ್ಕಿ ಹೀರುತಲಿವೆ ಎಕೆ ನೋಡತಲಿರುವೆ
ಅಕ್ಕಟಕ್ಕಟ ನಿನ್ನ ದಾಸನೋ ನಾನು
ಸಿಕ್ಕ ಬಿಡಿಸಿ ನಿನ್ನ ಭಕ್ತಿಯ ತೋರೊ
ಪಕ್ಷಿವಾಹನ ನಮ್ಮ ಪುರಂದರವಿಠಲ
. . . . . . . . . . . . . . . . . . . . (೫೭)

ಮರ್ಕಟವೆಂದರೆ ಕೋತಿ. ಕೋತಿಪ್ರತಿಮೆಯು ಕೈಯಲ್ಲಿ ಸಿಕ್ಕ ದಾರದ ಉಂಡೆಯಂತೆ ಸಂಸಾರದಲಿ ಕಾಮ ಕ್ರೋಧಗಳಿಗೆ ಸಿಕ್ಕಿ ಹಾಕಿಕೊಂಡಿರುವ ಜೀವಿಯನ್ನು ಸಂಕೇತಿಸುತ್ತದೆ. ಇಂದ್ರಿಯಗಳ ದಾಸನಾದ ತನನ್ನು ಈ ಸ್ಥಿತಿಯಿಂದ ಪಾರುಮಾಡಲು ದಾಸರು ಪರಮಾತ್ಮನನ್ನು ಕೇಳಿಕೊಳ್ಳುತ್ತಿದ್ದಾರೆ.

**ಒಡೆಯ:** ಯಾವಾಗಲು ಹೇಳಬಾರದೆ ವಾಸು
ದೇವನೆ ಕೈಬಿಡಬೇಡವೆಂದೆನುತಲಿ ಪ।
. . . . . . . . . . . . . . . . . . .
ಮಡದಿ ಮಕ್ಕಳು ಇಲ್ಲಿ ಒಡವೆ ವಸ್ತುಗಳಿಲ್ಲ
ಪಡೆದ ತಾಯಿತಂದೆಯೊಬ್ಬರಿಲ್ಲ
ಎಡಹಿ ಬೀಳುತಲಿರೆ ಎತ್ತಿಕೊಂಬುವರಿಲ್ಲ
ಒಡೆಯನೆ ಕೈಬಿಡಬೇಡವೆಂದೆನುತಲಿ
. . . . . . . . . . . . . . . . . . . ౨। (೫೮)

ಇಲ್ಲಿ ಒಡೆಯ ಪ್ರತಿಮೆ ಭಗವಂತನನ್ನು ಸಂಕೇತಿಸುತ್ತದೆ. ತಂದೆ, ತಾಯಿ, ಬಂಧು ಬಳಗದವರೆಲ್ಲರೂ ಇದ್ದಾಗಲೂ ಅವರು ಕಷ್ಟಕಾಲಕ್ಕೆ ಸಹಾಯಕ್ಕೆ ಬರದಿದ್ದರೆ ಒಡೆಯನಾದ ವಾಸುದೇವನು ಕಾಯುವನೆಂಬ ನಂಬಿಕೆ ಇರಬೇಕು ಎಂಬ ತಾತ್ಪರ್ಯ ಇಲ್ಲಿ ಮೂಡಿದೆ.

ಪುರಂದರದಾಸರ ಕೀರ್ತನೆಗಳಲ್ಲಿ ಮಾಧ್ವ ದರ್ಶನವನ್ನು ತಿಳಿಸುವ ಪ್ರತಿಮೆಗಳು.

ದಾಸಸಾಹಿತ್ಯ ಪ್ರಧಾನವಾಗಿ ಭಕ್ತಿ ಸಾಹಿತ್ಯ ಭಾರತೀಯ ದರ್ಶನಗಳಲ್ಲಿ ಒಂದಾದ ದ್ವೈತತತ್ವವನ್ನು ಮಧ್ವಾಚಾರ್ಯರು ಪ್ರಚಾರಕ್ಕೆ ತಂದರು. ಅತಂಹ ತತ್ವದಲ್ಲಿ ಪುರಂದರದಾಸರ ಕೀರ್ತನೆಗಳಲ್ಲಿ,ಮಧ್ವಮತದ ಮೂಲತತ್ವಗಳಾದ ನಿರ್ಮಲ ಭಕ್ತಿ, ಪಂಚಭೇಧ ಮತ್ತು ತಾರತಮ್ಯ ಇವುಗಳನ್ನು ಬಹುಸ್ವಾರಸ್ಯವಾಗಿ ವರ್ಣಿಸಿದ್ದಾರೆ.

ವಾತ್ಸಲ್ಯ ಭಕ್ತಿಯಲ್ಲಿ ಬರುವ 'ಕೂಸು' ಪ್ರತಿಮೆಯು ಪರಮಾತ್ಮನನ್ನು ಕುರಿತು ಏನು ಹೇಳುತ್ತದೆ ಎಂಬುದನ್ನು ತಿಳಿಯುವ.

**ಕೂಸು:** ಕೂಸನು ಕಂಡಿರಾ ಜ್ಞಾನಿಗಳೆಲ್ಲ ಕೂಸನು ಕಂಡೀರಾ ಪ||
ಸಾಸಿರಾ ನಾಮದ ಶತಕೋಟಿ ತೇಜದ
ಸೂಸುವ ಸುಖಮಯ ಜ್ಞಾನದ ಕೂಸು ಅ||

ಜ್ಞಾನ ಸಮುದ್ರದೊಳಾಡುವ ಕೂಸು
ಜ್ಞಾನಿಗಳ ಹೃದಯದಿ ಹೊಳೆಯುವ ಕೂಸು
ದೀನದಾಸರಿಗೆ ಕಾಣುವ ಕೂಸು.
ತಾನೆ ಬಲ್ಲದು ತನ್ನ ಮಹಿಮೆಯ ಕೂಸು ೧||
. . . . . . . . . . . . . . . . . . . . . (೫೯)

ಈ ಕೀರ್ತನೆಯಲ್ಲಿ ಪುರಂದರದಾಸರು ಕೂಸನು ಕಂಡೀರಾ? ಎಂದು ಭಕ್ತರನ್ನು ಪ್ರಶ್ನೀಸುತ್ತಿದ್ದಾರೆ. ವಿಷ್ಣು ಸಹಸ್ರನಾಮದಲ್ಲಿರುವ ಹೆಸರುಗಳಿಂದ ಕಂಗೊಳಿಸುವ ಮಹಾತ್ಮ್ಯಜ್ಞಾನದಲ್ಲಿ ಬಿಂಬರೂಪವಾಗಿ, ಆರ್ತಭಕ್ತಿಯುಳ್ಳ ವರಿಗೆ ಈ ಕೂಸು ಕಾಣುವುದು ಎಂದು ತಿಳಿಸುತ್ತಾರೆ. ಅಷ್ಟೇ ಅಲ್ಲದೆ ಭಗವನ್ಮಹಾತ್ಮೆಯನ್ನು ಸಂಪೂರ್ಣವಾಗಿ ಅರಿಯಲು ಲಕ್ಷ್ಮೀಗೂ ಸಾಧ್ಯವಿಲ್ಲವಾದ್ದರಿಂದ ತನ್ನ ಮಹಿಮೆಯನ್ನು ತಾನೆ ಬಲ್ಲನು ಎಂದು ತಿಳಿಸುತ್ತಾರೆ.

**ಕೂಸು:** ಕೂಸಿನ ಕಂಡೀರಾ ಗೋಪಾಲಕೃಷ್ಣನ ಕಂಡೀರಾ ಪ||

ಅಂದಿಗೆ ಅರಳೆಲೆ ಇಟ್ಟಿತ್ತು ಕೂಸು
ಮುಂಗೈ ಬಾಪುರಿ ಇಟ್ಟಿತ್ತು ಕೂಸು
ಬಿಂದಲಿ ಸರಪಳಿ ಹಾಕಿತ್ತು ಕೂಸು
ಅಂಗಳದೊಳಗಿಂದ ಹೋಗ್ಯದೆ ಕೂಸು ೧||
. . . . . . . . . . . . . . . . . .
. . . . . . . . . . . . . . . . . .
ಹುಲಿಯುಗುರಿನ ಸರ ಹಾಕಿತ್ತುಕೂಸು
ಬೆರಳಲಿ ಉಂಗುರ ಇಟ್ಟಿತ್ತು ಕೂಸು
ಕಿವಿಯೊಳು ಚೌಕುಳಿ ಇಟ್ಟಿತ್ತು ಕೂಸು
ಕುಳಿತಿದ್ದ ಠಾವಲಿ ಕುಳಿತಿಲ್ಲ ಕೂಸು
. . . . . . . . . . . . . . . . . . (೬೦)

ಕೈಗಳಿಗ, ಕಾಲಿಗೆ, ಕೊರಳಿಗೆ ಮಕ್ಕಳಿಗೆ ಹಾಕುವ ಆಭರಣಗಳೆಲ್ಲವನ್ನು ಇಲ್ಲಿ ಉಲ್ಲೇಖಿಸಿದ್ದು 'ಕೂಸು' ಪ್ರತಿಮೆ ಕೃಷ್ಣನ ಬಾಲರೂಪವನ್ನು ಮೂರ್ತ ಗೊಳಿಸುತ್ತದೆ.

**ಕೂಸು:** ಕೂಸಿನ ಕಂಡೀರಾ ಮುಖ್ಯ ಪ್ರಾಣನ ಕಂಡೀರಾ ಪ।

ಬಾಲನ ಕಂಡೀರಾ ಬಲವಂತನ ಕಡೀರಾ ಅ।

ಅಂಜನೆ ಉದರದಿ ಜನಿಸಿತು ಕೂಸು
ರಾಮರ ಪಾದಕ್ಕೆರಗಿತು ಕೂಸು
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು ೧।

ಭಂಡಿ ಅನ್ನವ ನುಂಗಿತು ಕೂಸು
ಬಕನ ಪ್ರಾಣವ ಕೊಂಡಿತು ಕೂಸು
ವಿಷದ ಲಡ್ಡುಗೆಯ ಮೆದ್ದಿತು ಕೂಸು
ಮಡದಿಗೆ ಪುಷ್ಪವ ಕೊಟ್ಟಿತು ಕೂಸು ೨।

ಮಾಯವೆಲ್ಲ ಗೆದ್ದಿತು ಕೂಸು
ಮಧ್ವಮತವನುದ್ಧರಿಸಿತು ಕೂಸು
ಪುರಂದರವಿಠಲನ ದಯದಿಂದ ಕೂಸು
ಸುಮ್ಮನೆ ಉಡುಪಿಲಿ ನಿಂತಿತು ಕೂಸು ೩। (೬೧)

'ಕೂಸು' ಪ್ರತಿಮೆಯ ಮೂಲಕ ಇಲ್ಲಿ ಹನುಮ, ಭೀಮ, ಮಧ್ವರ ಅವತಾರಗಳ ಸಂಕ್ಷಿಪ್ತ ಪರಿಚಯವಿದೆ. ಶಬ್ದಗಳಲ್ಲಿ ಕ್ಲಿಷ್ಟತೆಯಿಲ್ಲ. ಉಚ್ಚಾರದಲ್ಲಿ ಕಠಿಣತೆಯಿಲ್ಲ. ಅರ್ಥದಲ್ಲಿ ತೊಡಕಿಲ್ಲದೆ ಒಂದು ಸುಂದರವಾದ ಶಿಶು ಸಾಹಿತ್ಯ ಮೂಡಿ ಬಂದಿದೆ.

**ಸೇವಕ:** ಸೇವಕ ತನದ ರುಚಿಯೇನರಿದ್ಯೊ ಪ।

ದೇವ ಹನುಮರಾಯ ವೈರಾಗ್ಯ ಬೇಡಿ ಅ।

ಉದಧಿಯ ದಾಟಿ ಸೀತೆಯ ಕಂಡು ಬಂದಾಗ
ಮದುವೆಯ ಮಾಡೆನ್ನಬಾರದಿತ್ತೆ
ಪದದಿ ಪಾಷಾಣ ಪೆಣ್ಣ ಮಾಡಿದವನಿಗೆ
ಇದು ಏನಾಶ್ಚರ್ಯವೊ ನೀ ಬಯಸಲೊಲ್ಲದೆ ೧।
. . . . . . . . . . . . . . . . . . .
ಸಾರ್ವಭೌಮನು ತಾನೆ ಮೆಚ್ಚಿ ಬಂದಾಗಲೇ
ಉರ್ವಿಯ ಬೇಡಲು ಕೊಡದಿಹನೆ
ಸರ್ವವ ತೊರೆದು ಶ್ರೀ ಪುರಂದರವಿಠಲನ
ನಿರ್ವಾಜ್ಯ ಭಕುತಿಯ ಬೇಡಿಕೊಂಡ್ಯಲ್ಲದೆ ೩। (೬೨)

'ಸೇವಕ' ಪ್ರತಿಮೆಯು ಹನುಮಂತನನ್ನು ಸಂಕೇತಿಸುತ್ತದೆ. ಈ ಕೀರ್ತನೆ ಸಂಭಾಷಣೆಯ ರೂಪದಲ್ಲಿರುವ ಅಭಿವ್ಯಕ್ತಿಪ್ರಕಾರ ಯಾವ ಕಾಮನೆಯಿಲ್ಲದೆ, ತನ್ನ ಅಂತರ್ಯಾಮಿಯಾಗಿ, ಪ್ರೇರಕನೂ, ಆತ್ಮನೂ, ನಿಯಾಮಕನೂ

ಆಗಿರುವ ಸ್ವಾಮಿಗೆ ತಾನು ಸ್ವರೂಪದಿಂದಲೇ ದಾಸ ಎಂದು ತಿಳಿದು ಭಕ್ತಿ ಮಾಡುವ ಹನುಮನು ವೈರಾಗ್ಯಭಾವದಲ್ಲ ಶ್ರೇಷ್ಠನು ಎನ್ನುವ ವಿಚಾರ ಇಲ್ಲಿ ಮೂಡಿ ಬಂದಿದೆ.

**ಸೇವಕ:** ಈತ ಮುಖ್ಯ ಪ್ರಾಣನಾಥ ಪ।

ಈತ ಶ್ರೀ ರಾಮ ಸೇವಕನೆನಿಸಿದಾತ ಅ।

. . . . . . . . . . . . . . . . . .

ವಾರಿಧಿಯ ನೆಗೆದಾತ ವನಚರಾಗ್ರೇಸರನೀತ
ವಾರಿಜಾಕ್ಷಿಗೆ ಮುದ್ರಿಕೆ ವಹಿಸಿ ಇತ್ತಾತ ೨।

. . . . . . . . . . . . . . . . . .

ಸ್ಮರನಂಬು ಗೆಲಿದಾತ ಶರಣ ಕನರಿಗೆ ದಾತ
ಸಿರಿಪುರಂದರ ವಿಠಲಗೆ ಅಚ್ಚಿನ್ನ ಭಕ್ತನೀತ ೫। (೬೩)

ಇಲ್ಲಿ 'ಸೇವಕ' ಪ್ರತಿಮೆಯು ಹನುಮಂತನ ಮಹಿಮೆಯನ್ನು ತಿಳಿಸುತ್ತದೆ. ಇವನು ಮಗುವಾಗಿದ್ದಾಗ ಸೂರ್ಯನನ್ನು ಹಣ್ಣೆಂದು ಬಗೆದು ಸೂರ್ಯಮಂಡಲಕ್ಕೆ ಹಾರಿದವನು. ಮಹಾಭಾರತ ಯುದ್ಧದಲ್ಲಿ ಭೀಮನಾಗಿ ಪಾಲುಗೊಂಡವನು ಸೀತೆಯನ್ನು ಹುಡುಕುತ್ತ ಸಮುದ್ರವನ್ನು ಜಿಗಿದವನು, ಕಾಡಿನಲ್ಲಿ ಅಲೆದಾಡುವ ವಾನರರಲ್ಲಿ ಮುಂದಾದವನು, ಸ್ಮರನೆಂದರೆ ಮನ್ಮಥ, ಅಂಬು ಎಂದರೆ ಬಾಣ, ಮನ್ಮಥನ ಬಾಣವಾದ ಮೋಹವನ್ನು ಗೆದ್ದ ನೈಷ್ಠಿಕ ಬ್ರಹ್ಮಚಾರಿಯೆಂದು ದಾಸರು ಹೊಗಳುತ್ತಾರೆ.

ಮಾನವನು ತನ್ನ ಜೀವನವನ್ನು ಸಾರ್ಥಕಗೊಳಿಸಬೇಕಾದರೆ, ಗುರು ಕರುಣೆ ಮುಖ್ಯ, ಗುರುಕರುಣೆ ಬೇಕಾದರೆ, ಆತನಸೇವೆ ಅಗತ್ಯ ಎಂಬುದನ್ನು ದಾಸರು ಈರೀತಿ ಹೇಳಿದ್ದಾರೆ.

**ಗುರು:** ಗುರುವಿನ ಗುಲಾಮನಾಗುವ ತನಕ
ದೊರೆಯದಣ್ಣ ಮುಕುತಿ ಪ।

ಪರಿಪರಿ ಶಾಸ್ತ್ರವನೇಕನೋದಿ
ವ್ಯರ್ಥವಾಯಿತು ಭಕುತಿ ಅ।

. . . . . . . . . . . . . . . . . . (೬೪)

ಗುರುಗಳಿಗೆ ಶರಣಾಗತನಾದರೆ ಮಾತ್ರ ಮುಕ್ತಿ ದೊರೆಯಬಲ್ಲದು ಎಂದ ದಾಸರು. ಆರು ಶಾಸ್ತ್ರಗಳು, ಹದಿನೆಂಟು ಪುರಾಣಗಳು, ನಾಲ್ಕು ವೇದಗಳು ಗೀತೆಯಸಾರ, ನ್ಯಾಯಸುಧಾ ಮುಂತಾದ ಅನೇಕಗ್ರಂಥಗಳನ್ನು ಓದಿದರೆ, ಜಪಮಾಡಿದರೆ, ವ್ರತನಿಯಮಗಳನ್ನು ಮಾಡಿದರೆ ಪಾಂಡಿತ್ಯ ದೊರಕಬಹುದು ಆದರೆ ಗುರುಕರುಣೆ ಯಿಲ್ಲದೆ ಪುರಂದರವಿಠಲನ ಕೃಪೆ ದೊರೆಯುವದಿಲ್ಲವೆಂದಿದ್ದಾರೆ. ಮಾನವನನ್ನು ಲಘುಸ್ಥಾನದಿಂದ ಗುರುಸ್ಥಾನಕ್ಕೆ ಒಯ್ಯುವವನೇ ಗುರು. ತಮ್ಮ ಗುರುಗಳಾದ ಮಧ್ವಾಚಾರ್ಯರು ಎಲ್ಲ ಗುರುಗಳಲ್ಲಿ ಶ್ರೇಷ್ಠರು ಎಂದು ಈ ಕೆಳಗಿನಂತೆ ತಿಳಿಸಿದ್ದಾರೆ.

**ಗುರು:** ಈ ಮಹಿಯೊಳಗೆ ಗುರುಗಳೆನಿಪರೆಲ್ಲ ನಮ್ಮ
ಶ್ರೀ ಮಧ್ವಾಚಾರ್ಯ ಗುರುಶಿಖಾಮಣಿಗೆ ಸರಿಯೆ ಪ।

. . . . . . . . . . . . . . . . . .

. . . . . . . . . . . . . . . . . .

ಗುರುಗಳೆನಿಸಿಕೊಂಬ ಭರದಲನ್ಯೋನ್ಯ
ಮತ್ಸರದ ಶಾಸ್ತ್ರವಿರಚಿಪ ಸಡಗರೆಲ್ಲ
ಸಿರಿ ಪುರಂದರವಿಠಲ ಪರಿತುಷ್ಟಿಗಾಗಿ
ಸುಜನರ ಪೊರೆದ ಗುರು ನಂದತೀರ್ಥರಿಗೆಣೆಯ ೫॥ (೬೫)

ಮೊದಲಿನ ನುಡಿಗಳಲ್ಲಿ ಮಧ್ವಾಚಾರ್ಯರನ್ನು, ಪೂರ್ಣಪ್ರಜ್ಞ, ದಶಪ್ರಮತಿ, ಆನಂದತೀರ್ಥ ಎಂಬ ಹೆಸರುಗಳಿಂದ ಕರೆಯುತ್ತಾ. ಒಬ್ಬೊಬ್ಬ ಗುರುವು ಕೇವಲ ಪರಮತ ಖಂಡನೆಗೆಂದು. ಇನ್ನೊಬ್ಬರ ಮೇಲಣ ಅಸೂಯೆಯಿಂದ ಶಾಸ್ತ್ರರಚಿಸಿದರೆ ಅದು ಕೇವಲ ಸಡಗರವೆಂದಾಗುವದೆಂದು ತಿಳಿಸುತ್ತಾರೆ. ಮಧ್ವಾಚಾರ್ಯರು ಯಾವ ರಾಗ ದ್ವೇಷಗಳಿಲ್ಲದೆ ಬಯಕೆಗಳಿಲ್ಲದೆ ಹರಿಯನ್ನು ಪ್ರೀತಿಪಡಿಸಲೆಂದು ಗ್ರಂಥಗಳನ್ನು ರಚಿಸಿದರು ಎಂದು ತಿಳಿಸುತ್ತಾರೆ. ಮಧ್ವಾಚಾರ್ಯರು, ಹನುಮ, ಭೀಮ ಅವತಾರಿಗಳು ಎಂಬುದನ್ನು ತಿಳಿಸುತ್ತಾ ಮಾರುತಿಯ ಅವತಾರದ ಮುಖ್ಯಪ್ರಾಣನೇ ತಮ್ಮ ಗುರು ಎಂದಿದ್ದಾರೆ.

**ಗುರು:** ಮಾರುತವತಾರನೀತ ನಮ್ಮ ಗುರುಕಾಣಿರೋ
ಭಾರತಿಯ ರಮಣನೇ ಮೂಲಗುರು ಕಾಣಿರೋ ॥ಪ॥ (೬೬)

ಹನುಮ, ಭೀಮ, ಹಾಗೂ ಮಧ್ವ ಅವತಾರಗಳಲ್ಲಿ ದುಷ್ಟರನ್ನು ದಂಡಿಸುವುದೇ ಅವರ ಗುರಿಯಾಗಿತ್ತು ಎಂದು ತಿಳಿಸುತ್ತಾ ಇಂಥ ಗುರುಗಳನ್ನು ನಂಬಲು ಕರೆನೀಡಿದ್ದಾರೆ.

**ಗುರು:** ಗುರುರಾಯರ ನಂಬಿರೊ ಮಾರುತಿಯೆಂಬ
ಗುರುರಾಯರ ನಂಬಿರೊ ॥ಪ॥

ಗುರುರಾಯರ ನಂಬಿ ಬಿಡದೆ ಯಾವಾಗಲು
ದುರಿತವ ಕಳೆದು ಸದ್ಗತಿಯ ಪಡೆವರೆಲ್ಲ ॥ಅ॥ (೬೭)

ಕಷ್ಟಗಳನ್ನು ಕಳೆದು ಸದ್ಗತಿಯ ಕೊಡುವ ತಮ್ಮ ಗುರುಗಳ ಸಮಯಾರಿಲ್ಲವೆಂದು ಈ ಕೆಳಗಿನಂತೆ ತಿಳಿಸುತ್ತಾರೆ.

**ಗುರು:** ಇದಿರ್ಯಾರೋ ಗುರುವೆ ಸಮರ್‍ಯಾರೋ ॥ಪ॥

ಮದನಜನಕ ಪ್ರಿಯ ಗುರು ಮಧ್ವರಾಯ ॥ಅ॥

ಸನ್ನುತ ಮಹಿಮ ಪ್ರಸನ್ನ ವದನ ನಿನ
ಗನ್ಯನಲ್ಲವೊ ನೀ ಎನ್ನ ರಕ್ಷಿಸಬೇಕೊ
ನಿನ್ನ ನೋಡಿದವರು ಧನ್ಯರಾಗುವರು
ಎನ್ನ ದಯಾಮೂರ್ತಿ ಮನ್ನಿಸಿ ನೋಡೋ ॥೧॥

ದುರ್ಜನರನು ಗರ್ಜನದಿಂದ ಓಡಿಸಿ
ಸಜ್ಜನರನು ಸಂರಕ್ಷಿಸಿದಾತನೆ
ಈ ಜಗದಲ್ಲಿ ಮಧ್ಯಗೇಹರ ಪತ್ನಿಯ

ಪೂಜ್ಯ ಜಠರದಲ್ಲಿ ಜನಿಸಿದ ಧೀರ ೨।

ವೇದ ಶಾಸ್ತ್ರಗಳಿಂದ ಮಾಯಗಳ ಖಂಡಿಸಿ
ಸಾಧಿಸಿ ಹರಿಯೇ ಸರ್ವೋತ್ತಮನೆಂತೆಂದು
ಮೋದ ತೀರ್ಥ ಪುರಂದರವಿಠಲದಾಸ ೩। (೬೮)

ಉಡುಪಿ ಜಿಲ್ಲೆಯ ಶಿವಬೆಳ್ಳಿ ಎಂಬ ಗ್ರಾಮದಲ್ಲಿ ಪಾಜಕ ಎಂಬ ಸ್ಥಳದಲ್ಲಿ ನಡ್ಡಂತಿಲ್ಲಾಯವೆಂಬ ತುಳು ಮನೆತನಕ್ಕೆ ಸೇರಿದ ಬ್ರಾಹ್ಮಣನ ಮಗನಾಗಿ ಮಧ್ವಾಚಾರ್ಯರು ಹುಟ್ಟಿದರು. ನಡ್ಡಂತಿಲ್ಲಾಯ ಎಂಬ ತುಳು ಮಾತನ್ನು ಸಂಸ್ಕೃತದಲ್ಲಿ 'ಮಧ್ಯಗೇಹ'ವೆಂದು ಮಾಡಿದ್ದಾರೆ. ಮಧ್ವಾಚಾರ್ಯರಿಗೆ 'ಆನಂದತೀರ್ಥ'ರೆಂದೂ ಕರೆಯುತ್ತಾರೆ. ಇಲ್ಲಿ ಆನಂದ ಎಂಬ ಶಬ್ದಕ್ಕೆ 'ಮೋದ' ಎಂದು ಪರ್ಯಾಯವಾಗಿ ಬಳಸಿದ್ದಾರೆ.

**ಗುರು:** ಮುಖ್ಯ ಪ್ರಾಣ ಎನ್ನ ಮೂಲಗುರುವೆ ಪ।

ರಕ್ಕಸಾಂತಕ ಶ್ರೀ ರಾಮನ ನಿಜ ದಾಸ ಅ।

ತಂದೆ ನೀನೆ ಎನಗೆ ತಾಯಿ ನೀನೆ ಎನಗೆ ಬಂಧು ನೀನೆ ಎನಗೆ
ಬಳಗ ನೀನೆ ಎಂದೆಂದಿಗೂ ನಮ್ಮೆಲ್ಲರ ರಕ್ಷಿಪನು ನೀನೆ ೧। (೬೯)

ತಂದೆ, ತಾಯಿ ಬಂಧು, ಬಳಗವೆಲ್ಲವೂ ನೀನೆ ಎನ್ನುತ್ತಾ ಪುರಂದರದಾಸರು ತಮ್ಮ ದೀಕ್ಷಾಗುರುಗಳಾದ ವ್ಯಾಸರಾಯ ಸ್ವಾಮಿಗಳ ಗುರುಪರಂಪರೆಗೆ ಮೂಲರಾದ ಮಧ್ವಾಚಾರ್ಯರೇ ತಮಗೂ ಮೂಲಗುರುಗಳು ಎಂದು ಬಣ್ಣಿಸಿದ್ದಾರೆ.

**ಸರ್ವೋತ್ತಮ:** ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿ ಸರ್ವ ವಿಶ್ವಮಯಂ ಜಗತು ಪ।

ಹರಿಯಲ್ಲದನ್ಯತ್ರ ದೈವಂಗಳಿಲ್ಲವೆಂದು
ಉರಗನ ಹೆಡೆಯನು ಪಿಡಿದು ಹೇಳುವೆನಯ್ಯ ಅ।

ಜಗವ ಪುಟ್ಟಿಸುವ ಬ್ರಹ್ಮ ನಿನ್ನ ಮಗ
ಜಗವ ಸಂಹರಿಸುವ ರುದ್ರ ಮೊಮ್ಮಗನು
ಜಗದ ಪಾವನೆ ಭಾಗೀರಥಿ ನಿನ್ನ ಮಗಳಯ್ಯ
ಜಗದ ಜೀವರ ಮಾತೆ ನಿನ್ನರಸಿಯೊ ದೇವ ೧।

ವಿಶ್ವತೋಮುಖ ನೀನೇ ವಿಶ್ವತಶ್ಚಕ್ಷು ನೀನೆ
ವಿಶ್ವತೋಬಾಹು ವಿಶ್ವಪಾದನು ನೀನೆ
ವಿಶ್ವ ಉದರ ನೀನೆ ವಿಶ್ವ ವ್ಯಾಪಕ ನೀನೆ
ವಿಶ್ವನಾಟಕ ಸೂತ್ರದಾರಿಯೆ ವಿಷ್ಣುವೆ ೨।

ಆಗಮ ನಿಗಮ ಪುರಾಣಶಾಸ್ತ್ರಂಗಳಲ್ಲಿ
ಯೋಗಿಗಳರಸಿ ನಿಮ್ಮ ಕಾಣದಿಪ್ಪರೊ
ನಾಗಶಯನ ಭೋಗಿ ಭೂಷಣವಂದಿತ

ಸರ್ವೋತ್ತಮ ಪ್ರತಿಮೆಯು ಸಕಲಜೀವ, ಜಡ ಪ್ರಪಂಚದಲ್ಲಿ ಭಗವಂತನಿಗೆ ಸಮರಾದವರೂ, ಮಿಗಿಲಾದವರು ಯಾರೂ ಇಲ್ಲ ಎಂಬ ತತ್ವವನ್ನು ಮೂರ್ತಗೊಳಿಸುತ್ತದೆ. ದೇವತಾ ತಾರತಮ್ಯದಲ್ಲಿ ಎಲ್ಲದೇವತೆಗಳೂ ಅವನಿಗೆ ಆಧೀನರು. ಹರಿಯು ಸರ್ವವ್ಯಾಪಿಯಾಗಿದ್ದು ಎಲ್ಲ ದೈವಗಳಿಗೂ ಹರಿಯೇ ನಿಯಾಮಕನಾಗಿದ್ದಾನೆಂದು ಅಂಜದೇ ಹಾವಿನ ಹೆಡೆಯನ್ನು ಹಿಡಿದು ಪೇಳುವೆನು ಎಂದಿದ್ದಾರೆ ದಾಸರು. ಮೊದಲನೇ ನುಡಿಯಲ್ಲಿ ಮಹಾಪ್ರಳಯವಾದ ಮೇಲೆ ಹರಿಯು ಬ್ರಹ್ಮಾಂಡಜಲದಲ್ಲಿ ಹದಿನಾಲ್ಕು ದಳಗಳ ಕಮಲವನ್ನು ಕಾಣಿಸಿ ಅದರಿಂದ ಬ್ರಹ್ಮನು ಹುಟ್ಟುವಂತೆ ಮಾಡುತ್ತಾನೆ. ರುದ್ರನು ಬ್ರಹ್ಮನಿಂದ ಹೊರಬಂದವನು. ಹಾಗಾಗಿ ಬ್ರಹ್ಮನು ಮಗ, ರುದ್ರನು, ಮೊಮ್ಮಗ, ಗಂಗೆ ವಿಷ್ಣುಪಾದಗಳಿಂದ ಹೊರಹೊಮ್ಮಿದಳೆಂದು ಪುರಾಣಕತೆ ಹಾಗಾಗಿ ಅವಳು ವಿಷ್ಣುವಿನ ಮಗಳು (ಇ).

ಎರಡನೆ ನುಡಿಯಲ್ಲಿ ವಿಶ್ವತೋಮುಖ ಎಂಬುದು ಪುರುಷಸೂಕ್ತ ಹಾಗೂ ನಾರಾಯಣ ಸೂಕ್ತ (ವೇದ ಮಂತ್ರಗಳು) ಗಳಲ್ಲಿ ಬರುತ್ತದೆ. ಋಗ್ವೇದದಲ್ಲಿ 'ವಿಶ್ವ ತಶ್ಚಕ್ಷುರತ ವಿಶ್ವತೋಮುಖಃ' ಎಂಬ ಮಾತಿದೆ. ವಿಷ್ಣುವು ಎಲೆಲ್ಲೋ ಇರುವನೆಂದೂ, ಎಲ್ಲರ ಎಲ್ಲ ಅವಯವಗಳಲ್ಲು ಅವನೇ ಅಡಗಿದ್ದಾನೆಂದೂ, ಎಲ್ಲ ವ್ಯಾಪಾರಗಳೂ ಅವನ ಆಧೀನವಾಗಿದೆ ಎಂಬ ತಾತ್ಪರ್ಯ ಅಡಗಿದೆ. ಮೂರನೇ ನುಡಿಯಲ್ಲಿ, ಪಂಚರಾತ್ರವೇ ಮೊದಲಾದ ತಂತ್ರಶಾಸ್ತ್ರ ಗ್ರಂಥಗಳು (ಆಗಮ) ವೇದ ಮತ್ತು ಅನೇಕ ಶಾಸ್ತ್ರಗಳು (ನಿಗಮ) ಹಾಗೂ ಪುರಾಣಗಳಲ್ಲಿ ಯೋಗಿಗಳು ಪುರಂದರವಿಠಲನನ್ನು ತಿಳಿಯಲು ಪ್ರಯತ್ನಿಸಬೇಕು ಎಂದಿದ್ದಾರೆ. ಹಾವಿನ ಮೇಲೆ ಮಲಗಿದ, ಹಾವನ್ನೇ ಆಭರಣವಾಗಿ ಉಳ್ಳ ಶಿವನಿಂದ ಪೂಜಿಸಲ್ಪಡುವವನು [ಭೋಗ ಭೋಷಣ ವಂದಿತ] ಮತ್ತು ಭಾಗವತರ ಪ್ರೀಯನಾದ ಪುರಂದರವಿಠಲನು ಸರ್ವೋತ್ತಮನು ಎಂಬುದು ತಿಳಿದುಬರುತ್ತದೆ.

**ಪಂಚಬೇಧ:**

ಸತ್ಯ ಜಗಕಿದು ಪಂಚಬೇಧವು ನಿತ್ಯ ಶ್ರೀ ಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕವೆಂದು ಸಾರಿರೈ ಪ

ಜೀವ ಈಶಗೆ ಬೇಧ ಸರ್ವತ್ರ ಜೀವ ಜೀವಕೆ ಬೇಧವು
ಜೀವ ಜಡಕೆ ಜಡ ಜಡಕೆ ಬೇಧ ಜಡ ಪರಮಾತ್ಮಗೆ ೧

ಮಾನುಷೋತ್ತಮರಧಿಕ ಕ್ಷಿತಿಪರು ಮನುಜ ದೇವ ಗಂಧರ್ವರು
ಜಾನಪಿತರಜಾನಜ ಕರ್ಮಜರು ಉಕ್ತ ಶೇಷ ಶತಸ್ಥರು ೨

ಗಣಪಮಿತ್ರರು ಸಪ್ತಋಷಿಗಳು ವಹ್ನಿನಾರದ ವರುಣರಿರು
ಇನಜಗೆ ಸಮ ಚಂದ್ರ ಸೂರ್ಯರು ಮನುಸುತೆಯು ಹೆಚ್ಚು ಪ್ರವಹನು ೩

ದಕ್ಷ ಸಮ ಅನಿರುದ್ಧ ಗುರು ಶಚಿ ರತಿ ಸ್ವಾಯಂಭುವರಾರ್ವರು
ಕಕ್ಷಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ೪

ದೇವೇಂದ್ರನಿಂದಧಿಕ ಮಹರುದ್ರ ರುದ್ರಸಮ ಶೇಷಗರುಡರು

ದೇವಿ ಭಾರತಿ ಸತಸ್ವತಿ ಗರುಡ ಶೇಷಗಧಿಕರೆನಿಪರು ೫।

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಬ್ರಹ್ಮಗೆ ಕೋಟಿಗುಣದಿಂದ ಅಧಿಕ ಶಕ್ತಳು ಶ್ರೀರಮಾ ೬।

ಅನಂತ ಗುಣದಿಂ ಲಕುಮಿಗಧಿಕನು ಶ್ರೀ ಪುರಂದರವಿಠಲನು
ಶಿವ ಪರಮ ಇವಗಿಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ೭। (೭೧)

ಈ ಪದದಲ್ಲಿ ದ್ವೈತ ಸಿದ್ಧಾಂತದ ಮುಖ್ಯ ಪ್ರಮೇಯಗಳಿಂದ ಪಂಚಬೇದ ಮತ್ತು ದೇವತಾತಾರತಮ್ಯ ಇವುಗಳ ಉಲ್ಲೆಖವಿದೆ. ಮೊದಲ ಎರಡು ನುಡಿಗಳಲ್ಲಿ ಪಂಚಬೇಧ, ಮುಂದೆ ಐದು ನುಡಿಗಳಲ್ಲಿ ಆರೋಹಣ ತಾರತಮ್ಯಕ್ರಮ ಇವನ್ನು ಹೇಳಿದ್ದಾರೆ. ಪಂಚಬೇಧಗಳು ಈ ರೀತಿಯಾಗಿವೆ.

೧) ಜೀವ ಜೀವರ ಭೇದ
೨) ಜಡಜಡಗಳ ಭೇದ
೩) ಜೀವ ಜಡಗಳ ಭೇದ
೪) ಜಡ ಜೀವರ ಭೇದ
೫) ಜೀವ ಜಡರಿಂದ ಈಶ ಭೇದ

ಶ್ರೀ ಮಧ್ವಾಚಾರ್ಯರು ಪರಮಾತ್ಮನನ್ನು ಮೊದಲುಗೊಂಡು ಮಾನವರಲ್ಲಿ ಚಕ್ರವರ್ತಿಗಳ ವರೆಗೆ ಅವರವರ ಯೋಗ್ಯತೆ ಮತ್ತು ಗುಣಗಳನ್ನು ಅನುಸರಿಸಿ ಕಕ್ಷಗಳನ್ನು ರಚಿಸಿದ್ದಾರೆ. ಈ ಪದ್ಯದಲ್ಲಿ ಒಬ್ಬೊಬ್ಬ ದೇವತೆಯಿಂದ ಒಂದೊಂದು ಕಕ್ಷ ಪ್ರಾರಂಭವಾಗುತ್ತದೆ ಎಂದು ಸೂಚ್ಯವಾಗಿ ತಿಳಿಸಿದ್ದಾರೆ.

**ಕಕ್ಷೆಯಲ್ಲಿರುವ ದೇವ ದೇವತೆಗಳು:**

೧) ವಿಷ್ಣು

೨) ಮಹಾಲಕ್ಷ್ಮೀ

೩) ಬ್ರಹ್ಮ–ವಾಯು

೪) ಸರಸ್ವತಿ, ಬಾರತಿ

೫) ಗರುಡ, ಶೇಷರುದ್ರರು

೬) ಶ್ರೀಕೃಷ್ಣ ಪತ್ನಿಯರಾದ, ಜಾಂಬವತಿ, ಕಾಳಿಂದಿ, ಭದ್ರಾ, ನೀಲಾ, ಮಿತ್ರವಿಂದಾ, ಲಕ್ಷಣಾ.

೭) ಗರುಡ, ಶೇಷ, ರುದ್ರರ ಪತ್ನಿಯರಾದ ಸೋಪರ್ಣಿ, ವಾರುಣೀ ಪಾರ್ವತಿದೇವಿಯರು.

೮) ಇಂದ್ರ: ಕಾಮ

೯) ಅಹಂಕಾರಿಕ ಪ್ರಾಣದೇವರು

೧೦) ಇಂದ್ರ ಪತ್ನಿ ಶಚೀದೇವಿ, ಕಾಮಪತ್ನಿ–ರತೀದೇವಿ, ಸ್ವಾಯಂಭುವ ಮನು, ಬ್ರಹಸ್ಪತಿ, ಅನಿರುದ್ಧ, ದಕ್ಷ ಪ್ರಜೇಶ್ವರ.

೧೧) ಕೋಣಾಧಿಪತಿಯಾದ ಪ್ರವಹವಾಯುದೇವರು

೧೨) ಸೂರ್ಯ, ಚಂದ್ರ, ಧರ್ಮರಾಯ, ಶತರೂಪಾ

೧೩) ವರುಣ

೧೪) ನಾರದ

೧೫) ಭೃಗುಮುನಿ, ಅಗ್ನಿದೇವ, ದಕ್ಷಪತ್ನಿ ಪ್ರಸೂತಿ

೧೬) ಸಪ್ತಋಷಿಗಳು

೧೭) ಮಿತ್ರನಾಮಕ ಸೂರ್ಯ

೧೮) ಅಶ್ವಿನಿ ದೇವತೆಗಳು, ಗಣಪತಿ, ಕುಬೇರ

೧೯) ಕರ್ಮಜದೇವತೆಗಳು ಏಕಾದಶಮನುಗಳು

೨೦) ಭಾಗೀರಥಿ

೨೧) ಅನಾಖ್ಯಾತ ದೇವತೆಗಳು

೨೨) ಅಗ್ನಿಪತ್ನಿ ಸ್ವಾಹಾ

೨೩) ಬುಧ

೨೪) ಅಶ್ವಿನಿಭಾರ್ಯಾಉಷಾದೇವಿ

೨೫) ಭೂಮಿ, ಶನೈಶ್ವರ

೨೬) ಕರ್ಮಾಭಿಮಾನಿ ಪುಷಕ

೨೭) ಅಜಾನಜದೇವತೆಗಳು

೨೮) ಚಿರಪಿತೃಗಳು

೨೯) ದೇವಗಂಧರ್ವರು

೩೦) ಮನುಷ್ಯ ಗಂಧರ್ವರು

೩೧) ಕ್ಷಿತಿಪರು, ಮನುಷ್ಯರಾಜರು

೩೨) ಮನುಷ್ಯೋತ್ತಮರು (ಈ)

ಲೋಕದ ಮತ್ತು ಲೋಕೋತ್ತರವಾದ ವ್ಯವಹಾರಗಳನ್ನೆಲ್ಲ ಒಂದು ಸುಸಂಬದ್ಧ ವ್ಯವಸ್ಥೆಯ ಕಕ್ಷೆಯಲ್ಲಿ ತಂದು ಆಯಾ ವಿಭಾಗದ ರಕ್ಷಕ ದೈವಗಳಸ್ಥಾನ ನಿರ್ದೇಶ ಮಾಡಿರುವುದು ಈ ಪದದ ವೈಶಿಷ್ಟ್ಯ ಇಡಿಯ ಲೋಕ ವ್ಯವಸ್ಥೆಯನ್ನು ಒಂದು ಮಹಾಕೃತಿ ಎಂಬಂತೆ ರೂಪಿಸಿ ಈ ಮಹತ್ಕೃತಿಯನ್ನು ರಚಿಸಿ ನಿರ್ವಹಿಸುತ್ತಿರುವ ಪುರಂದರವಿಠಲನ ಹಿರಿಮೆಯನ್ನು ಚಿತ್ರಿಸುವುದು ಕವಿಯ ಉದ್ದೇಶ.

**ನಗಾರಿ:** ಹೊಡಿನಗಾರಿ ಮೇಲೆ ಕೈಯ ಘಡಘಡ
ಹೊಡಿ ನಗಾರಿ ಮೇಲೆ ಕೈಯ **ಪ।**

ಮೃಡವಂದ್ಯನಪಾದ ಬಿಡದೆ ಭಜಿಪರಘ
ಬಿಡಿಸಿ ಪೊರೆವ ಜಗದೊಡೆಯನೆ ಪರನೆಂದು ।೬।

ವೇದವೀವ ಮಧುಸೂದನ ಪರನೆಂದು ।೧।

. . . . . . . . . . . . . . . . . .

ಈ ಪೃಥ್ವಿಯೊಳು ವ್ಯಾಪಕನಾಗಿಹ
ಶ್ರೀಪತಿ ಪುರಂದರವಿಠಲನೆ ಪರನೆಂದು ।೭। (೭೨)

ನಗಾರಿಬಾರಿಸುವುದು ಎಂದರೆ ಡಂಗುರ ಬಾರಿಸುತ್ತ ವಿಷಯವೊಂದನ್ನು ಎಲ್ಲರಿಗೂ ತಿಳಿಸುವುದು. ಪರಮಾತ್ಮನು ರುದ್ರನಿಂದ ಪೂಜಿತನಾದವನು ಎಲ್ಲರ ದುಃಖಗಳನ್ನು ತೊಲಗಿಸುವವನು. ಎಲ್ಲ ಜೀವರಿಗೆ ಅವರವರ ಯೋಗ್ಯತಾನುಸಾರವಾಗಿ ಆನಂದವನ್ನು ನೀಡುವವನು. ಸಕಲಜೀವಿಗಳಲ್ಲಿ ಬಿಂಬರೂಪದಿಂದಿ ರುವನು ಪೃಥಿವಿಯೊಳು ಎಲ್ಲೆಡೆ ವ್ಯಾಪಿಸಿರುವನು ಎಂಬುದನ್ನು ಎಲ್ಲರಿಗೂ ತಿಳಿಯುವಂತೆ ದಾಸರು ಹೇಳುತ್ತಿದ್ದಾರೆ.

**ಠಾವು (ಸ್ಥಳ):** ಹೊರಗಿಪ್ಪ ಒಳಗಿಪ್ಪ
ಹೊರಗಿರಲರಿಯ ಒಳಗಿಪ್ಪ
ಹೊರಗಿಪ್ಪ ಒಳಗಿರಲರಿಯ
ಒಳಗೆ ಹೊರಗೆ ತುಂಬಿಕೊಂಡಿಹ
ತಾನಿಲ್ಲದ ಠಾವು ಎಳ್ಳಿನಷ್ಟಿಲ್ಲ
ಸರ್ವವಿಷ್ಣು ವಾಸುದೇವ ಪರಿ
ಪೂರ್ಣಪುರಂದರವಿಠಲ (೭೩)

ಜಗತ್ತಿನ ಎಲ್ಲ ವ್ಯಕ್ತಿಗಳಲ್ಲಿ, ಸರ್ವಸ್ಥಳಗಳಲ್ಲಿ ಆಕಾಶದಂತೆ ಪರಮಾತ್ಮನು ಸರ್ವತ್ರವ್ಯಾಪ್ತನಾಗಿದ್ದಾನೆ. ಎಂಬ ವಿಷಯವನ್ನು ಠಾವು ಪ್ರತಿಮೆ ಮೂರ್ತಿಗೊಳಿಸುತ್ತದೆ.

ಜೀವಬಿಂಬ ಸುಳಾದಿಯಲ್ಲಿ ಪುರಂದರದಾಸರು ಕಷ್ಟನಷ್ಟಗಳನ್ನೆಲ್ಲ ಓಡಿಸಿ ಬೇಡಿದ್ದನ್ನೆಲ್ಲ ಕೊಡುವ ಒಡೆಯ ದೊರಕಿದನೆಂದು ಈ ರೀತಿ ತಿಳಿಸುತ್ತಾರೆ.

**ಒಡೆಯ:** ಎನಗೊಬ್ಬ ಒಡೆಯ ದೊರಕಿದ ದೊರಕಿದ
ಸುನಾಯಕ ದೇವ ಕಟ್ಟಲೆ ಕಂದಾಯವೀವ
ಬೇಡಿದ ಉಚಿತವ ನಮಗವನೀವ
ಕಷ್ಟನಷ್ಟಗಳಿಲ್ಲ ಒದೆ ಜಡಿತಗಳಿಲ್ಲ
ಎನ್ನ ಮನ ಬಂದಂತೆ ಓಲೈಸುವನು ನಾನು
ಎನ್ನ ಮನ ಬಂದಾಗ ಓಲೈಸಿಕೊಂಬ
ಕೇಡಿಲ್ಲದೊಡೆಯ ಪುರಂದರವಿಠಲ (೭೪)

ಭಕ್ತಿಯೆಂಬ ಕಂದಾಯ ಕಟ್ಟಿದೊಡನೆ ಒಲಿವ ಭಗವಂತನ ಪ್ರೇಮವನ್ನು 'ಒಡೆಯ' ಪ್ರತಿಮೆಯು ತಿಳಿಸುತ್ತದೆ.

**ದೇವ:** ದೇವ ಬಂದನಮ್ಮ ಸ್ವಾಮಿಬಂದನೊ
ದೇವರ ದೇವ ಶಿಖಾಮಣಿ ಬಂದಾನೋ ।ಪ।

ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ ।೧।
. . . . . . . . . . . . . . . . . . .
. . . . . . . . . . . . . . . . . . .
ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
ನಗೆಮುಖ ಪುರಂದರವಿಠಲ ಬಂದ (೭೫)

ಎಲ್ಲ ದೇವ ದೇವತೆಗಳಲ್ಲಿ ಶ್ರೇಷ್ಠನಾದವನು ಎಂದು ಪರಮಾತ್ಮನನ್ನು ದೇವರದೇವ ಎಂದು ಕರೆದು ಪುರಂದರದಾಸರು ಸಂತೋಷಿಸುತ್ತಿದ್ದಾರೆ. ಅರ್ಜುನ, ದ್ರೌಪದಿ, ಅಕ್ರೂರ [ಕಂಸನ ಮಂತ್ರಿ] ಗೊಲಿದ ಪರಮಾತ್ಮ ನನ್ನು ಪ್ರೀತಿಯಿಂದ ಬರ ಮಾಡಿಕೊಳ್ಳುತ್ತಿದ್ದಾರೆ. ಪರಮಾತ್ಮನು ಒಬ್ಬನೇ ಎಂದು ತಿಳಿಯದ ಜನರು ಬೇರೆ ಬೇರೆ ದೈವಗಳನ್ನು ಭಜಿಸಿ ಮೂರ್ಖರಾದವರು ಎಂದು ಈ ರೀತಿ ಹೇಳುತ್ತಿದ್ದಾರೆ.

**ಮೂರ್ಖ:** ಮೂರ್ಖರಾದರು ಲೋಕದೊಳಗೆ ।ಪ।
ಏಕದೈವವ ಬಿಟ್ಟು ಕಾಕು ದೈವವ ಭಜಿಸಿ ।ಅ। (೭೬)

ಸಾಧಕರಿಗೆ ಕನಸು ಮನಸಿನೊಳೆಲ್ಲ ಹರಿಯ ಸ್ಮರಣೆಯೆ ಇಂದ್ರಿಯಾದಿ ವ್ಯಾಪಾರವಿಲ್ಲದೆ ಮನಸ್ಸೊಂದೆ ಕೆಲಸಮಾಡುವ ಸ್ವಪ್ನಾವಸ್ಥೆಯಲ್ಲಿಯೂ ಪರಮಾತ್ಮನನ್ನು ಕಾಣುವ ದಾಸರು ಗೋವಿಂದನನ್ನು ಕನಸ್ಸಿನಲ್ಲಿ ಕಂಡ ಬಗೆಯನ್ನು ವಿವರಿಸುತ್ತಾರೆ.

**ಕನಸು:** ಕಂಡೆ ನಾ ಕನಸಿನಲಿ ಗೋವಿಂದನ ।ಪ।

ಕಂಡೆ ನಾ ಕನಸಿನಲಿ ಕನಕ ರತ್ನದ ಖಣಿಯ
ನಂದನ ಕಂದ ಮುಕುಂದನ ಚರಣವ ।ಅ।

ಅಂದಿಗೆ ಕಿರುಗೆಜ್ಜೆ ಘಲಿರೆಂಬ ವಾದ್ಯದಿ
ಬಂದು ಕಾಳಿಂಗನ ಹೆಡೆಯನೇರಿ
ಧಿಂದಿಮಿ ಧಿಮಿಕೆಂದು ತಾಳಗತಿಗಳಿಂದಾ
ನಂದದಿ ಕುಣಿವ ಮುಕುಂದನ ಚರಣವ ।೧।
. . . . . . . . . . . . . . . . . . .
ಮಂಗಳವರ ತುಂಗಭದ್ರದಿ ಮೆರೆವನ
ಅಂಗಜಪಿತ ಶ್ರೀ ಲಕ್ಷ್ಮೀಪತಿಯ
ಶೃಂಗಾರ ಮೂರುತಿ ಪುರಂದರವಿಠಲನ
ಕಂಗಳಿಂದಲಿ ಕಂಡೆ ಹಿಂಗಿತು ಭವಭಯ (೭೭)

'ಕನಸು' ಪ್ರತಿಮೆ ಎಲ್ಲ ಆಭರಣಗಳಿಂದ ಅಲಂಕೃತನಾದ ಕೃಷ್ಣನ ರೂಪವನ್ನು ಮೂರ್ತಗೊಳಿಸುತ್ತದೆ ಇನ್ನೊಂದು ದಿನ ಕನಸಿನಲ್ಲಿ ತಿರುಪತಿ ತಿಮ್ಮಪ್ಪನ್ನು ಕಂಡ ಬಗೆಯನ್ನು ಕೆಳಗಿನಂತೆ ವಿವರಿಸಿದ್ದಾರೆ.

ಕನಸು ಕಂಡೆನೆ ಮನದಲಿ ಕಳವಳಗೊಂಡೆನೆ
ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ ।ಪ।

ಪೊನ್ನದ ಕಡಗನಿಟ್ಟು ತಿಮ್ಮಯ್ಯ ತಾ

ಪೊಲ್ವನಾಮವ ಇಟ್ಟು ಅಂದುಗೆ ಘಲುಗೆನ್ನುತ
ಎನ್ನ ಮುಂದೆ ಬಂದು ನಿಂತಿದ್ದನಲ್ಲೇ ॥೧॥
. . . . . . . . . . . . . . . . . . .
ನವರತ್ನ ಕೆತ್ತಿಸಿದ ಸ್ವಾಮಿ ಎನ್ನ
ಹೃದಯ ಮಂಟಪದಲ್ಲಿ ಸರ್ವಾಭರಣದಿಂದ
ಪುರಂದರವಿಠಲನ ಕೂಡಿದೆನೆ. ॥೫॥ (೭೮)

ಪುರಂದರದಾಸರು ಆಭರಣಗಳಿಂದ ಅಲಂಕೃತನಾದ ವೆಂಕಟರಮಣನ ರೂಪವನ್ನು ವರ್ಣಿಸಿದ್ದಾರೆ.

'ದ್ವಾಸುಪರ್ಣಾ'ಎಂದು ಮೊದಲಾಗುವ ಶ್ರುತಿಯಲ್ಲಿ ಹೇಳುವಂತೆ ಜೀವಾತ್ಮ ಪರಮಾತ್ಮರು ಪರಸ್ಪರ ಸಮ್ಮುಖರಾಗಿರುವ ನಿತ್ಯ ಸಂಬಂಧವನ್ನು ಇಲ್ಲಿ ಹೇಳಿದ್ದಾರೆ.

**ಬಂಧು:** ನಾ ಮುಂದೆ ರಂಗ ನೀ ಎನ್ನಮುಂದೆ
ಎಂದೆಂದು ನಿನ್ನ ನಾಮವ ಎಂದೆಂಬ ॥ಪ॥

ಅನಾಥನು ನಾನು ಎನಗೆ ಬಂಧು ನೀನು
ಹೀನನು ನಾನು ದಯವಂತ ನೀನು
ಧ್ಯಾನಮಂತ್ರನು ನೀನು ಧ್ಯಾನಿಸುವೆನು ನಾನು
ಜ್ಞಾನಗಮ್ಯನು ನೀನು ಅಜ್ಞಾನಿ ನಾನು ॥೧॥
. . . . . . . . . . . . . . . . . . . (೭೯)

ಪರಮಾತ್ಮನು ಸರ್ವಶಕ್ತ ಸರ್ವಜ್ಞ ಆಶ್ರಯ ಪ್ರೇರಕ ನಿಯಾಮಕ ಹಾಗೂ ಅನಿಮಿತ್ತ ಬಂಧು ಎಂಬುದನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಪುರಂದರದಾಸರು ಪರಮಾತ್ಮನನ್ನು 'ವೈದ್ಯ' ನಾಗಿ ಕಂಡ ಬಗೆಯನ್ನು ಈ ಕೆಳಗಿನಂತೆ ಹೇಳುತ್ತಿದ್ದಾರೆ.

**ವೈದ್ಯ:** ಗುಣವಾಯಿ ತೆನ್ನ ಭವರೋಗ
ಕೃಷ್ಣನೆಂಬ ವೈದ್ಯನು ದೊರಕಿದನು
ಗುಣವಾಗುವವರೆಗೆ ಎಣೆಯಿಲ್ಲ
ಗುಣವಂತರಾಗುವರು ಭವವೆಲ್ಲ ॥ಪ॥
. . . . . . . . . . . . . . . . . . .
ಚಂದ್ರೋದಯ ಉಂಟು ಈತನಲಿ
ಚಿಂತಾಮಣಿಯುಂಟು ಈತನಲಿ
ಸಂಚಿಯೊಳಗೆ ತುಂಬ ಮಾತ್ರೆಗಳುಂಟು
ಚೆನ್ನಾಗಿ ಗುಣ ಮಾಡುವನೀತ ॥೨॥
. . . . . . . . . . . . . . . . . . . (೮೦)

ಸಂಸಾರವೇಂಬುದೇ ಒಂದು ರೋಗ ಅದನ್ನು ಪರಿಹರಿಸಲು ಅದರ ನಿಯಮಕನಾದ ಪರಮಾತ್ಮನನ್ನೇ ಮೊರೆಹೋಗಬೇಕು. ಪರಮಾತ್ಮನ ಭಕ್ತನಾದೊಡೆ ಈ ರೋಗವು ಗುಣವಾದಂತೆ, ಸಂಸಾರದಲ್ಲಿ ವೈರಾಗ್ಯ ಪರಮಾತ್ಮನಲಿ ಭಕ್ತಿ ಇವರಡೂ ವೈದ್ಯನಾದ ಹರಿಯ ಸಂಚಿನಲ್ಲಿರುವ ಮಾತ್ರೆ ತೆಗೆದುಕೊಂಡವರಿಗೆ ಸಿಗುವವು.

ಪರಮಾತ್ಮನನು ವೈದ್ಯನೆಂದು ಇಲ್ಲಿಕರೆದರೆ ಮತ್ತೊಂದೆಡೆ ಸದ್ಗುರುವೆಂದು ಕರೆಯುತ್ತಾ ಇಂತಹ ಸದ್ಗುರು ತನ್ನನ್ನು ಫಕೀರನನ್ನಾಗಿ ಮಾಡಿದನು ಎಂದು ಇಲ್ಲಿ ಹೇಳುತ್ತಿದ್ದಾರೆ.

**ಫಕೀರ:** ಮಾಡಿದ ಎನ್ನನು ಫಕೀರನ ಸದ್ಗುರು
ಮಾಡಿದ ಎನ್ನ ಫಕೀರ ॥ಪ॥

ಅನುಭವ ಖಪ್ಪರಿ ಹೃದಯದ ಜೋಳಿಗೆ ಎನ್ನಯ ಕಂಕುಳಲಿಟ್ಟ
ಆಮಿಷ ದಟ್ಟಿ ಅರಗಿನ ರೊಟ್ಟಿ ಎನ್ನಯ ಕೈಯಲಿಟ್ಟ ॥೧॥

ನಾದದ ತಂಬುರಿ ಮೋದ ಮುಂದಾರವು ನಿಚ್ಚಂಗದ ಟೊಪ್ಪಿಗೆನಿಟ್ಟ
ಬೋಧದ ಭಂಗಿ ಅಮೃತದ ಲುಂಗಿ ಸಮಾನ ಗುಳಿಗೆಯನಿಟ್ಟ ॥೨॥

ಈ ಪರಿ ಮಾಡಿ ಬಯಲನು ತೋರಿ ಕರವನು ನೆತ್ತಿಯಲಿಟ್ಟ
ಭೂಪ ಪುರಂದರವಿಠಲರಾಯನ ತಿರುಗೆಂದಪ್ಪಣೆ ಕೊಟ್ಟ ॥೩॥(೮೧)

'ಫಕೀರ' ಪ್ರತಿಮೆ ಇಲ್ಲಿ ಹರಿದಾಸರನ್ನು ಸಂಕೇತಿಸುತ್ತದೆ. ಫಕೀರರೆಂದರೆ ದೇವರಲ್ಲೇ ನೆಟ್ಟ ಮನಸ್ಸುಳ್ಳವರಾಗಿ, ಯಾರ ಹಂಗೂ ಇಲ್ಲದೆ ಅಲೆದಾಡುವ ಮುಸಲ್ಮಾನರು. ಫಕೀರರು ಭಿಕ್ಷೆಗಾಗಿ ಮಡಿಕೆ ಚೂರನ್ನು ಬಳಸುತ್ತಾರೆ. ಅದನ್ನು ಖಪ್ಪರಿ ಎನ್ನುತ್ತಾರೆ. ಸೊಂಟಕ್ಕೆ ದಟ್ಟಿ ಎನ್ನುವ ತುಂಡು ಬಟ್ಟೆ ಸುತ್ತಿಕೊಂಡಿರತ್ತಾರೆ, ತಲೆಗೆ ಟೊಪ್ಪಿಗೆ ಹಾಕಿ ಲುಂಗಿಯನ್ನು ಸುತ್ತಿಕೊಂಡಿರುತ್ತಾರೆ ಅದರಂತೆ ತನಗೂ ಅನುಭವದ ಖಪ್ಪರಿ. ಹೃದಯದ ಜೋಳಿಗೆ ಆಮಿಷಗಳನ್ನು ಅಟ್ಟಿ ವೈರಾಗ್ಯ ಕೊಟ್ಟು, ತಂಬೂರಿ ಕೈಯಲ್ಲಿಟ್ಟು ಫಕೀರನನ್ನಾಗಿ ಮಾಡಿದನೆಂದು ತಿಳಿಸುತ್ತಾರೆ. ರೊಟ್ಟಿ, ತಂಬೂರಿ, ಟೊಪ್ಪಿಗೆ, ಭಂಗಿ, ಲುಂಗಿ ಇವಕ್ಕೆಲ್ಲ ಆಧ್ಯಾತ್ಮದ ಅರ್ಥವನ್ನು ಒದಗಿಸಿದ್ದಾರೆ. ಸದ್ಗುರುವು ತಮ್ಮನ್ನು ಫಕೀರರನ್ನಾಗಿ ಮಾಡಿ ಸಂಸಾರದ ದಿಟವಾದ ಅಸಾರತೆಯನ್ನು ತೋರಿಸಿದನೆಂದೂ ತಲೆಯ ಮೇಲೆ ಕೈಗಳಿರಿಸಿ ಆಶೀರ್ವದಿಸಿದನೆಂದು ತಿಳಿಸುತ್ತಾರೆ.

**ಶಕುನಫಲ:** ಒಳಿತೀ ಶಕುನ ಫಲವಿಂದೆಮಗೆ ॥ಪ॥

ಜಲಜಾಕ್ಷನೊಲುಮೆಯಾಗುವುದು ಕೇಳ್ಕೆಳದಿ ॥ಅ॥

ವಾಮ ಗರುಡನೋಡು ವಾಯಸ ಬಲನೋಡು
ಕೋಮಲಾಂಗೇರ ಉದಕುಂಭ ನೋಡು
ಸಾಮಾನ್ಯವಲ್ಲ ಗೌಳಿ ಬಲಕೆ ನುಡಿಯುತಿದೆ
ಪ್ರೇಮದಿ ಮಧುರ ವಚನ ಕೇಳೆ ಕೆಳದಿ ॥೧॥
. . . . . . . . . . . . . . . . . .
. . . . . . . . . . . . . . . . . . (೮೨)

ಇಲ್ಲಿ ಶುಭಶಕುನವು ಭಗವಂತನ ಒಲುಮೆಯನ್ನು ಸಂಕೇತಿಸುತ್ತದೆ. ಪರಮಾತ್ಮನು ಒಲಿದರೆ ಎಲ್ಲ ಶಕುನಗಳು ಶುಭಕರವಾದುವೇ ಎಂಬ ಅಂತರಾರ್ಥವಿದೆ. ಎಡಗಡೆ ಗರುಡ ಕಾಣುವುದು, ಬಲಗಡೆ ಕಾಗೆ ಕಾಣುವುದು, ಹೆಂಗಳೆಯರು ನೀರಿನ ಕೊಡಗಳನ್ನು ಹೊತ್ತು ಬರುವುದು,ಬಲಭಾಗದಲ್ಲಿ ಹಲ್ಲಿ ಲೊಚಗುಟ್ಟುವುದು. ದಾರಿಯಲ್ಲಿ ಭೇರಿ, ಶಂಖ, ಗಂಟೆಗಳ ಧ್ವನಿಕೇಳುವುದು, ಹಾಲು–ಮೊಸರು–ತುಪ್ಪ ಅಥವಾ ಹೂವು ಹಣ್ಣುಗಳನ್ನು ಹೊತ್ತವರು ಎದುರಿಗೆ ಬರುವುದು. ಭಾರದ್ವಾಜವೆಂಬ ಹಕ್ಕಿ ಎಡಗಡೆ ಹಾರುವುದು, ಇಬ್ಬರು ಬ್ರಾಹ್ಮಣರು ಎದುರಿಗೆ ಬರುವುದು ಇವೆಲ್ಲ ಶುಭಶಕುನಗಳೆಂದೂ, ಈ ಶಕುನಗಳು ತೋರಿದರೆ ಮನಸ್ಸಿನಲ್ಲಿ ಅಂದುಕೊಂಡ

ಕಾರ್ಯವಾಗುವದೆಂಬ ನಂಬಿಕೆಯಿದೆ ಅದೇ ರೀತಿ ಪರಮಾತ್ಮನ ಒಲುಮೆ ದೊರಕುವುದು ಒಳ್ಳೆಯ ಶಕುನಫಲವೆಂದು ದಾಸರು ತಿಳಿಸುತ್ತಾರೆ.

**ಡಂಗುರ :** ಹೊಯ್ಯೊಲೊ ಡಂಗುರವ, ಜಗ
ದಯ್ಯನಯ್ಯ ಶ್ರೀ ಹರಿಯಲ್ಲದಿಲ್ಲವೆಂದು ।ಪ।

ಅಷ್ಟೈಶ್ವರ್ಯದ ಲಕುಮಿಯ ಅರಸೆಂದು
ಸೃಷ್ಟಿ ಸ್ಥಿತಿಲಯಾದ್ಯಷ್ಟ ಕರ್ತನೆಂದು
ಘಟ್ಯಾಗಿದನು ತಿಳಿದು ಹರಿಎನ್ನದವರೆಲ್ಲ
ಭ್ರಷ್ಟರಾದರು ಇಹಪರಕೆ ಬಾಹ್ಯರೆಂದು ।೧।
. . . . . . . . . . . . . . . . . . (೮೩)

ಪರಮಾತ್ಮನು ಸೃಷಿಕರ್ತನಾದ ಬ್ರಹ್ಮನ ತಂದೆಯೆಂದು [ಜಗದಯ್ಯನಯ್ಯ] ಸಾರಿ ಹೇಳುತ್ತಿದ್ದಾರೆ ದಾಸರು. ಅನ್ನ, ಅರ್ಥ, ವಿಭವ, ತಾರುಣ್ಯ, ಲಾವಣ್ಯ, ಅಹಂಕಾರ, ಸಾಹಸ, ಪ್ರಭುತ್ವ ಎಂಬ ಎಂಟು ಐಶ್ವರ್ಯಗಳುಳ್ಳ ಲಕ್ಷ್ಮೀಯ ಅರಸನೆಂದು, ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮುಕ್ತಿ ಇವುಗಳು ಎಂಟು ಮಹಾಕಾರ್ಯಗಳು ಇವನ್ನೆಲ್ಲ ನಡೆಸುವನು ವಿಷ್ಣುವೇ ಎಂದು ಡಂಗುರವನ್ನು ಸಾರಿದ್ದಾರೆ ದಾಸರು.

**ಆನಂದ:** ಗೋವಿಂದಾ ನಿನ್ನಾನಂದ ಸಕಲ ಸಾಧನವೋ ।ಪ।

ಅಣುರೇಣು ತೃಣಕಾಷ್ಠ ಪರಿಪೂರ್ಣ ಗೋವಿಂದ
ನಿರ್ಮಲಾತ್ಮಕನಾಗಿ ಇರುವುದೆ ಆನಂದ ।೧।

ಸೃಷ್ಟಿ ಸ್ಥಿತಿಲಯ ಕಾರಣ ಗೋವಿಂದ
ಈ ಪರಿ ಮಹಿಮೆಯ ತಿಳಿಯೋದೆ ಆನಂದ ।೨।

ಮಂಗಳಮಹಿಮ ಪುರಂದರವಿಠಲ
ಹಿಂಗದೆ ದಾಸರ ಸಲಹೋದೆ ಆನಂದ ।೩। (೮೪)

ಪರಮಾತ್ಮನು ಸರ್ವವ್ಯಾಪಿ, ಸೃಷ್ಟಿಗೆ ಕಾರಣನು ಎಂಬುದನ್ನು ತಿಳಿಯುವುದೇ ಆನಂದವನ್ನು ತಂದು ಕೊಡುತ್ತದೆ. ಮಹಾತ್ಮ್ಯಜ್ಞಾನವು ಆನಂದದ ಅನುಭವವನ್ನು ನೀಡುತ್ತದೆ. ಎಂಬ ತಾತ್ಪರ್ಯ ಇಲ್ಲಿದೆ. ಪರಮಾತ್ಮನು ಸೃಷ್ಟಿಕರ್ತನು ಎಂಬುದನ್ನು ದೃಷ್ಟಾಂತಗಳ ಮೂಲಕ ದಾಸರು ಉಗಾಭೋಗವೊಂದರಲ್ಲಿ ಹೀಗೆ ಹೇಳಿದ್ದಾರೆ.

**ಬಿತ್ತುವಿಕೆ :** ಶರಧಿ ಸಡ್ಡೆಯ ಮಾಡಿ ಧರೆಯ ಕೂರಿಗೆ ಮಾಡಿ
ಹರಬೊಮ್ಮರೆಂಬ ಎರಡೆತ್ತುಗಳ ಹೂಡಿ
ನರ ಜೀವರಾಶಿಗಳೆಂಬ ಬೀಜವನೆ ಎತ್ತಿ
ಧರೆಯಲ್ಲಿ ಬಿತ್ತುವಾತ ಇಂದ್ರ ಬೆಳೆಸುವಾತ ಚಂದ್ರ
ಕಳೆಯ ಕೀಳುವಾತ ಯಮಧರ್ಮನಯ್ಯ
ಬಿತ್ತಿದಾತನು ಬೆಳೆಯನು ಒಕ್ಕಿಕೊಂಡೊಯ್ಯೆ
ದು:ಖವೇತಕೆ ಸಿರಿ ಪುರಂದರವಿಠಲ (೮೫)

ಜಗತ್ತಿನಲ್ಲಿ ಜನನ ಮರಣಗಳನ್ನು ಬೆಳೆಗೂ, ಕಳೆಗೂ ಹೋಲಿಸಿ ದಾಸರು ಬಿತ್ತಿದಾತನೆ ಬೆಳೆಯನ್ನು ಕೊಂಡೊಯ್ದರೆ ದು:ಖವೇತಕೆ ಎಂಬುದನ್ನು ಶ್ಲೇಷಾರ್ಥದಲ್ಲಿ ಬಳಸಿದ್ದಾರೆ.

**ಕರ್ತ:** ಕೊಡುವ ಕರ್ತ ಬೇರೆ ಇರುತಿರೆ
ಬಿಡು ಬಿಡು ಚಿಂತೆಯನು ॥ಪ॥

ಒಡೆಯನಾಗಿ ಮೂರ್ಜಗವನ್ನು ಪಾಲಿಪ
ಬಡವರುದ್ಧಾರಕ ಭಕ್ತರ ಪ್ರಿಯನು ॥ಅ॥

ಕಲ್ಲಿನೊಳಗೆ ಇರುವ ಕಪ್ಪೆಗೆ
ಅಲ್ಲೆ ಉದಕ ಕೊಡುವ
ಎಲ್ಲ ಕೋಟಿ ಜೀವರಾಶಿಗಳನೆ ಕಾಯ್ವ
ವಲ್ಲಭ ಶ್ರೀ ಹರಿ ಎಲ್ಲೆಲ್ಲಿರುತಿರೆ ॥೧॥
. . . . . . . . . . . . . . . . . . . (೮೬)

ಜಗತ್ತಿನ ಸೃಷ್ಟಿಗೆ ಕಾರಣನಾದ ಪರಮಾತ್ಮನೆ ರಕ್ಷಣೆಯನ್ನು ಕೊಡುತ್ತಾನೆ ಚಿಂತೆಗಳನ್ನು ಪರಿಹರಿಸುತ್ತಾನೆ ಎಂದು ಹೇಳುತ್ತಾ, ಚಿಂತೆಯಿಂದ ಬಳಲುವ ಮಾನವನಿಗೆ ಭರವಸೆ ಕೊಡುವ ಕೀರ್ತನೆಯಿದು, ಕಲ್ಲಿನಲ್ಲಿರುವ ಕಪ್ಪೆಗೆ ಅಲ್ಲೇ ಆಹಾರ ಕೊಡುವ, ಆನೆಗೆ ಐದು ಮಣ ಆಹಾರ ಒದಗಿಸುವ ಪರಮಾತ್ಮನು ತನ್ನನ್ನೇರಿದ ಜನರ ಬಿಡನು ಎಂಬ ಅಭಯವು ಇಲ್ಲಿ ಕಾಣುತ್ತದೆ. ಪುರಂದರ ದಾಸರ ಸಮಕಾಲೀನರಾದ ಕನಕದಾಸರ ಕೀರ್ತನೆ 'ತಲ್ಲಣಿಸದಿರು ಕಂಡ್ಯ ತಾಳು ಮನವೆ' ಎಂಬುದರ ಅರ್ಥದ ಛಾಯೆ ಈ ಕೀರ್ತನೆಯಲ್ಲಿ ಕಾಣುತ್ತದೆ. ಚಿಂತೆ ಬೇಡ, ಪರಮಾತ್ಮನನ್ನು ನಂಬು ಎಂದ ದಾಸರು ಗ್ರಹಗಳ ಪಿಡೆಯೆಂಬುದಿಲ್ಲ ಎಲ್ಲವೂ ಪರಮಾತ್ಮನ ಆಧೀನವಾದ್ದರಿಂದ ಅವನ ಬಲವಿದ್ದರೆ ಎಲ್ಲ ಗ್ರಹಗಳ ಬಲವು ದೊರಕುವುದು ಎಂದು ಹೇಳುತ್ತಾರೆ.

**ಗ್ರಹಬಲ:** ಸಕಲಗ್ರಹಬಲ ನೀನೆ ಸರಸಿಜಾಕ್ಷ ॥ಪ॥

ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ ॥ಅ॥

ರವಿಚಂದ್ರ ಬುಧ ನೀನೆ ರಾಹು ಕೇತುವು ನೀನೆ
ಕವಿ ಗುರು ಶನಿಯು ಮಂಗಳನು ನೀನೆ
ದಿವರಾತ್ರಿಯು ನೀನೆ ನವವಿಧಾನವು ನೀನೆ
ಭವರೋಗ ಹರ ನೀನೆ ಬೇಷಜನು ನೀನೆ ॥೧॥
. . . . . . . . . . . . . . . . . . . (೮೭)

ಸ್ಥಿರವಾಗಿ, ಎಡೆಬಿಡದೆ ಭಗವಂತನನ್ನು ಭಜಿಸಿದರೆ ಯಾವ ಗ್ರಹಪೀಡೆಯೂ ಇರುವುದಿಲ್ಲ ಎಂಬ ಅರ್ಥ ಇಲ್ಲಿ ಮೂಡಿದೆ. ಆದರೆ ಹದಿನಾಲ್ಕು ಲೋಕಗಳಿಗೂ ಹರಿಯೇ ದೊರೆಯೆಂದು ಜನರು ಅರಿಯರು ಎಂದು ಈ ಕೆಳಗಿನಂತೆ ತಿಳಿಸಿದ್ದಾರೆ.

**ಅರಿವು :** ಅರಿಯರು ಮನುಜರರಿಯರು ||ಪ||

ಅರಿಯರು ಮನುಜರು ಅರಿತೂ ಅರಿಯರು
ಧರೆ ಈರೇಳಕ್ಕೆ ಹರಿಯಲ್ಲದಿಲ್ಲವೆಂದು ||ಅ||

ನಾರದಮುನಿ ಬಲ್ಲ ವಾರಿಜೋದ್ಭವ ಬಲ್ಲ
ಪಾರಾಶರ ಬಲ್ಲ ಮನು ಬಲ್ಲನು
ಧೀರ ಭೀಷ್ಮನು ಬಲ್ಲ ಪಾರ್ವತಿಬಲ್ಲಳು
ಕಾರುಣಿಕನು ಶ್ರೀ ಹರಿಯಲ್ಲದಿಲ್ಲವೆಂದು ||೧||
. . . . . . . . . . . . . . . . . . . (೮೮)

ಅರಿವು ಪ್ರತಿಮೆ ಇಲ್ಲಿ ಹರಿಸರ್ವೋತ್ತಮ ಎಂಬ ಜ್ಞಾನವನ್ನು ಸಂಕೇತಿಸುತ್ತದೆ. ಇಲ್ಲಿ ಹರಿಭಕ್ತರನ್ನು ಉಲ್ಲೇಖಿಸುತ್ತಾ ಇವರೆಲ್ಲರೂ ಹರಿಯ ಮಹಾತ್ಮೆಯನ್ನು ಬಲ್ಲವರೆಂದು, ಸಾಮಾನ್ಯ ಜನರು ಇದನ್ನು ತಿಳಿಯರೆಂದು ಪುರಂದರದಾಸರು ಹೇಳುತ್ತಿದ್ದಾರೆ. ತಾವು ಭಗವಂತನ ದಾಸನೆಂದು ತನಗೊಬ್ಬ ಧೊರೆ ದೊರಕಿದನೆಂದು ಈ ಕೆಳಗಿನಂತೆ ತಿಳಿಸುತ್ತಾರೆ.

**ಧೊರೆ :** ಎನಗೊಬ್ಬ ಧೊರೆ ಧೊರಕಿದನು ||ಪ||

ವನಜ ಸಂಭವನಯ್ಯ ಹನುಮಂತರ್ಯಾಮಿ ||ಅ||

ಮಾತಾಪಿತನಾದ ಭ್ರಾತಬಾಂಧವನಾದ
ಪ್ರೀತಿಯಿಂದಲಿ ತಾನೆ ನಾಥನಾದ
ಖ್ಯಾತನು ತಾನಾದ ದಾತನು ತಾನಾದ
ಭೂತೇಶ ವಂದ್ಯ ವಿಭೂತಿಪ್ರದನಾದ ||೧||
. . . . . . . . . . . . . . . . . . . (೮೯)

'ಧೊರೆ' ಪ್ರತಿಮೆ ಇಲ್ಲಿ ಪರಮಾತ್ಮನನ್ನು ಸಂಕೇತಿಸುತ್ತದೆ. ಕಮಲದಲ್ಲಿ ಹುಟ್ಟಿರುವ ಬ್ರಹ್ಮನ ತಂದೆಯೂ ಹನುಮನಂತರ್ಯದಲ್ಲಿರುವವನೂ ಆದ ಪರಮಾತ್ಮನು ಜಗತ್ತಿಗೆ ತಂದೆಯೆಂದು, ನಾಥನೆಂದೂ ಪುರಂದರ ದಾಸರು ಹೊಗಳುತ್ತಾರೆ. ಜಗತ್ತಿಗೆ ಮಾತೃಸ್ಥಾನದಲ್ಲಿರುವ ಮೂಲಪ್ರಕೃತಿಯಾದ ಲಕ್ಷ್ಮಿಯೂ ಕೂಡ ಅವನ ಸ್ವರೂಪಾಂಶವೇ ಆದ್ದರಿಂದ ಭಗವಂತನನ್ನು ಮಾತೆಯೆಂದು ಕರೆದಿದ್ದಾರೆ.

**ಸೂತ್ರಧಾರಿ :** ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೆ ||ಪ||

ನೀನೆ ಆಡಿಸದಿರಲು ಜಡ ಒನಕೆಯ ಬೊಂಬೆ
ಏನು ಮಾಡಲು ಬಲ್ಲದು ತಾನೆ ಬೇರೆ
ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು
ನೀನೆ ಮುಗ್ಗಿಸಲು ಮುಗ್ಗುವ ದೇಹದವನು ||೧||
. . . . . . . . . . . . . . . . . . . (೯೦)

ಶ್ರೀ ಹರಿಯ ಈ ಜಗತ್ತಿನಲ್ಲಿ ನಡೆಯುತ್ತಿರುವ ವ್ಯಾಪಾರಗಳಿಗೆ ಪ್ರೇರಕನು ನಿಯಾಮಕನೂ ಆಗಿರುವದರಿಂದ ಜೀವನದಲ್ಲಿ ನಡೆಯುವ ಕಾರ್ಯಗಳಿಗೆ ಕಾರಣನು ನಾನಲ್ಲ ಎಂದು ದಾಸರು ಹೇಳುತ್ತಾರೆ.

ಕೇವಲ ಮೂವತ್ತು ಮಂತ್ರಗಳಿರುವ ಈಶಾವಾಸ್ಯ ಉಪನಿಷತ್ತು ಪರಬ್ರಹ್ಮ ಜ್ಞಾನವನ್ನು ಉಪದೇಶಿಸುತದೆ. ಈ ಉಪನಿಷತ್ ಶ್ರೀ ಹರಿಯು ಸರ್ವತ್ರವ್ಯಾಪ್ತನು, ಸರ್ವಾಂತರ್ಯಾಮಿಯು, ಸರ್ವಜನಪ್ರವರ್ತಕನು, ಸರ್ವಸೃಷ್ಟಿಕರ್ತನು, ಸರ್ವಸಂಹಾರಕನು, ಮತ್ತು ಸರ್ವಜ್ಞನೆಂದು ಬೋಧಿಸುತ್ತದೆ. ಹರಿಸರ್ವೋತ್ತಮತತ್ವದಲ್ಲಿ ಅನನ್ಯ ನಿಷ್ಠೆಯೊಂದಲು ಸಜ್ಜನರ ಸಂಗ ಮಾಡಬೇಕೆಂದು ದಾಸರು ಕರೆ ನೀಡುತ್ತಾರೆ.

**ಸಂಗ:** ಹರಿಸರ್ವೋತ್ತಮನೆಂದು ಸ್ಮರಿಸದ ಜನರ ಸಂಗ ಬೇಡ ಪ।

ಸಿರಿ ವಾಯು ಮತ ಪೊಂದಿ ಹರುಷ ಪಡದವರ ಸಂಗ ಬೇಡ ಅ।

ಮುಂದೆ ಭಲಾಯೆಂದು ಹಿಂದಾಡಿಕೊಂಬರ ಸಂಗಬೇಡ
ಎಂದೆಂದಿಗು ಪರರ ನಿಂದೆ ಮಾಡುವ ಪಾಪಿ ಸಂಗ ಬೇಡ
ತಂದೆ ತಾಯಿಗೆ ಮನಬಂದಂತೆ ನುಡಿವರ ಸಂಗ ಬೇಡ
ಇಂದು ಮುಖಿಯರ ಮಾತಿನಂದದಿ ಕುಣಿವರ ಸಂಗ ಬೇಡ ೧।(೯೧)
. . . . . . . . . . . . . . . . . . .

ಆಧ್ಯಾತ್ಮದಲ್ಲಿ ಮನಸ್ಸು ನಿಲ್ಲಲು ಜಿವನದಲ್ಲಿ ಕೆಲವು ಮೌಲ್ಯಗಳನ್ನು ಪಾಲಿಸಬೇಕಾಗುತ್ತದೆ. ಜೀವನದ ಧನ್ಯತೆ ಮೊದಲು ನಮ್ಮ ನಡತೆಗಳನ್ನು ಒಂದು ಮೌಲಿಕ ಚೌಕಟ್ಟಿನಲ್ಲಿರಿಸಿ ಪಾಲಿಸುವುದರಿಂದ ದೊರಕುತ್ತದೆ ಎಂಬುದನ್ನು ಇಲ್ಲಿ ಅಭಿವ್ಯಕ್ತಿಸಲಾಗಿದೆ.

**ಹಬ್ಬ:** ಸಾಧು ಸಜ್ಜನರೊಳಗಿರುವೋದೆ ಹಬ್ಬ
ವೇದಾಂತದರ್ಥವ ತಿಳಿವೋದೆ ಹಬ್ಬ ೧।

ಭೇದ ಬುದ್ಧಿಗಳೆಲ್ಲ ಬಿಡುವೋದೆ ಹಬ್ಬ
ಭಾಗೀರಥಿಲಿ ಲೋಲಾಡುವುದೆ ಹಬ್ಬ ೨।

ಸಂಕಲ್ಪ ಸಿದ್ಧಿ ಮನಕೆ ದೊಡ್ಡ ಹಬ್ಬ
ನಿಶ್ಚಿಂತ ಯೋಗಿಗೆ ಅನುದಿನ ಹಬ್ಬ ೩।

ಸಾವಿಲ್ಲದವನ ಸಂಸಾರದಿ ಹಬ್ಬ
ಶರೀರಕ್ಕೆ ವ್ಯಾಧಿ ಬಾರದೊಡೆ ಹಬ್ಬ ೪।
. . . . . . . . . . . . . . . . . . (೯೨)

ಹಬ್ಬವು ಸಂತೋಷವನ್ನು ವೃದ್ಧಿಮಾಡುತ್ತದೆ. 'ಹಬ್ಬ' ಪ್ರತಿಮೆಯು ಇಲ್ಲಿ ಸಂತೋಷವನ್ನು ಸಂಕೇತಿಸುತ್ತಿದೆ. ದೈವತ್ವದಲ್ಲಿ ಸರ್ವಸ್ವನ್ನೂ ಕಾಣುವ ದಾಸರು ಜಗತ್ತಿನ ಸೂತ್ರಧಾರ ಶ್ರೀಹರಿ ಎಂಬ ನಂಬಿಕೆಯಿಂದ ಕೀರ್ತನೆಗಳನ್ನು ರಚಿಸಿದರು. ಶ್ರೀಹರಿಯ ಚಿಂತನೆಯು ನಮಗೆ ಪರಮಾರ್ಥಸಾಧಕವಾದುದು, ಅದಕ್ಕಾಗಿ ಹರಿಭಕ್ತರ ಸಹವಾಸವಿರಬೇಕು, ಹರಿಧ್ಯಾನಪರನಾಗಿರಬೇಕು, ವಿಠಲನ ಚರಣವ ನಂಬಿ ಅವನನ್ನೇ ಶರಣು ಹೋಗಬೇಕು ಎಂದು ದಾಸರು ಉಪದೇಶಿಸುತ್ತಾರೆ.

ಪರಮಾತ್ಮನ ಉಪಾಸನೆ, ಧ್ಯಾನ ಮಾಡಿ ಮುಕ್ತಿ ಹೊಂದುವ ಮೊದಲು ಶಾಸ್ತ್ರ ವಿಚಾರಗಳನ್ನು ತಿಳಿದುಕೊಂಡು ಜ್ಞಾನಕಾರ್ಯಗಳನ್ನು ಮಾಡಬೇಕು. ವೇದ, ಪುರಾಣಗಳಲ್ಲಿ ಹೇಳಿದ ವಿಷಯಗಳನ್ನು ಜನರಿಗೆ ಉಪದೇಶ ಮಾಡುವಾಗ ಕೆಲ ಜನರು ಆಸಕ್ತಿ ತೋರಿಸುವದಿಲ್ಲ ಅದರಿಂದ ಬೇಸತ್ತ ದಾಸರು ಹೀಗೆ ಹೇಳಿದ್ದಾರೆ.

**ಶಾಸ್ತ್ರ:**

ನಮ್ಮ ಶಾಸ್ತ್ರ ಇಲ್ಲಿ ಮಾರುವದಲ್ಲ
ಸುಮ್ಮನಿದ್ದರೆ ಯಾರು ಕೇಳುವರಿಲ್ಲ ಪ।

ಏಡಿ ಕಡಗವಿಟ್ಟು ಫಲವೇನಿಲ್ಲ
ಬೇಡ ತಾ ಮುತ್ತಿನ ಬೆಲೆ ಏನು ಬಲ್ಲ
ಕಾಡ್ಹಳ್ಳಿಗೌಡ ತಾ ಅರಸಾಗಲಿಲ್ಲ
ವೇದ ಶಾಸ್ತ್ರಕೆ ಮೂಢ ತಲೆದೂಗಲಿಲ್ಲ ೧।

ಮೂಕ ತಾ ಮಾತಿನ ಸವಿ ಎನು ಬಲ್ಲ
ಲೌಕಿಕ ಬೇನೆ ಸನ್ಯಾಸೇನು ಬಲ್ಲ
ಕಾಕು ಮಾನವ ಪುಣ್ಯ ಪಾಪೇನು ಬಲ್ಲ
ಶ್ರೀ ಕೃಷ್ಣನ ನೆನೆಯದವ ಮಾನವನಲ್ಲ ೨।
. . . . . . . . . . . . . . . . . . . (೯೩)

ಜೀವ, ಪರಮಾತ್ಮ, ಜಗತ್ತು ಇವುಗಳ ಸಂಬಂಧ ಮೊದಲಾದ ವಿಷಯಗಳನ್ನು ತಿಳಿದುಕೊಳ್ಳಲು ಶಾಸ್ತ್ರಗಳ ಅವಶ್ಯಕತೆಯಿದೆ. ಶಾಸ್ತ್ರಗಳ ತಿಳುವಳಿಕೆ ನಮ್ಮ ಸಾಧನಾ ಮಾರ್ಗಗಳಿಗೆ ದಾರಿದೀಪಗಳಾಗಿವೆ. ನಮ್ಮ ವ್ಯಕ್ತಿತ್ವದ ಇತಿಮಿತಿಗಳ ಸರಿಯಾದ ಜ್ಞಾನ ಇಲ್ಲದಿದ್ದರೆ ನಾವು ಸರಿಯಾದ ಗುರಿ ಮುಟ್ಟಲು ಅಸಮರ್ಥರಾಗುವೆವು ಅದಕ್ಕಾಗಿ ದಾಸರು ಶಾಸ್ತ್ರಗಳನ್ನು ತಿಳಿಯಲು ಇಚ್ಛಿಸದ ಜನರನ್ನು 'ಮೂಕ', ಕುರುಡ' ಮುಮತಾದ ಉಪಮೆಗಳನ್ನು ಬಳಸಿ ತೆಗಳಿದ್ದಾರೆ. ಲೌಕಿಕ ಪ್ರಸಕ್ತಿಗಳಲ್ಲೇ ಮುಳುಗಿದ ಅಂತಹ ಜನರನ್ನು ಕುರಿತು ಅಸಮಾಧಾನ ವ್ಯಕ್ತಪಡಿಸಿದ್ದಾರೆ.

**ಧರ್ಮ:**

ಧರ್ಮವೇ ಜಯವೆಂಬ ದಿವ್ಯಮಂತ್ರ ಪ।

ಮರ್ಮವನರಿತು ಮಾಡಲಿಬೇಕು ತಂತ್ರ ಅ।

ವಿಷವಿಕ್ಕಿದವಗೆ ಷಡ್ರಸವನುಣಿಸಲಿಬೇಕು
ದ್ವೇಷಮಾಡಿದವನ ಪೋಷಿಸಲು ಬೇಕು
ಪುಸಿ ಮಾಡಿ ಕೆಡಿಸುವನ ಹಾಡಿ ಹರಸಲಿಬೇಕು
ಮೋಸ ಮಾಡುವನ ಹೆಸರು ಮಗನಿಗಿಡಬೇಕು ೧।

ಒಂದೆ ನಿಂದಿಪರನ್ನು ವಂದಿಸುತಲಿರಬೇಕು
ಬಂಧನ ದೊಳಿಟ್ಟವರ ಬೆರೆಯಬೇಕು
ಕೊಂದ ವೈರಿಯ ಮನೆಗೆ ನಡೆದು ಹೋಗಲಿಬೇಕು
ಕುಂದೆಣಿಸುವರ ಗೆಳೆತನ ಮಾಡಬೆಕು ೨।

ಕೊಂಡೊಯ್ದು ಬಡಿಯುವರ ಕೊಂಡಾಡುತಿರಬೇಕು
ಕಂಡು ಸಹಿಸದವರ ಕರೆಯಬೇಕು
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ

ಧರ್ಮ ಎಂದರೆ ಲೌಕಿಕ ವ್ಯವಹಾರಗಳ ವರ್ಜನೆ ಅಲ್ಲ ಹೊರತು ಆ ವ್ಯವಹಾರಗಳಲ್ಲಿ ಶಿಸ್ತನ್ನು ಜೋಡಿಸುವ ಒಂದು ಸೇತುವೆಯಾಗಿದೆ. ಆಹಾರ, ನಿದ್ರೆ, ಭಯ, ಮೈಥುನಾದಿಗಳು ಪ್ರಾಣಿಗಳಲ್ಲಿಯ ಸ್ವಾಭಾವಿಕ ಪ್ರವೃತ್ತಿಗಳು. ಇವುಗಳಿಗೆ ನೀತಿಯ ಮರ್ಯಾದೆಯನ್ನು ಹಾಕಿ ಸ್ವೇಚ್ಛಾಚಾರವನ್ನು ಹಿಡಿತದಲ್ಲಿಡುವುದೇ ಧರ್ಮ. ನೀತಿಯ ಚೌಕಟ್ಟನ್ನು ಮೀರಿ ನಡೆಯುವುದು ಅನ್ಯಾಯ, ಮೋಸ, ವಂಚನೆಗಳಿಗೆ ದಾರಿಮಾಡಿಕೊಡುತ್ತದೆ. ಈ ಕೀರ್ತನೆಯಲ್ಲಿ ದಾಸರು ಮೋಹ ದ್ವೇಷಗಳನ್ನು ಬಿಟ್ಟು ಮನಸ್ಸನ್ನು ಹೇಗೆ ಹಿಡಿತದಲ್ಲಿಡಬೇಕು ಎಂಬುದನ್ನು ತಿಳಿಸಿದ್ದಾರೆ. ಸತ್ಪುರುಷರ ಮೂಲಭೂತ ಲಕ್ಷಣಗಳನ್ನು ಈ ಪದ ಮನಗಾಣಿಸುತ್ತದೆ. ವೈರದಿಂದ ವೈರ ಶಮನವಾಗುವದಿಲ್ಲ ಎಂಬುದನ್ನು ವಿವೇಕಿಗಳು ಬಲ್ಲರು. ನಮ್ಮ ಸುತ್ತ ದ್ವೇಷಿಗಳು, ಹುಸಿಗಾರರು, ವಂಚಕರು, ನಿಂದಿಸುವವರು, ಪೀಡಕರು, ಅಸೂಯೆಪಡುವ ಜನರು ಇರತ್ತಾರೆ. ಅಂಥವರೊಂದಿಗೆ ಸಹನೆಯಿಂದ ಸ್ಪಂದಿಸಬೇಕೆಂಬುದನ್ನು ದಾಸರು ತಿಳಿಸುತ್ತಾರೆ. ಧರ್ಮವನ್ನು ಆಚರಿಸುವದರಿಂದ ಪುಣ್ಯವೂ, ಅಧರ್ಮವನ್ನು ಆಚರಿಸುವದರಿಂದ ಪಾಪವೂ ಬರುವದೆಂದು ಹಿಂದುಗಳಲ್ಲಿ ನಂಬಿಕೆಯಿದೆ. ಜ್ಞಾನ–ಅಜ್ಞಾನಗಳು, ದರ್ಮ–ಅಧರ್ಮಗಳು ಈ ಜನ್ಮದಿಂದ ಮುಂದಿನ ಜನ್ಮಕ್ಕೆ ಆತ್ಮದ ಸಂಗಡ ಬರುತ್ತದೆ (ಉ) ಎಂಬುದನ್ನು ನಮ್ಮ ಶಾಸ್ತ್ರಗಳಲ್ಲಿ ಹೇಳಲಾಗಿದೆ. ಅದಕ್ಕಾಗಿ ಧರ್ಮವನ್ನು ಆಚರಿಸಬೇಕು ಎಂದ ಪುರಂದರದಾಸರು ಈ ಕೆಳಗಿನ ಕೀರ್ತನೆಯಲ್ಲಿ ಹೇಳಿದ್ದಾರೆ.

**ಧರ್ಮ:** ಮಂಚಬಾರದು ಮಡದಿ ಬಾರಳು
ಕಂಚು ಕನ್ನಡಿ ಬಾರವು
ಸಂಚಿತಾರ್ಥದ ದ್ರವ್ಯ ಬಾರದು
ಮುಂಚೆ ಮಾಡಿರೋ ಧರ್ಮವ (೯೫)

ಕರ್ಮ ಜೀವಿಯು ಅಲ್ಪಶಕ್ತಿಯುಳ್ಳವನಾಗಿದ್ದರಿಂದ ಅವನು ಸ್ವತಂತ್ರವಾಗಿ ಕಾರ್ಯಗಳನ್ನು ಮಾಡಲು ಸಾಧ್ಯವಿಲ್ಲ 'ತೇನ ವಿನಾ ತೃಣಮಪಿ ನ ಚಲತಿ' ಎಂಬ ಉಕ್ತಿಯಂತೆ ಪರಮಾತ್ಮನೆ ಎಲ್ಲ ಕ್ರಿಯೆಗಳಿಗೆ ನಿಯಾಮಕನು, ಪ್ರೇರಕನು ಆಗಿದ್ದಾನೆ. ಲೋಕದಲ್ಲಿ ಪರಮಾತ್ಮನು ಸರ್ವಫಲಗಳನ್ನು ಅವರವರಿಗೆ ಅವರವರ ಸ್ವಭಾವ ಕರ್ಮಾನುಸಾರವಾಗಿ ಕೊಡುವನು (ಊ) ಇದನ್ನೇ ಪುರಂದರದಾಸರು

ಆರೇನ ಮಾಡುವರು ಆರಿಂದಲೇನಹುದು ಪ।
ಪೂರ್ವ ಜನ್ಮದ ಕರ್ಮವಿಧಿ ಬೆನ್ನಬಿಡದು ಅ।
. . . . . . . . . . . . . . . . . . (೯೬)

ಎಂದಿದ್ದಾರೆ. ಜೀವಿಗಳಿಗೆ ಅವರವರ ಕರ್ಮಾನುಸಾರ ಜೀವನವ್ಯಾಪಾರಕ್ಕೆ ಪ್ರೇರೆಪಿಸುವ ಭಗವಂತನು ಸತ್ಕರ್ಮವನ್ನು ಮಾಡಿದವರಿಗೆ ಸದ್ಬುದ್ಧಿಯನ್ನು ಕೊಟ್ಟು ಅನಿಷಿದ್ಧಕರ್ಮಗಳಲ್ಲಿ ಅವರನ್ನೂ ಪ್ರೇರಿಸಿ ಉತ್ತಮ ಫಲಗಳನ್ನು ಕೊಡುವನು. ದು:ಸಂಗಾದಿಗಳಿಂದ ದುಷ್ಟ ಕರ್ಮವನ್ನು ಮಾಡಿದವರಿಗೆ ದುರ್ಬುದ್ಧಿಯನ್ನು ಕೊಟ್ಟು, ವಿರುದ್ಧ ವ್ಯಾಪಾರಗಳಲ್ಲಿ ಪ್ರೇರಿಸಿ ಅನರ್ಥ ಫಲಗಳನ್ನು ಕೊಡುವನು. ಈ ಕಾರಣಗಳಿಂದ ಪರಮಾತ್ಮನಿಗೆ ವೈಷಮ್ಯ

ನೈರ್ಘಣ್ಯ ದೋಷಬರುವದಿಲ್ಲ (೨೫) ಈ ರೀತಿ ಕರ್ಮಾನುಸಾರ ಫಲಗಳನ್ನು ಕೊಡುವ ಪರಮಾತ್ಮನನ್ನು ದಾಸರು ಬೇಹಾರಿಗ (ವ್ಯಾಪಾರಿ ಎಂದಿದ್ದಾರೆ).

**ಬೇಹಾರಿಗ (ವ್ಯಾಪಾರಿ):** ವೇದಗಳೆಂಬೋ ದಾವಣಿಗಳಲ್ಲಿ
ನಾಮಗಳೆಂಬೋ ಮೂಗುನೇಣಿಗಳಿಂದ
ಜೀವರುಗಳೆಂಬ ಎತ್ತುಗಳನೆ ಕಟ್ಟಿ
ಭಕುತಿ ರಸವೆಂಬೋ ಮುಟ್ಟುಗಳನೆ ಹಾಕಿ
ಕರ್ಮವೆಂಬೋ ಭಾರವನು ಹೇರಿ
ಆಡುವ ಪುರಂದರವಿಠಲನೆಂಬ
ದೊಡ್ಡ ಬೇಹಾರಿಗ ಕಾಣಿರೋ. (೯೭)

ಕೆಟ್ಟಕರ್ಮಗಳು ಪಾಪವನ್ನು ಗಳಿಸುತ್ತವೆ. ಅಂತಹ ಪಾಪವನ್ನು ಕಳೆಯಬೇಕಾದರೆ ಕೆಟ್ಟ ಕರ್ಮಗಳ ಫಲವನ್ನು ಉಣಲೇಬೇಕು. ದೋಷಪೂರಿತ ಕೆಲಸಗಳಿಂದ ದೊರೆತ ಪಾಪವೆಂಬ ಸಾಲವನ್ನು ಪರಿಹರಿಸಲು ಈ ರೀತಿ ದಾಸರು ಪರಮಾತ್ಮನಲ್ಲಿ ನಿವೇದನೆ ಮಾಡಿಕೊಳ್ಳುತ್ತಿದ್ದಾರೆ.

**ಪಾತಕ:** ಋಣವೆಂಬ ಪಾತಕವು ಬಹುಬಾಧೆಪಡಿಸುತಿದೆ ॥ಪ॥

ಗುಣನಿಧಿಯ ನೀನೆನ್ನ ಋಣವ ಪರಹಿರಸೋ ॥ಅ॥

ಒಡಲಿನಾಸೆ ಪರರ ಒಡವೆಗಳನು ತಂದು
ಬಿಡದೆ ವೆಚ್ಚವ ಮಾಡಿ ತೋಷಪಡುವೆ
ಕೊಡುವ ವೇಳೆಗೆ ಅವರ ಕೆಡು ನುಡಿಗಳನು ನುಡಿವೆ
ಕಡು ಮಹಾ ಪಾತಕವ ಪರಿಹರಿಸೋ ಹರಿಯೆ ॥೧॥
. . . . . . . . . . . . . . . . . .
. . . . . . . . . . . . . . . . . . (೯೮)

ನಾವು ಮಾಡಿದ ಕರ್ಮವ ಫಲವಾಗಿ ಋಣದಿಂದ ಅಷ್ಟು ಸುಲಭವಾಗಿ ಬಿಡುಗಡೆ ಹೊಂದುವುದು ಸಾಧ್ಯವಿಲ್ಲ ಎಂದು ಈ ಕೆಳಗಿನಂತೆ ಹೇಳುತ್ತಾರೆ.

ಹರಿವ ಹಾವನ ತೆಗೆದು ಶಿರಕೆ ಸುತ್ತಲುಬಹುದು
ಉರಿವ ಉರಿಯೊಳು ಪೊಕ್ಕು ಕುಣಿಯಬಹುದು
ಮುರಿವ ಮಾಳಿಗೆಗೆ ಕೈಯೊಡ್ಡಿ ನಿಲ್ಲಿಸಬಹುದು
ಧರೆಯೊಳಗೆ ಋಣದವನ ಜಯಿಸಲಳವಲ್ಲ ॥೩॥

ಹೆತ್ತ ಸೂತಕ ಮತ್ತೆ ಹತ್ತುದಿನ ಪರಿಯಂತ
ಮೃತ್ಯು ಸೂತಕವು ಹನ್ನೊಂದು ದಿವಸ
ಮತ್ತೆ ಋಣ ಸೂತಕವು ಜನ್ಮ ಜನ್ಮಾಂತರದಿ
ಎತ್ತ ಪೋದರು ಬಿಡದೆ ಬೆನ್ನಟ್ಟಿ ಬಹುದು ॥೫॥ (೯೯)

'ಋಣ' ಎಂಬ ಪದಕ್ಕೆ 'ಹಂಗು' ಸಾಲ' 'ಕಡ' ಎಂಬ ಪ್ರಸಿದ್ಧಾರ್ಥಗಳಿವೆ. ಬೇರೆಯವರ ಹಣ ಸಹಾಯ ತೆಗೆದುಕೊಂಡರೆ ನಾವು ಅವರ ಋಣ ತೀರಿಸಬೇಕಾಗಬಹುದು ಎಂಬುದನ್ನು ಮುಂದಿನ ನುಡಿಯಲ್ಲಿ ದಾಸರು ವಿವರಿಸಿದ್ದಾರೆ.

ಅವನ ಒಡವೆಗಳಿಂದ ದಾನಧರ್ಮವ ಮಾಡೆ
ಅವನಿಗಲ್ಲದೆ ಪುಣ್ಯ ಇವನಿಗುಂಟೆ ?
ಅವನ ದ್ರವ್ಯಗಳಿಂದ ತೀರ್ಥಯಾತ್ರೆಯ ಮಾಡೆ
ಇವನ ಜೀವನವು ಬಾಡಿಗೆ ಎತ್ತಿನಂತೆ ೬ (೧೦೦)

ಋಣವೆಂಬ ಪಾತಕವನ್ನೆಲ್ಲ ಕಳೆಯಲು ಹರಿನಾಮಸ್ಮರಣೆಯು ಅವಶ್ಯಕ ಎಂಬುದನ್ನು ದಾಸರು ಹೀಗೆ ಹೇಳುತ್ತಾರೆ.

**ನಾಮಸ್ಮರಣೆ:** ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು ಪ।

ಭೂತದಯಾಪರನಾಗಿರಬೇಕು
ಪಾತಕವೆಲ್ಲ ಕಳೆಯಲಿಬೇಕು
ಮಾತು ಮಾತಿಗೆ ಹರಿಯೆನ್ನಬೇಕು ೧।
. . . . . . . . . . . . . . . . . . (೧೦೧)

ಹರಿನಾಮಸ್ಮರಣೆಯಿಂದ ತಮ್ಮ ಪಾಪಗಳೆಲ್ಲಮೂ ಕಳೆದವು ಎಂದು 'ಪಾಪೋಸು' [ಮೆಟ್ಟು] ಪ್ರತಿಮೆಯ ಮೂಲಕ ದಾಸರು ವಿವರಿಸುತ್ತಾರೆ.

**ಪಾಪೋಸು:** ಪಾಪೋಸು ಹೋದುವಲ್ಲ ಸ್ವಾಮಿ ಎನ್ನ
ಪಾಪೋಸು ಹೋದುವಲ್ಲ ಪ।

ಅಪಾರ ದಿನಗಳಿಂದ ಅರ್ಜನೆ ಮಾಡಿದ ಅ।
. . . . . . . . . . . . . . . . . .
ಪರಮಭಾಗವತರ ಹರಿಕಥೆ ಕೇಳಲು
ಪರಮ ಭಕುತಿಯಿಂದ ಕೇಳುತಿರೆ
ಪರಮ ಪಾಪಿಗಳ ಪಾಲಾಗಿ ಪೋದವು
ಪರಮ ಪುರುಷನ ಮನಸಿಗೆ ಬಂದೀಗ ೨।
. . . . . . . . . . . . . . . . . . (೧೦೨)

ಕತೆ ಕೇಳುವಾಗ ಯಾರೋ ತಮ್ಮ ಪಾದರಕ್ಷೆ ಕದ್ದರು ಎಂಬುದನ್ನು ಚಮತ್ಕಾರದಿಂದ ಸೂಚಿಸಿದಂತೆ ಕಂಡರೂ ಇಲ್ಲಿ ಹರಿಕಥಾ ಶ್ರವಣದಿಂದ ಎಲ್ಲ ಪಾಪಗಳು ನಾಶವಾಗುವವು ಎಂಬ ಅಂತರಾರ್ಥ ಅಡಗಿದೆ. ಹರಿಸ್ಮರಣೆಯಿಂದ ಎಲ್ಲ ಪಾಪಗಳು ನಾಶವಾಗುವವು, ಮಾಡದಿದ್ದರೆ ಮತ್ತೇ ಜನನ ಮರಣಗಳೆಂಬ ಚಕ್ರದಲ್ಲಿ ತಿರುಗುತ್ತಿರಬೇಕು ಎಂಬುದನ್ನು 'ಭೀತಿ' ಪ್ರತಿಮೆಯ ಮೂಲಕ ವಿವರಿಸುತ್ತಾರೆ.

**ಭೀತಿ:** ಹುಟ್ಟುವ ಭೀತಿ, ಹೊಂದುವ ಭೀತಿ
ವಿಠಲನಪ್ರಿಯ ನೆನೆಯದವಗೆ
ಕಾಲದ ಭೀತಿ ಕರ್ಮದ ಭೀತಿ ಗೋ
ಪಾಲನ ದಾಸನಾಗದವಗೆ
ಅರಷಡ್ವರ್ಗದ ಮಹಾಭೀತಿ ಶ್ರೀ
ಹರಿನಾಮ ಉಚ್ಚರಿಸದವಗೆ
ಹಲವು ಮಾತಿನ್ನೇನು ಹಲವು ಭೀತಿ
ಶ್ರೀ ಪುರಂದರವಿಠಲನ ಭಜಿಸದವಗೆ. (೧೦೩)

'ಮಾಡುವವನು ನಾನು ಮಾಡಿಸುವವನು ಹರಿ' ಎಂಬ ಮನೋಧರ್ಮದಲ್ಲಿ ನಂಬಿಕೆಯುಳ್ಳ ದಾಸರು ಸಂಸಾರದಲ್ಲಿ ಹೇಗಿರಬೇಕು ಎಂಬುದನ್ನು ತಿಳಿಸಿದ್ದಾರೆ.

**ಸಂಸಾರ:**

ಹ್ಯಾಂಗೆ ಬರೆದಿತ್ತೋ ಪ್ರಾಚೀನದಲ್ಲಿ
ಹಾಂಗೆ ಇರಬೇಕು ಸಂಸಾರದಲ್ಲಿ ।ಅ।

ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ
ಆ ಕ್ಷಣದಲ್ಲಿ ಹಾರಿ ಹೋದಂತೆ ।೧।

ನಾನಾ ಪರಿಯಲಿ ಸಂತೆ ನೆರೆದಂತೆ
ನಾನಾ ಪಂಥವ ಹಿಡಿದು ಹೋದಂತೆ ।೨।

•ಮಕ್ಕಳಾಡಿ ಮನೆ ಕಟ್ಟಿದಂತೆ
ಆಟ ಸಾಕೆಂದು ಅಳಿಸಿ ಪೋದಂತೆ ।೩।

ವಸತಿಕಾರನು ವಸತಿ ಕಂಡಂತೆ
ಹೊತ್ತಾರೆದ್ದು ಹೊರಟು ಹೋದಂತೆ ।೪।

ಸಂಸಾರ ಪಾಶವ ನೀನೆ ಬಿಡಿಸಯ್ಯ
ಕಂಸಾರಿ ಪುರಂದರವಿಠಲರಾಯ ।೫। (೧೦೪)

'ಸಂಸಾರ' ಪ್ರತಿಮೆ ಬದುಕಿನಲ್ಲಿ ನಾವು ಪಡೆದುಕೊಳ್ಳುವುದೆಲ್ಲ ನಮ್ಮ ಕರ್ಮಾನುಸಾರವಾಗಿ ಎನ್ನುವ ಮೂಲಭೂತವಾದ ವಿಶ್ವಾಸ ಹೊಂದಿ ಸಂಸಾರದಲ್ಲಿ ಇದ್ದೂ ಇಲ್ಲದಂತೆ ಇರಬೇಕು ಎಂಬ ತತ್ವವನ್ನು ತಿಳಿಸುತ್ತದೆ. ನಶ್ವರವಾದ ಸಂಪತ್ತಿನಿಂದ ಲಾಭವಿಲ್ಲವೆಂದು ಸಂಪತ್ತನ್ನು ಹಾವಿಗೂ, ಕಪ್ಪೆಯನ್ನು ಜೀವನಿಗೂ ಹೋಲಿಸಿ ಈ ಕೆಳಗಿನ ಉಪಮೆಯ ಮೂಲಕ ದಾಸರು ಜನರನ್ನು ಎಚ್ಚರಿಸುತ್ತಿದ್ದಾರೆ.

ಎರವಿನ ಸಿರಿಗೆ ಬಿಮ್ಮನೆ ಬೆರೆತರೆ ನೀರ
ಕಡೆದರುಂಟೆ ಬೆಣ್ಣೆ ಜೀವವೆ
ಉರಗನ ಹೆಡೆಯ ನೆಳಲ ಸೇರಿದ ಕಪ್ಪೆ
ಸ್ಥಿರಕಾಲ ಬಾಳ್ವುದೆ ಜೀವವೆ ।ಪ। (೧೦೫)

ನಶ್ವರವಾದ ಸಂಪತ್ತಿನಿಂದಲೇ ಉನ್ನತ ಫಲಗಳನ್ನು ಪಡೆಯುತ್ತೇನೆ ಎನ್ನುವುದು ನೀರನ್ನು ಕಡೆದು ಬೆಣ್ಣೆಯನ್ನು ಅಪೇಕ್ಷಿಸುವಷ್ಟೇ ಮೂರ್ಖ ಪ್ರಯತ್ನವಾಗುತ್ತದೆ ಎಂಬ ಸತ್ಯವನ್ನು ದಾಸರು ಇಲ್ಲಿ ತಿಳಿಸಿದ್ದಾರೆ.

**ಕೊಳಗ:**

ಉದಯ ಅಸ್ತಮಾನವೆಂಬ ಎರಡು ಕೊಳಗವಿಟ್ಟು
ಆಯುಸ್ಸು ಎಂಬ ರಾಸಿ ಅಳೆದು ಹೋಗದ ಮುನ್ನ
ಹರಿಯ ಭಜಿಸಬೇಕು ಮನಮುಟ್ಟಿ
ಭಜಿಸಿದರೆ ತನ್ನ ಕಾರ್ಯವು ಘಟ್ಟಿ
ಹಾಗಲ್ಲದಿದ್ದರೆ ತಾಪತ್ರಯ ಬೆನ್ನಟ್ಟಿ
ವಿಧಿಯೊಳು ಗೆಯ್ವಾಗ ಹೋಗದಯ್ಯ ಕಟ್ಟಿ

ಪುರಂದರವಿಠಲನ ಕರುಣಾದೃಷ್ಟಿ
ಅವನ ಮೇಲಿದ್ದರೆ ಅವ ಜಗಜಟ್ಟಿ (೧೦೬)

ಇಲ್ಲಿ ಕೊಳಗವು ಮನುಷ್ಯನ ಜೀವಿತ ಸಮಯವನ್ನು ಸಂಕೇತಿಸುತ್ತದೆ. ಹಗಲು–ಇರುಳುಗಳೆಂಬ ಕೊಳಗದಿಂದ ಆಯುಷ್ಯವನ್ನು ಅಳೆಯುತ್ತಾಹೋಗುವಾಗ ತಾನು ಜೀವಮಾನದಲ್ಲಿ ಸಾಧಿಸಿದ್ದೇನು ಎಂದು ಯೋಚಿಸಬೇಕು ಆಯುಸ್ಸೆಂಬ ರಾಸಿ ಮುಗಿಯುವ ಮುನ್ನ ಪುರಂದರವಿಠಲನ ಭಜಿಸಬೇಕು ಎಂಬ ತಾತ್ಪರ್ಯ ಇಲ್ಲಿದೆ. ಮನುಷ್ಯ ಜನ್ಮವು ಸಿಕ್ಕಾಗ ಅದನ್ನು ಸರಿಯಾಗಿ ಉಪಯೋಗಿಸಬೇಕೆಂದರೆ ಪರಮಾತ್ಮನ ಕೃಪೆ ಬೇಕು ಎಂಬುದನ್ನೆ ದಾಸರು ಅನೇಕ ಉಪಮೆಗಳ ಮೂಲಕ ವಿವರಿಸುತ್ತಾರೆ.

ಪೈರು: ಸಲ್ಲದೋ ಕೃಷ್ಣ ಸಲ್ಲದೋ ।ಪ।

ಸಿರಿ ವಲ್ಲಭ ಇದ ನೋಡಿ ಪಾಲಿಸಬೇಕೋ ।ಅ।

ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನು
ಮತ್ತೆ ತುರುವಿಂಡು ಬಿಟ್ಟು ಮೆಲ್ಲಿಸುವುದು ।೧।

ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ
ಪಾವಕನುರಿಗೆ ನೀನೊಪ್ಪಿಸಿಕೊಡುವುದು ।೨।

ಕುಶಲದಿ ಬಣ್ಣಿಸಿ ಬರೆದ ಚಿತ್ತಾರವ
ಮಸಿ ಮಣ್ಣು ಮಾಡಿ ನೀ ಕೆಡೆಸುವುದು ।೩।

ಬಹುಕಾಲ ಮುದ್ದಿಸಿ ಕಲಿಸಿ ಮಾತುಗಳ
ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು ।೪।
ಕರುಣಿಸು ಸಿರಿ ಪುರಂದರವಿಠಲ ನಮ್ಮ
ಹಿರಿದು ಮಾಡಿ ಮತ್ತೆ ಕಿರಿದುಮಾಡುವುದು ।೫। (೧೦೭)

ಪರಮಾತ್ಮನೇ ಸೃಷ್ಟಿಕರ್ತನಾದ ಮೇಲೆ ತಾನೇ ಮರಣವನ್ನು ತಂದು ಸಾಧನೆಗೆ ಅಡ್ಡಿ ಮಾಡುವುದು ಉಚಿತವೇ ಎಂಬರ್ಥದಲ್ಲಿ ದಾಸರು ಪರಮಾತ್ಮನನ್ನು ಪ್ರಶ್ನಿಸುತ್ತಾರೆ. ಬಿತ್ತಿ ಬೆಳೆದ ಪೈರನು, ಹಸುಗಳ ಗುಂಪನ್ನು ಬಿಟ್ಟು ಮೇಯಿಸುವುದು ಸುಂದರವಾಗಿ ಕಟ್ಟಿದ ಮನೆಗೆ ಬೆಂಕಿಯಿಡುವುದು, ಜಾಣ್ಮೆಯಿಂದ ಬಿಡಿಸಿದ ರಂಗೋಲಿಯನ್ನು ಅಳಿಸುವುದು, ಪ್ರೀತಿಯಿಂದ ಗಿಳಿಯನ್ನು ಸಾಕಿ ಮಾತು ಕಲಿಸಿ ಬೆಕ್ಕಿಗೆ ಕೊಡುವುದು ಉಚಿತವೇ ಎಂದು ಪ್ರಶ್ನಿಸುತ್ತಾ, ಮನುಷ್ಯ ಜನ್ಮವನ್ನು ಒದಗಿಸಿದ ಪರಮಾತ್ಮನೇ ಸದ್ಗತಿಗೂ ಅವಕಾಶ ಮಾಡಿಕೊಡಬೇಕು ಎಂದು ಅವನಲ್ಲಿ ಆಗ್ರಹಮಾಡಿ ಬೇಡಿಕೊಂಡಿದ್ದಾರೆ.

ದಾರಿ: ದಾರಿಯೇನಿದಕೆ ಮುರಾರಿ ನೀ
ಕರುಣದಿ ಕೈ ಹಿಡಿಯದಿದ್ದರೆ
ಕಷ್ಟ ಕರ್ಮಂಗಳು ಎಷ್ಟಾದರೂ ಮಾಳ್ಪೆ
ಇಷ್ಟೂ ಲಕ್ಷಿಪನಲ್ಲ ಗುರುಹಿರಿಯರ
ದುಷ್ಟರ ಸಂಗವ ಬಹಳ ಮಾಡಿದರಿಂದ

ಶ್ರೇಷ್ಠರ ಸೇವೆಯೆಂದರೆ ಆಗದೆನಗೆ ೧। (೧೦೮)

ಇಂದ್ರಿಯ ನಿಗ್ರಹವೆಂಬುದು ಸುಲಭವಲ್ಲ. ದಾಸರಿಗೂ ಇಂತಹ ಸಂದರ್ಭ ಬರುತ್ತದೆ. ಆಗ ದಾಸರು, ಕೆಟ್ಟ ಕೆಲಸಗಳನ್ನು ಮಾಡಲು ಮನಸ್ಸು ಪ್ರೇರೆಪಿಸುತ್ತಿದೆ. ಒಳ್ಳೆಯ ಕಾರ್ಯಗಳನ್ನು ಮಾಡಲು ಒಲ್ಲದ ನಮಗೆ ದಾರಿ ಯಾವುದು ಎಂದು ಪರಮಾತ್ಮನಲ್ಲಿ ಆರ್ತತೆಯಿಂದ ಮೊರೆಯಿಡುತ್ತಿದ್ದಾರೆ. ಎಲ್ಲ ಕಷ್ಟಗಳಿಂದ ಪಾರಾಗಲು ಭಗವಂತನ ಚರಣ ಕಮಲಗಳನ್ನು ನಂಬಬೇಕು ಎಂದು ತಿಳಿಸುತ್ತಾರೆ.

**ನಂಬಿಕೆ:** ನಂಬು ಕಂಡ್ಯ ಮನವೆ
ನಂಬು ಶ್ರೀಕೃಷ್ಣನ ಚರಣ ಕಮಲದ ಪ।

ಒಂಬತ್ತೂ ಬಾಗಿಲ ಪಟ್ಟಣದೊಳಗೆ
ಸಂಭ್ರಮದಿಂದ ಬೈಲಾಗುವ ಮುನ್ನ ನೀ ೧।

ಆರು ಮಂದಿ ಕಳ್ಳರು ಊರೊಳಗೆ
ಸೂರೆ ಮಾಡಿ ಗಾಸಿ ಮಾಡುವ ಮುನ್ನ ನೀ ೨।

ಏಳು ಸುತ್ತಿನ ಕೋಟೆ ಘನದುರ್ಗವನ್ನು
ಕಾಲನವರು ಬಂದು ಕರೆಯುವ ಮುನ್ನ ನೀ ೩।

ಪುರವಿದು ಸ್ಥಿರವಲ್ಲ ಮೆಚ್ಚಿ ಕೆಡಲುಬೇಡ
ಪುರಂದರವಿಠಲನ್ನ ಆ ಪಾದ ಪದುಮವ ೪। (೧೦೯)

ದಾಸರು ದೇಹವನ್ನು ಒಂಬತ್ತು ಬಾಗಿಲ ಪಟ್ಟಣವೆಂದು, ಅರಿಷಡ್ವರ್ಗಗಳನ್ನು ಆರುಮಂದಿ ಕಳ್ಳರೆಂದು, ಸಪ್ತಧಾತುಗಳನ್ನು ಏಳು ಸುತ್ತಿನಕೋಟೆಯೆಂದು ಅದ್ಭುತವಾಗಿ ವರ್ಣಿಸುತ್ತಾ ದೇಹನಾಯಕ ದೇವರು–ಮುಖ್ಯ ಪ್ರಾಣನು ದೇಹ ಬಿಡುವ ಮುನ್ನ ಭಗವಂತನ್ನು ನಂಬಲು ತಿಳಿಸುತ್ತಾರೆ. ದೇಹವನ್ನು ಸಂಸಾರವೆಂಬ ನೀರಿನ ಮೇಲೆ ತೇಲುವ ದೋಣಿಗೆ ಹೋಲಿಸಿ ಸಂಸಾರವೆಂಬ ಹೊಳೆಯಿಂದ ದಾಟಲು ಅಂಬಿಗನಾದ ಪರಮಾತ್ಮನ ಸಹಾಯ ಕೇಳುತ್ತಿದ್ದಾರೆ.

**ಅಂಬಿಗ:** ಅಂಬಿಗ ನಾ ನಿನ್ನ ನಂಬಿದೆ ಜಗ
ದಂಬಾರಮಣ ನಿನ್ನ ನಂಬಿದೆ ಪ।

ತುಂಬಿದ ಹರಿಗೋಲಂಬಿಗ ಅದ
ಕೊಂಬತ್ತು ಛಿದ್ರ ನೋಡಂಬಿಗ
ಸಂಭ್ರಮದಿಂದ ನೀ ನಂಬಿಗ ಅದ
ರಿಂಬು ನೋಡಿ ನಡೆಸಂಬಿಗ ೧।

ಹೊಳೆಯ ಭರವ ನೋಡಂಬಿಗ ಅದಕೆ
ಸೆಳೆವು ಘನವಯ್ಯ ಅಂಬಿಗ
ಸುಳಿಯೊಳು ಮುಳಗಿದೆ ಅಂಬಿಗ ಎನ್ನ
ಸೆಳೆದುಕೊಂಡೊಯ್ಯೊ ನೀ ನಂಬಿಗ ೨।

ಆರು ತೆರೆಯ ನೋಡಂಬಿಗ, ಅದು
ಮೀರಿ ಬರುತಲಿದೆ ಅಂಬಿಗ
ಯಾರಿಂದಲಾಗಲು ಅಂಬಿಗ ಅದ ನಿ
ವಾರಿಸಿ ದಾಟಿಸೊ ಅಂಬಿಗ ॥೩॥

ಹೊತ್ತು ಹೋಯಿತು ನೋಡಂಬಿಗ, ಅಲ್ಲಿ
ಮತ್ತೈವರೀರ್ವರು ಅಂಬಿಗ
ಒತ್ತಿ ನಡೆಸು ನೋಡಿ ಅಂಬಿಗ
ಎನ್ನ ಸತ್ಯ ಲೋಕಕೆ ಒಯ್ಯೊ ಅಂಬಿಗ ॥೪॥

ಸತ್ವ ಪಥದೊಳಗಂಬಿಗ ಪರಾಭಕ್ತಿ
ಹಿಟ್ಟನು ಹಾಕಿ ಅಂಬಿಗ
ಮುಕ್ತಿದಾಯಕ ನಮ್ಮ ಪುರಂದರವಿಠಲನ
ಮುಕ್ತಿ ಮಂಟಪಕೊಯ್ಯೊ ಅಂಬಿಗ ॥೫॥ (೧೧೦)

ಇಲ್ಲಿ ದೇಹವನ್ನು ಒಂಬತ್ತು ಛಿದ್ರಗಳಿರುವ ದೋಣಿಗೆ ಹೋಲಿಸಲಾಗಿದೆ. ಬದುಕನ್ನು ನೂಕಿಕೊಂಡು ಹೋಗುವ ಕರ್ಮವನ್ನು ಸೆಳೆವು ಎನ್ನುತ್ತಾ, ಜನನ ಮರಣಗಳೆಂಬ ಜೀವನವನ್ನು ಸುಳಿಗೆ ಹೋಲಿಸಲಾಗಿದೆ. ಹಸಿವು, ಬಾಯಾರಿಕೆ, ಶೋಕ, ಮೋಹ, ಜರೆ, ಸಾವು ಇವುಗಳನ್ನು ಷಟ್ಕರ್ಮಗಳೆಂದು ಕರೆಯಲಾಗುತ್ತದೆ. ಇವು ಎಲ್ಲ ಪ್ರಾಣಿಗಳನ್ನು ಕೊಚ್ಚಿಕೊಂಡು ಹೋಗುವವು, ಇಂತಹ ಸಂಸಾರದ ಸುಳಿಯಿಂದ ಆತ್ಯಂತಿಕ ಭಕ್ತಿ [ಯಾವ ಕಾಮನೆಯು ಇಲ್ಲದ] ಕೊಟ್ಟು ಮುಕ್ತಿ ಮಂಟಪಕ್ಕೊಯ್ಯಲು ಪರಮಾತ್ಮನಲ್ಲಿ ವಿನಂತಿಸಲಾಗಿದೆ.

ದಾಸರು ಮಾನವನ ದೇಹವನ್ನು ಬಿಂದಿಗೆಗೆ ಹೋಲಿಸುತ್ತಾ ಬಿಂದಿಗೆ ಒಡೆದರೆ ಒಂದೇ ಕಾಸು ಎಂದು ಶರೀರದ ಮೇಲೆ ಅತಿ ಮೋಹ ಪಡುವವರಿಗೆ ಎಚ್ಚರಿಸುತ್ತಾರೆ.

**ಬಿಂದಿಗೆ:** ತಾರಕ್ಕ ಬಿಂದಿಗೆ ನಾ ನೀರಿಗೆ ಹೋಗುವೆ ತಾರೇ ಬಿಂದಿಗೆಯ ॥ಪ॥
ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ ॥ಅ॥ (೧೧೧)

ಇಲ್ಲಿ ಬಿಂದಿಗೆಯೆಂದರೆ ಸಾಧಕ ಪ್ರಯೋಜಕವಾದ ಶರೀರ, ಬಿಂದಿಗೆ ಒಡೆಯುವುದು ಎಂದರೆ ಮರಣ, ನೀರಿಗೆ ಹೋಗುವುದೆಂದರೆ ಅಪರೋಕ್ಷ ಜ್ಞಾನವನ್ನು ಸಂಪಾದಿಸುವುದು ಎಂಬ ಅರ್ಥವಿದೆ. ಸಾಧನ ಶರೀರದಲ್ಲಿ ಶಕ್ತಿ ಇರುವಾಗಲೇ ಭಗವಂತನನ್ನು ಭಜಿಸಿ, ಸತ್ಕರ್ಮಗಳನ್ನು ಮಾಡಿ ಸಾರ್ಥಕನಾಗಬೇಕು. ಆಯುಷ್ಯ ಮುಗಿಯುವ ಹೊತ್ತಿಗೆ ಎಲ್ಲ ಕಾರ್ಯಗಳನ್ನು ಮಾಡ ಹೊರಟರೆ ಸಮಯವಿರುವುದಿಲ್ಲ ಎಂಬ ಅರ್ಥವನ್ನು 'ಕಾಲ' ಪ್ರತಿಮೆ ನೀಡುತ್ತದೆ.

**ಕಾಲ:** ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ॥ಪ॥

ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವೆಯಲ್ಲೊ ಪ್ರಾಣಿ ॥ಅ॥

ಹತ್ತು ಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು

ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣಿ
ಹತ್ತು ಸಾವಿರ ಹೊನ್ನು ತಿಪ್ಪೇಲಿ ಪೋಪಾಗ
ಮೃತ್ತಿಕೆ ಬಾಯಲ್ಲಿ ಬಿತ್ತಲೋ ಪ್ರಾಣಿ ೧।

ಹುಗ್ಗಿಯು ತುಪ್ಪವು ಅಗ್ಗವಾಗಿರಲಿಕ್ಕೆ
ಗುಗ್ಗರಿಯನ್ನವ ತಿಂದೆಲ್ಲೋ ಪ್ರಾಣಿ
ಹೆಗ್ಗಳದ ಭಾಗ್ಯವು ಘಳಿಗೇಲಿ ಪೋಪಾಗ
ಬುಗ್ಗೆಯ ಹೊಯ್ಕೊಂಡು ಹೋದೆಯಲ್ಲೊ ಪ್ರಾಣಿ ೨।

ನೆಂಟರಿಷ್ಟರು ಬಂದು ಮನೆಮುಂದೆ ಕುಳಿತಿರೆ
ಕುಂಟ ಸುದ್ದಿಯನಾಡಿದೆಯಲ್ಲೋ ಪ್ರಾಣಿ
ಕಂಠಕ ಯಮನವರು ಕುಂಠಿಸುತ್ತೇಳೆವಾಗ
ನಂಟ ಶ್ರೀ ಪುರಂದರವಿಠಲನು ಪ್ರಾಣಿ ೩। (೧೧೨)

ಮಾನವ ಜನ್ಮಬಂದಾಗ ಪ್ರಾಣಿಯಂತೆ ತಿನ್ನುವ, ಮಲಗುವ, ಕೆಲಸಗಳಿಗೆ ಮಹತ್ವಕೊಡದೆ ಸಾರ್ಥಕವನ್ನಾಗಿ ಮಾಡಿಕೊಳ್ಳಬೇಕೆಂಬ ಅರ್ಥವು ಇಲ್ಲಿ ಮೂಡಿದೆ. ಸಾಧನ ಶರೀರವನ್ನು ಸಾರ್ಥಕ ಮಾಡಿಕೊಳ್ಳುವ ಉಪಾಯಗಳನ್ನೆಲ್ಲ ಬರೆದು ಕಳಿಸಿದ ಶ್ರೀಹರಿಯ ಕಾಗದವನ್ನು ಪುರಂದರದಾಸರು ಈ ಕೆಳಗಿನಂತೆ ಓದುತ್ತಾರೆ.

ಕಾಗದ: ಕಾಗದ ಬಂದಿದೆ ನಮ್ಮ
ಕಮಲನಾಭನದು ಈ ಪ।

ಕಾಗದವನ್ನು ಓದಿಕೊಂಡು
ಕಾಲವ ಕಳೆಯಿರೊ ಅ।

ಕಾಮ ಕ್ರೋಧ ಬಿಡಿರೆಂಬೊ ಕಾಗದ ಬಂದಿದೆ
ನೇಮ ನಿಷ್ಠೆಯೊಳಿರಿರೆಂಬೊ ಕಾಗದ ಬಂದಿದೆ
ತಾಮಸ ಜನರ ಕೂಡದಿರೆಂಬೊ ಕಾಗದ ಬಂದಿದೆ
ನಮ್ಮ ಕಾಮನಯ್ಯನು ತಾನೆ ಬರೆದ ಕಾಗದ ಬಂದಿದೆ ೧।

ಹೆಣ್ಣಿನಾಸೆ ಬಿಡಿರೆಂಬೊ ಕಾಗದ ಬಂದಿದೆ
ಹೊನ್ನಿನಾಸೆ ಬಿಡಿರೆಂಬೊ ಕಾಗದ ಬಂದಿದೆ.
ಮಣ್ಣಿನಾಸೆ ಬಿಡಿರೆಂಬೊ ಕಾಗದ ಬಂದಿದೆ. ೨।

ಗೆಜ್ಜೆ ಕಾಲ್ಕಟ್ಟಿರೆಂಬೊ ಕಾಗದ ಬಂದಿದೆ
ಹೆಜ್ಜೆಗೆ ಹರಿಯೆನ್ನಿರೆಂಬೊ ಕಾಗದ ಬಂದಿದೆ
ಲಜ್ಜೆ ಬಿಟ್ಟು ಕುಣಿಯಿರೆಂಬೊ ಕಾಗದ ಬಂದಿದೆ
ನಮ್ಮ ಪುರಂದರವಿಠಲ ತಾನೆ ಬರೆದ ಕಾಗದ ಬಂದಿದೆ. ೩। (೧೧೩)

'ಕಾಗದ' ಪ್ರತಿಮೆಯು ಇಂದ್ರಿಯನಿಗ್ರಹವನ್ನೂ, ಜೀವನ ನೀತಿಯನ್ನು ಸಂಕೇತಿಸುತ್ತದೆ ಮತ್ತು ಜೀವನ ಮೌಲ್ಯಗಳನ್ನು ಪರಿಪಾಲಿಸಲು ಕರೆನೀಡುತ್ತದೆ.

ಸಾಧನೆಯ ಕ್ಷೇತ್ರದಲ್ಲಿ ನಾವು ನಡೆಸುವ ಕೃಷಿ ಸರಿಯಾಗಿ ಫಲಕೊಡಬೇಕಾದರೆ ಸಂಸಾರವೆಂಬ ಭೂಮಿಗೆ ಆದರ್ಶ ಮೌಲ್ಯಗಳಿಂದ ಬೇಲಿ ಕಟ್ಟಬೇಕು. ಸಾಧಕನ ಮನಸ್ಸು ಬೇಲಿ ದಾಟಿ ಹೋಗಬಾರದು. ಸಾಧನೆಯ ಮಾರ್ಗದಲ್ಲಿ ಅಂತಃಕರಣಶುದ್ಧಿಗೆ ತುಂಬ ಮಹತ್ವವಿದೆ. ರಾಗ–ದ್ವೇಷಗಳನ್ನು ತ್ಯಜಿಸಿ ಶುದ್ಧವಾದ ಮನಸ್ಸಿನಿಂದ ಭಗವಂತನನ್ನು ಅರ್ಚಿಸಬೇಕೆಂಬ ಸಂದೇಶ ಇಲ್ಲಿದೆ. ಹರಿದಾಸರು ತೋರಿದ ಸಾಧನ ಪ್ರಕಾರಗಳಲ್ಲಿ ಮುಖ್ಯವಾದುವುಗಳು ಈ ಕೆಳಗಿನಂತಿವೆ.

**ಬಿಂಬೋಪಾಸನೆ:** ಭಗವಂತನ ಪೂಜೆ ಮುಕ್ತಿಯತ್ತ ಒಂದು ಹೆಜ್ಜೆಯಿಟ್ಟಂತೆ ಶಾಸ್ತ್ರಗಳು ಹೇಳುವಂತೆ, ವಿಸ್ತಾರವಾಗಿ ಹಲವಾರು ಪರಿಕರಗಳಿಂದ ಕೂಡಿ, ವಿಧ್ಯುಕ್ತವಾಗಿ ಮಂತ್ರಗಳನ್ನು ಉಚ್ಚರಿಸುತ್ತ ನಡೆಸುವ ದೇವ ಪೂಜೆ ಒಂದು ರೀತಿಯಾದರೆ, ಮನಸ್ಸಿನಲ್ಲೇ ಪೂಜೆ ಮಾಡುವುದು ಇನ್ನೊಂದು ರೀತಿ. ಪೂಜೆ ಮುಖ್ಯವಾಗಿ ನಮ್ಮನ್ನು ಭಗವಂತನ ಬಳಿ ಕರೆದೊಯ್ಯಬೇಕು. ಮಾನಸ ಪೂಜೆಯನ್ನು 'ಧ್ಯಾನ' ಎಂದು ಕರೆಯುವರು. ಇದು ಅಂತರಂಗದಲ್ಲೇ ನಡೆಯುವ ಪೂಜೆ. ಮಾನಸಪೂಜೆಯನ್ನು ಹರಿದಾಸರು ಸುಲಭ ಪೂಜೆಯೆಂದು ಕೊಂಡಾಡಿದ್ದಾರೆ. ಇದಕ್ಕೆ ಯಾವುದೇ ಪರಿಕರದ, ಹಣದ ವಿಧಿ ನಿಯಮಗಳ ಅವಶ್ಯಕತೆಯಿಲ್ಲ, ಯಾರ ಸಹಾಯವೂ ಬೇಕಾಗಿಲ್ಲ. ಈ ಪೂಜೆಗೆ ಯಾರಿಂದಲಾದರು ತೊಂದರೆಯಾದಿತೆಂಬ ಭಯವಿಲ್ಲವೆಂದು ದಾಸರು ಹೇಳುತ್ತಾರೆ.

**ಧ್ಯಾನ:** ನಾ ನಿನ್ನ ಧ್ಯಾನದೊಳಿರಲು ಮಿಕ್ಕ
ಹೀನ ಮಾನವರೇನ ಮಾಡಬಲ್ಲರೊ ರಂಗ ಪ।

ಮುಚ್ಚರಿಸುವರೆಲ್ಲ ಕೂಡಿ ಮಾಡುವದೇನು
ಅಚ್ಯುತ ನಿನದೊಂದು ದಯೆಯಿರಲು
ವಾತ್ಸಲ್ಯ ಬಿಡದಿರು ನಿನ್ನ ನಂಬಿದೆ ದೇವ
ಕಿಚ್ಚಿಗೆ ಇರುವೆ ಮುತ್ತುವುದೆ ಕೇಳಲೊರಂಗ
. . . . . . . . . . . . . . . . . . . (೧೧೪)

ಕಿಚ್ಚು ಸಾಧಕನನ್ನು, ಇರುವೆಗಳು ಅವನನ್ನು ತೊಂದರೆಗೀಡುಮಾಡುವ ಜನರನ್ನು ಸಂಕೇತಿಸುತ್ತಿವೆ. ಅಂತರಂಗದಲ್ಲಿ ಏಕಾಗ್ರತೆಯಿಂದ ಧ್ಯಾನ ಮಾಡುವ ಸಾಧಕನಿಗೆ ಯಾರಿಂದಲೂ ತೊಂದರೆ ಬರುವದಿಲ್ಲ ಎಂಬ ತಾತ್ಪರ್ಯ ಈ ಪದದಲ್ಲಿದೆ. ಧ್ಯಾನದಲ್ಲಿ ಮೊದಲು ಪ್ರತಿಮಾದಿಗಳಲ್ಲಿ (ವಿಗ್ರಹ) ಕಾಣುವ ಆಕಾರವನ್ನು ಮನಸ್ಸಿನಲ್ಲಿ ಕಲ್ಪನೆ ಮಾಡಿಕೊಂಡು ಆ ಆಕಾರದಲ್ಲಿ ಏಕಾಗ್ರತೆಯಿಂದ ವಂದಿಸಬೇಕು. ಅಂಥಹ ಮಾಧವನ ಮೂರುತಿಯನ್ನು ತಮ್ಮ ಮನಸ್ಸಿನಲ್ಲಿ ನಿಲ್ಲಿಸಲು ದಾಸರು ಪರಮಾತ್ಮನನ್ನು ಬೇಡಿಕೊಳ್ಳುತ್ತಿದ್ದಾರೆ.

**ಮೂರುತಿ:** ಮೂರುತಿಯನು ನಿಲ್ಲಿಸೊಮಾಧವ ನಿನ್ನ ಪ।
ಎಳೆತುಳಸಿಯ ವನಮಾಲೆಯು ಕೊರಳೊಳು
ಪೊಳೆವ ಪೀತಾಂಬರದಿಂದಲೊಪ್ಪುವ ನಿನ್ನ ೧।

ಮುತ್ತಿನ ಸರ ನವರತ್ನದುಂಗುರವಿಟ್ಟು
ಮತ್ತೆ ಶ್ರೀ ಲಕ್ಷ್ಮಿಯು ಉರದೊಲೋಪ್ಪುವ ನಿನ್ನ ೨।
ಭಕ್ತ ಕಲ್ಪತರು ಭಾಗ್ಯದ ಸುರಧೇನು
ಮುಕ್ತಿದಾಯಕ ಪುರಂದರವಿಠಲ ನಿನ್ನ ೩। (೧೧೫)

ಶ್ರೀ ಹರಿಯು ಲಕ್ಷ್ಮೀದೇವಿಯೊಂದಿಗೆ ತನ್ನ ಮನಸ್ಸಿನಲ್ಲಿ ಬಿಂದು ರೂಪದಿಂದ ಬಂದು ನಿಲ್ಲಲು ಪುರಂದರದಾಸರು ಪ್ರಾರ್ಥಿಸುತ್ತಿದ್ದಾರೆ. ಅವರ ಪೂಜೆ ಅಂತರಂಗದಲ್ಲಿಯೇ ನಡೆಯುವ ಪುಜೆ. ಭಕ್ತಿಯೊಂದೇ ಇದಕ್ಕೆ ಸಂಪತ್ತು ಏಕಾಗ್ರತೆಯೇ ಇದಕ್ಕೆ ಪರಿಕರ, ಬಿಂಬರೂಪಿಯಾದ ಭಗವಂತನ ಮಾನಸಮೂರ್ತಿಯೇ ಪ್ರತಿಮೆ, ಸರ್ವಸಮರ್ಪಣ ಭಾವವೇ ನಿವೇದನೆ, ಇದು ಸುಲಭದ ಪೂಜೆ, ಬಿಂಬೋಪಾಸನೇಯಲ್ಲಿ ಏಕಾಗ್ರತೆ ಬಹಳ ಮುಖ್ಯ ಮನಸ್ಸು ಚಂಚಲ, ಅದನ್ನು ಒಂದು ಕಡೆ ನಿಲ್ಲಿಸುವುದು ಕಷ್ಟ ಎಂದು ದಾಸರು ಹೀಗೆ ಹೇಳುತ್ತಿದ್ದಾರೆ.

**ಧ್ಯಾನ:**

ಮನವ ನಿಲಿಸುವುದು ಬಹುಕಷ್ಟ
ಹರಿದಾಡುವಂಥ ಪ।

ಕಾಶಿಗೆ ಹೋಗಲಿಬಹುದು ದೇಶ ತಿರುಗಲಿಬಹುದು
ಆಸೆ ಸುಟ್ಟಂತೆ ಇರಬಹುದು
ಹರಿದಾಡುವಂಥ ೧।

ಜಪವ ಮಾಡಲಿಬಹುದು ತಪವ ಮಾಡಲಿಬಹುದು
ಉಪವಾಸ ವ್ರತದಲ್ಲಿರಬಹುದು
ಹರಿದಾಡುವಂಥ ೨।

ಸ್ನಾನ ಮಾಡಲಿಬಹುದು ಮೌನ ಮಾಡಲಿಬಹುದು
ಧ್ಯಾನದಿ ಪುರಂದರವಿಠಲನ ಚರಣದಲಿ
ಹರಿದಾಡುವಂಥ ೩। (೧೧೬)

ಇಂದ್ರಿಯ ವ್ಯಾಪಾರದಿಂದ ಪುಷ್ಟವಾದ ಮನಸ್ಸು ವಿಷಯ ಬೋಗದ ಕಡೆಗೆ ಸೆಳೆಯುತ್ತಿರುತ್ತದೆ. ಅಂತಹ ಮನಸ್ಸನ್ನು ವಶಮಾಡಿಕೊಳ್ಳುವುದಕ್ಕೆ ಅಭ್ಯಾಸದ ಅವಶ್ಯಕತೆಯಿದೆ. ಅದನ್ನೇ ಪುರಂದರದಾಸರು ದಿನ ನಿತ್ಯ ಧ್ಯಾನಯೋಗ ಮಾಡಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ.

**ಶೋಧನೆ:**

ಮಾನವ ಶೋಧಿಸಬೇಕು ನಿಚ್ಚ ದಿನ
ದಿನ ಮಾಡುವ ಪಾಪ ಪುಣ್ಯದ ವೆಚ್ಚ ಪ।

ಧರ್ಮ ಅಧರ್ಮ ವಿಂಗಡಿಸಿ ಅ
ಧರ್ಮದ ನರಗಳ ಬೇರ ಕತ್ತರಿಸಿ
ನಿರ್ಮಲಾಚಾರದಿ ಚರಿಸಿ ಪರ
ಬೊಮ್ಮ ಮೂರುತಿ ಪಾದಕಮಲವ ಭಜಿಸಿ ೧।

ತನುವ ಖಂಡಿಸಿ ಒಮ್ಮೆ ಮಾಣೋ ನಿನ್ನ
ಮನವದಂಡಿಸಿ ಪರಮಾತ್ಮನ್ನ ಕಾಣೋ
ಕೊನೆಗೆ ನಿನ್ನೊಳು ನೀ ಜಾಣೊ ಮುಕ್ತಿ
ನಿನಗೆ ದೂರಿಲ್ಲವು ಒಂದೇ ಗೇಣೋ ೨।
. . . . . . . . . . . . . . . . . . (೧೧೭)

'ಶೋಧನೆ' ಪ್ರತಿಮೆ ಇಲ್ಲಿ ಅಂತರಂಗ ಶೋಧನೆಯನ್ನು ಸಂಕೇತಿಸುತ್ತದೆ. ಕಸ ಗುಡಿಸಿ ಮನೆಯನ್ನು ಸ್ವಚ್ಛ ಮಾಡುವಂತೆ, ಮನಸ್ಸಿನಲ್ಲಿರುವ ಕೊಳೆಯನ್ನು ತೆಗೆಯಬೇಕು. ಮನಸ್ಸಿನ ಕೊಳೆ ತೊಳೆಯುವುದು ಸುಲಭವಲ್ಲ ಮನಸ್ಸನ್ನು ಇಂದ್ರಿಯಗಳಿಂದ ಸೆಳೆದುಕೊಂಡು ತನ್ನಲ್ಲಿಯೇ ಗಮನವನ್ನು ಹರಿಸಿ ಅನುಕೂಲ–ಪ್ರತಿಕೂಲ ಪ್ರವೃತ್ತಿಗಳನ್ನು ವಿಂಗಡಿಸಿ ಪ್ರತಿಕೂಲ ಪ್ರವೃತ್ತಿಗಳನ್ನು ದೂರ ಇಟ್ಟು ಮನಸ್ಸನ್ನು ಸಮಾಧಿಗೆ ಉಪಯುಕ್ತವನ್ನಾಗಿ ಮಾಡಿಕೊಳ್ಳುವುದೇ ಶೋಧನೆ. [ಶುದ್ಧಿ ಮಾಡುವುದು, ಸೋಸುವುದು] ಸಮಾಧಿ ಸ್ಥಿತಿಯಲ್ಲಿ ದೇಹದ ವ್ಯಾಪಾರವನ್ನು ನಿಲ್ಲಿಸಿ, ಮನಸ್ಸಿನ ಏಕಾಗ್ರತೆಯನ್ನು ಸಾಧಿಸಬೇಕಾಗುವುದು. ಅಂತರಂಗದಲ್ಲಿ ಬಿಂಬರೂಪಿ ಭಗವಂತನನ್ನು ಭಜಿಸಿದರೆ ಮುಕ್ತಿ ಒಂದೇ ಗೇಣು (ಎ) ಎಂದಿದ್ದಾರೆ ದಾಸರು. ಯೋಗಮಾರ್ಗದಲ್ಲಿ ಭಗವಂತನನ್ನು ಕಾಣುವ ಬಗೆಯನ್ನು ಸವಿಸ್ತಾರವಾಗಿ ಬಣ್ಣಿಸುವ ದಾಸರು.

**ಧ್ಯಾನ:** ಕಣ್ಣಿನೊಳಗೆ ನೋಡೋ ಹರಿಯ ಒಳ
ಗಣ್ಣಿನಿಂದಲಿ ನೋಡೊ ಮೂಜಗದ ಧೊರೆಯ ಪ।

ಆಧಾರ ಮೊದಲಾದ ಆರು ಚಕ್ರ
ಶೋಧಿಸಿಬಿಡಬೇಕು ಈ ಕ್ಷಣ ಮೂರು
ಸಾಧಿಸಿ ಸುಷಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು ೧।

ಎವೆ ಹಾಕದೆ ಮೇಲು ನೋಡು ಮುಂದೆ
ತವಕದಿಂದಲಿ ವಾಯು ಬಂಧನ ಮಾಡು
ಸವಿದು ನಾದವ ಪಾನ ಮಾಡು ಅಲ್ಲಿ
ನವವಿಧ ಭಕ್ತಿಲಿ ನಲಿ ನಲಿದಾಡು ೨।

ಅಂಡದೊಳಗೆ ಆಡು ತಾನೆ ಭಾನು
ಮಂಡಲ ನಾರಾಯಣನೆಂಬುವನೆ
ಕುಂಡಲಿ ತುದಿಯೊಳಿದ್ದಾನೆ ನಮ್ಮ
ಪುರಂದರವಿಠಲನು ಪಾಲಿಸುತ್ತಾನೆ ೩। (೧೧೮)

ಪುರಂದರದಾಸರು ಈ ಕೀರ್ತನೆಯಲ್ಲಿ ನಾಡಿ ವಿಚಾರವನ್ನು ಹೇಳಿದ್ದಾರೆ. ಶರೀರದಲ್ಲಿ ಹರದಿರುವ ಧಮನಿಗಳೇ ನಾಡಿಗಳು. ಮನುಷ್ಯನ ಸ್ಥೂಲ ಶರೀರದಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳಿವೆ ಹಾಗೂ ಆರು ಚಕ್ರಗಳಿವೆ. ವೃಷಣ, ನಾಭಿ ಮತ್ತು ಭ್ರೂಮಧ್ಯಗಳನ್ನು ಮಧ್ಯವಾಗಿಟ್ಟುಕೊಂಡು ಶರೀರವನ್ನು ಎಡಭಾಗ ಬಲಭಾಗವೆಂದು ಸಮನಾಗಿ ವಿಭಜಿಸಿಕೊಂಡರೆ ಎಡಭಾಗದಲ್ಲಿ ಮೂವತ್ತಾರು ಸಾವಿರ ನಾಡಿಗಳು, ಬಲಭಾಗದಲ್ಲಿ ಮತ್ತೆ ಅಷ್ಟೆನಾಡಿಗಳು ಅದರಲ್ಲೂ ಕಟಿಯಿಂದ ಆರಂಭಮಾಡಿ ಪಾದಾಂತದವರೆಗೆ, ಪಾದಾಧಾರ ನಾಡಿಗಳು ೧೨೦೦೦. ಕಟಿಯಿಂದ ಮೇಲೆ ಕಂಠಪರ್ಯಂತ ಮಧ್ಯ ದೇಹದ ನಾಡಿಗಳು ೧೪೦೦೦. ಎರಡು ಬಾಹುಗಳಲ್ಲಿ ಈರೆರಡು ಸಾವಿರ ಎಂದರೆ ೪೦೦೦ ನಾಡಿಗಳು ಕಂಠದಿಂದ ಮೇಲೆ ಶಿರಸ್ಸಿನಲ್ಲಿ ೬೦೦೦ ನಾಡಿಗಳು. ಒಟ್ಟು

೩೬೦೦೦ ನಾಡಿಗಳು ಬಲಭಾಗದಲ್ಲಿ, ೩೬೦೦೦ ನಾಡಿಗಳು ಎಡಭಾಗದಲ್ಲಿ ಒಟ್ಟು ನಖಶಿಖಾಂತ ನಾಡಿಗಳು ೭೨೦೦೦ (ಎ).

"ಚಕ್ರಗಳೆಂದರೆ ವರ್ತುಲಾಕಾರದ ಶರೀರದಲ್ಲಿರುವ ಶಕ್ತಿಕೇಂದ್ರಗಳು ನಮ್ಮ ಶರೀರವೆಂಬ ಯಂತ್ರದಲ್ಲಿ 'ಶಕ್ತಿಕೋಶ' ಗಳೆನಿಸುವ ಎಳು ಚಕ್ರಗಳು ಸೂಕ್ಷ್ಮರೂಪದಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ನೆಲೆಸಿವೆ ಇಡಾ, ಪಿಂಗಳಾ ಹಾಗೂ ಸುಷಮ್ನಾ ನಾಡಿಗಳು ಒಂದನ್ನೊಂದು ಬೇರೆ ಬೇರೆ ಸ್ಥಾನಗಳಲ್ಲಿ ಸೇರುತ್ತವೆ. ಈ ಸಂಧಿಸುವ ಪ್ರದೇಶಕ್ಕೆ ಚಕ್ರಗಳು ಎಂದು ಹೆಸರು" (ಐ).

ಪ್ರಮುಖವಾಗಿ ಶರೀರದಲ್ಲಿ ಎಳುಚಕ್ರಗಳಿವೆ. ಬೆನ್ನು ಮೂಳೆಯ ಭಾಗದಲ್ಲಿ ಆರುಚಕ್ರಗಳಿರುವದರಿಂದ 'ಷಟ್ ಚಕ್ರ' ಎಂಬ ಹೆಸರೇ ಪ್ರತೀತಿಯಲ್ಲಿದೆ. ಸಹಸ್ರಾರ ಎಂಬ ಚಕ್ರ ಶಿರಸ್ಸಿನಲ್ಲಿದೆ. ವಿವಿಧ ಚಕ್ರಗಳು ಇಂತಿವೆ.

೧. ಮೂಲಾಧಾರ ಚಕ್ರ– ಇದು ಗುದದ್ವಾರ ಹಾಗೂ ಜನನೇಂದ್ರಿಯಗಳ ಮಧ್ಯದಲ್ಲಿದೆ.
೨. ಸ್ವಾಧಿಷ್ಠಾನ ಚಕ್ರ – ಜನನೇಂದ್ರಿಯ ಹಾಗೂ ಗುದ ಪ್ರದೇಶದ ಮೇಲ್ಭಾಗದಲ್ಲಿದೆ.
೩. ಮಣಿಪೂರ ಚಕ್ರ – ಹೊಕ್ಕಳು ಅಥವಾ ನಾಭಿ ಪ್ರದೇಶದಲ್ಲಿದೆ.
೪. ಅನಾಹತ ಚಕ್ರ – ಹೃದಯ ಪ್ರದೇಶದಲ್ಲಿದೆ.
೫. ವಿಶುದ್ಧ ಚಕ್ರ – ಇದು ಕುತ್ತಿಗೆಯ ಪ್ರದೇಶದಲ್ಲಿದೆ.
೬ ಆಜ್ಞಾ ಚಕ್ರ – ಹುಬ್ಬುಗಳ ಮಧ್ಯದಲ್ಲಿದೆ
೭ ಸಹಸ್ರಾರ ಚಕ್ರ – ಇದು ಸಾವಿರ ದಳಗಳುಳ್ಳ ಕಮಲದ ಹೂವನ್ನು ಹೋಲುವದರಿಂದ ಇದಕ್ಕೆ ಸಹಸ್ರಾರ ಚಕ್ರ ಎಂದು ಹೆಸರು. ತಲೆಯೊಳಗಿನ ಮಿದುಳಿನ ಮಧ್ಯಭಾಗವೇ ಇದರ ಸ್ಥಾನ.

ನಿರ್ದಿಷ್ಟ ಸಾಧನೆಗಳಿಂದ ಕ್ರಮವರಿತು ಈ ಚಕ್ರಗಳನ್ನು ಜಾಗ್ರತಗಳಿಸುವುದು ಶೋಧನ ವೆನಿಸಿಕೊಳ್ಳುತ್ತದೆ. ಕುಂಡಲಿನಿ ಎಂದರೆ ಯೋಗಶಾಸ್ತ್ರದಲ್ಲಿ ಸರ್ಪರೂಪವಾಗಿ ರೂಪಿಸಲ್ಪಟ್ಟ ಪ್ರಕೃತಿ ಶಕ್ತಿ. ನಾಡಿಗಳಲ್ಲಿ ಮುಖ್ಯವಾದುವು ಇಡಾ, ಪಿಂಗಳಾ ಮತ್ತು ಸುಷಮ್ನಾ ಇವುಗಳಲ್ಲಿ ಸುಷಮ್ನಾ ಎಂಬುದೇ ಕುಂಡಲಿನಿ ಶಕ್ತಿ ಪ್ರವಹಿಸುವ ಮಾರ್ಗವು ಈ ಮಾರ್ಗದಲ್ಲಿ ಆಧಾರ ಶಕ್ತಿಯನ್ನು ತೊಡಗಿಸಿ ಮೇಲು ಮೇಲಿನ ಚಕ್ರಗಳಿಗೆ ಸಾಗಿಸುವುದು 'ಕುಂಡಲಿನೀಉತ್ಥಾಪನ' ಎನಿಸಿಕೊಳ್ಳುತ್ತದೆ. ಕಣ್ಣಿನ ರೆಪ್ಪೆಬಡೆಯದೆ, ಪ್ರಾಣಾಯಾಮದಲ್ಲಿ ಗಾಳಿಯನ್ನು ಒಳಗೆ ನಿಲ್ಲಿಸಿ ಆಧಾರ ಶಕ್ತಿಯು ಆರೂ ಚಕ್ರಗಳನ್ನು ದಾಟಿ ಸಹಸ್ರಾರಚಕ್ರದಲ್ಲಿ ಸೇರುವುದು ಉದ್ದೇಶ. ಸಹಸ್ರಾರವೆಂಬುದು ಪರಬ್ರಹ್ಮನ ಸ್ಥಾನವಾಗಿದೆ. ಇದನ್ನೇ ದಾಸರು ಕುಂಡಲಿ ತುದಿಯೊಳಿದ್ದಾನೆ ನಮ್ಮ ಪುರಂದರವಿಠಲ ಎಂದಿದ್ದಾರೆ. ಹೊರಗಣ್ಣು ಮುಚ್ಚಿದರೆ ಒಳಗಣ್ಣು ತೆರೆಯುತ್ತದೆ. ಅದನ್ನು ದಾಸರು ಒಂಬತ್ತು ಕದಗಳನ್ನು ಮುಚ್ಚಿ ಎನ್ನುತ್ತಾರೆ.

**ಕದ :** ನಳಿನ ನಾಭನ ನೀನು ಪಾಡೋ ಬೇಗ
ಒಳಕಣ್ಣಿಂದ ಅವನ ನಲಿದಾಡೋ ಪ।
. . . . . . . . . . . . . . . . .

ಎಂಟೊಂದು ಕದಗಳ ಮುಚ್ಚೋ ಮೇಲೆ

ತಂಟೆಯಿಲ್ಲದ ಮನವ ಅವನಲಿ ಇರಿಸೊ
ಕುಂಡಲಿ ಮಧ್ಯದಿ ನೋಡೊ ದಿವ್ಯ
ಮಂಟಪದಲಿ ಜ್ಯೋತಿ ಥಳಥಳಿಸುವುದೋ ೨।
. . . . . . . . . . . . . . . . . . . (೧೧೯)

ಬಿಂಬನ ಸ್ಥಾನವು ಹೃದಯ ಕಮಲವಾಗಿದ್ದು ಪ್ರತಿಬಿಂಬನಾದ ಜೀವನ ಸ್ಥಾನವು ಹುಬ್ಬುಗಳ ಮಧ್ಯದ ಆಜ್ಞಾಚಕ್ರವಾಗಿದೆ. ಹೃದಯಕುಹರದಲ್ಲಿರುವ ಪರಮಾತ್ಮನು ಎಲ್ಲಕ್ಕೂ ಪ್ರೇರಕ, ನಿಯಾಮಕ, ಸಾಕ್ಷಿ ಎಂಬುದನ್ನು ತಿಳಿಯದ ಕೇವಲ ಶಾಸ್ತ್ರಗಳನ್ನು ಓದಿ ಸಾಧನೆಮಾಡದೆ ಇದ್ದ ಪಂಡಿತರನ್ನು ದಾಸರು ಮುಂಡೆಯರು ಎಂದಿದ್ದಾರೆ.

**ಗಂಡ :** ಪಿಂಡಾಂಡದೊಳಗಿನ ಗಂಡನ ಕಾಣದೆ
ಮುಂಡೆಯರಾದರು ಪಂಡಿತರೆಲ್ಲ
ಆಧಾರ ಮೊದಲಾದ ಆರು ಚಕ್ರವ ಮೀರಿ
ನಾದಬಿಂದು ಕಳೆಯುಳಿದ ಬಳಿಕ
ಶೋಧಿಸಿ ಸುಧೆಯ ಪ್ರಸಾದವನುಣ್ಣದೆ
ಓದುತ ಮನದೊಳು ಒಂದನು ತಿಳಿಯದೆ ।೧। (೧೨೦)

ಪಿಂಡಾಂಡವೆಂದರೆ ಜೀವನ ಕರ್ಮಭೋಗಕ್ಕೆ ಸಿದ್ಧವಾದ ಶರೀರವೆಂದೂ ಗಂಡ ಎಂದರೆ ಪರಮಾತ್ಮನೆಂದೂ ಅರ್ಥವಿದೆ ಇಲ್ಲಿ ಬಿಂಬರೂಪಿ ಪರಮಾತ್ಮನನ್ನು ದಾಸರು ಹಂಸ ಎಂದು ಕರೆದಿದ್ದಾರೆ.

**ಹಂಸ :** ಹಂಸ ನಿನ್ನಲ್ಲಿ ನೀ ನೋಡೋ ಭವ
ಪಾಶ ಮುಕ್ತನಾಗಿ ಹರಿಯನ್ನು ಕೂಡೊ।ಪ। (೧೨೧)

ಪರೋಪಾಸನೆಯಲ್ಲಿ ಶ್ವಾಸದ ಬಹಿರ್ಗಮನವನ್ನು 'ಹಂ' ಎಂದೂ, ಶ್ವಾಸದ ಅಂತರ್ಗಮನವನ್ನು 'ಸಂ' ಎಂದೂ ಉಚ್ಚಾರಣೆಯಿಂದ ನಿರ್ದೇಶಿಸುತ್ತಾರೆ. ಹೀಗೆ ಜೀವನು ಹಂಸರೂಪಿಣಿಯಾದ ಪರಮಾತ್ಮನು ತನ್ನಲ್ಲೇ ಇರುವುದನ್ನು ತಿಳಿದು ಅವನನ್ನು ಹೊಂದಬೇಕೆಂದು ಉಪದೇಶಿಸುತ್ತಾರೆ.

**ಮಂಟಪ :** ಬಾರಯ್ಯ ವೆಂಕಟ ಕೃಷ್ಣ ।ಪ।

ಬಾರಯ್ಯ ವೆಂಕಟ ಕೃಷ್ಣ ನೀನೆನಗೆ
ಧಾರುಣಿಯೊಳು ನಿನ್ನ ಮೂರುತಿ ತೋರುತ ।ಅ।

ಮನವೆಂಬ ಮಂಟಪ ನಿನಗೆ ಹಾಕಿ ಎನ್ನ
ತನುವನೊಪ್ಪಿಸಿ ಕೈಯ ಮುಗಿವೆನಯ್ಯ
ವನಜಭವ ಸುರಮುನಿಗಳು ಭಜಿಸಲು
ಘನ ಮಹಿಮನೆ ಪಾದಕ್ಕೆರಗಲಿ ಎನ್ನಶಿರ ।೧।

ಲಿಂಗದೇಹವೆಂದೂ ಪವಣಿಸೊ ದಾರದ
ಅಂಗವ ನಿನಗೆ ಕಾಣಿಕೆ ಇಡುವೆ
ಮಂಗಳ ಮೂರುತಿ ಅಂಗನೆ ಸಹಿತ ಭು
ಜಂಗಶಯನ ಎನ್ನ ಕಂಗಳಿಗುತ್ಸವವೀಯೋ ೨।
. . . . . . . . . . . . . . . . . . . (೧೨೨)

ಜನ್ಮಾಂತರಗಳಲ್ಲಿ ಬರುವ ಲಿಂಗದೇಹವು (ಮುತ್ತುಗಳಂತೆ) ಅದನ್ನು ಪೋಣಿಸುವ ದಾರವು ಆತ್ಮವು ಅಥವಾ ಜೀವವು ಅದನ್ನು ನಿನಗೆ ಕಾಣಿಕೆ ಇಡುವೆ ಎಂದಿದ್ದಾರೆ ದಾಸರು.

ಕರ್ಮ ಸಿದ್ಧಾಂತವನ್ನು ಹೊಂದಿಕೊಂಡೇ ಭಾರತ ದರ್ಶನದಲ್ಲಿ ಮೋಕ್ಷ ಕಲ್ಪನೆಯು ಬೆಳೆದಿದೆ. ಮೋಕ್ಷವೆಂದರೆ ಬಿಡುಗಡೆ ಎಂದರ್ಥ. ಮತ್ತೆ ಮತ್ತೆ ಬರುವ ಹುಟ್ಟು ಸಾವುಗಳೇ ಸಂಸಾರ, ಈ ಸಂಸಾರದಿಂದ ಬಿಡುಗಡೆಹೊಂದುವುದೇ ಮೋಕ್ಷ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ನಂಬುವರು, ಅದರಲ್ಲಿ ಮಧ್ಯದೆರಡು ಪುರುಷಾರ್ಥಗಳು ಈ ಲೋಕಕ್ಕೆ ಸಂಬಂಧಪಟ್ಟವು ಅವುಗಳು ಅಂತಹ ಉದಾತ್ತ ಧ್ಯೇಯಗಳಲ್ಲ. ಧರ್ಮ ಮತ್ತು ಮೋಕ್ಷಗಳು ಆಧ್ಯಾತ್ಮಿಕ ಪುರುಷಾರ್ಥಗಳು. ಎಲ್ಲ ದರ್ಶನಗಳಲ್ಲೂ ಇವೆರಡರ ಪ್ರಸ್ತಾಪ ಹೆಚ್ಚು, ಆದ್ದರಿಂದ "ಭಾರತೀಯ ದರ್ಶನಗಳೆಲ್ಲ ನಿರಾಶಾಮಯವಾದುದು. ಪ್ರಪಂಚವನ್ನು ಅಲ್ಲಗಳೆಯುವುದು" ಎಂಬ ಟೀಕೆ ಸಾಮಾನ್ಯವಾಗಿದೆ. ಧರ್ಮ ಮೋಕ್ಷಕ್ಕೆ ಸಾಧನ, ಮೋಕ್ಷವೇ ಕೊನೆಯ ಗುರಿ. ಮೋಕ್ಷ ಸ್ವರೂಪದ ಬಗ್ಗೆ ಒಮ್ಮತವಿಲ್ಲ. ಆದರೂ "ಸ್ವಪರಿಪೂರ್ಣನಾಗುವುದೇ ಮೋಕ್ಷವೆಂಬುದು ಸಾಮಾನ್ಯವಾಗಿ ಎಲ್ಲರ ಅಭಿಪ್ರಾಯ" (೭). ಮುಕ್ತಿಯನ್ನು ಪಡೆಯುವಲ್ಲಿ ಜ್ಞಾನಮಾರ್ಗವೂ ಒಂದು. ಅದಕ್ಕೆ ದಾಸರು

**ಮುಕ್ತಿ :**

ಜ್ಞಾನವೊಂದೇ ಸಾಕು ಮುಕ್ತಿಗೆ
ಇನ್ನೇನು ಬೇಕು ಹುಚ್ಚು ಮರುಳೆ ॥ಪ॥
. . . . . . . . . . . . . . . . . . .
ಆಪತಪವನೆ ಮಾಡಿ ದಣಿಯಲು ಬೇಡ
ಕಪಿಯಂತೆ ಅಡಿಗಡಿಗೆ ಹಾರಲು ಬೇಡ
ಉಪವಾಸದಲಿ ಕಾಲ ಕಳೆಯಲು ಬೇಡ
ಚಪಲತನದಲ್ಲಿ ಫಲವಿಲ್ಲೋ ಮೂಢ ॥೨॥
. . . . . . . . . . . . . . . . . . . (೧೨೩)

ಸಂಸಾರದಲ್ಲಿ ಹೇಯಬುದ್ಧಿ, ಸಂನ್ಯಾಸ, ದೇಗದಂಡನೆ, ವೃತನೇಮ, ಕರ್ಮ, ಮಡಿ, ಜಪ, ತಪಗಳು ಭಗವತ್ ಸಾಕ್ಷಾತ್ಕಾರಕ್ಕೆ ಪ್ರಧಾನಸಾಧನಗಳಲ್ಲಿ ಸಂಸಾರದಲ್ಲಿದ್ದುಕೊಂಡೇ ಜ್ಞಾನವನ್ನು ಪಡೆದುಕೊಂಡು ಬಿಂಬಾಪ ರೋಕ್ಷ ಮಾಡಿಕೊಳ್ಳಬಹುದು. ಸಾಮಾನ್ಯರು ನವವಿಧ ಭಕ್ತಿ ಪ್ರಕಾರಗಳಿಂದ ಮೋಕ್ಷ ಪಡೆಯಬಲ್ಲ ವರಾದರೆ ಯೋಗಿಗಳು ಕುಂಡಲಿನಿ ಶಕ್ತಿಯನ್ನು ಜಾಗ್ರತಿಮಾಡಿ ಸಹಸ್ರಾರ ಚಕ್ರದಲ್ಲಿ ಬ್ರಹ್ಮಾನಂದ ಪಡೆದುಕೊಳ್ಳಬಹುದು.

**ಮುಸುಕು:**

ಮುಸುಕು ತೆಗೆದರೆ ಬೆನ್ನಿಲಿ ನಾಲಗೆ ಇದರ
ಹೆಸರು ಬಲ್ಲವರುಂಟೆ ಪೇಳಿರಿ ನರರೆ ॥ಪ॥

ಸತ್ತಿಗೆ ತಲೆಯವಳು ನೆತ್ತಿಲಿ ಬಾಲದವಳು
ಕತ್ತಿನ ಕೆಳಗೆ ಕಪ್ಪಿನ ಕೊಪ್ಪಿನವಳು
ಸುತ್ತೇಳು ಮೈಗೆರಡು ಜೋಡು ಬಂಗಾರ
ಸೃಷ್ಟಿಯೊಳಗೆ ಇದರ ಹೆಸರು ಬಲ್ಲವರುಂಟೆ ॥೧॥

ಜಡೆ ಮೆರಗುವ ಬಾಲೆ ಒಡಲೊಳು ಕರುಳಿಲ್ಲ
ಬಿಡದೆ ಪಟ್ಟಾವಳಿಯುಟ್ಟು ಬಲ್ಲವಳು
ಅಡವಿಯೊಳಗೆ ಪುಟ್ಟಿ ಪಡೆದಳು ದೇಹವ
ಪೊಡವಿಯೊಳಗೆ ಇದರ ಹೆಸರು ಬಲ್ಲವರುಂಟೆ ॥೨॥

ಬೇರಾಗಿ ಬೆರಳೈದು ಮೂರು ತಾನೊಂದಾಗಿ
ಯಾರು ಕಂಡರು ಎಂದು ನಸುನಗುತ
ಸೇರಿದ ಭಕುತರ ಪೊರೆವ ರಂಗಯ್ಯನ
ಸೇರಿ ಮೆಚ್ಚಿಸಿಕೊಳ್ಳಿ ಪುರಂದರವಿಠಲನ ೩। (೧೨೪)

ಇದು ಕುಂಡಲಿನೀ ಯೋಗದ ಸಂಕೇತವುಳ್ಳ ಪದ. ಅವಿದ್ಯೆ ಅಥವಾ ಅಜ್ಞಾನವೆಂಬ ಮುಸುಕು ತೆಗೆದರೆ ಸುಷುಮ್ನಾ ಮಾರ್ಗ (ನಾಲಿಗೆ) ಕಾಣುವುದು ಸುಷುಮ್ನಾ ಮಾರ್ಗವೇ ಕುಂಡಲಿನಿ ಶಕ್ತಿ ಪ್ರವಹಿಸಿವ ಮಾರ್ಗ ಸರ್ಪಾಕಾರದಲ್ಲಿರುವ ಈ ಮಾರ್ಗದಲ್ಲಿ ಶಿರೋಭಾಗದಲ್ಲಿ ಹೆಡೆಯಂತಿರುವ ಸಹಸ್ರಾರ ಚಕ್ರವೂ ಅಂತ್ಯದಲ್ಲಿ (ಬಾಲ) ಮೂಲಾಧಾರಚಕ್ರವೂ ಇರುತ್ತದೆ. ಕತ್ತಿನಲ್ಲಿ ವಿಶುದ್ಧಚಕ್ರವೂ ಹುಬ್ಬುಗಳ ಮಧ್ಯಕೆ ಮೈಗೆರಡು ಜೋಡು ಬಂಗಾರವೆಂದರೆ ಆಜ್ಞಾಚಕ್ರವೂ ಇರುವುದು. ಆರೊಂದೇಳು ಚಕ್ರದ ಮೂಲಕ ಬ್ರಹ್ಮಾನಂದವನ್ನು ಪಡೆದು ಕೊಳ್ಳುವುದು ಇಲ್ಲಿನ ಗೂಡಾರ್ಥ.

ಹರಿ ಭಕ್ತರಿಗೆ ಜನನ ಮರಣಗಳಿಲ್ಲದ ವೈಕುಂಠವಾಸವು ಲಭ್ಯವಾಗುತ್ತದೆ. ಹಾಗಾದರೆ ವೈಕುಂಠವೆಂದರೆ ಹೇಗಿದೆ? ಎಂಬ ಪ್ರಶ್ನೆಗೆ ವಾದಿರಾಜರು ಉತ್ತರಿಸುತ್ತಾರೆ. ಪುರಂದರದಾಸರ ಸಮಕಾಲೀನರಾದ ವಾದಿರಾಜ ಯತಿಗಳು ವೈಕುಂಠ ವರ್ಣನೆ ಎಂಬ ಕಾವ್ಯವನ್ನು ರಚಿಸಿದ್ದಾರೆ. ಅದರಲ್ಲಿ ವೈಕುಂಠವು ಹರಿಯ ಮಂದಿರವು. ಇದರಲ್ಲಿ ಹರಿಭಕ್ತರಲ್ಲದವರಿಗೆ ಪ್ರವೇಶವಿಲ್ಲ ಎಂದು ವಿವರಿಸಿದ್ದಾರೆ.

"ವೈಕುಂಠದಲ್ಲಿರುವ ಮುಕ್ತರೂ ಹರಿಗೆ ಆಧೀನರು ವೈಕುಂಠದ ಸುತ್ತ ರತ್ನ ಖಚಿತವಾದ ಏಳುಸುತ್ತಿನ ಬಂಗಾರದ ಕೋಟೆಯಿರುವುದು ಅದರ ಮಧ್ಯದಲ್ಲಿರುವ ನಗರಕ್ಕೆ 'ಅಯೋಧ್ಯೆ'ಯೆಂದು ಹೆಸರು. ಈ ಪ್ರಾಕಾರದೊಳಗೆ ಲಿಂಗದೇಹ ನಾಶಕವಾದ ವಿರಜಾನದಿಯಿದೆ. ಇದರಲ್ಲಿ ಏಳನೆಯ ಪ್ರಾಕಾರದ ಬಾಗಿಲನ್ನು ಜಯ ವಿಜಯರು ಕಾಯುತ್ತಿರುವರು. ಇಲ್ಲಿಯವರೆಗೂ ಅಮುಕ್ತ ಸ್ಥಾನವೆಂದು ಹೆಸರು. ಇಲ್ಲಿಂದ ಇಳಗೆ ಮುಕ್ತರಿಗೆ ಮಾತ್ರ ಪ್ರವೇಶ ವಿರಜಾ ನದಿಯಾಚೆ ಇರುವ ಹರಿಯ ಅಂತಃಪುರಕ್ಕೆ ಪರಮ ಯೋಮವೆಂದು ಹೆಸರು. ಅಲ್ಲಿ ಮುಕ್ತರು ವೈಭವ ಪೂರ್ಣವಾದ ಅಲಂಕಾರಗಳಿಂದ ಕೂಡಿ ಅನೇಕ ವೈಭವ ಸುಖಗಳನ್ನು ಅನುಭವಿಸುತ್ತಿರುತ್ತಾರೆ. 'ಸರ್ವೇನಂದಂತಿ ಯಶಸಾಗತೇನ' ಎಂಬ ಶೃತಿಯ ಮುಕ್ತರ ಸ್ಥಿತಿಯನ್ನು ತಿಳಿಸುವುದು". (೬)

**ಮನೆ :** ಅಲ್ಲಿದೆ ನಮ್ಮಮನೆ, ಇಲ್ಲಿ ಬಂದೆ ಸುಮ್ಮನೆ ಪ।

ಕದ ಬಾಗಿಲಿರಿಸಿದ ಕಳ್ಳಮನೆ, ಇದು
ಮುದದಿಂದಲೋಲ್ಯಡೊ ಸುಳ್ಳುಮನೆ
ಇದಿರಾಗಿ ವೈಕುಂಠವಾಸ ಮಾಡುವಂಥ
ಪದುಮನಾಭನ ದಿವ್ಯ ಬದುಕು ಮನೆ ೧।
. . . . . . . . . . . . . . . . . . (೧೨೫)

ಮನೆ ಇಲ್ಲಿ ವೈಕುಂಠದ ಪ್ರತೀಕವಾಗಿದೆ. ಇಲ್ಲಿ ಸಂಸಾರವನ್ನು ಸುಳ್ಳುಮನೆ ಎಂದು ಕರೆದಿರುವ ದಾಸರು ಇದು ವಿಷಯಸುಖಗಳೇ ಸುಖಗಳು ಎಂದು ನಂಬಿ ಪ್ರಾಪಂಚಿಕ ಭೋಗದಲ್ಲೇ ತೊಡಗಿಸುವ ಮನೆ ಎಂದಿದ್ದಾರೆ.

**ನಮ್ಮೂರು :** ಬ್ರಹ್ಮಾಂಡದೊಳಗೆ ಅರಸಿ ನೋಡಲು ನಮ್ಮೂರೇ ವಾಸಿ ॥ಪ॥

ರಮೆಯ ಅರಸನು ಸರ್ವದಾ ವಾಸಿಪ ಸುಮ್ಮಾನದಿತಾನು ॥ಅ॥

ಜನನ ಮರಣವಿಲ್ಲ ಅಲ್ಲಿ, ಉಣುವ ದು:ಖವಿಲ್ಲ
ಅನುಜ ತನುಜರು ಅಲ್ಲಿಲ್ಲ, ಅನುಮಾನದ ಸೊಲ್ಲೇ ಇಲ್ಲ ॥೧॥

ನಿದ್ರೆಯು ಅಲ್ಲಿಲ್ಲ, ರೋಗೋಪದ್ರಗಳಲ್ಲಿಲ್ಲ
ಕ್ಷುದ್ರ ಜನಂಗಳು ಅಲ್ಲಿಲ್ಲ, ಸಮುದ್ರಶಯನ ಬಲ್ಲ ಎಲ್ಲ ॥೨॥

ಸಾದು ಜನರ ಕೂಡೆ, ಮೋಕ್ಷಕ ಸಾಧನೆಗಳ ಮಾಡೆ
ಮಾಧವ ಪುರಂದರವಿಠಲರಾಯನು, ಆದರಿಸಿವನಲ್ಲೆ ಬಲ್ಲೆ (೧೨೬)

'ನಮ್ಮೂರು' ಪ್ರತಿಮೆ ಇಲ್ಲಿ ವೈಕುಂಠವನ್ನು ಸಂಕೇತಿಸುತ್ತದೆ. ಸಜ್ಜನರಿಗೆ ಎಲ್ಲಿ ಕರೆದರೆ ಅಲ್ಲಿ ಬಂದೊದಗುವ ಹರಿಯು. ಆದ್ದರಿಂದ ವೈಕುಂಠವು ಕೂಗಿದರೆ ಕೇಳುವಷ್ಟು ದೂರ ಎಂದಿದ್ದಾರೆ ಪುರಂದರ ದಾಸರು.

**ವೈಕುಂಠ :** ಒಂದೇ ಕೂಗೆಳತೆ ವೈಕುಂಠ ॥ಪ॥
ಸಂದೇಹವಿಲ್ಲವೋ ಸಾಧು ಸಜ್ಜನರಿಗೆ ॥ಅ॥ (೧೨೭)

ಶ್ರೀ ರಂಗವು ಭೂ ವೈಕುಂಠವೆಂದು ಪ್ರತೀತ. ತಮಿಳುನಾಡಿನಲ್ಲಿ ತಿರಿಚಿರಪಳ್ಳಿಗೆ ಎರಡು ಮೈಲು ದೂರದಲ್ಲಿರುವ ಶ್ರೀರಂಗ [ತಿರುವರಂಗಂ] ಸುಪ್ರಸಿದ್ಧ ವೈಷ್ಣವ ಕ್ಷೇತ್ರ. ಕಾವೇರಿಯು ಇಬ್ಭಾಗವಾಗಿ ಒಡೆದು ನಡುಗಡ್ಡೆಯಾಗಿ ಮತ್ತೆ ಸೇರಿಕೊಳ್ಳುವುದು ಮೂರು ಕಡೆಗಳಲ್ಲಿ ಮೊದಲು ಶ್ರೀರಂಗ ಪಟ್ಟಣದಲ್ಲಿ ಅನಂತರ ಶಿವಸಮುದ್ರದಲ್ಲಿ ಕಡೆಯದಾಗಿ ಶ್ರೀರಂಗದಲ್ಲಿ ಇವನ್ನು ಕ್ರಮವಾಗಿ ಆದಿರಂಗ, ಮಧ್ಯರಂಗ, ಅಂತ್ಯರಂಗ ಎಂದು ಕರೆಯುತ್ತಾರೆ. ಶ್ರೀರಂಗವು ಹದಿನೇಳು ಮೈಲು ಉದ್ದ ಮೂರು ಮೈಲು ಅಗಲವಿರುವ ನಡುಗಡ್ಡೆ ಇಲ್ಲಿನ ಕಾವೇರಿಯನ್ನು ವಿರಜಾ ನದಿಯೆಂದೂ ಅದರ ನಡುಗಡ್ಡೇಯೇ ವೈಕುಂಠವೆಂದೂ ಬಣ್ಣಿಸುತ್ತಾರೆ. ಶ್ರೀರಂಗವೇ ವೈಕುಂಠವೆಂದು ದಾಸರೂ ಬಣ್ಣಿಸುತ್ತಾರೆ.

**ವೈಕುಂಠ:** ಇಲ್ಲೇ ವೈಕುಂಠ, ನಮ್ಮ ಶ್ರೀ ಲಕುಮಿ
ವಲ್ಲಭ ಪರಿಪೂರ್ಣನೆಂದು ಭಜಿಪರಿಗೆ ॥ಪ॥

. . . . . . . . . . . . . . . . . . .
ವರ ಕಾವೇರಿಯೆ ವಿರಜಾದಿಯೆಂದು
ಪರಮಪದವೆ ರಂಗಕ್ಷೇತ್ರವೆಂದು
ಪರವಾಸುದೇವನೆ ರಂಗನಾಯಕನೆಂದು
ಪರಮ ಭಕುತಿಯಿಂದ ಭಜಿಸುವ ಜನರಿಗೆ (೧೨೮)

ದಾಸರ ಕೀರ್ತನೆಗಳಿಗೆ ಮಧ್ವಮತ ಆಧಾರವಾಗಿದ್ದರೂ ತರ್ಕನಿಷ್ಠ ನಿರೂಪಣೆ ಒಂದು ಕ್ರಮದಲ್ಲಿ ಅಭಿವ್ಯಕ್ತವಾಗಿಲ್ಲ. ನಮಗೆ ಸಿಕ್ಕ ಕೀರ್ತನೆಗಳಲ್ಲಿ ಮಧ್ವತತ್ವದ ಎಲ್ಲಾ ವಿಷಯಗಳು ಸಿಗುವುದಿಲ್ಲ ಅಥವಾ ಅವರು

ಹೇಳಿದ ಅನೇಕ ವಿಷಯಗಳು ನಮಗೆ ಸಿಗದ ಕೀರ್ತನೆಗಳಲ್ಲಿರಬಹುದು. ದಾಸರು ರಚಿಸಿದ ಕೀರ್ತನೆಗಳಲ್ಲಿ ಹರಿನಾಮ ಸ್ಮರಣೆ, ಉಪಾಸನೆ ಮತ್ತು ನೈತಿಕ ಮೌಲ್ಯಗಳೊನ್ನೊಳಗೊಂಡ ವಿಷಯಗಳ ಹೇರಳವಾಗಿ ಕಂಡುಬರುತ್ತದೆ. ಮಧ್ವತತ್ವವಲ್ಲದೆ ಅನೇಕ ದೇವತಾ ಸ್ತೋತ್ರಗಳು, ಪೌರಾಣಿಕ ವಿಷಯಗಳು ಅವರ ರಚನೆಗಳಲ್ಲಿ ಕಂಡುಬರುತ್ತವೆ.

**ಪೌರಾಣಿಕ ಪ್ರತಿಮೆಗಳು:**

**ಮಂಚ:**

ಶೃಂಗಾರವಾಗಿಹದು ಶ್ರೀ ಹರಿಯೆ ಮಂಚ
ಅಂಗನೆ ಮಹಲಕುಮಿಯರಸ ಮಲಗುವ ಮಂಚ ॥ಪ॥

ಬಡಗಿ ಮುಟ್ಟದ ಮಂಚ ಕಡಲೊಳಿಹ ಮಂಚ
ಮೃಡನ ತೋಳಲಿ ಅಡಗಿರುವ ಮಂಚ
ಹೆಡೆಯುಳ್ಳ ಹೊಸಮಂಚ ಪೊಡವಿ ಪೊತ್ತಿಹ ಮಂಚ
ಕಡಲಶಯನ ಶ್ರೀರಂಗನ ಸಿರಿಮಂಚ ॥೧॥

ಕಾಲಿಲ್ಲದೋಡುವ ಮಂಚ ಗಾಳಿನುಂಗುವ ಮಂಚ
ತೋಳು ಬಿಳುಪಿನ ಮಂಚ ವಿಷಮಂಚ
ಕಾಳಗದೊಳರ್ಜುನನ ಮುಕುಟ ಕೆಡಹಿದ ಮಂಚ
ಕೇಳು ಪರಿಕ್ಷಿತನ ಕೊಂದುದೀ ಮಂಚ ॥೨॥

ಕಣ್ಣು ಕಿವಿಯಾದ ಮಂಚ ಬೆನ್ನು ಬಾಗಿದ ಮಂಚ
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ
ಬಣ್ಣ ಬಿಳುಪಿನ ಮಂಚ ಹೊನ್ನಕಾದಿಹ ಮಂಚ
ಕನ್ನೆ ಮಹಾಲಕ್ಷ್ಮಿಯರಸನ ಮಂಚ ॥೩॥

ಹಕ್ಕಿಗೆ ಹಗೆಯಾದ ಮಂಚ ರೊಕ್ಕ ಮುಟ್ಟದ ಮಂಚ
ರಕ್ಕಸರೆದೆ ತಲ್ಲಣಗೊಳಿಸುವ ಮಂಚ
ಸೊಕ್ಕು ಪಿಡಿದ ಮಂಚ ॥೪॥

ಅಂಕುಡೊಂಕಿನ ಮಂಚ ಅಕಲಂಕ ಮಹಿಮ ಮಂಚ
ಸಂಕರುಷಣನೆಂಬ ಸುಖದ ಮಂಚ
ಶಂಕರನ ಕೊರಳಿಗೆ ಪದಕವಾಗಿಹ ಮಂಚ
ವೆಂಕಟಪುರಂದರವಿಠಲರಾಯನ ಮಂಚ ॥೫॥
(೧೨೯)

ಇಲ್ಲಿ 'ಮಂಚ' ಪ್ರತಿಮೆಯು ಶೇಷನಾಗನನ್ನು ಸಂಕೇತಿಸುತ್ತದೆ. ಶೇಷವು ಒಂದು ಸಾವಿರ ಹೆಡೆಗಳ ಹಾವೆಂದೂ ಭೂಮಿಯನ್ನು ತನ್ನ ತಲೆಯ ಮೇಲೆ ಹೊತ್ತಿದೆಯೆಂದೂ ನಂಬಿಕೆ. ಅದು ಪಾತಾಳದಲ್ಲಿದ್ದುಕೊಂಡು ಮೇಲಿನ ಆರು ಅಧೋ ಲೋಕಗಳನ್ನು ಭೂಮಿಯನ್ನೂ ಹೊತ್ತಿರುವದರಿಂದ ಏಳು ಹೆಡೆಗಳನ್ನು ನಿರ್ದೇಶಿಸುವ ದುಂಟು. ಶೇಷನು ಕಶ್ಯಪ ಹಾಗೂ ಕದ್ರುವಿನ ಮಗನಾಗಿ ಹುಟ್ಟಿ ಕ್ಷೀರ ಸಮುದ್ರದಲ್ಲಿ ನಾರಯಣನಿಗೆ

ಶಯ್ಯೆಯಾಗಿದ್ದಾನೆ. ಇವನನ್ನು ಒಡಗಿ ಮುಟ್ಟದ ಮಂಚವೆಂದು ಶಿವನ ಆಭರಣವೆಂದೂ, ಅರ್ಜುನನ ಕಿರೀಟಕೆಡಹಿದ ಮಂಚವೆಂದೂ(೫) ಗರುಡನಿಗೆ ಶತ್ರುವೆಂದೂ, ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚವೆಂದು (೮೦)ವರ್ಣಿಸಲಾಗಿದೆ.

**ಅನಾಥಬಂಧು:** ನೀನೇ ಅನಾಥಬಂಧು ಕಾರಣ್ಯ ಸಿಂಧು ಪ।

ಮದಗಜವೆಲ್ಲ ಕೂಡಿದರೇನು ಅವರ ವ್ಯಾಳಕ್ಕೆ ಒದಗಲಿಲ್ಲ
ಮದನನಯ್ಯ ಮಧುಸೂದನ ಎನ್ನಲು
ಮುದದಿಂದಲಿ ಬಂದೊದಗಿದೆ ಕೃಷ್ಣಾ ೧।

ಪತಿಗಳೈವರಿದ್ದರೇನು ಸತಿಯ ಭಂಗ ಬಿಡಿಸಲಿಲ್ಲ
ಗತಿ ನೀನೇ ಮುಕುಂದ ಎನ್ನಲು
ಅತಿ ವೇಗದಿ ಅಕ್ಷಯವಿತ್ತೆ ಕೃಷ್ಣಾ ೨।

ಶಿಲೆಯ ರಕ್ಷಿಸಿ ಕುಲಕೆತಂದೆ
ಬಲಿಗೆ ಒಲಿದು ಪದವಿಯನಿತ್ತೆ
ಸುಲಭದಿ ಭಕ್ತರ ಸಲಹುವ ನಮ್ಮ
ಚೆಲುವ ಪುರಂದರವಿಠಲರಾಯ ೩। (೧೩೦)

ಕಷ್ಟದಲ್ಲಿರುವ ಭಕ್ತರನ್ನು ಸಲಹಲು ಓಡಿಬರುವ ಪರಮಾತ್ಮನನ್ನು ಇಲ್ಲಿ ಅನಾಥಬಂಧು ಎನ್ನಲಾಗಿದೆ. ಮೊದಲನೆಯ ನುಡಿಯಲ್ಲಿ ಗಜೇಂದ್ರ ಎಂಬ ಆನೆಯನ್ನು ಮೊಸಳೆ ಹಿಡಿದು ಎಳೆಯುತ್ತಿರಲು ತಕ್ಷಣ ಬಂದು ಸಲಹಿದ ಪರಮಾತ್ಮನನ್ನು ಮುದದಿಂದಲಿ ಬಂದೊದಗಿದೆ ಕೃಷ್ಣಾ ಎಂದಿದ್ದಾರೆ ದಾಸರು. ಎರಡನೆಯ ನುಡಿಯಲ್ಲಿ ದ್ರೌಪತಿ ವಸ್ತ್ರಾಪಹರಣ ಪ್ರಸಂಗವನ್ನು, ಮೂರನೇಯ ನುಡಿಯಲ್ಲಿ ರಾಮಾವತಾರದಲ್ಲಿ ಅಹಲ್ಯೆಯನ್ನುದ್ಧರಿಸಿದ ಪ್ರಸಂಗವನ್ನು ವಾಮನಾವತಾರದಲ್ಲಿ ಬಲಿಚಕ್ರವರ್ತಿಗೆ ಭಾವಿ ಇಂದ್ರ ಪದವಿಯನ್ನು ಕೊಟ್ಟನೆಂಬ ವಿಷಯಗಳನ್ನು ಉಲ್ಲೇಖಿಸಲಾಗಿದೆ.

**ವರಾಹ (ಹಂದಿ):** ಆದಿವರಾಹನ ಚೆಲುವಪಾದವ ಕಾಣದೆ ಕಣ್ಣು
ವೇದನೆಯಾಗಿ ಒಳ ಭಾದಿಸುತಲಿದೆ ಎನ್ನ ಪ।

ಈ ಧರಣಿ ಮುಳುಗೆ ಶುಕ್ಲನದಿಯ ದಕ್ಷಿಣದಲ್ಲಿದ್ದ
ಮೇದಿನಿ ಕೋರೆದಾಡೆಲೆತ್ತಿದಂಥ
. . . . . . . . . . . . . . . . . .
. . . . . . . . . . . . . . . . . .
ದಂಡಕಾರಣ್ಯ ಭೂಮಿಲಿ ತೊಂಡಮುಂಡಲದೊಳಗೆ
ಹಿಂಡು ಹಿಂಡು ಅಟ್ಟಿಬಂದ ದಂಡಕಾಸುರ ಪಡೆಯ
ಖಂಡಿಸಿ ದೈತ್ಯರನ್ನೆಲ್ಲ ತುಂಡು ಮಾಡಿದನು
ದ್ದಂಡ ಶ್ವೇತ ವರಾಹನು. ೫।
. . . . . . . . . . . . . . . . . .
ಭಾರವೂ ಹಾರುವೂ ವೇಳೆ ಗರುಡೋತ್ತಮನು ಬಂದು ಬೇಗ
ಗುರುಮಂತ್ರ ಉಪದೇಶ ಪರಿಸ್ಮರಣೆಯಿಂದಲಿ

ನರಬಾಧೆಗಳು ಬಾರದೆಂದು ಶ್ರೀ
ಹರಿಪಾದ ತಿರುಪತಿ ಉತ್ತರ ಶೇಷವರದ
ಪುರಂದರವಿಠಲನ ಚರಣಕಮಲದಲಿ ಓಲಾಡಿದಿಯೆಂದು ॥೪॥(೧೩೧)

ತಮಿಳುನಾಡಿನಲ್ಲಿ ಚಿದಂಬರವೆಂಬ ಸುಪ್ರಸಿದ್ಧ ಕ್ಷೇತ್ರದಿಂದ ಸುಮಾರು ಇಪ್ಪತ್ತೈದು ಮೈಲುಗಳ ದೂರದಲ್ಲಿರುವ ಈ ಊರು ಮಾಧ್ವ ಸಂಪ್ರದಾಯದವರಿಗೆ ಪವಿತ್ರವಾದುದು. ತೊಂಡ ಮಂಡಲಕ್ಕೆ ಸೇರಿದ್ದ ಈ ಭೂಭಾಗದಲ್ಲಿ ದಂಡಕಾಸುರನ ಹಾವಳಿ ಹೆಚ್ಚಿ ಅವನು ಭೂಮಿಯನ್ನೇ ಕದ್ದೊಯ್ಯಲು ವಿಷ್ಣುವು ವರಾಹಾವತಾರ ಮಾಡಿ ಅವನನ್ನು ನಿಗ್ರಹಿಸಿ ಭೂಮಿಯನ್ನು ಮರಳಿ ಪಡೆದುಕೊಟ್ಟದು ಈ ಕ್ಷೇತ್ರದ ಹಿನ್ನಲೆ ಇದೂ ಕೂಡ ಒಂದು ವಿಷ್ಣುವಿನ ಅವತಾರವಾಗಿದ್ದು ಆ ಅವತಾರವು ಇಲ್ಲೇ ಆಗಿದ್ದು ಎಂದು ಪ್ರತೀತಿಯಿದೆ. ವರಾಹಾವತಾರದಲ್ಲಿ ಶೇಷನು ತನ್ನ ಹೆಡೆಗಳನ್ನು ದೇವರ ತಲೆಯ ಮೇಲೆ ಎತ್ತಿ ಹಿಡಿದು ಸೇವೆ ಮಾಡಿ ದೇವರಿಂದ ವರವನ್ನು ಪಡೆಯುತ್ತಾನೆ ಎಂಬ ಪುರಾಣಕಥೆಯಿದೆ. ಶೇಷನು ತಿರುಪತಿಯಲ್ಲಿ ಬೆಟ್ಟವಾಗಿ 'ಹರಿಪಾದ' ಎಂದು ಕರೆಸಿಕೊಳ್ಳುತ್ತಾನೆ. ವರಾಹನಿಗೆ ಭೂವರಾಹ ಶ್ವೇತವರಾಹ ಎಂಬ ಎರಡು ರೂಪಗಳಿದ್ದು, ಪ್ರಸ್ತುತ ಕ್ಷೇತ್ರದಲ್ಲಿ ಆದಿವರಾಹನ ಅವತಾರವಾಗಿದೆ ಎಂದು ಪ್ರತೀತಿ.

**ಧಣಿ:** ದಣಿಯ ನೋಡಿದೆನೋ ವೆಂಕಟನ ಮನ
ದಣಿಯ ನೋಡಿದೆ, ಶಿಖಾಮಣಿಯ ನಿರ್ಮಲನ
ಕೇಸಕ್ಕಿ ಅನ್ನತಿಂಬುವನ, ಬಡ್ಡಿ, ಕಾಸುಬಿಡದೆ ಹೊನ್ನು ಬಳಸಿಕೊಂಬುವನ
ದೋಸೆ ಅನ್ನ ಮಾರಿಸುವನ ತನ್ನ
ದಾಸರ ಮೇಳದಿ ಕುಣಿದಾಡುತಿಹನ ॥೧॥ (೧೩೨)

ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆಯಲ್ಲಿ ಪೂರ್ವ ಘಟ್ಟಗಳ ಸಾಲಿನಲ್ಲಿರುವ ತಿರುಪತಿ ಜಗತ್ಪ್ರಸಿದ್ಧವಾದ ತಾಣ, ಕೃತಯುಗದಲ್ಲಿ ವೃಷಭಾದ್ರಿಯೆಂದೂ, ತ್ರೇತಾಯುಗದಲ್ಲಿ ಅಂಜನಾದ್ರಿಯೆಂದೂ, ದ್ವಾಪರಯುಗದಲ್ಲಿ ಶೇಷಾಚಲವೆಂದೂ, ಕಲಿಯುಗದಲ್ಲಿ ವೆಂಕಟಾಚಲವೆಂದೂ ಈ ಕ್ಷೇತ್ರಕ್ಕೆ ಕರೆಯುತ್ತಾರೆ. ಈ ಕ್ಷೇತ್ರದ 'ದಣಿ' ಅಥವಾ ಒಡೆಯನೆ ವೆಂಕಟೇಶ್ವರ. ಇವನು ಪದ್ಮಾವತಿಯನ್ನು ವರಿಸಲು ಕುಬೇರನಿಂದ ಬಹಳ ಸಾಲಪಡೆದನೆಂದೂ ಈಗ ತಿರುಪತಿಹುಂಡಿಯಲ್ಲಿ ಹಾಕುವ ಭಕ್ತರ ಕಾಣಿಕೆಯಿಂದ ಆ ಸಾಲವನ್ನು ಮುಟ್ಟಿಸುತ್ತಿರುವನೆಂಬ ನಂಬಿಕೆ ಇದೆ.

**ಯಮ:** ಯಮನೆಲ್ಲೊ ಕಾಣೆನೆಂದ್ಹೇಳಬೇಡ
ಯಮನೆ ಶ್ರೀ ರಾಮನು ಸಂದೇಹಬೇಡ ॥ಪ॥

ನಂಬಿದ ವಿಭೀಷಣಗೆ ರಾಮನಾದ
ನಂಬದಿದ್ದ ರಾವಣಗೆ ಯಮನಾದ ॥೧॥

ನಂಬಿದ ಅರ್ಜುನನಿಗೆ ಭೃತ್ಯನಾದ
ನಂಬದ ದುರ್ಯೋಧನನಿಗೆ ಮೃತ್ಯುವಾದ ॥೨॥

ನಂಬಿದ ಪ್ರಲ್ಹಾದನಿಗೆ ಹರಿಯಾದ
ನಂಬದ ಹಿರಣ್ಯಕನಿಗೆ ಉರಿಯಾದ ॥೩॥

ನಂಬಿದ ಉಗ್ರಸೇನನಿಗೆ ಮಿತ್ರನಾದ
ನಂಬದಿದ್ದ ಕಂಸನಿಗೆ ಶತ್ರುವಾದ ॥೪॥

ನಂಬಿಕೊಳ್ಳಿ ಬೇಗ ಶ್ರೀ ಕೃಷ್ಣದೇವನ
ಕಂಬು ಚಕ್ರಧಾರಿ ಪುರಂದರವಿಠಲನ ॥೫॥ (೧೩೩)

ರಾವಣ, ದುರ್ಯೋಧನ, ಹಿರಣ್ಯಕಶ್ಯಪ ಹಾಗೂ ಕಂಸರ ವಧೆಗೆ ಕಾರಣನಾಗಿರುವ ಪರಮಾತ್ಮನೇ ಯಮನು ಎಂದು ಇಲ್ಲಿ ಹೇಳಲಾಗಿದೆ. ವಿಭೀಷಣ, ಅರ್ಜುನ, ಪ್ರಹ್ಲಾದ, ಉಗ್ರಸೇನರು ವಿಷ್ಣುವಿನ ಭಕ್ತರು ನಂಬಿದವರನ್ನು ಕೈ ಬಿಡನು ಎಂಬಂತೆ ಭಗವಂತನಲ್ಲಿ ಭಕ್ತಿಯಿಡಲು ಇಲ್ಲಿ ಕರೆನೀಡಲಾಗಿದೆ. .

**ಮಾಯಾದೇವಿ:** ಮರುಳು ಮಾಡಿದೆಯಲ್ಲೆ ಮಾಯಾದೇವಿಯೆ ॥ಪ॥

ಇರಳು ಹಗಲು ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ ॥ಅ॥

ಜ್ಞಾನಿಗಳು ನಿತ್ಯ ಅನ್ನಪಾನಾದಿಗಳನ್ನು ಬಿಟ್ಟು
ನಾನಾ ವಿಧ ತಪವಿದ್ದರು ಧ್ಯಾನಕ್ಕೆ ಸಿಲುಕದವನ ॥೧॥
. . . . . . . . . . . . . . . . . . . .
ಮಕ್ಕಳ ಪಡೆದರೆ ನಿನ್ನ ಚೊಕ್ಕತನವು ಪೋಪುದೆಂದು
ಪೊಕ್ಕಳೊಳು ಮಕ್ಕಳ ಪಡೆದು ಕಕ್ಕುಲಾತಿಪಡುವಂತೆ ॥೨॥ (೧೩೪)

ಲಕ್ಷ್ಮಿಯು ಅನಂತಾದ್ಭುತ ಶಕ್ತಿಯನ್ನು ಹೊಂದಿದವಳು. ಜ್ಞಾನಿಗಳು ಜಪ, ತಪ ಮಾಡಿದರೂ ಬೇಗನೆ ಒಲಿಯದ ಹರಿಯನ್ನು ಹಗಲು ಇರುಳು ಬಿಡದಂತೆ ಒಟ್ಟಿಗೆ ಇರುವಂತೆ ಮಾಡಿದ ಶಕ್ತಿ ಎಂಥದು. ಎನು ಮಾಯೆಯನ್ನು ಮಾಡಿದೇ? ಎಂದು ವಿನೋದದಿಂದ ದಾಸರು ಲಕ್ಷ್ಮೀದೇವಿಯನ್ನು ಕೇಳುತ್ತಿದ್ದಾರೆ.

**ದೊರೆ:** ಕಾರುಣ್ಯ ಮೂರುತಿಯೆ ಕಂಗಳು ಮೂರುಳ್ಳದೊರೆಯೆ ॥ಪ॥

ಧಾರಿಣಿಯೊಳು ನಿನಗೆಣೆಯೆ ಗುರುದೇವ ಶಿಖಾಮಣಿಯ ॥ಅ॥

ಗುಹಾಸುರ ಮರ್ದನನೇ ದೇವ ಖಗವೃಷವಾಹನನೆ
ಗಜಚರ್ಮ ಪೀತಾಂಬರನೆ ಮಹಾದೇವ ಮಾಧವನೆ ॥೧॥

ತ್ರಿಪುರಾವಳಿ ಸಂಹಾರನೆ ತ್ರೈಲೋಕ್ಯ ಪಾವನನೆ
ಅಪಾರ ಮಹಿಮನೆ ಪ್ರಸನ್ನ ಶ್ರೀ ಹರಿಹರನೆ ॥೨॥

ತುಂಗಭದ್ರದಡಿಯ ತಾಳಿಪ್ಪ ಗಂಗೆಯ ಜಡೆಯ
ಪುರಂದರವಿಠಲನ ಪ್ರೀಯ ನೀ ಸಲಹಯ್ಯ ಎನ್ನೊಡೆಯ (೧೩೫)

ದಾಸರು ಇಲ್ಲಿ ಹರಿ–ಹರ ಇಬ್ಬರನ್ನು ಒಂದೇ ಕೀರ್ತನೆಯಲ್ಲಿ ಸ್ತುತಿಸಿದ್ದಾರೆ. ಖಗವಾಹನ, ಪಿತಾಂಬರಿ, ಗುಹಾಸುರ ಮರ್ದನ, ಮಾಧವ ತ್ರೈಲೋಕ್ಯ ಪಾವನ ಪ್ರಸನ್ನ, ತುಂಗಬಧ್ರಾನದಿಯ ದಂಡೆಯಲ್ಲಿರುವವನೆಂದು

ಹರಿಯನ್ನು ವರ್ಣಿಸಿದ್ದಾರೆ. ವೃಷ [ಬಸವ] ವಾಹನ, ಗಜಚರ್ಮಧಾರಿ, ಮಹಾದೇವ, ತ್ರಿಪುರಸಂಹಾರಿ, ಅಪಾರ ಮಹಿಮ, ಗಂಗೆಯನ್ನು ಜಡೆಯಲ್ಲಿ ಧರಿಸಿದವನು ಎಂದು ಹರನನ್ನು ಸ್ತುತಿಸುತ್ತಾರೆ.

**ಚೆಲುವ:** ಎಂಥಾ ಚೆಲುವಗೆ ಮಗಳನು ಕೊಟ್ಟನು
ಗಿರಿರಾಜನು ನೋಡಮ್ಮಮ್ಮಾ ಪ।
ಕಂತುಹರಶಿವ ಚೆಲುವನೆನ್ನುತ
ಮೆಚ್ಚಿದನು ನೋಡಮ್ಮಮ್ಮಾ ಅ।

ಮೋರೆ ಐದು ಮೂರು ಕಣ್ಣು
ವಿಪರೀತವ ನೋಡಮ್ಮಮ್ಮಾ
ಕೊರಳೊಳು ರುಂಡ ಮಾಲೆಯ
ಧರಿಸಿದ ಉರಗ ಭೂಷಣನ ನೋಡಮ್ಮಮ್ಮಾ ೧।
. . . . . . . . . . . . . . . . . .

ಭೂತಪ್ರೇತ ಪಿಶಾಚಿಗಳೆಲ್ಲ
ಪರಿವಾರವು ನೋಡಮ್ಮಮ್ಮಾ
ಈತನ ನಾಮವು ಒಂದೇ ಮಂಗಳ
ಮುಪ್ಪು ಹರನ ನೋಡಮ್ಮಮ್ಮಾ ೩।

ಮನೆಯೆಂಬುದು ಸ್ಮಶಾನವು ನೋಡೆ
ಗಜ ಚರ್ಮಾಂಬರವಮ್ಮಮ್ಮಾ
ಹಣವೊಂದಾದರು ಕೈಯೊಳಗಿಲ್ಲ
ಕಪ್ಪರವನು ನೋಡಮ್ಮಮ್ಮಾ ೪। (೧೩೭)

'ಚೆಲುವ' ಪ್ರತಿಮೆಯು ರುದ್ರದೇವರನ್ನು ಸಂಕೇತಿಸುತ್ತದೆ. ಸಾತ್ವಿಕ ಜೀವರು ಮುಕ್ತಿಯನ್ನು ಪಡೆಯಲು ಅತ್ಯಗತ್ಯವಾದ ಮನೋನೈರ್ಮಲ್ಯ ಮತ್ತು ವೈರಾಗ್ಯವನ್ನು ರುದ್ರದೇವರ ಅನುಗ್ರಹದಿಂದಲೇ ಪಡೆಯಬೇಕು. ಇತನನ್ನು ಸ್ಮಶಾನವಾಸಿ, ಗಜಚರ್ಮಧಾರಿ, ಯೋಗಿ, ಮುಪ್ಪುರಹರ, ನಂದಿವಾಹನ, ನೀಲಕಂಠ ಎಂದೆಲ್ಲಾ ಕರೆಯುತ್ತಾರೆ. ಹರನು ಎಲ್ಲ ಜೀವರುಗಳ ಜೀವಾಭಿಮಾನಕ್ಕೆ ಇವನೇ ಕಾರಣನು. ನಾಲ್ಕು ದಿಕ್ಕುಗಳಲ್ಲಿ ಹಾಗೂ ಮೇಲೆ ಇವನ ಪ್ರವೃತ್ತಿಯಿರುವುದರಿಂದ ಇವನಿಗೆ ಐದು ಮುಖಗಳೆನ್ನಲಾಗಿದೆ. ಗಿರಿರಾಜನು, ಹಿಮಾಚಲಯದಲ್ಲಿರುವ ಹಿಮಾಚಲರಾಜನು ಅವನ ಹೆಂಡತಿ ಮೇನೆಯ ಗರ್ಭದಲ್ಲಿ ಜನಿಸಿ ಪಾರ್ವತಿಯು ಶಿವನನ್ನು ವರಿಸಿದಳೆಂಬ ವಿಷಯವು ಸ್ಕಂದ ಪುರಾಣದಲ್ಲಿ ಬರುತ್ತದೆ.

**ಮಗು:** ಏನು ಮಾಡಲಿ ಈ ಮಗುವಿಗೇನಾಯಿತೋ ಇದ
ರಾಗಮ ಬಲ್ಲವರು ತಿಳಿದು ಹೇಳಿ ಪ।

ಕಣ್ಣ ಮುಚ್ಚನು ಯಾರು ದೃಷ್ಟಿಗೊಂಡರೊ ಮೊಲೆಯ
ನುಣ್ಣನು ಇನ್ನಿರುಳು ಎರೆದ ನೀರು
ತಣ್ಣಗಾದುದೋ ಏನೊ ಘುರುಘುರನ್ನುತಲಿದೆ
ಚೆಣ್ಣನು ಆಯೆಂದ ಬಾಯ್ಮುಚ್ಚನಮ್ಮ ೧।

ಖಂಡ ಸಕ್ಕರೆ ಬೆಣ್ಣೆ ಕೊಟ್ಟರೊಲ್ಲದೆ ಮಣ್ಣ
ಹೆಂಟೆ ಬೇಡುವನಮ್ಮ ಕೈಲೇನು ಕೊಡಲಿ
ಮಂಡೆ ಜಡೆಗಟ್ಟಿದೆ ಮಾಡಲಿದಕಿನ್ನೇನು
ಹಿಂಡು ಸತಿಯರ ದೃಷ್ಟಿ ಘನವಾಯಿತಮ್ಮ ೨।

ಮೊಲೆಯುಂಬುವಾಗ ಮೈಮರೆವಾಗುತಿದೆಯೆಂದು
ಕಲಿಕಿತನದಲೆನ್ನ ಕಾಡುತಾನೆ
ನೆಲೆಯ ಬಲ್ಲವರನ್ನು ಇಳೆಯೊಳೊಬ್ಬರ ಕಾಣೆ
ಚೆಲುವ ಶ್ರೀ ಪುರಂದರವಿಠಲನೆ ಬಲ್ಲ ೩। (೧೩೭)

'ಮಗು' ಪ್ರತಿಮೆ ಇಲ್ಲ ಪರಮಾತ್ಮನ ಪ್ರತೀಕವಾಗಿದೆ. ವಿಷ್ಣುವನ್ನು ವಿಚಿತ್ರವಾದ ಮಗುವೆಂದು ಬಗೆದು ಅಚ್ಚರಿಯಿಂದ ತಾಯಿ ಪರಿತಪಿಸುವ ಸಮಯವನ್ನು ಕವಿಯ ಕಲ್ಪನೆಯೊಳಗೆ ಕಟ್ಟಿ ಹಾಕಿದ್ದಾರೆ. ಇದರಾಗಮ ಎಂದರೆ ಇದರ ಗುಟ್ಟು ಏನು ಈ ಮಗುವಿಗೆ ಹೀಗೇಕೆ ಆಯಿತು ಎಂಬ ಭಾವ ಇಲ್ಲಿ ಮೂಡಿ ಬರುತ್ತದೆ. ಈ ಕೀರ್ತನೆಯಲ್ಲಿ 'ಮಗು' ಪ್ರತಿಮೆ ಪರಮಾತ್ಮನ ದಶಾವತಾರಗಳನ್ನು ವಿವರಿಸುತ್ತದೆ. ಕಣ್ಣ ಮುಚ್ಚನು – ಕಣ್ಣು ರೆಪ್ಪೆಯಿಲ್ಲದಿರುವಮೀನು ಮೊಲೆಯನುಣ್ಣನು – ಆಮೆ. ಘುರಘುರನ್ನುತಿದೆ – ಹಂದಿ, ವರಾಹ, ಆಯೆಂದ ಬಾಯ್ಮುಚ್ಚನು – ಸಿಂಹ. ಮಣ್ಣು ಹಂಚ ಬೇಡುವನು–ವಾಮನ, ಕೈಲೇನುಕೊಡಲಿ–ಪರಶುರಾಮ, ಮಂಡೆ ಜಡೆಗಟ್ಟಿದೆ – ಅರಣ್ಯವಾಸದಲ್ಲಿ ರಾಮ, ಹಿಂಡು ಸತಿಯರ ದೃಷ್ಟಿ–ಕೃಷ್ಣ, ಮೈಮರೆವಾಗುತಿದೆ–ಬತ್ತಲೆಯಿರುವ ಬುದ್ಧ, ಕಲಿಕಿತನದಲೆನ್ನ –ಕಲ್ಕಿ. ಇಲ್ಲಿನ ಪಲ್ಲವಿ ಉದ್ಗಾರವೊಂದನ್ನು ಮಂಡಿಸುವುದರ ಮೂಲಕ ನುಡಿಗಳೊಂದಿಗೆ ಸಂಪರ್ಕಕಲ್ಪಿಸಿಕೊಳ್ಳುತ್ತದೆ. ಮಗುವಿನ ಹಾವ–ಭಾವಗಳಲ್ಲಿ ಪರಮಾತ್ಮನ ಲೀಲೆಗಳನ್ನು ಅಭಿವ್ಯಕ್ತಿಸಲಾಗಿದೆ.

ಅಣ್ಣ : ಎನಣ್ಣ ನಿನಗೇನಣ್ಣ
ಕಣ್ಣೇ ಕಣ್ಣ ಮಚ್ಚವೊಲ್ಲಣ್ಣ
ಎನಣ್ಣ ನಿನ್ನ ಗೋಳಣ್ಣ
ಕಣ್ಣಿಂದ ನೋಡವೊಲ್ಲ್ಯಣ್ಣ ೧।

ಗೂನಣ್ಣ ಬಲು ಗೂನಣ್ಣ
ಗಿರಿಯ ಹ್ಯಾಂಗೆ ನಿ ಹೊತ್ತ್ಯಣ್ಣ
ಹೀನ ಅಸುರರ ಹ್ಯಾಂಗಣ್ಣ
ಮೋಸವ ನಿ ಮಾಡಿದ್ಯಣ್ಣ ೨।

ಹಲ್ಲಣ್ಣ ಕೋರೆ ಹಲ್ಲಣ್ಣ
ಭುವಿಯ ಹ್ಯಾಂಗೆ ನಿ ಹೊತ್ಯಣ್ಣ
ಒಳ್ಳೆ ಒಳ್ಳೆ ಭಕುತರನ್ನು
ಮೆಚ್ಚಿ ನಿ ಬಂದ್ಯಣ್ಣ ೩।

ಪೋರನ ಮೊರೆ ಕೇಳಿಯಣ್ಣ
ಕಂಭದಿಂದ ಬಂದ್ಯಣ್ಣ
. . . . . . . . . . . . . . . ೪।

ಪುಟ್ಟು ಪುಟ್ಟು ಹೆಜ್ಜೆಣ್ಣ
ಇಟ್ಟು ನಿ ಅದನ್ನು
ಕೊಟ್ಟ ಮಣ್ಣಿನ ಒಂದೇ ಬಾರಿ
ಅಳೆದ್ಯಣ್ಣ ನಿ ಅಳೆದ್ಯಣ್ಣ ೬॥
. . . . . . . . . . . . . . . . (೧೩೮)

ಜಾನಪದ ಶೈಲಿಯಲ್ಲಿರುವ ಈ ಕೀರ್ತನೆಯಲ್ಲಿ 'ಅಣ್ಣ' ಪ್ರತಿಮೆಯು ದಶಾವತಾರದ ಮತ್ಸ್ಯ ಕೂರ್ಮ [ಗೂನಣ್ಣ], ವರಾಹ, ನರಸಿಂಹ ಮೊದಲಾದ ಅವತಾರಗಳ ಬಗ್ಗೆ ಕ್ರಮವಾಗಿ ವಿವರಗಳನ್ನು ನೀಡುತ್ತದೆ. ತನ್ನ ಬೇಡಿಕೆಯನ್ನು ಈಡೇರಿಸದ ಪರಮಾತ್ಮನನ್ನು ತನ್ನ ಸಾಲಗಾರನಂತೆ ಭಾವಿಸಿ ಆ ಮೂಲಕ ಅಣಕವಾಡುತ್ತ ನಿಂದೆ ಮಾಡುವಂತೆ ಕಾಣುವ ಕೃತಿಯಲ್ಲಿ ನಿರಂತರವಾಗಿ ಭಕ್ತನ ಆತ್ಮೀಯತೆಯನ್ನು ಬಿಂಬಿಸುವ ದಶಾವತಾರದ ಇನ್ನೊಂದು ಕೃತಿ.

ಸಾಲ: ಕೊಟ್ಟ ಸಾಲವ ಕೊಡದೆ ಭಂಡಾಟ ಮಾಡುತಾನೆ ಪ॥

ಎಷ್ಟು ಬೇಡಿದರೆನ್ನ ಪೋಯೆನ್ನುತಾನೆ ಅ॥

ಭರದಿ ಕೇಳಲು ಜಲದಿ ಕಣ್ಣು ಬಾಯಿಬಿಡುತಾನೆ
ಕರುಬಿ ಕೇಳಲು ಕಲ್ಲು ಹೊತ್ತೈದಾನೆ
ಉರುಬಿ ಕೇಳಲು ಊರು ಅಡವಿಯೊಳಗಿರುತಾನೆ
ಇರುಳು ಹಗಲಲ್ಲಿ ಕಾಣಿಸಿಕೊಳ್ಳುತಾನೆ ೧॥

ಕಂಡ ನಿಲ್ಲಿಸಲೊಂದು ಕಾಲಿನಲ್ಲಿ ನಿಲ್ಲುತಾನೆ
ಕೊಂಡ ಸಾಲಕೆ ಕೊಡಲಿ ಪಿಡಿವುತಾನೆ
ಉಂಡರಾಂಬಯೆನಲು ಉಪವಾಸಮೈದಾನೆ
ಭಂಡತನದಲಿ ಠಕ್ಕು ನಡೆಸ್ಯಾಡುತಾನೆ ೨॥

ಕೆಟ್ಟು ಬೈಯಲು ಲಜ್ಜೆ ಹೇವವನು ತೊರೆವುತಾನೆ
ಕೊಟ್ಟು ಹೋಗೆನಲು ಕಲಿಯಾಗುತಾನೆ
ಸೃಷ್ಟಿಗೊಡೆಯ ಶ್ರೀ ರಂಗ ಪಟ್ಟಣದ ಪುರಂದರ
ವಿಠ್ಠಲೇಶನು ನಮ್ಮ ಪಶ್ಚಿಮದ ರಂಗನಾಥ ೩॥ (೧೩೯)

ಭಕ್ತಿಯಿಂದ ಕರೆದರೂ ದರ್ಶನ ಕೊಡದ ಪರಮಾತ್ಮನನ್ನು ಸಾಲಗಾರನಂತೆ ಇಲ್ಲಿ ಚಿತ್ರಿಸಲಾಗಿದೆ. ಸಾಲಕೇಳಿದಾಗ ಕಣ್ಣು ಕಣ್ಣು ಬಿಡುವುದು. ಊರುಬಿಟ್ಟು ಹೋಗುವುದು. ಲಜ್ಜೆ ಬಿಟ್ಟು ಭಂಡತನ ಪ್ರದರ್ಶಿಸುವುದು ಕೊನೆಗೆ ರೋಷದಿಂದ ಹೊಡೆಯಲು ಬರುವುದು ಇವೆಲ್ಲವೂ ಸಾಲತೀರಿಸದವರ ಸ್ವಭಾವವಾಗಿವೆ. ಈ ಸ್ವಭಾವ ಗಳ ಹಿನ್ನಲೆಯಲ್ಲಿ ಹರಿಯ ದಶಾವತಾರವನ್ನು ಬಹು ಸ್ವಾರಸ್ಯವಾಗಿ ಚಿತ್ರಿಸಲಾಗಿದೆ.

ಕಣ್ಣುಕಣ್ಣು ಬಿಡುತಾನೆ –ಮತ್ಸ್ಯಾವತಾರ, ಕಲ್ಲುಹೊತ್ತೈದಾನೆ –ಕೂರ್ಮಾವತಾರ, ಊರು ಅಡವಿಯೊಳ ಗಿರುತಾನೆ–ವರಾಹವತಾರ,ಇರುಳು–ಹಗಲಲ್ಲಿ ಕಾಣಿಸಿಕೊಳ್ಳುತಾನೆ–ನರಸಿಂಹಾವತಾರ, ಒಂದು ಕಾಲಿನಲ್ಲಿ

ನಿಲ್ಲುತಾನೆ – ತ್ರಿವಿಕ್ರಮನಾಗಿ ವಾಮನಾವತಾರದಲ್ಲಿ, ಕೊಡಲಿ ಪಿಡಿವುತಾನೆ–ಪರಶುರಾಮಾವತಾರ, ಉಪವಾಸ ವೈದಾನೆ–ರಾಮಾವತಾರ, ಭಂಢತನದಲ್ಲಿ ಠಕ್ಕುನಡೆಸ್ಯಾನ – ಕೃಷ್ಣಾವತಾರ, ಲಜ್ಜಿತೋರದ – ಬೌದ್ಧಾವತಾರ, ಕಲಿಯಾಗು ತಾನೆ –ಕಲ್ಕಿ ಅವತಾರ ಹೀಗೆ ದಶಾವತಾರಗಳ ಔಚಿತ್ಯ – ಸ್ವಾರಸ್ಯಗಳ ಮೂಡಿ ಬಂದಿದೆ.

ಲಕ್ಷ್ಮೀದೇವಿಯ ಕುರಿತು ಹೇಳಿದಂತೆ, ನಿಂದಾಸ್ತುತಿಯ ರೂಪದಲ್ಲಿರುವ ಈ ಕೆಳಗಿನ ಕೃತಿಯ ವಸ್ತು ಹಾಗೂ ವಿಷಯದ ದೃಷ್ಟಿಯಿಂದ ದಶಾವತಾರ ವರ್ಣನೆಯೇ ಆದರೂ ಶೈಲಿ ಮತ್ತು ತಂತ್ರ ಬಹಳ ಸ್ವಾರಸ್ಯಕರವಾಗಿದೆ.

**ಹೆಣ್ಣು :** ಏನು ಮೆಚ್ಚಿದೆ ಎಲೆ ಹೆಣ್ಣೆ –ಏನು ಮರುಳಾದೆಯೆ
ಏನು ಮೆಚ್ಚಿದೆಯೆಲೆ ಹೆಣ್ಣೆ ಪ॥

ನೋಟದಿ ಚೆಲುವೆನೆಂಬೆನೆ ಚಂಚಲರೂಪ
ಮಾಟದಿ ಚೆಲುವನೆ ಬೆನ್ನಲಿ ಬುಗುಟಿ
ಗೂಟದಂತೆ ಹಲ್ಲು ಮೊಳದುದ್ದ ಮೋರೆಯು
ಬೂಟಕತನದಲ್ಲಿ ಬಾಯ ತೆರೆವನಿಗೆ ೧॥

ಅಣುರೂಪದವನಿವ ನಿಲುವು ಉಳ್ಳವನಲ್ಲ
ಬಸವ ತರಿವನಂತೆ ಕೈಯಲ್ಲಿ ಕೊಡಲಿ
ಅನುಜರ ಬಿಟ್ಟು ಕಪಿಗಳ ಕೂಡಿ ಆಡುವ
ಮನೆಮನೆಗಳ ಪೊಕ್ಕು ಕದ್ದು ತಿಂಬುವನಿಗೆ ೨॥

ಗಂಭೀರ ಪುರುಷನೆಂಬೆನೆ ದಿಗಂಬರನಿವ
ಅಂಬರದಲಿ ಕುದುರೆ ಕುಣಿಸುವನು
ಅಂಬುಜಾಕ್ಷ ನಮ್ಮ ಪುರಂದರವಿಠಲಗೆ
ಸಂಭ್ರಮದಿಂದಲಿ ಮರುಳಾದೆ ಹೆಣ್ಣೆ ೩॥ ೧೪೦)

'ಹೆಣ್ಣು ಪ್ರತಿಮೆ ಇಲ್ಲಿ ಲಕ್ಷ್ಮೀದೇವಿಯನ್ನು ಸಂಕೇತಿಸುತ್ತದೆ. ಮತ್ಸ್ಯಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಹಾಗೂ ಕಲ್ಕೀ ಅವತಾರಗಳನ್ನು ಉಲ್ಲೇಖಿಸುತ್ತಾ ಕ್ಷೀರಸಾಗರದಲ್ಲಿ ಉದಿಸಿ ವಿಷ್ಣುವನ್ನು ಮೆಚ್ಚಿ ಮದುವೆಯಾದ ಲಕ್ಷ್ಮೀದೇವಿಗೆ ದಾಸರು ವಿಷ್ಣುವಿನ ಅವಗುಣಗಳನ್ನು ಹಾಗೂ ವಿಕಾರ ರೂಪಗಳನ್ನು ಹೇಳುತ್ತ ಇಂತಹ ಕುರೂಪಿಯನ್ನು ಮದುವೆಯಾದೆಯಾ? ಎಂದು ಅಣಕವಾಡುವ ಭಾವದಲ್ಲಿ ಕೃತಿ ರಚಿಸಿದ್ದಾರೆ. ಇದೊಂದು ಮೇಲ್ಪಂಕ್ತಿಯ ನಿಂದಾಸ್ತುತಿ ಎಂದು ಹೇಳಬಹುದು.

ಇನ್ನೊಂದು ಕೃತಿಯಲ್ಲ ದೇವರ ದರ್ಶನದ ಆಕಾಂಕ್ಷೆಯಿಂದ ನಿರಾಶೆಗೊಂಡ ಭಕ್ತನೊಬ್ಬನು ಭಗವಂತನನ್ನು ನಿಂದಿಸುತ್ತಾ ಅವನನ್ನು ವರ್ಣಿಸುವ ರೀತಿಯಲ್ಲಿ ದಶಾವತಾರಗಳ ಸಾಕ್ಷಾತ್ಕಾರ ಮಾಡಿಸುವ ಪರಿಯನ್ನು ದಾಸರು ಚಿತ್ರಿಸಿದ್ದಾರೆ.

**ಧೊರೆ :** ಧರಣಿಗೆ ಧೊರೆಯೆಂದು ನಂಬಿದೆ, ಇಂಥ
ಪರಮಲೋಭಿ ಎಂಬುದರಿಯ ಶ್ರೀ ಹರಿಯ ಪ॥

ಕಾಡಿಬೇಡುವರಿಗೆ ಕೊಡಲಾರದೆ ಅಂಜಿ
ಓಡಿ ನೀರೊಳು ಸೇರಿಕೊಂಡೆ ಬೇಗ
ಹೇಡಿಯ ತೆರದಲಿ ಮೋರೆಯ ತೋರದೆ
ಓಡಿ ಅರಣ್ಯದಿ ಮೃಗಗಳ ಸೇರ್ದೆ ೧

ಬಡವರ ಬಿನ್ನಹ ಲಾಲಿಸದೆ ಹಲ್ಲ
ಕಡು ಕೋಪದಲಿ ತೆರೆದಂಜಿಸಿದೆ
ತಡೆಯದೆ ಭಿಕ್ಷುಕನಾದರೆ ಬಿಡರೆಂದು
ಕೊಡಲಿಯ ಪಿಡಿದು ಕೋಡಗಹಿಂಡ ಕಾಯ್ದೆ ೨

ಉತ್ತಮನೆಂದರೆ ಮತ್ತೆ ಚೋರನಾದೆ
ಬತ್ತಲೆ ನಿಂತೆ ತೇಜಿಯನೇರಿದೆ
ಎತ್ತಹೋದರು ಬಿಡೆ ಮತ್ತೆ ನಿನ್ನನು ದೇವ
ಚಿತ್ತ ಜನಕ ಶ್ರೀ ಪುರಂದರವಿಠಲ (೧೪೧)

ದಶಾವತಾರಗಳನ್ನು ಮೇಲಿಂದ ಮೇಲೆ ವಿವಿಧ ಚಿತ್ರಗಳಲ್ಲಿ ರೂಪಿಸುವ ಪುರಂದರದಾಸರು ಭಗವಂತನ ದರುಶನದ ಉತ್ಕಟಾಪೇಕ್ಷೆ ಹೊಂದಿದ್ದಾರೆ. ಅದಕ್ಕಾಗಿ ಎತ್ತ ಹೋದರು ಬಿಡೆ ಮತ್ತೆ ನಿನ್ನ ಪಾದ ಎಂದಿದ್ದಾರೆ.

**ನಂಬಿಕೆ** : ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಪ

ತೋರು ಈ ಜಗದೊಳಗೆ ಒಬ್ಬರನು ಕಾಣೆ ಅ

ಕರಪತ್ರದಿಂದ ತಾಮ್ರಧ್ವಜನ ತಂದೆಯ
ಕೊರಳಕೊಯಿಸಿದೆ ನೀನು ಕುಂದಿಲ್ಲದೆ
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡದೆ
ಅರಿದು ತ್ರಿಪುರಾಸುರನ ಹೆಂಡಿರನು ಬೆರೆದೆ ೧

ಕಲಹಬಾರದ ಮುನ್ನ ಕರ್ಣನನು ನೀ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದ
ನೆಲವ ಬೇಡುತ ಹೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ
. . . . . . . . . . . . . . . . . . . ೨ (೧೪೨)

ಇದು ನಿಂದಾಸ್ತುತಿ ಜನರ ಕಣ್ಣಿಗೆ ತಪ್ಪೆಂದು, ಮೋಸವೆಂದು, ಕ್ರೌರ್ಯವೆಂದು ಕಂಡರೂ ಹರಿಯ ಲೀಲೆಯಲ್ಲಿ ಲೋಕೋಪಕಾರ ಬುದ್ಧಿಯೇ ಇರುವುದು. ಮಣಿಪುರದ ರಾಜ ಮಯೊರಧ್ವಜನೆಂಬುವನಿದ್ದನು ಅವನ ಮಗ ತಾಮ್ರಧ್ವಜ ತಾಮ್ರಧ್ವಜವನ್ನು ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಕಟ್ಟಿಹಾಕಿ, ಅರ್ಜುನ ನೊಂದಿಗೆ ಯುದ್ಧ ಮಾಡಿ.ಆತನನ್ನು ಸೋಲಿಸಿ, ಯಜ್ಞಾಶ್ವವನ್ನು ಒಯ್ಯಲಾಗಿ, ಕೃಷ್ಣಾರ್ಜುನರು ಬ್ರಾಹ್ಮಣವೇಷದಿಂದ ಮಯೂರಧ್ವಜನಲ್ಲಿಗೆ ಹೋಗಿ, ಅವನ ಶರೀರವನ್ನು ಇಬ್ಬರಿಗೂ ಭಾಗಮಾಡಿಕೊಡುವಂತೆ ಕೇಳಿದರು. ತಾಮ್ರಧ್ವಜನು ಅಂತೆಯೇ ಮಯೂರಧ್ವಜನ ತಲೆಯ ಮೇಲೆ ಗರಗಸವನ್ನಿಕ್ಕಿ ಕುಯ್ಯುತ್ತಿರಲಾಗಿ, ಕೃಷ್ಣ ಇವನ

ಮನಸ್ಥೈರ್ಯಕ್ಕರ ಮೆಚ್ಚಿ, ನಿಜರೂಪವನ್ನು ತೋರಿ, ಅನುಗ್ರಹಿಸಿ, ತಮ್ಮ ಕುದುರೆಯನ್ನು ಮರಳಿ ಪಡೆದು ಬಂದನು. (ಅ:). ಭೃಗು ಮುನಿಯ ಮೂರನೆಯ ಕಣ್ಣನ್ನು ಕೂಡ ಲೋಕ ಹಿತಕ್ಕಾಗಿಯೇ ತೆಗೆದದ್ದು ಎಂಬ ಅರ್ಥದಲ್ಲಿ ಇಲ್ಲಿ ನಿಂದೆಯ ಮೂಲಕ ಹರಿಯನ್ನು ಹೊಗಳಲಾಗಿದೆ.

"ತಾಯಿ ಮಗುವಿನ ಅಸದೃಶ ಪ್ರೇಮವನ್ನು ಯಶೋದಾ ಕೃಷ್ಣ ಆದರ್ಶದಲ್ಲಿ ಪುರಂದರದಾಸರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. ವಾತ್ಸಲ್ಯ ಭಾವದ ಮೇಲೆ ಸಂಖ್ಯೆ ಹಾಗೂ ಗುಣದ ದೃಷ್ಟಿಯಿಂದ ಹೆಚ್ಚು ಕೃತಿಗಳನ್ನು ರಚಿಸಿದ ಕೀರ್ತಿ ಶ್ರೀ ಪುರಂದರದಾಸರಿಗೆ ಸಲ್ಲುತ್ತದೆ" (ಕ).

ಯಶೋದೆಯು ಕೃಷ್ಣನಿಗೆ ಹಾಲೂಣಿಸುವುದು, ಅಂಗಿ ತೊಡಿಸಿ ಶೃಂಗರಿಸಿ ಆನಂದಪಡುವುದು ಅವನ ತುಂಟತನಕ್ಕೆ ಬೇಸರ ಪಟ್ಟುಕೊಳ್ಳುವುದು ಮಗುವಿಗೆ ಎಲ್ಲಾದರೂ ದೃಷ್ಟಿಯಾಯಿತೆಂದು ಚಿಂತೆ ಪಡುವುದು ಮುಂತಾದ ಸನ್ನಿವೇಶಗಳು ದಾಸರ ಕೀರ್ತನೆಗಳಲ್ಲಿ ಅದ್ಭುತವಾಗಿ ಮೂಡಿ ಬಂದಿವೆ.

ಅಷ್ಟೆಲ್ಲ ಆದರೂ ಕೃಷ್ಣನು ಅಳುತ್ತಿದ್ದರೆ, ಅವನ ಅಳು ಎತಕೆ? ಎಂದು ಕೇಳುವ ಪ್ರಶ್ನೆಯಲ್ಲಿ ಶ್ರೀಕೃಷ್ಣನ ಬಾಲಲೀಲೆಯನ್ನು ಚಿತ್ರಿಸಿದ್ದಾರೆ.

**ಅಳು:** ಅಳುವುದ್ಯಾತಕೊ ರಂಗ, ಅತ್ತರಂಜಿಪಗುಮ್ಮ ಪ।

ಪುಟ್ಟಿದೇಳು ದಿವಸದಲಿ ದುಷ್ಟ ಪೂತನಿಯಕೊಂದೆ
ಮುಟ್ಟಿ ವಿಷದ ಮೊಲೆಯುಂಡ ಕಾರಣ
ದೃಷ್ಟಿ ತಾಕಿತೆ ನಿನಗೆ ರಂಗಯ್ಯ ೧।

ಬಾಲಕತನದಿ ಗೋಪಾಲರೊಡಗೂಡಿ
ಕಾಳಿಂದಿ ಮಡುವನು ಕಲಕಿದ ಕಾರಣ
ಕಾಲು ಉಳುಕಿತೆ ನಿನಗೆ ರಂಗಯ್ಯ ೨।

ತುರುವ ಕಾಯಲುಪೋಗೆ ಭರದಿ ಇಂದ್ರಮಳೆಗರೆಯ
ಬೆರಳಲಿ ಬೆಟ್ಟವ ನೆತ್ತಿದ ಕಾರಣ
ಬೆರಳು ಉಳುಕಿತೆ ನಿನಗೆ ರಂಗಯ್ಯ ೩।

ವಸುದೇವ ಸುತನಾಗಿ ಅಸುರರೆಲ್ಲರ ಮಡುಹಿ
ಹೆಸರಿನ ಮಲ್ಲರ ಮಡುಹಿದ ಕಾರಣ
ಕೆಸರು ತಾಗಿತೆ ನಿನಗೆ ರಂಗಯ್ಯ ೪।
. . . . . . . . . . . . . . . . . . . (೧೪೩)

ಪುರಂದರದಾಸರು 'ಅಳು' ಪ್ರತಿಮೆಯ ಮೂಲಕ ಶ್ರೀಕೃಷ್ಣನ ಬಾಲಲೀಲೆಯನ್ನು ಚಿತ್ರಿಸಿ, ಸಮರ್ಪಕವೂ ಸುಂದರವೂ ಆದ ಶಬ್ದಗಳಿಂದ ಭಾವುಕರನ್ನು ಮುಗ್ಧಗೊಳಿಸಬಲ್ಲರು ಎಂಬುದಕ್ಕೆ ಅವರ ಈ ಕೃತಿ ನಿದರ್ಶನವಾಗಿದೆ.

ಸರ್ವೋತ್ತಮನಾದ ಶ್ರೀಹರಿಗೆ ಗುಮ್ಮನ ಭಯವೆಲ್ಲಿಯದು? ಆದರೆ, ದಾಸರು ಕೌಶಲ್ಯದಿಂದ ಕೃಷ್ಣನ ಬಾಯಲ್ಲಿ 'ಗುಮ್ಮ' 'ಬೂಚಿ' ಮುಂತಾದ ಶಬ್ದಗಳನ್ನು ಹೇಳಿಸಿ ಬಾಲ್ಯ ಸಹಜವಾದ ಭಯವನ್ನು ಅಭಿವ್ಯಕ್ತಿಸಿದ್ದಾರೆ.

**ಗುಮ್ಮ:** ಗುಮ್ಮನ ಕರೆಯದಿರೆ ಅಮ್ಮ ನೀನು ಪ।

ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು
ಮಮ್ಮು ಉಣ್ಣುತೆನೆ ಅಮ್ಮ ಅಳುವುದಿಲ್ಲ ಅ।

ಹೆಣ್ಣುಗಳಲ್ಲಿರುವಲ್ಲಿ ಹೋಗಿ ಅವರ
ಕಣ್ಣು ಮುಚ್ಚುವುದಿಲ್ಲವೆ
ಚೆಣ್ಣರ ಬಡಿಯೆನು, ಅಣ್ಣನು ಬೈಯೆನು
ಬೆಣ್ಣೆಯ ಬೇಡೆನು ಮಣ್ಣು ತಿನ್ನುವುದಿಲ್ಲ ೧। (೧೪೪)

'ಗುಮ್ಮ' ಪ್ರತಿಮೆಯು ಕೃಷ್ಣನ ತುಂಟಾಟಗಳನ್ನು ಅಭಿವ್ಯಕ್ತಿಸುತ್ತದೆ. ಗುಮ್ಮನೆಂದರೆ ಮಕ್ಕಳನ್ನು ಹೆದರಿಸುವ ಕಲ್ಪನಾಭೂತ. ಈ ಮೇಲಿನ ಕೀರ್ತನೆಯಲ್ಲಿ ಕೃಷ್ಣನು ತನ್ನ ತುಂಟಾಟಗಳನ್ನು ತಾನೇ ಪಟ್ಟಿ ಮಾಡಿ ವರದಿ ಒಪ್ಪಿಸಿದಂತಿದೆ. ಚೆಣ್ಣರನ್ನು ಬಡಿಯುವುದು, ಅಣ್ಣನನ್ನು ಬಯ್ಯುವುದು, ಬೆಣ್ಣೆ ಕದಿಯುವುದು, ಮಣ್ಣು ತಿನ್ನುವುದು ಮುಂತಾದ ಕೆಲಸಗಳನ್ನು ಮಾಡೆನೆಂದು ಕೃಷ್ಣನು ಹೇಳುತ್ತಿರುವನು.

ಕೃಷ್ಣನ ತುಂಟಾಟ ಹೇಳತೀರದು ಅದಕ್ಕಾಗಿ ಬೇಸತ್ತ ಯಶೋಧೆ ಕೃಷ್ಣನನ್ನು ಬೆದರಿಸುತ್ತಾ 'ಬೂಚಿ' ಬಂದಿದೆರಂಗ ಬೂಚಿ ಬಂದಿದೆ ಚಾಚಿಕುಡಿದು ನಿ ಸುಮ್ಮನೆ ಪಾಚಿಕೊಳ್ಳೊ ಎಂದು ಬಾಲ ಭಾಷೆಯಲ್ಲಿ ಹೇಳುವ ದಾಸರ ಕೃತಿ ಅದ್ಭುತವಾಗಿದೆ.

**ಬೂಚಿ:** ಬೂಚಿ ಬಂದಿದೆ ರಂಗ ಬೂಚಿಬಂದಿದೆ ಪ।

ಚಾಚಿ ಕುಡಿದು ಸುಮ್ಮನೆ ನೀ
ಪಾಚಿಕೊಳ್ಳೊ ಕೃಷ್ಣಯ್ಯ ಅ।

ನಾಲ್ಕು ಮುಖದ ಬೂಚಿಯೊಂದು
ಗೋಕುಲಕ್ಕೆ ಓಡಿ ಬಂದು
ಲೋಕರನ್ನು ಎಳೆದು ಕೊಂಡು
ಕಾಕು ಮಾಡಿ ಒಯ್ಯುವುದಕ್ಕೆ ೧।

ಮೂರು ಕಣ್ಣಿನ ಬೂಚಿಯೊಂದು
ಊರೂರ ಸುತ್ತಿಬಂದು
ದ್ವಾರದಲ್ಲಿ ನಿಂದಿದೆ ನೋಡೊ
ಪೋರರನ್ನು ಒಯ್ಯುವುದಕ್ಕೆ ೨।

ಅಂಗವೆಲ್ಲ ಕಂಗಳುಳ್ಳ
ಶೃಂಗಾರ ಮುಖದ ಬೂಚಿ
ಬಂಗಾರದಂಥ ಮಕ್ಕಳನೆಲ್ಲ
ಕಂಗೆಡೆಸಿ ಒಯ್ಯುವುದಕ್ಕೆ ೩।

ಆರುಮುಖದ ಬೂಚಿಯೊಂದು
ಈರಾರು ಕಂಗಳದಕೆ
ವಾರುವಾರು ಅಳುವ ಮಕ್ಕಳ
ದೂರ ಸೆಳೆದು ಒಯ್ಯುವುದಕ್ಕೆ ॥೪॥

ಮರದ ಮೇಲೆ ಇರುವುದೊಂದು
ಕರಾಳ ಮುಖದ ಬೂಚಿ
ತರಳರನ್ನು ಎಳೆದುಕೊಂಡು
ಪುರಂದರವಿಠಲಗೊಪ್ಪಿಸಲಿಕ್ಕೆ ॥೫॥ (೧೪೫)

'ಬೂಚಿ' ಎಂಬುದು ಬಾಲಭಾಷೆಯಲ್ಲಿ ಭಯಂಕರವಾದ ಪ್ರಾಣಿ. ನಾಲ್ಕು ಮುಖ, ಮೂರು ಕಣ್ಣು, ಆರು ಮುಖ, ಅಂಗವೆಲ್ಲ ಕಣ್ಣುಳ್ಳ, ಮರದ ಮೇಲೆ ಇರುವ ಪ್ರಾಣಿ, ಮಕ್ಕಳನ್ನು ಹೆದರಿಸಲು ಮಾಡಿಕೊಂಡಿರುವ ಕಾಲ್ಪನಿಕ ಪ್ರಾಣಿಯಲ್ಲಿ (ನಾಲ್ಕು ಮುಖ) ಬ್ರಹ್ಮ, (ಮೂರು ಕಣ್ಣು) ಶಿವ, (ಅಂಗವೆಲ್ಲ ಕಂಗಳುಳ್ಳ) ಇಂದ್ರ (ಆರು ಮುಖದ) ಸುಬ್ರಹ್ಮಣ್ಯ, (ಮರದ ಮೇಲೆ ಇರುವ) ಹನುಮಂತ ಮುಂತಾದವರ ಉಲ್ಲೇಖವಿದೆ.

ಬೂಚಿಗೆ, ಗುಮ್ಮನಿಗೆ ಅಂಜದ ಕೃಷ್ಣನನ್ನು 'ಬವ್ವ' ಎಂದರೆ ಎಲ್ಲೆಡೆ ಹರಡಿಕೊಳ್ಳುವ ದೆವ್ವದಿಂದ ಅಂಜಿಸುತ್ತಿರುವಳು ಯಶೋಧೆ.

ಬವ್ವ: ಬವ್ವ ಬಂದಿತಲ್ಲ ರಂಗಯ್ಯ, ಬವ್ವ ಬಂದಿತಲ್ಲ ॥ಪ॥

ಬವ್ವ ನಿನ್ನ ಕಾಲು ಕಚ್ಚೀತೊ ಕೃಷ್ಣ ॥ಅ॥

ಸೆರಗ ಪಿಡಿದು ನೀ ಹೇಳದೆ ಮಲುಗೋ
ತಿರುಗಿದರೆ ನೋಡು ಮತ್ತಿಲ್ಲೆ
ಬೂದಿಯ ಹಚ್ಚಿದೆ ಕೂದಲು ಬಿಚ್ಚಿದೆ
ಸ್ವಾದವ ಕಂಡು ಬಂದಿತಿಲ್ಲಿ. ॥೧॥

ಪಿಡಿದ ತ್ರಿಶೂಲ ಪಿಡಿದ ಕಪಾಲ
ಮುಕ್ಕಣ್ಣಿಲಿ ಕಿಡಿ ಉದುರಿಸುತ
ಹಾವು ಕೊರಳಲಿಟ್ಟು ಹುಲಿಯ ಚರ್ಮವ ಹೊದ್ದು
ಸುತ್ತಲಿ ಬರುತಿದೆ ಬವ್ವತನ ದಂಡು ॥೨॥

ಕಪ್ಪುಗೊರಳ ಬವ್ವ ಒಪ್ಪುವ ಎತ್ತನೇರಿ
ತಪ್ಪದೆ ಬಂದೀತು ಬಿಡುಮುನ್ನೆ
ಅಪ್ಪ ಕೃಷ್ಣರಾಯ ಪುರಂದರವಿಠಲನೆ
ಒಪ್ಪಿಸಿಕೊಡುವೆನು ಈಗಲೆ ನಿನ್ನ ॥೩॥ (೧೪೬)

ಮೂರು ಕಣ್ಣು, ಬೂದಿಹಚ್ಚಿದ, ಕೊರಳಲಿ ಹಾವು ಧರಿಸಿದ, ಹುಲಿಯ ಚರ್ಮವ ಹೊದ್ದ, ಕಪ್ಪುಕೊರಳಿನ, ಎತ್ತನೇರಿಬರುವ, 'ಬವ್ವ' ಇಲ್ಲಿ ರುದ್ರದೇವರನ್ನು ಸಂಕೇತಿಸುತ್ತಿದೆ.

**ಕುಂದಣದರಗಿಣಿ:** ಕಂದನ ಕಾಣಿರೇನೆ ಗೋಪಿಯ ಕಂದ ಪ।

ಕಂದನಲ್ಲವೆ ಎನ್ನ ಕುಂದಣದರಿಗಿಣೆಯೆ ಅ।

ಉಂಗುರನಿಟ್ಟಿದ್ದೆ ಉಡಿದಾರ ಕಟ್ಟಿದ್ದೆ
ಬಂಗಾರದ ಟೊಪ್ಪಿಗೆ ತಲೆಯ ಮೇಲಿಟ್ಟ ೧।

ರೊಟ್ಟಿಯ ಸುಟ್ಟಿದ್ದೆ ತುಪ್ಪವ ಕಾಸಿದ್ದೆ
ಇಷ್ಟು ಹೊತ್ತು ಹೋಯಿತು ಉಣಲಿಲ್ಲ ೨।

ಕಾಶಿಗೆ ಹೋಗಿ ನಾ ಕೂಸಿನ ಪಡೆದೆ ಪುರಂದರವಿಠಲನ
ದಾಸರಿಗೆ ತಕ್ಕ ಮಗುವೆ ನಮ್ಮಮ್ಮ ೩। (೧೪೭)

'ಕುಂದಣದರಗಿಣಿ' 'ಕೂಸು' ಕಂದ ಮುಂತಾದ ಶಬ್ದಗಳು ಇಲ್ಲಿ ವಿಷ್ಣುವನ್ನು ಸಂಕೇತಿಸುತ್ತವೆ. ಬಹುಶ ಕಾಶಿಯಲ್ಲಿ ಬಿಂಧುಮಾಧವನ ದರ್ಶನವಾದಾಗ ರಚಿಸಿದ್ದಿರಬಹುದು. ಇಲ್ಲಿ ಕಳೆದು ಹೋದ ಕಂದನ ಹುಡುಕುತಿರುವ ತಾಯಿಯ ಬಾವದ ಅಭಿವ್ಯಕ್ತಿಯಾಗಿದೆ.

ಯಶೋಧೆ ಕೃಷ್ಣನನ್ನು ಹುಡುಕುತ್ತಿದ್ದರೆ ದಾಸರು ಅದಕ್ಕೆ ಉತ್ತರಿಸುತ್ತಿದ್ದಾರೆ. 'ಗಜುಗವನಾಡುತ ಲಿರ್ದನು ನಮ್ಮ ರಂಗ' ಎಂದು, ಗಜುಗ ಒಂದು ಬಗೆಯ ಮುಳ್ಳಿನ ಗುಂಡಾದ ಕಾಯಿ ಅದನ್ನು ಹಳ್ಳಿಯ ಮಕ್ಕಳು ಆಡಲು ಉಪಯೋಗಿಸುತ್ತಿದ್ದರು. ಗಜುಗದ ಆಟವು 'ಗೋಲಿ' ಆಟದ ರೀತಿಗೆ ಹೋಲುತ್ತದೆ. 'ಗಜುಗದಾಟವ ವಿವರವನ್ನು ತಿಳಿಸುವ ದಾಸರ ಈ ಕೃತಿ ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿದೆ.

**ಗಜುಗ:** ಗಜುಗವನಾಡುತಲಿರ್ದನು ನಮ್ಮ ರಂಗ ಪ।

ವ್ರಜದ ಮಕ್ಕಳ ಕೂಡ ಹರುಷದಿಂದಲಿ ಬಲು ಅ।

ಒಂದನ್ನೆ ಹಾಸಿದ ವೇಗದಿ ಮ
ತ್ತೊಂದರಿಂದ ತಾ ಬಡೆದ
ಒಂದೆ ಬಾರಿಗೆ ಎಲ್ಲ ಗಜುಗವ ಗೆದ್ದನು. ೧।
. . . . . . . . . . . . . . . . . .
. . . . . . . . . . . . . . . . . .
ಬೊಮ್ಮನ ಪಡೆದಂಥ ಚಿಕ್ಕ ಕೂಸು
ಅಮ್ಮನ ತೊಡೆಯ ಮೇಲೆ
ಗಮ್ಮನೆ ಮಲಗಿದ ಆಟಂಗಳನೆ ಬಿಟ್ಟು ೬ (೧೪೮)

ಕೃಷ್ಣನ ತುಂಟಾಟವನ್ನು ತಾಳಲಾರದೆ ಯಶೋಧೆ ಅವರನ್ನು 'ಪುಂಡ' ನೆಂದು ಕರೆಯುತ್ತಾ ಕವಡೆಯ ಸರವನ್ನು ಧರಿಸಿ ಭಿಕ್ಷೆ ಬೇಡುತ್ತಾ ಬರುವ ಜೋಗಿಗೆ ಕೃಷ್ಣನನ್ನು ಒಡಿದುಕೊಂಡು ಹೋಗಲು ಕರೆನೀಡುತ್ತಾಳೆ.

**ಪುಂಡ:** ಇವನ ಓಡಿದುಕೊಂಡು ಹೋಗೆಲೊ ಜೋಗಿ ಪ।

ಇವ ನಮ್ಮ ಮಾತು ಕೇಳದೆ ಪುಂಡನಾದ ಅ।

ಆಡುತಾಡುತ ಹೋಗಿ ನೀರೊಳು ಮುಳುಗಿದ
ಬೇಡವೆಂದರೆ ಬೆಟ್ಟ ಬೆನ್ನಲಿ ಹೊತ್ತ
ದಾಡೆಯ ಮೇಲೆ ಧಾರಿಣಿ ನೆಗಹಿದ
ಹಿಡಿಯ ಹೋದರೆ ಬಾಯ ತೆರೆದು ಅಂಜಿಸಿದ ೧।

ಹುಲ್ಲಲಿ ವಿಪ್ರನ ಕಣ್ಣ ತಿವಿದ ಬುದ್ಧಿ
ಇಲ್ಲೆಂದರೆ ಕೈಲಿ ಕೊಡಲಿಯ ಪಿಡಿದ
ಬಿಲ್ಲು ಹಿಡಿದು ರಾಕ್ಷಸರನ್ನು ಸವರಿದ
ಬಲ್ಲಿದ ಮಾವನ ಶಿರವನು ತರಿದ ೨।

ಬತ್ತಲೆ ಕುದುರೆಯ ಹತ್ತಬೇಡೆಂದರೆ
ಹತ್ತಿದನೋ ಇವ ಛಲದಿಂದ
ಭಕ್ತವತ್ಸಲ ಸಿರಿಪುರಂದರವಿಠಲನ
ಎತ್ತಲಾದರುಕೊಂಡು ಹೋಗೆಲೊ ಜೋಗಿ ೩। (೧೪೯)

ಪುಂಡ, 'ಯಾರ ಮಾತನ್ನೂ ಕೇಳುವವನಲ್ಲ' ಎಂದರೆ ಸರ್ವ ಸ್ವತಂತ್ರನಾದವನು ಎಂಬ ಅರ್ಥವಿಲ್ಲಿ ಮೂಡಿದೆ. 'ಇವನನ್ನು ಎತ್ತಿಕೊಂಡು ಹೋಗು' ಎಂದು ಹೇಳುತ್ತಿರುವ ಈ ವಾಕ್ಯ ಯಶೋಧೆ-ಜೋಗಿಯರ ನಡುವಿನ ಸಂವಾದ ರೂಪದಲ್ಲಿದೆ. ನಾಟಕೀಯವಾಗಿ ರೂಪುಗೊಳ್ಳುವ ಈ ಕೀರ್ತನೆಯಲ್ಲಿ ದಶಾವತಾರದ ಸೈದ್ಧಾಂತಿಕ ಮಂಡನೆಯಿದೆ. 'ಪುಂಡ' ಪ್ರತಿಮೆ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ತ್ರಿವಿಕ್ರಮ, ಪರುಶುರಾಮ, ರಾಮ, ಕೃಷ್ಣ, ಬುದ್ಧ ಹಾಗೂ ಕಲ್ಕೀ ಅವತಾರಗಳನ್ನು ಮೂರ್ತಗೊಳಿಸುತ್ತದೆ. ಪ್ರತಿಮಾ ಲಕ್ಷಣಗಳಾದ ಸಂಕ್ಷಿಪ್ತತೆ, ನವೀನತೆ ಅಂತರದರ್ಶನ ಹಾಗೂ ತೀವ್ರತೆ ಇವುಗಳ ಸ್ವರೂಪವನ್ನು ಇಲ್ಲಿ ಕಾಣಬಹುದು.

ಕೃಷ್ಣನು ಬಾಲ್ಯದಲ್ಲಿ ಬೆಣ್ಣೆ ಕದಿಯುವುದು, ಗೋಪಿಕಾ ಸ್ತ್ರೀಯರನ್ನು ಗೋಳುಹೊಯ್ದುಕೊಳ್ಳುವುದು ಮುಂತಾದ ತುಂಟಾಟಗಳನ್ನಾಡುತ್ತಿದ್ದನು. ಅವನ ತುಂಟಾಟದಿಂದ ಬೇಸತ್ತ ಗೋಪಿಕಾ ಸ್ತ್ರೀಯರು ಯಶೋಧೆಗೆ ದೂರುಕೊಡುತ್ತಿದ್ದಾರೆ.

**ಗಾಡಿಕಾರ:** ಎಂಥ ಗಾಡಿಕಾರನೆ
ಕೃಷ್ಣಯ್ಯ ಇನ್ನೆಂಥ ಗಾಡಿಕಾರನೆ
ಕಂತು ಪಿತನು ವೇಲಾಪುರದ ಚೆನ್ನಿಗರಾಯ
ಎಂಥ ಗಾಡಿಕಾರನೆ ಪ।

ಹಿಂಡು ಕೂಡಿರುವ ಮಕ್ಕಳನೆಲ್ಲ ಬಡೆದರೆ ಲಂಡನೇನೆ ಅಮ್ಮ
ಉಂಡು ಹಾಲು ಬೆಣ್ಣೆ ಬೆಕ್ಕಿಗಿಕ್ಕುವರೆ ಪ್ರಚಂಡನೇನೆ ೧।

ಹೆಚ್ಚು ಹೇಳುವುದೇನು ಬಿಚ್ಚಿ ಉರವನ್ನು ತೋರುವಾನೇ ಅಮ್ಮ
ಮುಚ್ಚುಮರೆ ಎತಕೆ ಮನೆ ಮನೆಯಲಿ ಪೋಗುವಾನೆ ೨।
. . . . . . . . . . . . . . . . . . (೧೫೦)

'ಗಾಡಿಕಾರ' ಎಂದರೆ ಚೆಲುವ, ಉಪಾಯಗಳನ್ನು ಬಲ್ಲವ. ಹಾಲು ಮೊಸರು ಬೆಣ್ಣೆಯನ್ನು ಕದಿಯುವುದಲ್ಲದೆ ತಮ್ಮ ಮಕ್ಕಳನ್ನು ಹೊಡೆಯುವ ಲಂಡ [ದಾರಿ ತಪ್ಪಿದ ಕೆಟ್ಟ ಹುಡುಗ] ನೆಂದು ಗೋಪಿಕೆಯರು ತಮಗೆ ಕೃಷ್ಣನಿಂದ ಆಗುವ ಕಿರುಕುಳವನ್ನು ಕೊಂಚ ತೀಕ್ಷ್ಣವಾಗಿಯೆ ತಿಳಿಯಪಡಿಸುತ್ತಾರೆ.

ಶ್ರೀಕೃಷ್ಣನು ಬೆಳೆಯುತ್ತಾ ಹೋದಂತೆ ಕೊಳಲನೂದುತ ಗೋಪಿಕೆಯರ ಮನಸೆಳೆದ. ಕಾಳಿಂಗಮರ್ದನ, ಗೋವರ್ಧನ ಗಿರಿಯನೆತ್ತುವುದು ಮುಂತಾದ ಪವಾಡಗಳನ್ನು ಮಾಡುತ್ತಾ ಗೋಕುಲವಾಸಿಗಳೆಲ್ಲರ ಪ್ರೀತಿಪಾತ್ರನಾದನು. ಕೃಷ್ಣನು ಕಂಸನ ಬಿಲ್ಲು ಹಬ್ಬದ ಆಮಂತ್ರಣಕ್ಕಾಗಿ ಗೋಕುಲವನ್ನು ಬಿಟ್ಟು ಮಥುರೆಗೆ ಹೋಗುವ ಸಮಯದ ಸನ್ನಿವೇಶ ಪುರಂದರದಾಸರ ಕೃತಿಗಳಲ್ಲಿ ರಸವತ್ತಾಗಿ ಮೂಡಿದೆ.

**ಚಂದ್ರಮ:** ತಾರಮ್ಮಯ್ಯ ಯದುಕುಲ ವಾರಿಧಿ ಚಂದ್ರಮನ ॥ಪ॥

ಮಾರಜನಕನ ಮೋಹನಾಂಗನ ಸೇರಿ ಸುಖಿಸಲು ಹಾರೈಸಿ ॥ಅ॥

ಬಿಲ್ಲ ಹಬ್ಬಗಳಂತೆ, ಅಲ್ಲ ಬೀದಿ ಶೃಂಗಾರವಂತೆ
ಮಲ್ಲರ ಕಾಳಗ ಮದ್ದಾನೆಯಂತೆ
ಫುಲ್ಲಾಕ್ಷನು ತಾನಲ್ಲಿಗೆ ತೆರಳಿದ ॥೧॥

ಮಥುರಾಪುರಿಯಂತೆ, ಅಲ್ಲಿ ಮಾವ ಕಂಸನಂತೆ
ಒದಗಿದ ಮದಗಜ ತುರಗ ಸಾಲಿನಲಿ
ಮದನಮೋಹನ ಕೃಷ್ಣ ಮಥುರೆಗೆ ತೆರಳಿದ ॥೨॥
. . . . . . . . . . . . . . . . . . . (೧೫೧)

ಕೃಷ್ಣನನ್ನು ಬಿಟ್ಟಿರುವುದು ಗೋಪಿಕಾಸ್ತ್ರೀಯರಿಗೆ ಆಗದು. ಕಂಸನ ಆಜ್ಞೆಯಂತೆ ಅವನ ದೂತನಾದ ಅಕ್ರೂರನು ಕೃಷ್ಣ ಬಲರಾಮರನ್ನು ಕರೆಯಲು ಗೋಕುಲಕ್ಕೆ ಬರುತ್ತಾನೆ. ಅಕ್ರೂರನು ಕಂಸನ ದೂತನಾದರೂ ಕೃಷ್ಣನ ಪರಮ ಭಗವದ್ಭಕ್ತರಲ್ಲಿ ಒಬ್ಬ. ಕೃಷ್ಣನು ಅಕ್ರೂರನ ಸಂಗಡ ರಥವೇರಿ ಹೋಗುವ ಸಮಯದಲ್ಲಿ ಅವನ ವಿಯೋಗವನ್ನು ತಾಳಲಾರದೆ ಗೋಪಿಯರು ವ್ಯಾಕುಲದಿಂದ ಹಿಗೆ ಹೇಳುತ್ತಾರೆ.

ಅತ್ತೆ ಮಾವನ ಬಿಟ್ಟು ಬಂದೆವು ಹಿತ್ತಲ ಬಾಗಿಲಿಂದ
ಭಕ್ತವತ್ಸಲನ ಬಹು ನಂಬಿದ್ದೆವು
ಉತ್ಸಾಹ ಭಂಗ ಮಾಡಿದನಮ್ಮ ॥೩॥
. . . . . . . . . . . . . . . . . . . (೧೫೨)

ಗೋಕುಲವೆಂಬ ಸಮುದ್ರದ ಚಂದ್ರಮನೆಂದು ಕೃಷ್ಣನನ್ನು ಕರೆಯುತ್ತಾ ದಾಸರು ತಮ್ಮ ಭಕ್ತಿಯನ್ನು ಇಲ್ಲಿ ವ್ಯಕ್ತಪಡಿಸುತ್ತಾರೆ.

**ಹೆಣ್ಣು:** ಇಂಥಾ ಹೆಣ್ಣಿನ ನಾನೆಲ್ಲಿ ಕಾಣೆನು ಹೊಂತಕಾರಿ ಕಾಣಿರೋ ॥ಪ॥

ಸಂತತ ಸುರರಿಗೆ ಪಿಯೂಷ ಉಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ ॥ಅ॥

ಮಂದರಗಿರಿ ತಂದು ಸಿಂಧುವಿನೊಳಗಿಟ್ಟು
ಚಂದದಿ ಕಡೆದು ಅಮೃತವ ತೆಗೆದು

ಇಂದುಮುಖಿ ನಿ ಬಡಿಸೆಂದು ಕೊಟ್ಟರೆ
ದಂಧನಗಳ ಮಾಡಿ ದೈತ್ಯರ ವಂಚಿಸಿದ ॥೧॥

ವಿಶ್ವಾಸದಿಂದ ಅಸುರಗೆ ವರವತ್ತು
ತ್ರಿಶೂಲಧರ ಓಡಿ ಬಳಲುತಿರೆ
ನಸುನಗುತಲಿ ಬಂದು ಭಸ್ಮಾಸುರನಿಗೆ
ಬೋಗದಾಸೆಯ ತೋರಿ ಭಸ್ಮವ ಮಾಡಿದ ॥೨॥

ವಸುಧೆಯೊಳಗೆ ಹೆಣ್ಣು ಬಸಗೆಯಾಗದ ಮುನ್ನ
ಬಸಿರಲಿ ಬ್ರಹ್ಮನ ಪಡೆದವಳಿವಳು
ಕುಸುಮನಾಭನ ಶ್ರೀ ಪುರಂದರವಿಠಲ
ಪೆಸರು ಪೊತ್ತಿಹಳು ಈ ಹೊಸ ಕನ್ನಿಕೆ ॥೩॥(೧೫೩)

'ಹೆಣ್ಣು' ಪ್ರತಿಮೆ ಇಲ್ಲಿ ವಿಷ್ಣುವನ್ನು ಸಂಕೇತಿಸುತ್ತದೆ. ಇದು ಮೋಹಿನಿ ಅವತಾರವನ್ನು ಕುರಿತ ಪದ. ಮೋಹಿನಿ ಅವತಾರ ಕುರಿತ ಇನ್ನೊಂದು ಕೀರ್ತನೆ ಹೀಗಿದೆ.

ಕನ್ನಿಕೆ: ಹೆಂಡಿರ ನಾಳುವಳೀ ಕನ್ನಿಕೆ
ಗಂಡನಿಲ್ಲದ ಹೆಂಗಸೀ ಕನ್ನಿಕೆ ॥ಪ॥

ಮೇರುಮಂದಿರವ ಕಡಗೋಲನೆ ಮಾಡಿ
ಉರಗ ವಾಸುಕಿ ನೇಣ ಮಾಡಿ
ಕ್ಷೀರಾಂಬುಧಿ ಸುರರಸುರರು ಮಥಿಸಲು
ಕೂರಮ ರೂಪದ ಧರಿಸಿದ ಕನ್ನಿಕೆ ॥೧॥
. . . . . . . . . . . . . . . . . . .
ಪಟ್ಟವಾಳಿಯನುಟ್ಟು ಬೊಟ್ಟ ಕುಪ್ಪಸ ತೊಟ್ಟು
ಬೊಟ್ಟ ಗಿಂಡಿಯ ಕೈಲಿ ಪಿಡಿದುಕೊಂಡು
ದಿಟ್ಟ ಸ್ತ್ರೀ ರೂಪವ ತಾಳಿ ದೈತ್ಯರನೆಲ್ಲ
ಅಟ್ಟ ಹಾಸದಿ ಮೋಹಿಸಿದ ಕನ್ನಿಕೆ. (೧೫೪)

'ಕನ್ನಿಕೆ' ಪ್ರತಿಮೆ ಇಲ್ಲಿ ವಿಷ್ಣುವಿನ ಮೋಹಿನಿ ಅವತಾರವನ್ನು ಸಂಕೇತಿಸುತ್ತದೆ. ಹೆಣ್ಣು ಶ್ರೀದೇವಿ, ಭೂದೇವಿ, ದುರ್ಗಾದೇವಿ ಎಂಬ ಹೆಂಡತಿಯರನ್ನು ಪ್ರೇರಿಸಿ ಅವರವರ ಕಾರ್ಯಗಳಲ್ಲಿ ನಿಯೋಜಿಸುವುದು. ಹರಿಯೇ ಸರ್ವೋತ್ತಮನಾದ್ದರಿಂದ ಅವನಿಂದ ಮಿಗಿಲಾದ ದೈವವಿರದು. ಅದಕ್ಕಾಗಿ ಅವನನ್ನು ಗಂಡನಿಲ್ಲದ ಹೆಂಗಸೀ ಕನ್ನಿಕೆ ಎಂದು ಕರೆಯಲಾಗಿದೆ.

ಅಮೃತವನ್ನು ಪಡೆದುಕೊಳ್ಳಲೆಂದು ದೇವತೆಗಳೂ ದಾನವರೂ ಸಮುದ್ರವನ್ನು ಕಡೆಯಲು ಮಂದರ ಪರ್ವತವನ್ನೇ ಕಡಗೋಲನ್ನಾಗಿಯೂ ವಾಸುಕಿಯನ್ನೇ ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡರು. ಆಗ ಸಮುದ್ರದಿಂದ ಅಮೃತವು ಹೊರಬಂದಿತು. ಅಮೃತಕ್ಕಾಗಿ ದೇವ ದಾನವರೂ ಹೊಡೆದಾಡುತ್ತಿರುವಾಗ, ವಿಷ್ಣುವು ಸುಂದರ ಹೆಣ್ಣಿನ ರೂಪಹೊಂದಿ ಮೊಹಿನಿಯಾಗಿ ತಾನೇ ಎರಡೂ ಗುಂಪುಗಳಿಗೆ ಸಮನಾಗಿ ಹಂಚುವೆನೆಂದು ಹೇಳಿದಾಗ ಅವಳ ಚೆಲುವಿಗೆ ಮುಗ್ಧರಾದ ಅವರೆಲ್ಲ ಒಪ್ಪಿಕೊಂಡರು. ಮೊದಲು ದೇವತೆಗಳಿಗೆ ಅಮೃತಕೊಟ್ಟು

ನಂತರ ದಾನವರಿಗೆ ಕೊಡದೆ ಮಾಯವಾದಳು. ಶಿವನಿಂದ ವರ ಪಡೆದ ಭಸ್ಮಾಸುರನು ಶಿವನನ್ನೇ ಕೊಲ್ಲಲು ಹೊರಟಾಗ ವಿಷ್ಣುವು ಮೋಹಿನಿಯ ರೂಪ ತಾಳಿ ಭಸ್ಮಾಸುರನನ್ನು ಮರುಳು ಮಾಡಿ ನಾಟ್ಯವಾಡಿ ಅವನನ್ನು ಜಾಣತನದಿಂದ ಸುಟ್ಟು ಹಾಕಿದ ಕಥೆಯಲ್ಲಿ ಎರಡನೇ ಬಾರಿ ವಿಷ್ಣು ಮೋಹಿನಿ ರೂಪ ಧರಿಸಿ ಕನ್ನಿಕೆ ಎನಿಸಿದನು. ಮಹಾಪ್ರಳಯದಲ್ಲಿ ಮೂಲಪ್ರಕೃತಿಯನ್ನು ತನ್ನೊಳಗೇ ಇರಿಸಿಕೊಂಡು ಮಗುವಿನಂತೆ ತೋರಿಕೊಂಡು ತನ್ನ ನಾಭಿಕಮಲದಿಂದ ಬ್ರಹ್ಮನು ಹೊರಹೊಮ್ಮಿದನಾಗಿ ವಿಷ್ಣುವನ್ನು ಹೆಣ್ಣೆಂದು ಬಗೆದಿದ್ದಾರೆ.

ಪುರಂದರದಾಸರ ರಚನೆಗಳು ಬಹು ಸುಲಭವಾಗಿ ಎಲ್ಲ ವರ್ಗದ ಜನರ ಬಾಯಲ್ಲಿ ನಲಿಯುವಂತಹವು ದಾಸರ ದೇವರನಾಮಕ್ಕೆ ಸಾರ್ವತ್ರಿಕವಾಗಿ ಪ್ರಸ್ತುತವಾಗಬಲ್ಲ ಎಲ್ಲ ಗುಣಗಳೂ ಇದ್ದವು. ಭಕ್ತರಿಗೆ ಈ ಪದಗಳಲ್ಲಿ ಬರುವ ಅಸಂಖ್ಯಾತ ದೈವಭಕ್ತರ ಕಥೆಗಳು. ಶ್ರೀಕೃಷ್ಣನ ಬಾಲಲೀಲೆಯಂತಹ ಪೌರಾಣಿಕ ವಿಷಯಗಳು ತುಂಬ ಮೆಚ್ಚಿಕೆಯಾದವು. ಅಲ್ಲದೆ ದೈವಭಕ್ತಿಯ ವಿವಿಧ ಮಜಲುಗಳ ವರ್ಣನೆ ತುಂಬ ಹಿತವೆನಿಸಿದ್ದು ವಿಶೇಷ. ಅಷ್ಟೇ ಅಲ್ಲದೆ ಪುರಂದರದಾಸರ ಕೃತಿಗಳು ಧಾರ್ಮಿಕ – ತಾತ್ವಿಕ ಜಿಜ್ಞಾಸೆಯ ಭಾರದಿಂದ ಬೀಗುವಂತಹವು.

ಕೀರ್ತನೆಗಳನ್ನು ಧಾರ್ಮಿಕ, ಆಧ್ಯಾತ್ಮಿಕ, ಪೌರಾಣಿಕ ಎಂದು ವರ್ಗೀಕರಣ ಮಾಡುವುದು ಕಷ್ಟ ಧಾರ್ಮಿಕ ಪ್ರತಿಮೆಗಳಲ್ಲಿ ಸದಾಚಾರ, ಧ್ಯಾನ ಮುಂತಾದ ವಿಷಯಗಳನ್ನು ವಿವರಿಸುವಾಗ ಅಧ್ಯಾತ್ಮಿಕ ವಿವರಗಳು ಅದಕ್ಕೆ ಆಧಾರವಾಗಿ ಪೌರಾಣಿಕ ಸನ್ನಿವೇಶಗಳನ್ನು ದಾಸರು ವಿವರಿಸುತ್ತಾರೆ. ಹಾಗಾಗಿ ಕೀರ್ತನೆಗಳಿಗೆ ಅಸ್ತಿತ್ವವು ಸಿದ್ಧಿಸುವುದು ಎಲ್ಲಿ ಎನ್ನುವುದನ್ನು ಗಮನಿಸಬೇಕು. ಕೀರ್ತನೆಗಳಲ್ಲಿ ಅಭಿವ್ಯಕ್ತಿಸುವ ಪ್ರತಿಮೆಗಳು ತಮ್ಮಲ್ಲಿಯೇ ಸನ್ನಿವೇಶದ ವಿವರಣೆಗಳನ್ನು ಪೌರಾಣಿಕ ಧಾಖಲೆಗಳನ್ನು ಅಡಗಿಸಿಕೊಂಡು ಎಂತಹ ಅಮೂರ್ತವಾದುದನ್ನು ಮೂರ್ತತೆಯ ನೆಲೆಗೆ ಇಳಿಸಿ ಆರಾಧನೆಯ ವಾಹಕವನ್ನಾಗಿ ಮಾಡಿಕೊಳ್ಳುವ ಸಾಮರ್ಥ್ಯ, ಸ್ವರೂಪತಃ ಅವುಗಳ ಅಭಿವ್ಯಕ್ತಿಯಲ್ಲಿಯೇ ಇದೆ.

ದಾಸರ ಕೀರ್ತನೆಗಳಲ್ಲಿ ಅಧ್ಯಾತ್ಮಿಕ ಜೀವನವು ವಿಕಸಿತವಾಗಲು ಸುಲಭವಾದ ಯುಕ್ತಿಗಳು ದೊರೆಯುತ್ತವೆ. ಧರ್ಮ ಹಾಗೂ ಅಧ್ಯಾತ್ಮಿಕ ತತ್ವಗಳೆರಡೂ ಬದುಕನ್ನು ತಿದ್ದಲು ತೋರಿಬಂದ ಎರಡು ಮಾರ್ಗಗಳು ಇಲ್ಲಿ ದಾಸರು ಉಪಯೋಗಿಸಿದ ಪ್ರತಿಮೆಗಳು ಸೂಕ್ಷ್ಮವಾದ ವಿಷಯಗಳನ್ನೂ, ಭಾವಗಳನ್ನು ಸ್ಪಷ್ಟವಾಗಿ ಮನಮುಟ್ಟುವ ಹಾಗೆ ಸರಸವಾಗಿ ಹೇಳುವುದರಿಂದ ಸಾಹಿತ್ಯದ ತಿರುಳಾದ ಜೀವನ ವಿಮರ್ಶೆಯ ವಾಹಕಗಳಾಗಿವೆ. ದಾಸರ ಕೀರ್ತನೆಗಳು ಆಳವಾಗಿಯೂ, ಗಂಭೀರವಾಗಿಯೂ, ಸುಲಭವಾಗಿಯೂ ಆಕರ್ಷಕ ವಾಗಿಯೂ ಇದ್ದು ಆನಂದಮಯವಾಗಿವೆ.

## -: ಕೊನೆ ಟಿಪ್ಪಣಿಗಳು :-

ಅ. ನವಧಾ ಭಕ್ತಿ : ಜಯದಯಾಳ ಗೋಯಂದಕಾ ಪು – ೩

ಆ. ನವಧಾ ಭಕ್ತಿ : ಜಯದಯಾಳ ಗೋಯಂದಕಾ ಪು – ೨೬

ಇ. ಪುರಂದರ ಸಾಹಿತ್ಯದರ್ಶನ ಸಂ–೨: ಆಧ್ಯಾತ್ಮದರ್ಶನ : ಪ್ರೋ.ಸಾ.ಕೃರಾಮಚಂದ್ರರಾವ್. ಪು – ೫೬

ಈ. ನಿತ್ಯಪಠನೆಗೆ ಸುಳಾದಿ ಪದಗಳು: ಸಂ; ಹರಿದಾಸರತ್ನ ಗೋಪಾಲದಾಸರು. ಪು–೫೯

ಉ. ದ್ವೈತ ಸಿದ್ಧಾಂತ ವೈಜಯಂತೀ [ಸಭಾಸಾರ ಸಂಗ್ರಹ ಸಂಪುಟ ೧, ೨, ಮತ್ತು ೩] ಶ್ರೀ. ಶ್ರೀ. ಸತ್ಯಧ್ಯಾನ ತೀರ್ಥರು. ಪು – ೬೮

ಊ. ಶ್ರೀ ಮದ್ಭಗವದ್ಗೀತಾ [ಅ.೫ ಶ್ಲೋ. ೧೪–೧೫]

ಋ. ಪೂರ್ವಕರ್ಮ ಪ್ರಯತ್ನಂವ ಸಂಸ್ಕಾರಂ ಚ ಅಪಿ ಅಪೇಕ್ಷ್ಯತು। ಈಶ್ವರ: ಕಾರಾಯೇತ್ ಸರ್ವಂ ತಚ್ಚೇಶ್ವರ ಕೃತಂ ಸ್ವಯಂ । ಭವಿಷ್ಯೋತ್ತ ಪುರಾಣ

ಎ. ಮುಕ್ತಿ ಒಂದೇ ಗೇಣೋ; ಬಿಂಬನ ಸ್ಥಾನವು ಹೃದಯಕಮಲವಾಗಿದ್ದು ಪ್ರತಿಬಿಂಬನಾದ ಜೀವನ ಸ್ಥಾನವು ಆಜ್ಞಾಚಕ್ರವಾದುದರಿಂದ ಎರಡಕ್ಕೂ ಇರುವ ದೂರ ಒಂದು ಗೇಣು ಅಷ್ಟೇ, ಜೀವನುಹೃದಯದಲ್ಲಿ ಬಿಂಬಾಪರೋಕ್ಷವನ್ನು ಪಡೆದುಕೊಳ್ಳುವುದೇ ಮುಕ್ತಿ.

ಏ. ದಾಸಸಾಹಿತ್ಯದಲ್ಲಿ ನಾಡಿ ವಿಚಾರ [ದಾಸಭಾರತೀ] ಎಚ್. ಸತ್ಯನಾರಾಯಣಾಚಾರ್ಯ. ಪು – ೮೨

ಐ. ಯೋಗಸಾಧನಾ; ಸಿ.ರೂಪಾ ಮುರಳಿಧರ ಮತ್ತು ಡಾ. ಶ್ರೀ ವತ್ಸ. ಪು – ೧೩

ಒ. ಕರ್ನಾಟಕದ ಹರಿದಾಸರು ಡಾ. ಎಚ್.ಕೆ.ವೇದವ್ಯಾಸಾಚಾರ್ಯ. ಪು – ೫೩

ಓ. ಕರ್ನಾಟಕದ ಹರಿದಾಸರು ಡಾ. ಎಚ್.ಕೆ.ವೇದವ್ಯಾಸಾಚಾರ್ಯ. ಪು – ೪೫೭

ಔ. ಮಹಾಭಾರತ ಯುದ್ಧದಲ್ಲಿ ಕರ್ಣನ ಸರ್ಪಾಸ್ತ್ರದಿಂದ ಅರ್ಜುನನ ಕಿರೀಟವು ಮುರಿದು ಭೂಮಿಗೆ ಬಿದ್ದಿತು ಕೃಷ್ಣನ ಉಪಾಯದಿಂದ ಅದು ಅರ್ಜುನನ ತಲೆಯನ್ನು ತಾಕಲಿಲ್ಲ.

ಅಂ. ಚಂದ್ರಗ್ರಹಣದ ಸಂದರ್ಭ: ರಾಹುವೆಂಬ ದೈತ್ಯನು ಸರ್ಪಾಕಾರದಿಂದ ಬಂದು ಚಂದ್ರನನ್ನು ನುಂಗುವುದು.

ಅಃ. ಪುರಾಣನಾಮ ಚೂಡಾಮಣಿ: ಲೆ. ಬೆನೆಗಲ್ ರಾಮರಾಮ್ ಮತ್ತು ವಿದ್ವಾನ್ ಪಾನ್ಯಂ ಸುಂದರ ಶಾಸ್ತ್ರೀ. ಪು – ೨೪೫

ಕ. ಪುರಂದರದಾಸರು ಮತ್ತು ಶ್ರೀ ಮದ್ಭಾಗವತ [ಒಂದು ತೌಲನಿಕ ಅಧ್ಯಯನ]. ಪು – ೧೮೫ ಡಾ. ವಾಸುದೇವ ಅಗ್ನಿಹೋತ್ರಿ

ಈ ಅಧ್ಯಾಯದಲ್ಲಿ ಬರುವ ೧–೧೫೪ ಕೀರ್ತನೆಗಳನ್ನು ಪುರಂದರ ಸಾಹಿತ್ಯ ದರ್ಶನ ಸಂಪುಟ ೧, ೨, ೩, ಮತ್ತು ೪ ರಿಂದ ಆಯ್ದುಕೊಳ್ಳಲಾಗಿದೆ. ಸಂ: ವಿದ್ಯಾಲಂಕಾರ ಪ್ರೋ. ಸಾ.ಕೃ ರಾಮಚಂದ್ರರಾವ್.

# ಅಧ್ಯಾಯ ೮

## ಪ್ರತಿಮೆಗಳ ಸಾಂಸ್ಕೃತಿಕ ಮಹತ್ವ ಮತ್ತು ಅನನ್ಯತೆ

ಪುರಂದರದಾಸರು ಬಾಳಿದ ಕಾಲಕ್ಕೆ ವೈದಿಕ ಮತದಲ್ಲಿ ಸಂಸ್ಕೃತ ಗ್ರಂಥಗಳ ಬಳಕೆಯೇ ಇದ್ದಿತು. ಅವರಿಗಿಂತ ಹಿಂದಿನದಾಸರು ಕನ್ನಡದಲ್ಲಿ ಪದಗಳನ್ನು ರಚಿಸಿದ್ದರೂ ಅವು ವಿಶೇಷವಾಗಿ ಪ್ರಚಾರದಲ್ಲಿರಲಿಲ್ಲ. ತಮಿಳುದೇಶದಲ್ಲಾಗಲೇ ಸಂಸ್ಕೃತ ಸಾಹಿತ್ಯದ ಜೊತೆಗೆ ತಮಿಳುಭಾಷೆಯ ನಾಲಾಯಿರ ಪ್ರಬಂಧಗಳನ್ನು ದೇವತಾರ್ಚನೆಗೂ, ಜ್ಞಾನಾಭಿವೃದ್ಧಿಗೂ ಉಪಯೋಗಿಸುತ್ತಿದ್ದರು. ಸಾರ್ವಜನಿಕರಿಗೆ ನೀತಿ, ಧರ್ಮ, ತತ್ವಗಳನ್ನು ಮನಸ್ಸಿಗೆ ಹಿಡಿಯುವಂತೆ ಬಾಳಿನಲ್ಲಿ ಉಳಿಯುವಂತೆ ಜನರ ನಿತ್ಯ ಭಾಷೆಯಾದ ಕನ್ನಡದಲ್ಲಿ ಬೋಧಿಸುವ ಪ್ರಯತ್ನ ಹರಿದಾಸರಿಂದಾಯಿತು. "ಭಾಷಾ ಸಮುದಾಯವು ಸಾಮಾಜಿಕ ಸಂಬಂಧಗಳ ಬಲೆ, ಸಂಸ್ಕೃತಿಯು ಸಮಾಜ ಜೀವನವನ್ನು ಪ್ರತಿಬಿಂಬಿಸುತ್ತದೆ. ಸಂಸ್ಕೃತಿಯು ಸಮಾಜದ ಎಲ್ಲ ಆಚಾರ ವಿಚಾರಗಳನ್ನು ಒಳಗೊಂಡಿರುತ್ತದೆ ಅದು ಭಾಷೆಯ ಮೂಲಕ ವ್ಯಕ್ತವಾಗುತ್ತದೆ. ಇದರಿಂದ ಬರಹಗಾರನು ಸಮಾಜದ ಯಾವುದೇ ವಿಷಯವನ್ನು ತೆಗೆದುಕೊಂಡರೂ ತನ್ನ ಕೃತಿಯಲ್ಲಿ ತನ್ನ ಕಾಲದ ವಿಚಾರಗಳನ್ನು ಅಭಿವ್ಯಕ್ತಿಸುತ್ತಾನೆ". (೧) ಸಂಸ್ಕೃತಿಯು ಒಂದು ದೇಶದ ಆಯಾಕಾಲದಲ್ಲಿ ಆಚರಣೆಯಲ್ಲಿದ್ದ ಆಚಾರ-ವಿಚಾರಗಳು ಆಡು ಮಾತಿನ ಶೈಲಿ, ಭಾಷೆ ಮತ್ತು ಸಾಹಿತ್ಯವನ್ನೊಳಗೊಂಡಿರುತ್ತದೆ. ಪುರಂದರದಾಸರ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಅವರು ಬಾಳಿ ಬದುಕಿದ್ದ ಜನರ ಸಮುದಾಯ ಜೀವನದಲ್ಲಿ ಬರುವ ಹಬ್ಬ ಆಚರಣೆಗಳು, ದೇಶೀ ಭಾಷೆ, ಆಡುನುಡಿಗಳು, ಗಾದೆ ಮಾತುಗಳು, ಆಹಾರ ಕ್ರಮ, ಉಡುಗೆ ತೊಡುಗೆಗಳು, ಆಭರಣಗಳು, ವೈದ್ಯಪದ್ಧತಿ ಹಾಗೂ ಯೋಗಶಾಸ್ತ್ರ ಮುಂತಾದ ವಿಷಯಗಳು ಸ್ಪಷ್ಟವಾಗಿ ಅಭಿವ್ಯಕ್ತಿ ಗೊಂಡಿವೆ. ಈ ಎಲ್ಲ ವಿಷಯಗಳು ಒಂದು ಸಂಸ್ಕೃತಿಯನ್ನು ಸೂಕ್ಷ್ಮವಾಗಿ ತಿಳಿಯಲು ಸಹಾಯಕವಾಗುತ್ತದೆ ಎಂಬುದಂತೂ ಸತ್ಯದ ಸಂಗತಿ.

ಕೀರ್ತನಪರಂಪರೆ ಇಂದಿಗೂ ಒಂದು ನಿರಂತರ ಜೀವಂತ ಪ್ರಕ್ರಿಯೆಯಾಗಿ ನಮ್ಮ ನಡುವಿದೆ. ಮನೆ ಮನೆಗಳಲ್ಲಿ ಜಾತಿ ವರ್ಗದ ನೆಲೆಯನ್ನು ದಾಟಿ ಪುರುಷರು, ಮಹಿಳೆಯರು, ಮಕ್ಕಳು ನಿತ್ಯವೂ ನಡೆಸುವ ಪೂಜೆಯ ಸಂದರ್ಭದಲ್ಲಿ ಹಾಡುವ ಆರತಿ ಹಾಡುಗಳು ಶ್ರಾವಣ ಮಾಸದ ವ್ರತದಲ್ಲಿ ಹಾಡುವ ಕಥಾರೂಪದ ಪದಗಳು, ನವರಾತ್ರಿಯ ಸಮಯದಲ್ಲಿ ಹಾಡುವ ಕೊರವಂಜಿ ಪದಗಳು, ಕೋಲಾಟದ ಪದಗಳು, ಶಿಶು ಸಾಹಿತ್ಯದ ಗೀತೆಗಳು, ಜಾತ್ರೆ ಸಮಯದಲ್ಲಿ, ಗುರುಗಳ ರಥೋತ್ಸವ ಸಂದರ್ಭದಲ್ಲಿ ಹಾಡುವ ಹನುಮ-ಭೀಮ ಮಧ್ವಾವತಾರದ ಪದಗಳು ದಾಸ ಸಾಹಿತ್ಯದ ಕೊಡುಗೆಯೇ ಎನ್ನಬಹುದು. ಈಗ ಎಲ್ಲೆಲ್ಲೂ ಕಾಣಬರುವ ಭಜನಾ ಮಂಡಳಿಗಳು ಊರ ದೇವಾಲಯಗಳಲ್ಲಿ ನಡೆಸುವ ಭಜನಾ ಸಪ್ತಾಹಗಳು ಕೀರ್ತನ ಪರಂಪರೆಯ ಪ್ರಸರಣ ಹಾಗೂ ಮುನ್ನಡುಸುವಿಕೆಯ ಕಾರ್ಯಗಳನ್ನು ಮಾಡುತ್ತಿವೆ.

ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಒಂದು ವಿಶೇಷವಾದ ವಿಷಯವನ್ನೂ, ಭಾವನೆಯನ್ನೂ ಹೇಳುವಾಗ ಪ್ರತಿಮೆಗಳನ್ನು ಬಳಸಿದ್ದಾರೆ. ಪ್ರತಿಮೆ ಎಂದರೆ ಸಾಮಾನ್ಯ ಅರ್ಥದಲ್ಲಿ ವಿಗ್ರಹ ಅಥವಾ ಮೂರ್ತಿ. ವಿಗ್ರಹ ಅಥವಾ ಮೂರ್ತಿಯನ್ನು ಮಾಡುವಾಗ ಕೈಕಾಲು, ದೇಹ, ಮುಖ ಕಿರೀಟ, ಆಭರಣಗಳ ವಿವರವನ್ನು

ನೀಡುವಂತೆ ದಾಸರು, ಚಿನ್ಹೆ, ಸಂಕೇತ ಪ್ರತೀಕ, ಉಪಮೆ, ರೂಪಕಗಳನ್ನೊಳಗೊಂಡ ಅನೇಕ ಅದ್ಭುತವಾದ ಪ್ರತಿಮೆಗಳನ್ನು ರಚಿಸಿದ್ದಾರೆ. ಅಂತಹ ಪ್ರತಿಮೆಗಳು ಸಾಂಸ್ಕೃತಿಕ ಮಹತ್ವವೇನೆಂಬುದನ್ನು ತಿಳಿಸುತ್ತವೆ.

'ಕಡುಬು' ಪ್ರತಿಮೆ ಆಧ್ಯಾತ್ಮಿಕ ತತ್ವವನ್ನು ತಿಳಿಸುತ್ತದೆ. ಗೋದಿಯನ್ನು ಕುಟ್ಟಿ ಬೀಸೋ ಕಲ್ಲಿನಲ್ಲಿ ಬೀಸಿ, ಹೊಟ್ಟು ತೆಗೆದು ನೀರುಹಾಕಿ ಕಣಕವನ್ನು ತಯಾರಿಸಿಕೊಳ್ಳುವುದು, ಬೇಯಿಸಿದ ಕಡಲೆಬೇಳೆಯ ಜೊತೆ ಬೆಲ್ಲವನ್ನು ಮಿಶ್ರಣ ಮಾಡಿ ಹೂರಣವನ್ನು ತಯಾರಿಸುವುದು ನಂತರ ಕಟ್ಟಿಗೆಯ ಒಲೆಯ ಮೇಲೆ ಎಣ್ಣೆಯಲ್ಲಿ ಕರಿಯುವುದು ಮುಂತಾದ ವಿಧಾನಗಳನ್ನು ಹೇಳಲಾಗಿದೆ. ಕಡುಬಿನಲ್ಲಿ ಹೂರಣವೇ ಸಾರವತ್ತಾದ ಭಾಗ ದಾಸರು ಇದರಲ್ಲಿ ಆಧ್ಯಾತ್ಮದ ಪ್ರಕ್ರಿಯೆಯನ್ನು ಅಳವಡಿಸಿದ್ದಾರೆ. ಕಡುಬು ಜೀವಾತ್ಮನಾದರೆ ಅದರೊಳಗಿರುವ ಹೂರಣ ಪರಮಾತ್ಮ 'ನಾಯಕ' ಪ್ರತಿಮೆಯಲ್ಲಿ ದಾಸರು ಭ್ರಷ್ಟ ರಾಜಕೀಯ ನಾಯಕರನ್ನು ಆಸೆಯಿಂದ ಜೊಲ್ಲು ಸುರಿಸುವ ನಾಯಿಗೆ ಹೋಲಿಸಿದ್ದಾರೆ.

ಡೊಂಕು ಬಾಲದ ನಾಯಕರೆ ನೀವೇನೂಟ ಮಾಡಿದಿರಿ ಪ।
ಕಣಕ ಕುಟ್ಟೊ ಅಲ್ಲಿಗೆ ಹೋಗಿ

ಹೆಣಕಿ ಇಣಕಿ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಜಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ ।೧।

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ (೧)

ಗೋದಿಯಿಂದ ಹುಗ್ಗಿ ಮಾಡುವ ವಿಧಾನದ ರೀತಿಯನ್ನು ಇಲ್ಲಿ ನೋಡಬಹುದು. ಗೋದಿಯನ್ನು ನೆನೆಸಿ, ಕುಟ್ಟಿ, ಹೊಟ್ಟು ತೆಗೆದು ಅದರಿಂದ ಹುಗ್ಗಿ ಮಾಡುವರು. ಗೋದಿಯನ್ನು ಕುಟ್ಟಲು ಒನಕೆಯನ್ನು ಬಳಸುತ್ತಿದ್ದರು ಎಂಬುದು ಇಲ್ಲಿ ತಿಳಿಯುತ್ತದೆ. ಎಲ್ಲ ಕಾರ್ಯಗಳಲ್ಲಿಯೂ ಲಂಚ ತಿನ್ನುವ ಬೇರೆಯವರ ಹಣಕ್ಕಾಗಿ ಆಸೆ ಪಡುವ ಜನರಲ್ಲಿ ನಾಯಿ ಸ್ವಭಾವದ ಹೋಲಿಕೆಯನ್ನು ಗುರುತಿಸಿ ರಚಿಸಿದ ಪದವಾಗಿ ಈ ಕೀರ್ತನೆ ಮಹತ್ವವನ್ನು ಪಡೆದುಕೊಂಡಿದೆ.

'ದೇವರು' ಪ್ರತಿಮೆ ಜಾನಪದ ವ್ಯವಹಾರದಲ್ಲಿ ಬರುವ ಊರದೇವರ ಜಾತ್ರೆಯ ವಿಷಯಗಳಿಲ್ಲಿ ಆಧ್ಯಾತ್ಮಿಕ ಸಾಧನೆಯನ್ನು ಮಾಡುವ ವಿಧಾನಗಳನ್ನು ತಿಳಿಸಲಾಗಿದೆ.

**ಊರ ದೇವರು :** ಊರದೇವರ ಮಾಡಬೇಕಣ್ಣ ತನ್ನೊಳಗೆ ತಾನೆ ಪ।
ಊರದೇವರ ಮಾಡಿರೆಂದು ಸಾರುತಿದೆ ಶ್ರುತಿ ಇರುಳು ಹಗಲು

ದ್ವಾರಗಳೊಂಬತ್ತು ಮುಚ್ಚಿ ನಿಲ್ಲಿಸಿ ಭ್ರೂಮಧ್ಯದಲ್ಲಿ ।ಅ।
ಎಷ್ಟು ಯುಗಗಳು ತಿರಿಹೋಯ್ತಣ್ಣ ದೇವರ ಮಾಡದೆ
ಕಷ್ಟದಿಂದೆ ನೊಂದೆ ಕಾಣಣ್ಣ
ಅಷ್ಟ ದಳದ ಕಂಭ ನಿಲ್ಲಿಸಿ ಕಟ್ಟೆ ಚಕ್ರಂಗಳನ್ನು ಹಾಕಿ
ಸೃಷ್ಟಿದೇವರ ತಂದು ನಿಲ್ಲಿಸಿ ದುಷ್ಟ ಕೋಣನ ಶಿರವ ತಂದು ।೧।

ಕಷ್ಟತರ್ಕವೆಂಬ ಕುರಿಯಣ್ಣ ಅದನ್ನು ತಂದು
ಕಟ್ಟಿ ತಲೆಯನು ಹೊಡೆಯ ಬೇಕಣ್ಣ
ಅಷ್ಟಮದದ ಕುರಿಗಳನ್ನು ಕಟ್ಟಿ ತಲೆಯನು ಚಂಡನಾಡಿ
ಅಟ್ಟಿ ತಿರುಗುವ ಕೋಳಿಯನ್ನು ಕುಟ್ಟಿ ಸೂರೆ ಹಾಕುವಲ್ಲಿ ೨।

ನಾನು ಎಂಬ ಮೇಕೆ ಹೋತಣ್ಣ ಅದಕ್ಕೆ ತಕ್ಕ
ಜ್ಞಾನವೆಂಬುದು ಪೋತರಾಜಣ್ಣ
ಮಾನವೆಂಬ ಭಾಟಿ ಹೊಡೆದು ಹೀನ ಹೋತನ ಸೀಳಿ ಬಿಸುಟು
ಧ್ಯಾನ ಗುಡಿಸಲು ಸೂರೆಗೊಂಡು ತಾನೆ ಬೆಳಗುವ ಜ್ಯೋತಿ ನಿಲ್ಲಿಸಿ ೩।(೨)

ಗ್ರಾಮದೇವತೆಯ ಪೂಜೆ ಮಾಡಿ ಕೋಣ, ಕುರಿ ಮುಂತಾದ ಪ್ರಾಣಿಗಳನ್ನು ಬಲಿಕೊಡುವುದು ಮೊದಲಿನ ಕಾಲದಲ್ಲಿ ರೂಢಿಯಿತ್ತು ಇಂತಹ ಜನಪದ ವ್ಯಾಪಾರವಾದ 'ಊರದೇವರನ್ನು ಮಾಡುವುದು' ಎಂಬುದಕ್ಕೆ ಇಲ್ಲಿ ಆಧ್ಯಾತ್ಮಿಕ ಅರ್ಥ ಬಂದಿದೆ. ಈ ಊರಿನ ದೇವರೆಂದರೆ ಬಿಂಬರೂಪಿ ಪರಮಾತ್ಮ, ಪ್ರತಿಬಿಂಬನಾದ ಜೀವನಿಗೆ ಎಷ್ಟೊ ಜನ್ಮಗಳನ್ನು ಕಳಿದರೂ ಬಿಂಬರೂಪಿ ಪರಮಾತ್ಮನ ಜ್ಞಾನ, ಅರಿವು ಆಗುವುದಿಲ್ಲ. ಕಷ್ಟವಾದ ಸಂಸಾರದಿಂದ ತಪ್ಪಿಸಿಕೊಳ್ಳಲು ದಾರಿ ಎನೆಂದರೆ ಅದು ಅಷ್ಟಾಂಗಯೋಗ [ಅಷ್ಟದಳದ ಕಂಬ], ಅದರಿಂದ ಆರೂ ಚಕ್ರಗಳನ್ನು ಜಾಗ್ರತಮಾಡಿದಾಗ, ದುಷ್ಟಕೋಣನೆಂಬ ಅನ್ಯಥಾ ಜ್ಞಾನವು ತೊಲಗುತ್ತದೆ. ಸಂಸಾರದಲ್ಲಿ ಮೋಹವೆಂಬ ಕುರಿಯು ನಾಶವಾಗುತ್ತದೆ. ಯಥಾರ್ಥ ಜ್ಞಾನವೆಂಬ ಭಾಟಿಯಿಂದ ಅಹಂಕಾರವೆಂಬ, ಆಸಕ್ತಿಯೆಂಬ ಹೀನ ಹೋತನ ಹೊಡೆದು ಧ್ಯಾನದಲ್ಲಿ ಜ್ಯೋತಿರೂಪನಾದ ಭಗವಂತನುನ್ನು ಕಾಣಬೇಕು ಎಂಬ ತಾತ್ಪರ್ಯ ಇಲ್ಲಿದೆ.

ಪುರುಂದರದಾಸರು ಮಹಾನುಭಾವಿಗಳು, ಪ್ರತಿಭಾಸಂಪನ್ನರು, ಅಖಂಡ ಭಾರತದಲ್ಲಿ ಸಂಚರಿಸಿದವರು, ಜೀವನದ ನೂರಾರು ಅನುಭವಗಳನ್ನು ಕಂಡವರು. ಹರಿಸರ್ವೋತ್ತಮ ತತ್ವದಲ್ಲಿ ನಿಷ್ಠೆಯಿದ್ದ ಅವರು ಜನರ ನಡುವೆ ಇದ್ದು ಜನಸಾಮಾನ್ಯರ ಭಾಷೆಯಲ್ಲಿಯೇ ಕಾವ್ಯವನ್ನು ರಚಿಸಿದರು.

**ನಗಾರಿ:** ಹೊಡಿ ನಗಾರಿ ಮೇಲೆ ಕೈಯ ಘಡ ಘಡ
ಹೊಡಿ ನಗಾರಿ ಮೇಲೆ ಕೈಯ (೩)

**ಡಂಗುರ:** ಹೊಯ್ಯೋ ಹೊಯ್ಯೋ ಹೊಯ್ಯೋ ಡಂಗುರವ, ಜಗ
ದಯ್ಯನಯ್ಯ ಶ್ರೀ ಹರಿಯಲ್ಲದಿಲ್ಲವೆಂದು (೪)

ಎಂದು ಜನಪದರೀತಿಯಲ್ಲಿ ಕೃತಿಗಳನ್ನು ರಚಿಸಿ ತಮ್ಮ ಚಮತ್ಕ್ರತಿಯನ್ನು ತೋರಿಸುತ್ತಾರೆ. ದಾಸರು ಸಂತ ಕವಿಗಳು, ಅವರ ದೃಷ್ಟಿಮಾನವೀಯವಾದರೂ ಅದರ ಪ್ರತಿಷ್ಠೆ ಭಗವಂತನಲ್ಲಿ. ಜೀವನದ ಅನಿತ್ಯತೆಯಿಂದ ಪಾರಾಗುವುದು ಅವರ ಜೀವನ ಧರ್ಮ. ಅವರು ಜೀವನದ ರಹಸ್ಯವನ್ನು ಬಿಚ್ಚಿ ತೋರಿಸುವ ಕವಿಗಳು. ಬೀದಿಯಲ್ಲಿ ಕಣಿ ಹೇಳುತ್ತ ಬರುವ ಬುಡುಬುಡಿಕೆ ಯವರ ಹಾಡಿನ ಧಾಟಿಯಲ್ಲಿ ದ್ವೈತ ತತ್ವದ ರಹಸ್ಯವನ್ನು ಬಿಚ್ಚಿಡುತ್ತಾರೆ.

ಜಯ
ಜಯವಿದೆ ಈ ಮನೆತನಕೆ
ಬಿಡು ಬಿಡು ಬಿಡು ಬಿಡು ಮನ ಸಂಶಯವ
ಶುಕನೆಂಬಕ್ಕಿ ಹೇಳುತದಪ್ಪ
ಜಗವೆಂಬೋ ಗಿಡ ಹುಟ್ಟೈತಣ್ಣ
ಹಣ್ಣುಗಳೆರಡು ಐದಾವಪ್ಪ
ಮೂರು ಬುಡದ ಗಿಡ ಕೇಳಣ್ಣ
ಹಣ್ಣಿನ ಒಳಗೆ ನಾಲ್ಕು ರಸವು
ಐದು ದೊಡ್ಡ ಹರೆ ಕಾಣಪ್ಪ
ಆರು ಬಗೆಯ ಸ್ವರೂಪ ಕೇಳು
ಏಳು ಬಗೆಯ ತೊಗಟುಂಟಣ್ಣ
ಸಣ್ಣ ಗರಿಗಳು ಎಂಟೈದಾವೆ
ಅಕ್ಷವು ಇದಕೆ ಒಂಬತ್ತೈತೆ
ಎಲೆಗಳು ಹತ್ತು ಐದಾವಪ್ಪ
ಒಂದೇ ಹಕ್ಕಿ ಹಣ್ತಿಂತೈತೆ
ಮತ್ತೋಂದ್ಹಕ್ಕಿ ನೋಡುತದಪ್ಪ
ಹಣ್ತಿಂದ್ಹಕ್ಕಿ ಬಡವಾಗೈತೆ
ತಿನ್ನದ ಹಕ್ಕಿ ಬಲಿತೈತಣ್ಣ
ಸುಳ್ಳಲ್ಲ ನೀ ಕೇಳೋ ತಮ್ಮ
ದ್ವಾಸುಪರ್ಣಾದ ಶ್ರುತಿಯಲ್ಲೈತೆ
ಓಂದೇ ಕುಲದ ಹಕ್ಕ್ಯಲ್ಲಣ್ಣ
ಒಂದೇ ಕುಲವೆಂದು ತಿಳಿಯಲಿ ಬೇಡ
ತಿಳಿದರೆ ನಿಮಗೆ ಕೇಡಾದಿತು
ಹಳೆ ವಸ್ತ್ರವ ಬಿಸಾಡಣ್ಣ
ಹೊಸ ವಸ್ತ್ರವ ನಿಮಗೆ ದೇವರು ಕೊಟ್ಟಾನು.
. . . . . . . . . . . . . . . . . . . . . . . . (೫)

ಜಗವೆಂಬೋ ಸಂಸಾರವೃಕ್ಷದ ಚಿತ್ರ ಇಲ್ಲಿದೆ ಅಥರ್ವಣ ಉಪನಿಷತ್ತಿನ 'ದ್ವಾಸುಪರ್ಣಾ' ಎಂಬ ಶ್ರುತಿಯ ಆಧಾರದಿಂದ ಈ ರೂಪಕವನ್ನು ಚಿತ್ರಿಸಿದ್ದಾರೆ. ಈ ಹಾಡಿನ ಮೂಲತತ್ವ ಭಾಗವತದಲ್ಲಿದೆ. ಅದಕ್ಕಾಗಿ ಶುಕನೆಂಬ ಹಕ್ಕಿ ಎಂದು ಭಾಗವತವನ್ನು ಹೇಳಿದ ಶುಕಮುನಿಯೆಂದು ಹೇಳಲಾಗಿದೆ. ಇಲ್ಲಿ ಎರಡು ಹಕ್ಕಿಗಳು ಜೀವಾತ್ಮ ಹಾಗೂ ಪರಮಾತ್ಮರು. ವಸ್ತ್ರವು ದೇಹವನ್ನು ಸಂಕೇತಿಸುತ್ತದೆ. ದೇಹ ಬಿಟ್ಟ ಮೇಲೆ ಮತ್ತೊಂದು ಜನ್ಮದಲ್ಲಿ ಇನ್ನೊಂದು ದೇಹವನ್ನು ಪಡೆಯುವುದನ್ನು ಹೊಸ ವಸ್ತ್ರ ದೇವರು ನಿಮಗೆ ಕೊಟ್ಟನು ಎಂದಿದ್ದಾರೆ.

ಪುರಂದರದಾಸರಿದ್ದ ಕಾಲದಲ್ಲಿ ವಿಧವಾ ಸಂಪ್ರದಾಯಗಳು ಬಹಳವಾಗಿ ರೂಢಿಯಲ್ಲಿದ್ದವು. ಅವರು ಸುಂದರವಾದ ವಸ್ತ್ರವಡವೆಗಳನ್ನು ಧರಿಸುವಂತಿರಲಿಲ್ಲ. ಯಾವುದೇ ಮದುವೆ, ಮುಂಜಿ ಮುಂತಾದ ಸಮಾರಂಭ ಗಳಿಗೆ ಬಂದರೆ ಅಪಶಕುನ ಎಂದು ಭಾವಿಸುತ್ತಿದ್ದರು. ಮಡಿ ಮಡಿಯೆಂದು ಅವರನ್ನು ದೇವತಾ ಪೂಜೆ ಕಾರ್ಯಗಳಿಂದ ದೂರವಿಡುತ್ತಿದ್ದರು. ಅಂತಹ ಸ್ಥಿತಿಯಲ್ಲಿದ್ದ ಸ್ತ್ರೀಯರನ್ನು ಕಂಡು ಮರುಗಿದ ದಾಸರು.

ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ ಪ.

ಪಡೆದವಳ ಎದೆಗೊರಳ ಕೊಯ್ವಂಥ ಚೂರಿ ॥ಅ॥ (೬)

ಎಂದಿದ್ದಾರೆ. ದಾಸರಿದ್ದ ಕಾಲದಲ್ಲಿ ಸ್ತ್ರೀಯರು ಮನೆಗೆಲಸ ಮಾಡುತ್ತ ಇರುತ್ತಿದ್ದರು. ಹೊರಗೆ ಹೋಗಿ ಕೆಲಸ ಮಾಡುವುದು, ದೊಡ್ಡ ತಪ್ಪು ಎಂದು ತಿಳಿಯಲಾಗುತ್ತಿತ್ತು. ಅದನ್ನೇ ದಾಸರು. ಬುದ್ಧಿಮಾತು ಪ್ರತಿಮೆಯ ಮೂಲಕ ತಿಳಿಸುತ್ತಾರೆ.

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ, ಮಗಳೆ
ಮನಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ಪ॥
. . . . . . . . . . . . . . . . . . . . . . .
ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿ ಬಾಗಲಲ್ಲಿ ಬಂದು ನಿಲ್ಲಬೇಡಮ್ಮ ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ
. . . . . . . . . . . . . . . . . . . . . . . ॥೨॥ (೭)

ದಾಸರು ಕೃಷ್ಣನ ಮೂಲಕ ತಂಗಿಯರಿಗೆ ಬುದ್ಧಿಮಾತು ಹೇಳಿಸುತ್ತಾರೆ.

ತಂಗಿಗೆ ಹೇಳಿದ ಕೃಷ್ಣ ಚಂದದಿಂದಲಿ ಬುದ್ಧಿ
. . . . . . . . . . . . . . . . . . . . . . .
ಬಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು
ಅಂಗನೇರಿಗೆ ನಿನ್ನಂತರಂಗವ ಹೇಳದಿರು
ಬಂಗಾರ ವಸ್ತುಗಳ ಮುಚ್ಚಿಕೊಳಮ್ಮ ॥೩॥
. . . . . . . . . . . . . . . . . . . . . . . (೮)

ಗೃಹಿಣಿಯೊಬ್ಬಳು ಮನೆಯಲ್ಲಿರಬೇಕಾದಾಗ ನೆರೆಹೊರೆಯವರ ಮಾತು ಕೇಳದೆ, ಪರಪುರುಷರ ನೋಡದೆ, ಗುರುಹಿರಿಯರನ್ನು ಗೌರವದಿಂದ ಕಾಣಬೇಕು ಎಂದು ವಿಷಯವನ್ನು ತಿಳಿಸುವ ಪ್ರಯತ್ನ ಕವಿಯದು.

ಮಡಿಮೈಲಿಗೆಯ ವಿಕೃತ ರೂಪವೇ ಸ್ಪೃಶ್ಯಾಸ್ಪೃಶ್ಯ ಸಮಾಜ ಸುಧಾರಣೆಯಲ್ಲಿ ಇದು ಬೃಹತ್ತರವಾದ ಸಮಸ್ಯೆಯಾಗಿದೆ. ಅಸ್ಪೃಶ್ಯತೆಯ ರೋಗ ಸದೃಢ ಸಮಾಜದ ಒಂದು ದೊಡ್ಡ ಕುಂದಾಗಿ ಪರಿಣಮಿಸಿದೆ. ಆ ರೋಗದ ಪರಿಹಾರಕ್ಕಾಗಿ ಅನೇಕರು ಬಹುದಿವಸಗಳಿಂದಲೂ ಪ್ರಯತ್ನಿಸುತ್ತಿದ್ದಾರೆ. ಇಂದಿನವರೂ ಪ್ರಯತ್ನಿಸುತ್ತಿದ್ದಾರೆ. ಪುರಂದರದಾಸರಿದ್ದ ಕಾಲದಲ್ಲಿ ಇದು ಇತ್ತು. ದಾಸರು ಈ ಸಮಸ್ಯೆಯನ್ನು ತಮ್ಮ ದೃಷ್ಠಿಯಲ್ಲಿ ಮಾರ್ಮಿಕವಾಗಿ ಬಿಡಿಸಲು ಪ್ರಯತ್ನಿಸಿದ್ದಾರೆ. ಅವರು ಹರಿಜನರ ಬಗೆಗೆ ಏನು ಹೇಳಿದ್ದಾರೆ ಎಂಬುದನ್ನು 'ಹೊಲೆಯ' ಪ್ರತಿಮೆ ತಿಳಿಸುತ್ತದೆ.

ಹೊಲೆಯ ಹೊರಗಿಹನೆ ಊರೊಳಗಿಲ್ಲವೇ ॥ಪ॥

ಶ್ರೀ ಹರಿಯ ಸ್ಮರಣೆಯನು ಬಲ್ಲವರು ಹೇಳಿ ॥ಅ॥

ಶೀಲವನು ಕೈಕೊಂಡು ನಡೆಸದಾತನು ಹೊಲೆಯ
ಪೇಳಿದ ಹರಿಕಥೆಯ ಕೇಳದವ ಹೊಲೆಯ
ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ

ಸೂಳೆಯನು ಕಾಮಿಸುವವ ಶುದ್ಧ ಹೊಲೆಯ ।೧।
. . . . . . . . . . . . . . . . . . . . . . (೯)

ಸಮುದಾಯ ಸ್ಪಂದನ ದಾಸರಲ್ಲಿ ಜಾಗ್ರತವಾಗಿತ್ತು. ದಾಸರ ದೃಷ್ಟಿಯಲ್ಲಿ ಹರಿದಾಸರ ಕಾರ್ಯವೇ ಲೋಕೋದ್ದಾರದ ಕಾರ್ಯ. ಈ ಕಾರ್ಯ ಕೈಗೂಡಬೇಕಾದರೆ ಮತೀಯ ಸಮಸ್ಯೆಗಳು,ಜಾತಿವಾದ ಮುಂತಾದ ಸಮಸ್ಯೆಗಳಿಂದ ಮುಕ್ತವಾದ ಸಮಾಜ ನಿರ್ಮಾಣವಾಗಬೇಕು ಅದಕ್ಕಾಗಿ ದಾಸರು

'ಜಂಗಮರು ನಾವು ಜಗದೊಳು' (೧೦)
'ತುರುಕರು ಕರೆದರೆ ಉಣಬಹುದಣ್ಣ' (೧೧)

ಎಂದು ಜಂಗಮರು ತುರುಕರು ಮುಂತಾದ ಪ್ರತಿಮೆಗಳ ಮೂಲಕ ಜಾತಿವಾದವನ್ನು ಖಂಡಿಸಿ ಜನರ ನಡುವೆ ಪ್ರೀತಿಯನ್ನು ಸಮುದಾಯ ಸಾಮರಸ್ಯವನ್ನೂ ಬೆಳೆಸಲು ಯತ್ನಿಸಿದ್ದಾರೆ. ದಾಸರು ಹಾದಿ ಬೀದಿಯಲ್ಲಿ ಸಂಚರಿಸುತ್ತಾ ಇರುವಾಗ ಅವರು ಕಂಡ ದೃಶ್ಯಗಳೆಲ್ಲಾ ರೂಪಕವಾಗಿ ಅವರ ಕಾವ್ಯ ವಸ್ತುಗಳೇ ಆಗಿವೆ.

ಗುಡುಗುಡಿಯ ಸೇದಿ ನೋಡೊ ।ಪ।

ಒಡಲ ಪಾಪಂಗಳನೆಲ್ಲ ಈಡಾಡೊ ।ಅ।
. . . . . . . . . . . . . . . . . .
ಬುರುಡೆಯೆಂಬುದು ಈ ಶರೀರ ನಿನ್ನ
ಗುರು ಭಕ್ತಿಯೆಂಬೋದು ಕೊಳವಿಯಾಕಾರ
ಸಿರಿನಾರಾಯಣನೆಂಬೋ ನೀರ ಅದ
ನರಿತು ತುಂಬಿಕೊಳೊ ಎಲೆ ಮೋಜುಗಾರ ।೨। (೧೨)

ಕೊಳವೇಯಾಕಾರದ ಗುಡುಗುಡಿಯಿಂದ ಬೆಂಕಿಯಲ್ಲಿ ಹಾಕಿದ ತಂಬಾಕಿನ ಹೊಗೆಯನ್ನು ಸೇದುತ್ತಿದ್ದ ಕಾಲವದು. 'ಗುಡುಗುಡಿ' ಪ್ರತಿಮೆ ಆಧ್ಯಾತ್ಮಿಕ ಅರ್ಥವನ್ನು ಬಿಚ್ಚುತ್ತಾ ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿದೆ.

'ಫಕೀರ' ಪ್ರತಿಮೆಯಲ್ಲಿ ದಾಸರು ದೀಕ್ಷಾಗುರುಗಳಾದ ವ್ಯಾಸರಾಯರು ನನ್ನನ್ನು ಫಕೀರನನ್ನಾಗಿ ಮಾಡಿದರು ಎಂದು ಸಂತೋಷದಿಂದ ಹೇಳುತ್ತಾ ಫಕೀರರ ಉಡುಗೆ-ತೊಡುಗೆಗಳ ವರ್ಣನೆಯಲ್ಲಿ ಆಧ್ಯಾತ್ಮದ ಅರ್ಥವನ್ನು ಒದಗಿಸಿದ್ದಾರೆ.

ಮಾಡಿದ ಎನ್ನನು ಫಕೀರನು ಸದ್ಗುರು ।ಪ।
ಮಾಡಿದ ಎನ್ನ ಫಕೀರ.

. . . . . . . . . . . . . . . . . . . . . .
ನಾದದ ತಂಬೂರಿ ಮೋದ ಮಂದಾರವು ನಿಚ್ಚಂಗದ ಟೊಪ್ಪಿಗೆನಿಟ್ಟ
ಬೋಧದ ಭಂಗಿ ಅಮೃತದ ಲುಂಗಿ ಸಮಾನ ಗುಳಿಗೆಯನಿಟ್ಟ
. . . . . . . . . . . . . . . . . . . . . . (೧೩)

ದಾಸರ ಸಾಹಿತ್ಯದಲ್ಲಿ ಬಾಲ ಸಾಹಿತ್ಯದಲ್ಲಿ ಬರುವ ಮೆಣಸಿನಕಾಯಿ, ಬೆಕ್ಕು, ಗುಮ್ಮ, ಬಿಂದಿಗೆ ಮುಂತಾದ ಪ್ರತಿಮೆಗಳು ಮಕ್ಕಳ ಮನಸ್ಸನ್ನು ಆಕರ್ಷಿಸುತ್ತವೆ.

'ಗುಮ್ಮನ ಕರೆಯದಿರೆ ಅಮ್ಮಾನೀನು' (೧೪)

'ಕಾಗೆ ಕೂಗಿತಲ್ಲ ಈಗ ಒಂದು ಕಾಗೆ ಕೂಗಿತಲ್ಲ' (೧೫)
'ಆನೆ ಬಂದಿತಮ್ಮಮ್ಮ ಮರಿಯಾನೆ ಬಂದಿತಮ್ಮಮ್ಮ' (೧೬)
'ಡೊಂಕು ಬಾಲದ ನಾಯಕರೆ' (೧೭)

ದಾಸರು ಆಚರಣೆಗಳನ್ನು ಮಾನವೀಯತೆಯೊಂದಿಗೆ, ಸಂಸ್ಕೃತಿಯೊಂದಿಗೆ ಬೆಸೆಯುವ ಪ್ರಯತ್ನವನ್ನು ಮಾಡಿದ್ದಾರೆ. ದಾನ ಧರ್ಮ ಮಾಡುವುದು ನುಡಿದಂತೆ ನಡೆಯುವುದು, ಸಾಮಾಜಿಕ ನ್ಯಾಯವನ್ನು ಕಾಪಾಡುವುದು, ದುಷ್ಟರ ಸಂಗ ಬಿಡುವುದು, ಹಿರಿಯರನ್ನು ಗೌರವಿಸುವುದು ಇದು ದಾಸಸಾಹಿತ್ಯದ ದರ್ಶನವಾಗಿದೆ. ವ್ಯಕ್ತಿಗೆ ಜ್ಞಾನವು ಸಂಸ್ಕಾರದತ್ತ ಬರಬೇಕೆಂಬುದನ್ನು ದಾಸರು ಹಲವು ಉದಾಹರಣೆಗಳಿಂದ ಸ್ಪಷ್ಟಪಡಿಸಿದ್ದಾರೆ.

**ಕುನ್ನಿ :** ಹುಚ್ಚು ಕುನ್ನಿ ಮನವೇ ನೀ
ಹುಚ್ಚು ಗೊಂಬುದು ಘನವೆ
ಕಚ್ಚು ಕದತನವ ಬಿಟ್ಟು
ಅಚ್ಯುತನ ಪಾದವ ಮುಟ್ಟು ಪ

ಸ್ನಾನ ಮಾಡಿದರೇನು ಸಂ
-ಧ್ಯಾನ ಮಾಡಿದರೇನು
ಹೀನತನವ ಬಿಡಲಿಲ್ಲ ನೀ
ಸ್ವಾನುಭವವ ಕೊಡಲಿಲ್ಲ ೧ (೧೮)
. . . . . . . . . . . . . .

**ಸಂಗ:** ಸ್ವೀಯಾಗುಣವ ಬಿಟ್ಟು ಪರರಗುಣ ತೋರ್ಪರ ಸಂಗಬೇಡ
ದಯೆ ಧರ್ಮ ದಾಕ್ಷಿಣ್ಯ ಅರಿಯದ ಮನುಜರ ಸಂಗ ಬೇಡ (೧೯)

'ಕುನ್ನಿ', 'ಸಂಗ' ಮುಂತಾದ ಪ್ರತಿಮೆಗಳು ಮನುಷ್ಯನ ವ್ಯಕ್ತಿತ್ವ ಬೆಳೆಸಲು ಸಹಾಯಕವಾಗಿವೆ. "ಜಾನಪದ ಸತ್ವದಿಂದ ಮೆರೆಯುವ ಪುರಂದರ ಕವಿತೆಗಳಲ್ಲಿ ಕಾವ್ಯದ ಶೋಭೆಯನ್ನು ಹೆಚ್ಚಿಸುವ ಗಾದೆಗಳ ಭಂಡಾರವೇ ಇದೆ. ಈ ಗಾದೆಗಳನ್ನೆಲ್ಲ ತಮ್ಮ ಕೀರ್ತನೆಯ ಭಾವ ವಿಕಾಸಕ್ಕೆ ಅವರು ತುಂಬ ಸಮರ್ಥವಾಗಿ ಬಳಸಿಕೊಂಡಿದ್ದಾರೆ" (ಅ)

| **ಪ್ರತಿಮೆ :** | **ಗಾದೆ** |
|---|---|
| ದೈವ : | 'ಬಂದದ್ದೆಲ್ಲಾ ಬರಲಿ ಗೋವಿಂದನ ದಯೆಯಿರಲಿ' (೨೦) |
| ಹೂವು : | 'ಹೂವ ತರುವರ ಮನೆಗೆ ಹುಲ್ಲತರುವ'(೨೧) |
| ಕಿಚ್ಚು : | 'ಕಿಚ್ಚಿಗೆ ಇರುವೆ ಮುತ್ತುವುದೆ:' (೨೨) |
| ಆಕಳು : | 'ಆಕಳು ಡೊಂಕಾದರೇನು ಹಾಲು ಡೊಂಕೆ'(೨೩) |
| ನೆಂಟರು : | 'ಊರೆಲ್ಲ ನೆಂಟರು ಉಣಬಡಿಸುವವರ ಕಾಣೆ'(೨೪) |
| ಕೆಂಡ : | 'ಬೂದಿ ಮುಚ್ಚಿದ ಕೆಂಡ'(೨೫) |
| ಕೋಪ : | 'ಬಡವನ ಕೋಪ ದವಡೆಗೆ ಮೃತ್ಯು'(೨೬) |
| ಮಾನ : | 'ಅಡಕೆಗೆ ಹೋದ ಮಾನ ಆನೆ ಕೊಟ್ಟರು ಬಾರದು'(೨೭) |
| ತೂತು : | 'ಎಲ್ಲರ ಮನೆಯ ದೋಸೆಯೂ ತೂತು'(೨೮) |
| ಗಾಳಿ : | 'ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೊ'(೨೯) |
| ದು:ಖ : | 'ಪಾಪಿ ಬಲ್ಲನೆ ಪರರ ದು:ಖ'(೩೦) |
| ಈಜು : | 'ಈಸಬೇಕು ಇದ್ದು ಜೈಸಬೇಕು'(೩೧) |

ದಾಸರು ಜನಸಾಮಾನ್ಯರು ದಿನನಿತ್ಯದಲ್ಲಿ ಬಳಸುವ ಮಾತಿನ ಕಡೆಗೆ ಸಾಮಾನ್ಯ ಜನ ಜೀವನದ ಕಡೆಗೆ ಅವರ ಆಸಕ್ತಿಯನ್ನು ತೋರಿದ್ದಾರೆ. ಹಣ ಪ್ರತಿಮೆಯು ಅದರ ಒಳಿತು ಕೆಡುಕುಗಳನ್ನು ಹೇಳುತ್ತದೆ.

'ಸಾಲ ಮಾಡಬೇಡ, ಸಾಲದು ಎನಬೇಡ, ನಾಳೆಗೆ ಇಡಬೇಡ'(೩೨)
'ರೊಕ್ಕ ಎರಡಕ್ಕೂ ದುಃಖ ಕಾಣಕ್ಕ' (೩೩)

ಭಕ್ತನ ಒಳವೇದನೆಯನ್ನು ವಿವರಿಸಲು ಅವರು 'ಗುದ್ದಿದವನೆ ಬಲ್ಲ ಗುದ್ದಿಸಿ ಕೊಂಡವನೇ ಬಲ್ಲ' ಎಂಬ ಗಾದೆಯನ್ನು ಪ್ರಾಸಂಗಿಕವಾಗಿ ಬಳಸುತ್ತಾರೆ. 'ನಗುವವರಿಗೆ ನಾಲ್ಕು ನಾಲಗೆಯಾದರೆ ಏನುಗತಿ' ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಹರಿದಾಸರು ಭಕ್ತಿಯ ಸಂದೇಶ ತಂದಾಗ ಅದನ್ನು ಬಳಸಿಕೊಳ್ಳಬೇಕೆಂದು ತಿಳಿಸುತ್ತಾ 'ಗಾಳಿ ಬಂದ ಸಮಯದಲ್ಲಿ ತೂರಿ ಕೊಳ್ಳಿರೋ' ಎಂಬ ಕೃಷಿಲೋಕದ ಗಾದೆಯಿಂದ ವಿವರಿಸುತ್ತಾರೆ. ಮನಸ್ಸಿನಲ್ಲಿ ಕಹಿ ಇಟ್ಟುಕೊಂಡು ಚೆನ್ನಾಗಿ ಮಾತನಾಡುವವರನ್ನು ಕಂಡು 'ತುದಿನಾಲಿಗೆ ಬೆಲ್ಲ ಎದೆಕತ್ತರಿಯವರ ಸಂಗ ಬೇಡ' ಎಂದಿದ್ದಾರೆ.

ರಾಗೀ ತಂದೀರಾ ಭಿಕ್ಷಕೆ
ರಾಗೀ ತಂದೀರಾ ? (೩೪)

ಇಲ್ಲಿ ದಕ್ಷಿಣ ಕರ್ನಾಟಕದ ಮುಖ್ಯ ಆಹಾರಗಳಲ್ಲಿ ಒಂದಾದ 'ರಾಗಿ' ಯನ್ನು ಕುರಿತ ಪ್ರಶ್ನೆಯಿಂದ ಕೀರ್ತನೆ ಪ್ರಾರಂಭ ವಾಗುತ್ತದೆ. ನಾಮಪದವನ್ನು ಕ್ರಿಯಾರೂಪಕ್ಕೆ ತಿರುಗಿಸಿ ಹೆಚ್ಚಿನ ಅರ್ಥವಂತಿಕೆ ಕಾಣಿಸಿರುವುದು ಈ ಪದದ ವೈಶಿಷ್ಟ್ಯ. ರಾಗಿ ಎಂಬ ಶಬ್ದದ ಹಿಂದೆ ಕೆಲವು ಶಬ್ದಗುಚ್ಚಗಳನ್ನಿರಿಸಿದರೆ ಅವು ಹೊಸ ಅರ್ಥವನ್ನು ಕೊಡುತ್ತವೆ.

" ಆರು ಮಾರ್ಗವ ಅರಿತವರಾಗಿ
ಮೂರು ಮಾರ್ಗವ ತಿಳಿದವರಾಗಿ
ಭೂರಿತತ್ವವ ಬೆರೆದವರಾಗಿ
ಕ್ರೂರರ ಸಂಗವ ಬಿಟ್ಟವರಾಗಿ"

'ಗಿಳಿಯು ಪಂಜರದೊಳಿಲ್ಲ' ಎಂಬ ಕೀರ್ತನೆಯಲ್ಲಿ ಬರುವ ಗಿಳಿ ಪ್ರತಿಮೆ ತನ್ನ ಚೌಕಟ್ಟಿನ ಪರಿಭಾಷೆಯನ್ನೇ ಭದ್ರವಾಗಿ ಆಶ್ರಯಿಸುತ್ತ ಅತ್ಯಂತ ಗಂಭೀರವಾದ ವಿಷಯ ಚಿಂತನದ ಕಡೆ ನಮ್ಮನ್ನು ಎಳೆದೊಯ್ಯುತ್ತದೆ. ಭಾಷೆ ಬಲು ಸರಳವಾಗುತ್ತ ವರ್ಣಿತವಸ್ತುವನ್ನು ತುಂಬ ಜಟಿಲವಾಗಿಸುತ್ತ ಸಾಗಿರುವುದು ಈ ಕೀರ್ತನೆಯ ವೈಶಿಷ್ಟ್ಯ. ಬರಿಯ ಪಂಜರ ಎಂಬ ಮಾತು ಚೈತನ್ಯದಾಯಕ ವಸ್ತು ಇಲ್ಲದ ಮೇಲೆ ಗೂಡಿಗೆ ಬೆಲೆಯಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಗಿಳಿ ಆತ್ಮವಾಗಿ ಪಂಜರ ಶರೀರವಾಗಿ ಸಹಜವಾಗಿ ಧ್ವನಿತವಾಗುತ್ತದೆ. ಲೋಕ ವ್ಯವಹಾರದ ಸಂಗತಿಗಳು ದಾಸರ ಕೀರ್ತನೆಗಳಲ್ಲಿ ಸಹಜವಾಗಿ ಅಭಿವ್ಯಕ್ತಿಗೊಂಡಿವೆ. ಉದಾ: 'ವ್ಯಾಪಾರ' ಪ್ರತಿಮೆಯ ಮೂಲಕ ಆಗಿನ ಕಾಲದಲ್ಲಿ ಬರೆಯಲು ಉಪಯೋಗಿಸುತ್ತಿದ್ದ ಕಾದದ ಲೇಖನಿ, ಕಲಮುದಾನಿ ಮುಂತಾದುವುಗಳ ಮಹತ್ವವನ್ನು ಆಧ್ಯಾತ್ಮಿಕ ಅರ್ಥದಲ್ಲಿ ಬಳಸಿದ್ದಾರೆ.

ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ
ನಾಲಿಗೆ ಎಂಬೋದು ಲೇಖನಿಯು

ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ ೨। (೩೫)

ಹೃದಯ ಕುಹರದಲ್ಲಿರುವ ಪರಮಾತ್ಮನ ಬಗ್ಗೆ ಪ್ರೀತಿ, ಭಕ್ತಿಯಿಂದ ನಾಮಸ್ಮರಣೆ ಮಾಡುವುದೇ ತಮ್ಮ ವ್ಯಾಪಾರ ಎಂದು ಹೇಳುತ್ತಾ ತಮ್ಮ ಈಗಿನ ಮಧುಕರ ವೃತ್ತಿಯಲ್ಲಿ ಹಿಂದಣ ವ್ಯಾಪಾರದಂತೆಯೆ ಇದೆ. ಆದರೆ ವಿವರಗಳು, ಪರಿಕರಗಳು ಬೇರೆ ಎಂದು ಸೂಚಿಸಿದ್ದಾರೆ. ಕಲಮದಾನಿ ಎನ್ನುವುದು ಬರೆಯುವ ಸಾಧನವಾದ ಲೆಕ್ಕಣಿಕೆಯನ್ನು (ಕಲಮು) ಇರಿಸುವ ಪಾತ್ರೆ. ದಾಸರು ತಮ್ಮ ಬಾಯಿಯನ್ನು ಕಲಮದಾನಿಗೆ ಹೋಲಿಸಿ ನಾಲಿಗೆ ಯನ್ನು ಲೇಖನಿಗೆ ಹೋಲಿಸಿದ್ದಾರೆ. ತಮ್ಮ ಕಾಲದಲ್ಲಿ ವ್ಯಾವಹಾರಿಕವಾಗಿ ಬಳಕೆಯಲ್ಲಿದ್ದ ಪರ್ಷಿಯನ್–ಅರೆಬಿಕ್ ಶಬ್ದಗಳನ್ನು ಪುರಂದರದಾಸರು ಇಲ್ಲಿ ಬಳಸಿದ್ದಾರೆ.

'ಧ್ಯಾನ' ಪ್ರತಿಮೆಯಲ್ಲಿ ಪೂಜೆಯ ಸಮಯದಲ್ಲಿ ಆಚರಿಸುವ ವಿಧಿವಿಧಾನಗಳು, ಅನೇಕ ಬಗೆಯ ವಾದ್ಯಗಳು, ನೈವೇದ್ಯಕ್ಕೆ ಉಪಯೋಗಿಸುವ ವಿಧವಿಧವಾದ ಪಕ್ವಾನಗಳು ಮುಂತಾದ ವಿಷಯಗಳ ಉಲ್ಲೇಖವು ಕಂಡುಬರುತ್ತದೆ.

**ಧ್ಯಾನ:** ಯಾಕೆನ್ನ ಎಬ್ಬಿಸಿದೆ ಶ್ರೀಹರಿಯ ಸೇವೆ ಧ್ಯಾನದ ಒಳಗಿದ್ದನೆ ಪ।

ಉದಯಕಾಲಕೆ ಎದ್ದು ನದಿಯ ತೀರಕೆ ಹೋಗಿ ಮಲಮೂತ್ರಗಳನೆ ಮಾಡಿ
ಮೃತ್ತಿಕೆ ಶೌಚದಿಂ ಆತ್ಮ ಶುದ್ಧಿಯನೆ ಮಾಡಿ
ನದಿಯಲಿ ನಿಂತು ಸ್ತೊತ್ರಂಗಳನೆ ಮಾಡಿ
ಅರ್ಥಾಭಿಮಾನಿ ಪ್ರಾರ್ಥನಂಗಳನೆ ಮಾಡಿ
ಸ್ನಾನ ಸಂಧ್ಯಾನ ಜಪತಪಗಂಳನೆ ಮಾಡಿ
ಶ್ರೀ ಹರಿಯ ದ್ಯಾನದಲಿ ನಾ ಮನೆಗೆ ಬರುತಲಿದ್ದೆ. ೧।

ಆಕಳ ಸೆಗಣಿಯಲಿ ಬಾಗೀರತಿ ಉದಕದಲಿ ದೇವರ ಜಗುಲಿಯನು
ಸಾರಿಸಿ ನಾನು ಕಾರಣೆಗಳನ್ನು ತೆಗೆದು
ಶಂಖ ಚಕ್ರ ಸ್ವಸ್ತಿಕ ಪದ್ಮದಿಂದ
ಬಗೆ ಬಗೆ ಬೃಂದಾವನ ರಂಗವಲ್ಲಿಯನಿಟ್ಟು
ಶ್ರೀ ಹರಿಯ ವಂದಿಸಿ ನಾನು ಕೈಯ ಮುಗಿಯುತಲಿದ್ದೆ. ೨।

ಸುವರ್ಣದ ಮಣಿ ಕುಂದಣದ ಕೀಲು ಬೆಳ್ಳಿ ಪೀಠದ ಮಣಿಗಳು
ಭಂಗಾರದ ರಾಜವರ್ಣದ ಮಣಿಗಳು
ಈ ಪರಿ ಮಣೆಗಳ ತಾರತಾರಕೆ ಇಟ್ಟು
ಶ್ರೀ ಹರಿಗೆ ವಂದಿಸಿ ನಾನು ಕೈಯ ಮುಗಿಯುತಲಿದ್ದೆ ೩। (೩೬)

ಜೀವನದಲ್ಲಿ ಯಾವುದನ್ನು ಅಳವಡಿಸಿಕೊಂಡರೆ ಎಲ್ಲಾ ಪುರುಷಾರ್ಥಗಳು ಕೈಗೂಡುವವೊ, ಯಾವ ಆಚಾರವನ್ನು ಮೈಗೂಡಿಸಿಕೊಂಡರೆ ರಾಗ–ದ್ವೇಷಾದಿ ಕಲ್ಮಷಗಳು ದೂರವಾಗುವವೋ ಅಂತಹ ಸನ್ನಡತೆಯೆ ಆಚಾರ. ಇಂದ್ರಿಯಗಳನ್ನು ನಿಗ್ರಹಿಸಲು ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಸಾಧಿಸಲು ಜೀವನದಲ್ಲಿ ಸದಾಚಾರ,

ಸನ್ನಡತೆ, ಅತ್ಯಾವಶ್ಯಕವಾಗಿದೆ. ಸ್ನಾನ, ಸಂಧ್ಯಾವಂದನೆಗಳು, ಶುಚಿತ್ವ ಮುಂತಾದ ಸದಾಚಾರಗಳ ಬಗ್ಗೆ ಪುರಂದರದಾಸರು ಇಲ್ಲಿ ಉಲ್ಲೇಖಿಸಿದ್ದಾರೆ.

ಸುವರ್ಣವಾದ ಗದ್ದಿಗೆ ಮಂಟಪ ಕಿತ್ತಿಗೆ ಸೂರ್ಯಪಾನ
ಸೌಬತ್ತು ನಗಾರಿ ಭೇರಿ ವಾದ್ಯ
ತಾಳ ಮದ್ದಳೆ ವಾದ್ಯ ನಾನಾಪರಿವಾದ್ಯ
ದುಂದುಭಿ ಸೌಬತ್ತು ನಾ ಮುಂದೆ ಹೊಯ್ದಿದ್ದೆ

ಪೂಜಾ ಸಮಯದಲ್ಲಿ ವಾದ್ಯಗಳನ್ನು ಬಾರಿಸುವುದು ಸಂಪ್ರದಾಯ ತಾಳ, ಮದ್ದಳೆ, ನಗಾರಿ, ದುಂದುಭಿ ಮುಂತಾದ ವಾದ್ಯಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ನಗಾರಿಯೂ ಇನ್ನಿತರ ಎಂಟು ವಾದ್ಯಗಳೂ ಸೇರಿ ನವಬತ್ತು ಅಥವಾ ನೌಬತ್ತು ಎಂದು ಕರೆಯುವದುಂಟು.

ಕಂಚು ಹಿತ್ತಾಳೆ ಸುವರ್ಣಮಯ ಕುಂದಣದ ಕೀಲುಸಾಲು ದೀವಿಗೆಗಳ
ಸಾಲು ದಿವಿಗೆಗಳೆ ಕಟ್ಟು ದೀವಿಗೆಗಳು
ಹಚ್ಚಿಟ್ಟು ತುಪ್ಪದ ದೀವಿಗೆಯ
ಬಗೆ ಬಗೆ ತುಂಬಿಟ್ಟ ಹಲಗಾರತಿ
ಸಾಲು ದೀವಿಗೆಯನ್ನು ಲಕ್ಷದೀವಿಗೆಯನ್ನು
ವಿಷ್ಣು ಮೂರುತಿಗೆ ನಾ ಕೈಯ ಮುಗಿಯುತಲಿದ್ದೆ

ಅನೇಕ ಬಗೆಯ ಲೋಹಗಳಿಂದ ತಯಾರಿಸಿದ ದೀವಿಗೆ (ದೀಪ)ಗಳನ್ನು ಪೂಜಾ ಸಮಯದಲ್ಲಿ ಬಳಸುತ್ತಾರೆ. ಸುವರ್ಣ(ಬಂಗಾರ)ದ ದೀವಿಗೆಯನ್ನು ಕೂಡ ಆಗಿನ ಸಮಯದಲ್ಲಿ ಬಳಸುತ್ತಿದ್ದರು ಎಂಬುದು ವಿಶೇಷ.

ಐದು ದಿನಸಿನ ಪರಮಾನ್ನವ ಮಾಡಿ
ಸಣ್ಣಕ್ಕಿ ಶಾಲ್ಯನ್ನ ಚಿತ್ರಾನ್ನ ದಧ್ಯನ್ನ
ಮೊಸರು ಅನ್ನವಮಾಡಿ ಮಥುರೆಯ ಕೃಷ್ಣ ನಿನಗೆ ಅರ್ಪಿತವೆಂದೆ

ಪರಮಾನ್ನವೆಂದರೆ ಪಾಯಸ ದಧ್ಯನ್ನವೆಂದರೆ ಮೊಸರನ್ನ(ದಧ್ಯೋದನ) ಮುಂತಾದ ವಿಧವಾದ ಆಹಾರ ಪದಾರ್ಥಗಳನ್ನು ನೈವೇದ್ಯಕ್ಕೆ ಬಳಸುತ್ತಿದ್ದರು. ಈ ಪದದಲ್ಲಿ ಸಾಂಪ್ರದಾಯಿಕವಾಗಿ ನಡೆಸುವ ಆರಾಧನೆಯ ವಿವರ ಗಳೆಲ್ಲವನ್ನೂ ನಿರೂಪಿಸಿದ್ದಾರೆ. ಇದರಲ್ಲಿ ಕಾಣಬರುವುದು ವೈಭವದ ಪೂಜೆ, ಆದರೆ ಪಲ್ಲವಿಯಿಲ್ಲಿ ದಾಸರು ಯಾಕೆನ್ನ ಎಬ್ಬಿಸಿದೆ, ಶ್ರೀ ಹರಿಯ ಧ್ಯಾನದೊಳಗಿದ್ದೆನೆ ಎಂದಿದ್ದಾರೆ. ಇದು ಒಂದು ಮಾನಸ ಪೂಜೆ ಹೊರಗಿನ ಪರಿಕರಗಳ ಮೇಲೆ ಅವಲಂಬಿಸದೆ ಮಾಡುವ ಅಂತರಂಗದ ಪೂಜೆ.

'ಅಮೃತಾನ್ನ' ಪ್ರತಿಮೆಯಲ್ಲಿ ವಿವಿಧ ತರಹದ ಅಡುಗೆಗಳನ್ನು ವಿವರಿಸಲಾಗಿದೆ. ತುಂಬ ಸಾಂಪ್ರದಾಯಿಕ ವಾದ ಅಡುಗೆಗಳು ಸಾಂಸ್ಕೃತಿಕ ಮಹತ್ವವನ್ನು ಬಿಂಬಿಸುತ್ತವೆ.

ಕೇಶವನೆಂಬ ನಾಮಕರಿದ ಹೂರಣ ಕಡುಬು
ವಾಸುದೇವನ ನಾಮ ವಡೆಶ್ಯಾವಿಗೆ
ಸಾಸಿರವೆಂಬ ನಾಮ ಶಾವಿಗೆ ಪರಮಾನ್ನ
ದೋಷದೂರನ ನಾಮ ಸೂಸಲ ಕಡುಬು ೨೧

. . . . . . . . . . . . . . . . . . . . . . . .
ಯಮಪತಿಯೆಂಬ ನಾಮ ಎಣ್ಣೋರಿಗೆ ರಾಶಿ
ಮಧುಸೂದನನೆಂಬ ನಾಮ ಮಂಡಿಗೆಯು
ಚದುರ ಗೋವಳನಾಮ ಚೆಲುವ ಬೀಸೂರಿಗೆ
ಪದುಮನಾಭ ನಿನ್ನ ನಾಮ ಪರಿಪರಿಯ ಭಕ್ಷ ೮। (೩೭)

ವಿದವಿಧವಾದ ಭಕ್ಷಗಳಿಂದ ಹೇಗೆ ಸಂತೋಷ ಸಿಗುವುದೋ ಹಾಗೆ ಹರಿನಾಮಸ್ಮರಣೆಯಿಂದ ಆನಂದ ದೊರಕುವುದು ಅದಕ್ಕಾಗಿ ಹರಿನಾಮಸ್ಮರಣೆಯನ್ನು ಅಮೃತ ಸಮಾನವಾದ ಅನ್ನವೆಂದು ಹೇಳಲಾಗಿದೆ.

ಮುತ್ತೈದೆಯಾಗಿರಬೇಕು ಮುದದಿಂದಲಿ ಪ।
ಗುರುವಿಂದ ಶಾಸ್ತ್ರವನು ಓದುವುದೇ ಮಾಂಗಲ್ಯ
ವೈರಾಗ್ಯವೆಂಬುದೆ ಒಪ್ಪುವ ಮೂಗುತಿ
ತಾರತಮ್ಯ ಜ್ಞಾನ ತಾಯಿತ್ತು ಮುತ್ತು ಸರ
ಕರುಣ ರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು ।೧।
. . . . . . . . . . . . . . . . . . . . . . .
ಪೊಡವಿಯೊಳು ಪರಹಿತದ ಪಟ್ಟವಾಳಿಯನುಟ್ಟು
ಕೊಡುವ ಧರ್ಮವೆಂಬ ಕುಬುಸ ತೊಟ್ಟು
. . . . . . . . . . . . . . . . . . . . . . . (೩೮)

ಕಟ್ಟಾಣಿ ಎಂಬುದು ಬೆಲೆ ಬಾಳುವ ಮುತ್ತಿನ ಸರ. ಪಟ್ಟವಾಳಿ ರೇಷ್ಮೇ ಸೀರೆ, ಮುತ್ತಿನ ಓಲೆ, ಜಡೆಬಿಲ್ಲೆ ಮುಂತಾದ ಆಭರಣಗಳಲ್ಲಿ ಆಧ್ಯಾತ್ಮ ವಿವರವನ್ನು ತಿಳಿಸುತ್ತಾ ಹರಿಕಥೆಯ ಕೇಳುತ್ತಾ ಮುತ್ತೈದೆಯಾಗಿರಬೇಕು ಎಂದಿದ್ದಾರೆ ದಾಸರು.

**ನಾಟಕಸ್ತ್ರೀ:** ಬೂಟಕತನದಲಿ ಬಹಳ ಭಕುತಿ ಮಾಡಿ
ಸಾಟಿಯಿಲ್ಲವು ಎನಗೆಂದೆನಿಸಿ
ನಾಟಕ ಸ್ತ್ರೀಯಂತೆ ಬಯಲ ಢಂಬವ ತೋರಿ
ಊಟಕೆ ಸಾಧನೆ ಮಾಡಿಕೊಂಬುದಿದು (೩೯)

ಹಿಂದೆ ನಾಟಕದಲ್ಲಿ ಸ್ತ್ರೀ ಪಾತ್ರವನ್ನು ಪುರುಷರೇ ಮಾಡುತ್ತಿದ್ದರು. ನಾಟಕ ಸ್ತ್ರೀಯ ನಟನೆ ಕೇವಲ ತಾತ್ಕೂರ್ತಿಕವಾಗಿರುತ್ತದೆ. ಅದು ನಿಜ ಜೀವನದಲ್ಲಿ ಭಿನ್ನವಾಗಿರುತ್ತದೆ. ಇಲ್ಲಿ ದಾಸರು ಢಾಂಬಿಕ ಭಕ್ತರನ್ನು ಕುರಿತು ತೀವ್ರವಾಗಿ ವಿಡಂಬಿಸಿದ್ದಾರೆ. ಕೇವಲ ತೋರಿಕೆಗಾಗಿ ನಸುಕಿನಲ್ಲೆದ್ದು ನದಿಯಲ್ಲಿ ಬಿದ್ದು ಗದಗದ ನಡುಗಿದರೆ ಅದು ನಿಜವಾದ ಭಕ್ತಿಯಾಗದೆಂದು ಹೇಳಿದ್ದಾರೆ.

**ಅಳಿಯ:** ಪ್ರತಿಮೆ ಮಾವನ ಮನೆಯಲ್ಲಿ ಅಳಿಯನ ಸ್ಥಾನ ವೇನೆಂಬುದನ್ನು ತಿಳಿಸುತ್ತದೆ.

ಹೆಣ್ಣು ಕೊಟ್ಟತ್ತೆ ಮಾವಂದಿರ ಮೆನೆಯಲ್ಲಿ
ಸೇರಿಯಿರುವರೇ ಎಲೆ ಮನುಜ ಪ।

ಬಂದ ಮೊದಲ ಇತ್ತ ಬನ್ನಿ ಕುಳ್ಳಿರೆಂದು ಬಲು ಉಪಚರಿಸುವರು
ಅಂದಿನ ಮರುದಿನ ಬಂದ ಸ್ನೇಹಿತರನ್ನ ಕಂಡಂತೆ ಕಾಣುವರೊ
ಬಂದ ಮೂವರಲ್ಲಿ ಪರದೇಶಿಯ ಕಂಡಂತೆ ಸಡ್ಡಮಾಡದೆ ಇಹರೊ

ಮುದದಿಂದ ನಾಲ್ಕು ದಿವಸ ಇದ್ದರೆ ಮಾನಭಂಗ ಮಾಡಿ ಮಾತಾಡುವರೋ ೧।
. . . . . . . . . . . . . . . . . . . . . . . . (೪೦)

ಅಳಿಯನು ಮಾವನ ಮನೆಯಲ್ಲಿ ಕೆಲವು ದಿನದ ಅತಿಥಿ ಮಾತ್ರ. ಹೆಚ್ಚು ದಿನ ಉಳಿದರೆ ಗೌರವ ಕಳೆದುಕೊಳ್ಳಬೇಕಾವುದು ಎಂಬುದನ್ನು ದಾಸರು ತಿಳಿಸುತ್ತಾರೆ. ಮೊದಲು ಕೆಲವು ದಿನ ಒಳ್ಳೆಯ ಉಪಚಾರ ಪಡೆದ ಅಳಿಯ ಹೆಚ್ಚುದಿನ ಉಳಿದರೆ 'ಅಷ್ಟಮಶನಿ' ಎಂದೆನಿಕೊಳ್ಳಬೇಕಾಗುತ್ತದೆ ಎಂದು ಹಾಸ್ಯವಾಗಿ ತಿಳಿಸುತ್ತಾರೆ. ದಾಸರ ಕಾಲದ ಸಾಧಾರಣ ಮಧ್ಯಮ ವರ್ಗದ ಸಾಮಾಜಿಕ ಚಿತ್ರವನ್ನು ಚಿತ್ರಿಸಿದ್ದಾರೆ ಎಂದರೆ ತಪ್ಪಾಗದು.

ದಾಸರ 'ವೈದಿಕ ಗಂಡ' ಪ್ರತಿಮೆಯ ಮೂಲಕ ಅಂದಿನ ಕಾಲದ ವೈದಿಕ ಮನೆತನದ ಚಿತ್ರಣವನ್ನು ಚಿತ್ರಿಸಿದ್ದಾರೆ.

ಒಲ್ಲೆನೆ ವೈದಿಕ ಗಂಡನ ನಾ
ನೆಲ್ಲಾದರು ನೀರು ಧುಮುಕುವೆನಮ್ಮ ಪ।

ಉಟ್ಟೆನೆಂದರೆ ಇಲ್ಲ ತೊಟ್ಟನೆಂದರೆ ಇಲ್ಲ
ಕೆಟ್ಟ ಸೀರೆಯ ನಾ ಉಡಲಾರೆನೆ
ಹಿಟ್ಟು ತೊಳಿಸಿ ಎನ್ನರಟ್ಟೆಲ್ಲ ನೊಂದವು
ಎಷ್ಟಂತ ಹೇಳಲಿ ಕಷ್ಟದ ಒಗೆತನ ೧।

ಕೃಷ್ಣಾಜಿನವನ್ನು ರೆಟ್ಟೇಲಿ ಹಾಕಿಕೊಂಡು
ಬೆಟ್ಟಲಿ ಗಿಂಡಿಯ ಹಿಡಿಹನೆ
ದಿಟ್ಟತನದಿ ನಾನೆದುರಿಗೆ ಹೋದರೆ
ದೃಷ್ಟಿಯಿಂದಲಿ ಎನ್ನ ನೋಡನಮ್ಮಮ್ಮ ೨।

ನಿನ್ನಾಣೆ ಹುಸಿಯಲ್ಲ ಬಿನ್ನಾಣ ಮಾತಲ್ಲ
ಕಣ್ಣು ಸನ್ನೆಯಂತು ಮೊದಲೇ ಇಲ್ಲ
ಮುನ್ನಿನ ಜನ್ಮದಲಿ ಪುರಂದರವಿಠಲನ
ಚೆನ್ನಾಗಿ ಪೂಜೆಯ ಮಾಡಲಿಲ್ಲಮ್ಮ ೩। (೪೧)

ಈ ಪದದಲ್ಲಿ ದಾಸರು ಅಂದಿನ ಕಾಲದ ವೈದಿಕ ಮನೆತನದ ಚಿತ್ರಣವನ್ನು ಚಿತ್ರಿಸಿದ್ದಾರೆ. ಜೊತೆಯಲ್ಲಿ ಹಾಸ್ಯದ ಚಟಾಕಿಯನ್ನು ಹಾರಿಸಿದ್ದಾರೆ. ಹೆಣ್ಣುಮಕ್ಕಳ ಮನೋಭಿಪ್ರಾಯವನ್ನು ಸೂಚ್ಯವಾಗಿ ತಿಳಿಸುತ್ತಾರೆ. ತಾತ್ವಿಕ ದೃಷ್ಟಿಯಿಂದ ಆಲೋಚಿಸಿದಾಗ ವೈದಿಕ ವೃತ್ತಿ ಎಷ್ಟು ಕಠಿಣ ಅದು ತಪಸ್ಸಿಗೆ ಹೇಗೆ ಸಾಧನ ಎಂಬುದನ್ನು ಪರ್ಯಾಯವಾಗಿ ವಿವರಿಸಿದ್ದಾರೆ.

**ಮುಪ್ಪಿನ ಗಂಡ:** ಮುಪ್ಪಿನ ಗಂಡನ ಒಲ್ಲೆನೆ
ತಪ್ಪದೆ ಪಡಿಪಾಟ ಪಡಿಲಾರೆನಮ್ಮ ಪ।

ಉದಯಲೇಳಬೇಕು ಉದಕ ಕಾಸಲು ಬೇಕು
ಹದನಾಗಿ ಬಜೆಯನು ಅರೆಗಿಡಬೇಕು
ಬದಿಯಲಿ ಎಲೆ ಅಡಿಕೆ ಕುಟ್ಟಡಬೇಕು

ಬಿದರ ಕೋಲು ತಂದು ಮುಂದಿಡಬೇಕು ೧।

ಪಿತ್ತ ವ್ರೋಕರಿಕೆ ಮುದುಕರಿಗೆ ವಿಶೇಷವು
ಹೊತ್ತು ಹೊತ್ತಿಗೆ ಚೊಲ್ಲ ಚೆಲ್ಲಬೇಕು
ಮೆತ್ತವವೆರಡು ಮುದ್ದಿಯ ಮಾಡಲುಬೇಕು
ಒತ್ತೊತ್ತಿ ಕೂಗಿ ಕರೆಯಲು ಬೇಕು ೨।

ಜಾಡಿ ಹಾಕಬೇಕು ನೋಡಿಬಾಡಬೇಕು
ಅಡಿಗಡಿಗೆ ಕಣ್ಣೀರ ಸುರಿಸಬೇಕು
ಒಡೆಯ ಶ್ರೀ ಪುರಂದರವಿಠಲನ ನೆನೆಯುತ
ಮಿಡಿಗೊಂಡು ಮೂಲೆಗೆ ಒರಗಬೇಕು ೩। (೪೨)

ಸಮಾಜದಲ್ಲಿ ಬಡವರನೇಕರು ವರದಕ್ಷಿಣೆ ಪಿಡುಗಿಗೆ ತತ್ತರಿಸಿ ಹೋಗಿದ್ದಾರೆ. ವರದಕ್ಷಿಣೆಯನ್ನು ಕೊಡಲು ಶಕ್ತಿಯಿಲ್ಲದೆ ಒದ್ದಾಡುತ್ತಿದ್ದಾರೆ. ಅಂಥವರು ತಮ್ಮ ಬಡತನವನ್ನು ನೀಗಿಸಿಕೊಳ್ಳಲು ಶ್ರೀಮಂತರನ್ನು ನೋಡಿ ವರ ಮುದುಕನಾಗಿದ್ದರೂ ಕನ್ಯೆಯನ್ನು ಕೊಡುವದುಂಟು. ಅಂತಹ ಒಂದು ದೃಶ್ಯವನ್ನು ದಾಸರು ಬಹುಶಃ ಕಂಡಿರಬೇಕು. ಮುಪ್ಪಿನ ಗಂಡನನ್ನು ಕಟ್ಟಿಕೊಂಡ ತರುಣಿಯ ಅವಸ್ಥೆಯನ್ನು ಅರಿತು ಈ ಪದವನ್ನು ರಚಿಸಿದ್ದಾರೆ. ಮುಪ್ಪಿನಾವಸ್ಥೆಯ ಸ್ತಬ್ದಚಿತ್ರ ಇದರಲ್ಲಿ ಮೂಡಿಬಂದಿದೆ. ಸಮಾಜದ ವಿಡಂಬನೆಯೂ ಎದ್ದು ಕಾಣುತ್ತದೆ.

'ವೈದ್ಯ' ಪ್ರತಿಮೆಯು ಆಯುರ್ವೇದ ಶಾಸ್ತ್ರದಲ್ಲಿ ಬರುವ ಮಾತ್ರೆಗಳ ಹೆಸರನ್ನು ಸೂಚಿಸುತ್ತದೆ. ದೇಶೀ ರಚನೆಗಳು ಇಂದೂ ಜನರ ಮಾತಿನಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸದೊಡನೆ ಬಳಕೆಯಲ್ಲಿರುವುದು ತೋರಿಬರುತ್ತದೆ. ಉಪಮೆ, ರೂಪಕಗಳು, ಲೋಕನಾನುಭವ ಆಧ್ಯಾತ್ಮಿಕ ವಿಷಯಗಳನ್ನು ಹೇಳುವ ಪ್ರತಿಮೆಗಳು ಪುರಂದರದಾಸರ ಕೀರ್ತನೆಗಳಿಗೆ ಅನನ್ಯತೆಯನ್ನು, ಬೆಲೆಯನ್ನೂ ತಂದು ಕೊಟ್ಟಿವೆ.

ದಾಸರ ಕೀರ್ತನೆಗಳಲ್ಲಿ ಭಕ್ತಿ ಪ್ರತಿಪಾದನೆ ಅಷ್ಟೇ ಅಲ್ಲ ತಮ್ಮ ಸುತ್ತಲಿನ ಬದುಕನ್ನು, ಪರಿಸರವನ್ನು ಹಸನಾಗಿಸುವ ಕಾಳಜಿಯಿದೆ, ಸಾಮಾಜಿಕ ಹೊಣೆಗಾರಿಕೆಯಿದೆ. ಕೀರ್ತನೆಗಳಲ್ಲಿ ಲೌಖಿಕ ಬದುಕನ್ನು ಉತ್ತಮಿಸಿಕೊಂಡು ಮನುಷ್ಯ ಪ್ರೇಮವನ್ನು ಬೆಳೆಸಿಕೊಳ್ಳುವ ಬದುಕಿನ ಸವಾಲುಗಳನ್ನು ಎದುರಿಸುವ ಮನುಷ್ಯರನ್ನು ಸಮಾಜೀಕರಿಸುವ ಅಂಶಗಳು ಪರಿಣಾಮಕಾರಿಯಾಗಿ ಮೂಡಿ ಬಂದಿವೆ. ದಾಸರ ಚಿಂತನಾಕ್ರಮ ಜನಪರವಾದ ಅವರ ಸಾಂಸ್ಕೃತಿಕ ನಿರ್ವಚನ ಕೀರ್ತನೆಗಳಲ್ಲಿ ಸೊಗಸಾಗಿ ಮೂಡಿಬಂದಿದೆ.

## -: ಕೊನೆ ಟಿಪ್ಪಣಿಗಳು :-

ಅ) ದಾಸ ಸಾಹಿತ್ಯ ಶಬ್ದ ಶಿಲ್ಪ ; ಡಾ: ಎಸ್.ಎಸ್.ಅಂಗಡಿ ಪು-೮೧

ಆ) ಪುರಂದರದಾಸರ ಪದಗಳಲ್ಲಿ ಸಾಹಿತ್ಯ ವಿಮರ್ಶೆ;ಅ.ರಾ ಮಿತ್ರ ಪು-೮೩

ಈ ಅಧ್ಯಾಯದಲ್ಲಿ ಬರುವ ೧-೪೨ ಕೀರ್ತನೆಗಳನ್ನು ಪುರಂದರ ಸಾಹಿತ್ಯ ದರ್ಶನ;ಸಂಪುಟ ೧, ೨, ೩, ೪ ರಿಂದ ಆಯ್ದುಕೊಳ್ಳಲಾಗಿದೆ: ಸಂಪಾದಕರು: ಪ್ರೊ.ಸಾ.ಕೃರಾಮಚಂದ್ರರಾವ್

# ಅಧ್ಯಾಯ ೯

# ಸಮಾರೋಪ

ಕರ್ನಾಟಕದ ಸಾಂಸ್ಕೃತಿಕ, ಸಾಹಿತ್ಯಕ ಚರಿತ್ರೆಯನ್ನು ಅವಲೋಕಿಸಿದಾಗ ಶಿವರಶರಣ ಹಾಗೂ ಹರಿದಾಸ ಎರಡು ಜನಮುಖಿ ಆಂದೋಲನಗಳು ಮಹತ್ವವಾದ ಸ್ಥಾನವನ್ನು ಪಡೆಯುತ್ತವೆ. ಶಿವ ಶರಣರು ಹಾಗೂ ಹರಿದಾಸರು ಬರೀ ಹರ-ಹರಿ ಭಕ್ತಿಯ ಪ್ರತಿಪಾದನೆಯನ್ನೆಷ್ಟೇ ಮಾಡಿಲ್ಲ, ಧರ್ಮಪ್ರಚಾರ ಹಾಗೂ ಸಮಾಜ ಸುಧಾರಣೆಯನ್ನು ಸಮಾಜದಲ್ಲಿ ಪ್ರತಿಬಿಂಬಿಸಿ ಜನಸಾಮಾನ್ಯರ ಅನುಕೂಲಕ್ಕಾಗಿ ಸಂಸ್ಕೃತಕ್ಕೆ ಬದಲಾಗಿ ಜನಭಾಷೆ ಕನ್ನಡದಲ್ಲಿ ತಮ್ಮ ಕೃತಿಗಳನ್ನು ರಚಿಸಿ, ತತ್ವ ಶಾಸ್ತ್ರವೆಂಬ ಕೋಣೆಯಲ್ಲಿ ಕೂಡಿ ಹಾಕಿದ್ದ ಧರ್ಮಕ್ಕೆ ಭಕ್ತಿಯ ಅನುಸಂಧಾನವೆಂಬ ಸುಲಭದ ದಾರಿ ತೋರಿದರು.

ಕನ್ನಡ ನಾಡಿನಲ್ಲಿ ಏಳುನೂರು ವರ್ಷಗಳ ಹಿಂದೆ ಸಣ್ಣದಾಗಿ ತನ್ನ ಕಾರ್ಯ ಆರಂಭಸಿದ ಹರಿದಾಸ ಪಂಥ ಪುರಂದರದಾಸರ ಕಾಲದಲ್ಲಿ ದೇಶವೆಲ್ಲಾ ಹಬ್ಬಿತು. ಕಾಲಕ್ರಮದಲ್ಲಿ ದೇಶದ ವಿವಿಧ ಭಾಗಗಳಲ್ಲಿ ಹರಡಿ ನಾಡಿನ ಸಂಸ್ಕೃತಿ ಸಾಗರದಲ್ಲಿ ಸೇರಿಕೊಂಡಿತು.

ಪುರಂದರದಾಸರ ಪ್ರತಿಮಾಲೋಕ ಎಂಬ ವಿಷಯವನ್ನು ಕುರಿತು ಅಭ್ಯಾಸ ಮಾಡುವಾಗ ಪುರಂದರದಾಸರ ಚಿಂತನೆ, ಜ್ಞಾನ ಹಾಗೂ ಅನುಭವದ ಗರಡಿಯಲ್ಲಿ ಮೂಡಿನಿಂತ ಪ್ರತಿಮಾರೂಪದ ಭಾವಸಂವಹನೆ ಪ್ರಮುಖ ಸ್ಥಾನ ಪಡೆಯುತ್ತದೆ. ಸಾಹಿತ್ಯ ತತ್ವಶಾಸ್ತ್ರಗಳೆರಡನ್ನು ಒಳಗೊಂಡಿರುವ ದಾಸರ ಕೃತಿಗಳಲ್ಲಿ ಇಹ-ಪರಗಳೆರಡನ್ನು ಸಮನ್ವಯ ದೃಷ್ಟಿಯಲ್ಲಿ ನೋಡುವ ಧೋರಣೆ ಕಂಡುಬರುತ್ತದೆ. ಒಬ್ಬ ವಿಜ್ಞಾನಿಯು ಸಂಶೋಧಿಸಿದ ಹೊಸ ಸಂಶೋಧನೆಯಿಂದ ಇಡೀ ಲೋಕಕ್ಕೆ ಉಪಕಾರವಾಗುವಂತೆ ಪುರಂದರದಾಸರಂಥಹ ಸಾಧಕರ ಕೃತಿಗಳ ಅಧ್ಯಯನದಿಂದ ಸಾಮಾನ್ಯ ಜನರ ಸಾಂಸ್ಕೃತಿಕ, ಸಾಮಾಜಿಕ, ಆಧ್ಯಾತ್ಮಿಕ ಜೀವನಕ್ಕೆ ಹೊಸ ಮಾರ್ಗವು ತೆರೆದುಕೊಳ್ಳುತ್ತವಲ್ಲದೆ ಜನಜೀವನದಲ್ಲಿ ಶಾಂತಿ-ಸಮಾಧಾನಗಳು ನೆಲೆಸಲು ಕಾರಣವಾಗುತ್ತವೆ.

ಪುರಂದರದಾಸರ ಪ್ರತಿಮಾಲೋಕ ಎಂಬ ಈ ಸಂಶೋಧನಾ ಪ್ರಬಂಧದ ಉದ್ದೇಶ, ಪುರಂದರದಾಸರ ಕೀರ್ತನೆಗಳಲ್ಲಿ ಬರುವ ಹಲವಾರು ಪ್ರತಿಮೆಗಳು ಮೂರ್ತಗೊಳಿಸುವ ಅಪಾರ ಅರ್ಥ ವೈವಿಧ್ಯತೆಯನ್ನು ವಿಸ್ತಾರವಾಗಿ ಅಭ್ಯಸಿಸುವುದಾಗಿದೆ. ಹರಿದಾಸ ಸಾಹಿತ್ಯದಲ್ಲಿ ಪ್ರತಿಮೆಗಳ ಬಗ್ಗೆ ಇದುವರೆಗೆ ಅಧ್ಯನವಾಗದ್ದರಿಂದ ಪ್ರತಿಮೆಗಳ ಸ್ವರೂಪ ಲಕ್ಷಣವನ್ನು ತಿಳಿಸುವ ಈ ಪ್ರಬಂಧವು ಜ್ಞಾನದ ದಿಗಂತವನ್ನು ವಿಸ್ತರಿಸುವುದರಲ್ಲಿ ಸಂಶಯವಿಲ್ಲ. ಇದುವರೆಗೆ ಪುರಂದರದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಬಗ್ಗೆ ತುಂಬಾ ಕೆಲಸ ಆಗಿದೆ. ಈ ಪ್ರಬಂಧದಲ್ಲಿ ಸಸ್ಯಪ್ರತಿಮೆಗಳು, ಪ್ರಾಣಿಪ್ರತಿಮೆಗಳು, ಸಾಮಾಜಿಕ ಹಾಗೂ ಆಧ್ಯಾತ್ಮಿಕ ಪ್ರತಿಮೆಗಳು ಬಿಂಬಿಸುವ ವಿಷಯಗಳು ಇದುವರೆಗೆ ಆದ ಶೋಧನೆಗೆ ಹೊಸ ಆಯಾಮವನ್ನೊದಗಿಸುತ್ತದೆ.

ಕವಿಯು ಒಂದು ವಿಶೇಷವಾದ ವಿಷಯವನ್ನು ತನ್ನ ಅನುಭವವನ್ನು, ನೀತಿಯನ್ನು ಹಾಗೂ ಧಾರ್ಮಿಕ ಮೌಲ್ಯಗಳನ್ನು ತಿಳಿಸುವಾಗ ಪ್ರತಿಮೆಗಳನ್ನು ಪ್ರಮುಖವಾಗಿ ಬಳಸುತ್ತಾನೆ. ಪ್ರತಿಮೆಯಲ್ಲಿ ಸಂಕೇತಗಳು ಕೇವಲ

ಸಾಂಪ್ರದಾಯಿಕ ಸಂಕೇತವಾಗಿರದೆ ಕವಿಯ ತೀವ್ರಾನುಭವ, ಭಾವಗಳಿಂದ ಸಹಯೋಗಗೊಂಡರುತ್ತವೆ. ಧ್ವನಿಪೂರ್ಣವಾದ ಇಂತಹ ಉಕ್ತಿ ವಿಶೇಷಗಳು ಸಂಕ್ಷಿಪ್ತ ರೂಪದಲ್ಲಿ ಅಂತರದರ್ಶನ ಮೂಡಿಸುತ್ತವೆ. ಕವಿಯ ಅಭಿವ್ಯಕ್ತಿಯ ಕ್ರಿಯೆಯನ್ನು ಗಮನಿಸುವುದಾದರೆ ಕವಿಯು ತನ್ನ ಅಮೂರ್ತವಾದ ಭಾವಗಳಿಗೆ ಅಭಿವ್ಯಕ್ತಿಯನ್ನು ಕೊಡುವಾಗ ಆತ ಮೂರ್ತಪ್ರಪಂಚದ ಚಿತ್ರಗಳು, ಚಿನ್ಹೆ, ಸಂಕೇತಗಳು, ಪ್ರತೀಕ ರೂಪಕ ಹಾಗೂ ಉಪಮೆಗಳನ್ನು ಆಶ್ರಯಿಸುತ್ತಾನೆ.  ಪ್ರತಿಮೆಯು ಚಿನ್ಹೆ, ಸಂಕೇತ, ಪ್ರತೀಕ, ಉಪಮೆ, ರೂಪಕಗಳನ್ನು ಒಳಗೊಂಡಿರಬಹುದು ಅಥವಾ ಇವೆಲ್ಲ ಇಲ್ಲದೆಯೂ ಕೂಡ ಸಂಭವಿಸಬಹುದು. ಅಂತಹ ಪ್ರತಿಮೆಗಳ ಅರ್ಥವೈವಿಧ್ಯತೆಯನ್ನು ವಿವರವಾಗಿ ತಿಳಿಸುವುದು ಈ ಸಂಶೋಧನೆಯ ಮೂಲಭೂತವಾದ ಅಂಶವಾಗಿದೆ ಹಾಗೂ ಈ ಸಂಶೋಧನೆಯು ಮುಂದೆ ಬೇರೆ ಬೇರೆ ದಾಸರ ಕೃತಿಗಳಲ್ಲಿ ಪ್ರತಿಮೆಗಳನ್ನು ಅಭ್ಯಸಿಸಲು ಉತ್ಸಾಹ ಮೂಡಿಸುವುದು ಎಂಬುದು ಸಂಶೋಧಕರ ಅಭಿಪ್ರಾಯ.

ಪ್ರತಿಮೆ ಒಂದು ಕಾವ್ಯವಿಧಾನ, ಚಿಂತನೆ–ವಿಚಾರಗಳು ಅನುಭವಗಳದು ಒಂದು ಅಮೂರ್ತ ಲೋಕ. ಈ ಲೋಕದ ಮೇರೆಯನ್ನು ತಿರ್ಮಾನಿಸುವುದು ಕಷ್ಟದ ಕೆಲಸ, ಅಲ್ಲದೆ ಸ್ವರೂಪ ವೈವಿಧ್ಯಕ್ಕೆ ಎಲ್ಲೆಕಟ್ಟುಗಳಿಲ್ಲ. ಇಂತಹ ಅನುಭವವನ್ನು ಪ್ರತಿಮಾ ಪ್ರಕ್ರಿಯೆಯ ಅರಿವು ಮತ್ತು ಆಶಯಗಳೆಲ್ಲ ಮಾರ್ಪುಗೊಳಿಸಿ, ವಿಶಿಷ್ಟ ಭಾಷೆಯ ಅರ್ಥವಿಧಾನ ಮತ್ತು ಶಬ್ದಸಂವಿಧಾನಗಳಲ್ಲಿ ತರ್ಜುಮೆಗೊಳಿಸುತ್ತದೆ.

ಪುರಂದರದಾಸರ ಕೀರ್ತನೆಗಳಲ್ಲಿ ಕಂಡುಬರುವ ಪ್ರತಿಮೆಗಳ ಮೌಲ್ಯಗಳನ್ನು ಸಾಧಾರಣ ಎಂದು ಹೇಳಲಾಗದು. ಏಕೆಂದರೆ ಪ್ರತಿಮೆಗಳು ಉಪಮೆ–ರೂಪಕದಂತೆ ಸಾದೃಶ್ಯವನ್ನು ಮಾತ್ರ ಹೇಳದೆ ಮೌಲ್ಯಭರಿತ ವಿವರಣೆಗಳಿಂದ ಬರೀಯ ಅಲಂಕಾರವಾಗದೆ ಭಾವನೆಯ ಪಿಂಡವಾಗಿ ಕಾವ್ಯದ ಚಿಂತನೆಯ ಸಾಮರ್ಥದಂತೆ ಮಹತ್ತನ್ನು ಪಡೆಯುತ್ತವೆ.  ಪ್ರತಿಮೆಗಳಲ್ಲಿ ಅಮೂರ್ತಕ್ಕೆ ಮೂರ್ತತೆಯನ್ನು ತಂದುಕೊಡುವ ಸಂಜೀವಿನಿ ಶಕ್ತಿ ಇದೆಯೆಂದರೆ ಉತ್ಪ್ರೇಕ್ಷೆಯಾಗಲಾರದು. ಪ್ರತಿಮೆಗಳ ಧ್ವನಿ ಸಾಮರ್ಥ್ಯ ಕವಿಯ ಭಾವನೆಯನ್ನು ಓದುಗನ ಹೃದಯದಲ್ಲಿ ಪುನರ್ನಿಮಿಸುವುದರಿಂದ ಅವುಗಳಿಗೆ ಸಫಲತೆ, ಹಿರಿಮೆಯ ಸೊಬಗು ಮೂಡಿಬರುತ್ತದೆ. ಸಂಕ್ಷಿಪ್ತತೆ ನವೀನತೆ, ಅಂತರ್‌ದರ್ಶನ, ತೀವ್ರತೆ ಹಾಗೂ ಜಾಗ್ರತಿ ಶಕ್ತಿಗಳು ಪ್ರತಿಮಾ ಲಕ್ಷಣಗಳಾಗಿವೆ.

ಪುರಂದರದಾಸರ ಕೀರ್ತನೆ, ಪದ, ಸುಳಾದಿ, ಉಗಾಭೋಗಗಳಲ್ಲಿ ಪ್ರತಿಮೆಗಳು ಪಲ್ಲವಿಯಲ್ಲಿ ಮೈದಳೆದು ಮುಂದೆ ನುಡಿಗಳಲ್ಲಿ ಅಖಂಡವಾದ ಅನುಭವಗಳು, ನೀತಿಸಂಹಿತೆಗಳಿಂದ ಕೂಡಿ ಬೇರೆ ಬೇರೆ ಮಜಲುಗಳಲ್ಲಿ ಮಾರ್ಪುಗೊಳ್ಳುತ್ತ ತನ್ನ ಉದ್ದೇಶವಾದ ಅಂತಃ ಪ್ರಜ್ಞೆಯನ್ನು ಬಹಿಃ ಪ್ರಜ್ಞೆಯಾಗಿ ಪ್ರಕಾಶಗೊಳಿ ಸುವುದು ಇದೊಂದು ಅದ್ಭುತವಾದ ಪರಿಣಾಮಕಾರಿ ಕ್ರಮವಾಗಿದೆ.

ಪುರಂದರದಾಸರ ಕೃತಿಗಳಲ್ಲಿ ಕಂಡುಬರುವ ಪ್ರಾಣಿಪ್ರತಿಮೆಗಳ ಮಹತ್ವವು ಅವು ಮೂರ್ತ ಗೊಳಿಸುವ ವಿಷಯಗಳಲ್ಲಿ ಅಡಗಿದೆ. ಪ್ರಾಣಿಪ್ರತಿಮೆಗಳು ಮನುಷ್ಯನಲ್ಲಿ ಕಂಡುಬರುವ ಪ್ರಾಣಿತನಗಳು, ಅಜ್ಞಾನ, ಅಸಹಾಯಕತೆ, ಅರಿವು ಹೀನತೆಗಳೊಂದಿಗೆ, ಅಹಂಕಾರ ಮತ್ತು  ಚಂಚಲತೆಗಳನ್ನು ಬಿಂಬಿಸುತ್ತವೆ. ಇಲ್ಲಿ ಮನುಷ್ಯನ ವರ್ತನೆಗಳು ಹಾಗೂ ಪ್ರಾಪಂಚಿಕ ಸಂಸಾರದ ಮಿಥ್ಯಾಕರ್ಷಣೆಯನ್ನು ಪ್ರಾಣಿರೂಪಕಗಳಲ್ಲಿ

ಸಂಕೇತಗೊಳಿಸಲಾಗಿದೆ. ಆನೆ ಬ್ರಹತ್ತತೆಗೆ ಅಹಂಕಾರಕ್ಕೆ ಸಂಕೇತವಾದರೆ, ಕತ್ತೆ ಅಜ್ಞಾನಕ್ಕೆ, ಕಪಿ ಚಂಚಲತೆಗೆ, ಎತ್ತು ಗುರಿಯಿಲ್ಲದ ದುಡಿತಕ್ಕೆ, ಶ್ವಾನವು ಕೀಳು ಸ್ವಭಾವಕ್ಕೆ ಸಂಕೇತವಾಗುತ್ತದೆ. ಕುರುಡುನಾಯಿ ಹಿಂದು ಮುಂದು ತಿಳಿಯದೆ ಸಿಕ್ಕಲ್ಲಿ ನುಗ್ಗುವ ಅಜ್ಞಾನ ಮನಸ್ಸನ್ನು ಪ್ರತಿನಿಧಿಸುತ್ತದೆ. ಒಟ್ಟಿನಲ್ಲಿ ಪ್ರಾಣಿಪ್ರತಿಮೆಗಳ ಆಶಯ ಮಾನವೀಯತೆಯನ್ನು ಎತ್ತಿಹಿಡಿಯುವುದಾಗಿದೆ.

ಸೈದ್ಧಾಂತಿಕವಾಗಿ ಬದ್ಧವಾದ ಯಾವುದೇ ಸಾಹಿತ್ಯದಂತೆ ಕೀರ್ತನ ಸಾಹಿತ್ಯದ ಪ್ರತಿಮೆಗಳೂ ಕೂಡ ತನ್ನ ಅಭಿವ್ಯಕ್ತಿಯಲ್ಲಿ ಅಮೂರ್ತತೆಯನ್ನು ಮೂರ್ತವಾಗಿಸುವ ಉದ್ದೇಶವನ್ನು ಹೊಂದಿರುತ್ತವೆ. ಅನುಭವ ವನ್ನು ಸರಳವಾಗಿ ತಿಳಿಸಲು ಅನೇಕ ಸಿದ್ಧ ಉಪಮೆಗಳನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳುವ ಕ್ರಮವು ಪ್ರಾಣಿ ಪ್ರತಿಮೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. 'ಇಲಿ' ಪ್ರತಿಮೆಯು ಮನಸ್ಸಿನ ಚಂಚಲತೆಯನ್ನು ಸಂಕೇತಿಸಿ ದರೆ, 'ಗಾಣದೆತ್ತು' ಪ್ರತಿಮೆ ಸಂಸಾರದ ನೊಗ ಹೊತ್ತ ಯಜಮಾನನ್ನು ಸಂಕೇತಿಸುತ್ತದೆ.

ಯಾವುದೇ ಒಂದು ವಿಚಾರ ಜನಪರ ಆಶಯವನ್ನೊಳಗೊಂಡಿದ್ದರೆ ಸಾಮಾಜಿಕ ಕಳಕಳಿಯಿಂದ ಕೂಡಿದ್ದರೆ ಅಂತಹದು ಮಾತ್ರ ನಿಜವಾದ ಅರ್ಥದಲ್ಲಿ ಜನಹಿತವನ್ನು ಬಯಸುವ ಸಂದೇಶವನ್ನು ಜನಸಮು ದಾಯಕ್ಕೆ ನೀಡುತ್ತದೆ. ಪುರಂದರದಾಸರೂ ಕೂಡ ತಮ್ಮ ಕೃತಿಗಳ ಮೂಲಕ ಸಾಮಾಜಿಕ ಸ್ವಾಸ್ಥ್ಯವನ್ನು ಸ್ಥಾಪಿಸುವ ಜಾತಿ–ಜಾತಿಗಳ ನಡುವಿನ ಅಸಮಾಧಾನವನ್ನು ಕಳೆಯುವ ನಾಗರಿಕರನ್ನು ನೀತಿವಂತರನ್ನಾಗಿ ಮಾಡುವ ಪ್ರಯತ್ನ ಮಾಡಿದರು ಅದಕ್ಕೆ ಅವರು ರಚಿಸಿದ ನಮಗೆ ಸಿಕ್ಕ ಎಂಬತ್ತಕ್ಕಿಂತ ಹೆಚ್ಚಿನ ಸಾಮಾಜಿಕ ಪ್ರತಿಮೆಗಳೇ ಸಾಕ್ಷಿ.

ಹರಿಭಕ್ತಿ ಮತ್ತು ಭಾಗವತಧರ್ಮದ ಪ್ರಸಾರವೇ ದಾಸರಿಗೆ ಮುಖ್ಯವಾದುದು. ಆದರೆ ನಿಜವಾಗಿ ಹೇಳುವುದಾದರೆ, ಪುರಂದರದಾಸರು ಲೌಕಿಕ ಜೀವನದಲ್ಲಿ ಇದ್ದುಕೊಂಡೇ ಹರಿಯ ಕೃಪಾಕಟಾಕ್ಷಕ್ಕೆ ಪಾತ್ರರಾ ದವರು. ಅವರು ಜಾತಿ–ಜಾತಿಗಳ ನಡುವಿನ ಅಸಮಾಧಾನವನ್ನು ಕಳೆಯಲು ನಾಗರಿಕರನ್ನು ನೀತಿ ವಂತರನ್ನಾಗಿ ಮಾಡಲು ಮತ್ತು ಅನೇಕ ರೀತಿಯಲ್ಲಿ ಸಾಮಾಜಿಕ ಸ್ವಾಸ್ಥವನ್ನು ಕಾಪಾಡಲು ಪ್ರಯತ್ನಿಸಿ ದರು. ಅವರು ದೇಶದಲ್ಲೆಲ್ಲಾ ಕಾಲಿಗೆ ಗೆಜ್ಜೆ ಕಟ್ಟಿ, ಕೈಯಲ್ಲಿ ತಾಳ ತಂಬೂರಿ ಪಿಡಿದು ತಮ್ಮ ಸಂದೇಶವನ್ನು ಸಂವಹನ ಮಾಡಲು ಹೆಣಗಾಡಿದರು.

ಒಂದು ರಾಷ್ಟ್ರ ಎಂದರೆ ಒಂದು ಜನತೆ. ಜನತೆ ಬದಲಾವಣೆಗಾಗಿ ತುಡಿಯುವುದು ಸಹಜ ಪ್ರಕ್ರಿಯೆಯಾಗಿದೆ. ಶಿಷ್ಠತೆ, ಆಚಾರ–ವಿಚಾರಗಳು, ಉಡುಗೆ ತೊಡುಗೆಗಳಲ್ಲಿ ಬದಲಾವಣೆಯಾದರೆ ಅವುಗಳು ಅಷ್ಟೊಂದು ಮಾರಕವೆನಿಸುವುದಿಲ್ಲ. ಆದರೆ ಜೀವನದ ಧ್ಯೇಯವನ್ನು ಮರೆಯುವುದು ಮೌಲ್ಯಗಳನ್ನು ಕಡೆಗಣಿ ಸುವುದು ಆದರೆ ಅಲ್ಲಿ ಸಮಾಜದ ಸ್ವಾಸ್ಥವು ಸೋಲಿನ ದಾರಿಗೆ ಬೀಳುವುದು ಅದಕ್ಕಾಗಿ ದಾಸರು ನೀತಿಯ ಸಂದೇಶವನ್ನು ಕೆಲವು ಪ್ರತಿಮೆಗಳ ಮೂಲಕ ಜನರಿಗೆ ಮನದಟ್ಟು ಮಾಡುವ ಪ್ರಯಾಸವನ್ನು ಮಾಡಿದರು.

ಅಲ್ಲದ ಕರ್ಮವ ಆಚರಿಸಿದವ ಕೆಟ್ಟ
ಲಿಲ್ಲೆ ಮಾತಿನ ಸತಿಯ ನಂಬಿದವ ಕೆಟ್ಟ
ಎಲ್ಲರೊಳಗೆ ವಿರೋಧಿಸಿದವ ಕೆಟ್ಟ
ಬಲ್ಲಿದವರೊಡನೆ ಸೆಣಸಾಡುವವ ಕೆಟ್ಟ
ಫುಲ್ಲನಾಭ ಶ್ರೀ ಪುರಂದರವಿಠಲನ

ಮೆಲ್ಲಡಿಗಳನು ನಂಬದವನು ಕೆಟ್ಟ ನರಗೇಡಿ.

ಕೆಡಕು ಎಂಬ ಭಾವ ಪ್ರತಿಮೆ ನೀತಿಯ ಸಂದೇಶವನ್ನು ಎಲ್ಲರಿಗೂ ನಿಡುತ್ತದೆ. ಸಮಾಜದಲ್ಲಿ ವಿವಿಧ ಮತಗಳ ನಡುವೆ ಸಾಮರಸ್ಯವಿದ್ದರೆ ಅದು ಮಾದರಿಸಮಾಜವಾಗುತ್ತದೆ ಎಂದು ಅವರು ನಂಬಿದ್ದರು ಅದಕ್ಕಾಗಿ

ಜಂಗಮರು ನಾವು ಜಗದೊಳು ಪ।

ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರು ಭವಿಗಳೆಂತೆಂಬರಿ

ಎಂದಿದ್ದಾರೆ.

ತುರುಕರು ಕರೆದರೆ ಉಣಬಹುದಣ್ಣ ಪ।
ತುರುಕರು ಕರೆದರೆ ಅತಿ ಪುಣ್ಯವಯ್ಯ

ಎಂಬಲ್ಲಿ ಶ್ಲೇಷಾರ್ಥವು ಮೂಡಿ ಬರುತ್ತದೆ. ತುರುಕರೆಂದರೆ ಮುಸಲ್ಮಾನರು, ತುರುಕರು ಎಂದರೆ ಹಸು–ಕರು ಎಂಬ ಅರ್ಥವೂ ಮೂಡುತ್ತವೆ. ಮುಸಲ್ಮಾನರನ್ನು ಶುದ್ಧರೆಂದು ಹೊಗಳಿ ಜಾತಿ–ಜಾತಿಗಳ ನಡುವಿನ ದ್ವೇಷವನ್ನು ಅಳಿಸಿ ಪ್ರೀತಿಯನ್ನು ಬೆಳೆಸಲು ದಾಸರು ಪ್ರಯತ್ನಿಸಿದ್ದಾರೆ. ಜಾತಿಯತೆಯಡಿ ಮೈಲಿಗೆಗಳ ವಿಚಾರದಲ್ಲಿ ಪುರುಂದರದಾಸರ ದೃಷ್ಟಿ ಬಹು ಉದಾರವಾಗಿದೆ. ಹೊಲೆಯ ಪ್ರತಿಮೆಯ ಮಾನವನು ಶ್ರೇಷ್ಠನಾಗುವುದು ಜನ್ಮದಿಂದಲ್ಲ ಗುಣಕರ್ಮಗಳಿಂದ ಎಂಬುದನ್ನು ಸ್ಪಷ್ಟಪಡಿಸುತ್ತದೆ. ನಾರಿ ಪ್ರತಿಮೆಯು ದಾಸರ ಕಾಲದ ವಿಧವಾಸ್ತ್ರೀಯರ ಪರಿಸ್ಥಿತಿಯನ್ನು ವಿವರಿಸುತ್ತದೆ.

ಸಮಾಜವು ಕಾಲದೊಂದಿಗೆ ಬದಲಾಗುತ್ತದೆ ಅದರೆಂತೆ ಕೆಲವು ವಿಚಾರಧಾರೆಗಳೂ ಕೂಡ ಬದಲಾಗುತ್ತವೆ. ಆದರೆ ಸತ್ಯ, ನ್ಯಾಯ, ನಿಷ್ಠೆ, ಧರ್ಮ, ಜ್ಞಾನ, ಭಕ್ತಿ, ವೈರಾಗ್ಯಗಳಂತಹ ಮೌಲ್ಯಗಳು ಸಾರ್ವಕಾಲಿಕ ಮೌಲ್ಯಗಳು. ಅಂತಹ ಮೌಲ್ಯಗಳ ಸಂಪತ್ತು ದಾಸರ ಕೀರ್ತನೆಗಳಲ್ಲಿರುವಾಗ ಅವುಗಳು ಸಮಾಜದ ವೈವಿಧ್ಯಕ್ಕೆ ಅಡ್ಡಿ ಬರುವುದಿಲ್ಲ. ಸತ್ಯದ ಶಿಖರವನ್ನು ಸ್ವಾನುಭವದಲ್ಲಿ ಕಂಡರೂ ಜನರಿಗೆ ಅದನ್ನು ತೋರಿಸಲು ಅದರ ಸೌಂದರ್ಯವನ್ನು ವಿವರಿಸಲು ಕೆಲವು ಹೋಲಿಕೆ ದೃಷ್ಟಾಂತಗಳನ್ನು ಆಶ್ರಯಿಸ ಬೇಕಾಗುತ್ತದೆ. ಹಾಗಾಗಿ ದುಗ್ಗಾಣಿ ನಾಯಕ, ನಾಟಕ ಸ್ತ್ರೀ ಮುಂತಾದ ಸಾಮಾಜಿಕ ಪ್ರತಿಮೆಗಳು ಕವಿಯ ಅನುಭವವನ್ನು ಅಭಿವ್ಯಕ್ತಿಸುವಾಗ ಮೂಡಿದ ಪ್ರತಿಬಿಂಬಗಳು. ಸಾಮಾಜಿಕ ಪ್ರತಿಮೆಗಳ ಆಶಯ ಸಮಾಜದಲ್ಲಿ ಸಾಮರಸ್ಯ–ಸಮಾನತೆಗಳನ್ನು ಬೆಳೆಸುವದಾಗಿದೆ.

ಪುರಂದರದಾಸರ ಕೃತಿಗಳಲ್ಲಿನ ಸಸ್ಯ ಪ್ರತಿಮೆಗಳು ಜ್ಞಾನ, ಭಕ್ತಿ ವೈರಾಗ್ಯಗಳನ್ನು ಸೂಚಿಸುವ ಸ್ವಾಭಾವಿಕ ಸಂಕೇತಗಳಾಗಿ ನಿರೂಪಿತಗೊಂಡಿವೆ. ಇಲ್ಲಿ ದಾಸರು ಹರಿನಾಮಸ್ಮರಣೆಯನ್ನು ಕಲ್ಪವೃಕ್ಷಕ್ಕೆ ಹೋಲಿಸಿದರೆ ಭಕ್ತಿಯನ್ನು ಕಬ್ಬಿನಲ್ಲಿರುವ ಸಿಹಿಯಾದ ರಸಕ್ಕೆ ಹೋಲಿಸಿದ್ದಾರೆ. ಮನುಷ್ಯನ ಯೋಗ್ಯತೆ ಅವನಲ್ಲಿರುವ ಭಕ್ತಿ ಹಾಗೂ ಜ್ಞಾನದ ತಿರುಳನ್ನು ಅವಲಂಬಿಸಿರುತ್ತದೆ ಎಂಬ ಸತ್ಯವನ್ನು ಕಬ್ಬು ಪ್ರತಿಮೆಯ ಮೂಲಕ ದಾಸರು ಸ್ಪಷ್ಟ ಪಡಿಸುತ್ತಾರೆ. 'ಜಾಲಿಮರ' ಪ್ರತಿಮೆಯು ದುರ್ಜನರನ್ನು ಸಂಕೇತಿಸಿದರೆ, ತುಳಸಿ ಮಾಲೆ ಹರಿಭಕ್ತಿಯನ್ನು ಜೀವನವೈರಾಗ್ಯವನ್ನು ಸಂಕೇತಿಸುತ್ತದೆ. ಸಸ್ಯ ಪ್ರತಿಮೆಗಳು ಅವಗುಣಗಳನ್ನು ತ್ಯಜಿಸಲು ಮತ್ತು ಸುಲಭ ಪೂಜೆ ಮಾಡಿ ಶುದ್ಧ ಭಕ್ತಿಯನ್ನು ಬೆಳೆಸಬೇಕೆಂಬ ಸಂದೇಶವನ್ನು ನೀಡುತ್ತವೆ.

ಭಕ್ತಿ ಅನುಭವಗಳ ಸಾಧಾರಣೀಕೃತ ನೆಲೆ ಶರಣ, ದಾಸರಿಗೆ ಸಮಾನವಾದುದು. ಆದರೆ ವಚನಗಳಲ್ಲಿಯ ಸಸ್ಯ-ಪ್ರಾಣಿ ಪ್ರತಿಮೆಗಳು ಅಭಿವ್ಯಕ್ತಿಯು ವೈಚಾರಿಕತೆಯನ್ನು ಆಧರಿಸಿದ್ದರೆ ಕೀರ್ತನೆಗಳಲ್ಲಿ ಮೂಡಿ ನಿಂತ ಪ್ರತಿಮೆಗಳು ವ್ಯಕ್ತೀಕರಣ ಪುರಾಣೀಕರಣವನ್ನು ಆಧರಿಸಿದ್ದವು. ಪ್ರತೀಮಾ ಪ್ರಾಚುರ್ಯವು ಸಾರ್ವತ್ರಿಕ ಆಶ್ರಯವನ್ನು ತಿಳಿಸುತ್ತಿದ್ದರೂ ಸನ್ನಿವೇಶ ವ್ಯವಸ್ಥೆಯಿಲ್ಲದೆ ಈ ಮಾತಿಗೆ ಬೆಲೆಯಿಲ್ಲ. ಹಾಗಾಗಿ ಪುರಾಣಗಳಲ್ಲಿ ಬರುವ ಪ್ರಲ್ಹಾದ, ಅಜಾಮಿಳ, ಗಜೇಂದ್ರ, ಧ್ರುವ ಮುಂತಾದ ಭಕ್ತರ ಉಲ್ಲೇಖವು ವಿಶಿಷ್ಟ ಅನುಭೂತಿಯನ್ನು ಕಲ್ಪಿಸಿ ಶಬ್ದಾರ್ಥದ ನೆಲಯನ್ನು ವಿಶೇಷರೀತಿಯಲ್ಲಿ ಬಿಂಬಿಸುವುದು.

"ಈಸಬೇಕು ಇದ್ದು ಜಯಿಸಬೇಕು ಹೇಸಿಗೆ ಸಂಸಾರದಲ್ಲಿ ಲೇಶ ಆಸೆ ಇಡದ ಹಾಗೆ" ಎಂಬ ಪಲ್ಲವಿಯಿಂದ ಶುರುವಾಗುವ ಅವರ ಕೀರ್ತನೆಯಲ್ಲಿ 'ತಾವರೆ ಎಲೆ' ಪ್ರತಿಮೆಯು ಸಂಸಾರ ವೈರಾಗ್ಯವನ್ನು ಸಂದೇಶಿಸುತ್ತದೆ.

ತಾಮರಸ ಜಲದಂತೆ
ಪ್ರೇಮವಿಟ್ಟು ಭವದೊಳು
ಸ್ವಾಮೀ ರಾಮ ಎನುತ ಪಾಡಿ
ಕಾಮಿತ ಕೈಗೊಂಬರೆಲ್ಲ.

ತಾವರೆ ಎಲೆ ನೀರಿನಲ್ಲಿ ಬೆಳೆದರೂ ನೀರಿಗೆ ಅಂಟದೆ, ಒಂದು ಹನಿ ನೀರನ್ನೂ ಇಂಗಿಸಿಕೊಳ್ಳದೆ ಹೊರಚೆಲ್ಲುತ್ತದೆ. ಅಂಥಹ ಸ್ಥಿತಿಯನ್ನು ಪ್ರತಿಯೊಬ್ಬ ಸಾಧಕನು ತಂದುಕೊಳ್ಳಬೇಕು ಎಂಬುದು ದಾಸರ ಆಶಯ. ಸುಖವನ್ನು ಅನುಭವಿಸಬೇಕೆಂದು ಹುಟ್ಟುವ ನಾನಾ ಆಸೆಗಳು ಹುಲ್ಲಿನಂತೆ ವೇಗವಾಗಿ ಬೆಳೆಯುತ್ತವೆ ಎಂಬುದನ್ನು ತೃಣ ಪ್ರತಿಮೆಯು ತಿಳಿಸಿದರೆ, 'ಜಾಲಿಮರ' ಪ್ರತಿಮೆಯು ದುರ್ಜನರನ್ನು ಸಂಕೇತಿಸುತ್ತದೆ.

ಕೆಟ್ಟವರ ಸಂಗದಿಂದ ದೂರವಿರಬೇಕು ಎಂಬುದನ್ನು 'ಸಂಗ' ಭಾವ ಪ್ರತಿಮೆಯ ಮೂಲಕ ತಿಳಿಸುವ ದಾಸರ ಸಂದೇಶವು ಅವರ ಜೀವನಾನುಭವದಿಂದ ಫಲವಾಗಿದೆ. ಮನುಷ್ಯ ಜೀವನದ ಗುರಿ ಏನೆಂದು ತಿಳಿಯದೇ ಕೇವಲ ಭೋಗಗಳಲ್ಲಿ ಸಮಯ ಕಳೆಯುವ ಮನುಷ್ಯನನ್ನು 'ಕುರುಡು ನಾಯಿ ತಾ ಸಂತೆಗೆ ಬಂದಂತೆ' ಎಂದಿದ್ದಾರೆ.

'ಗುರುವಿನ ಉಪದೇಶವಿಲ್ಲದ ಜ್ಞಾನ ಉರಗನ ಉಪವಾಸದಂತೆ ಕಾಣಿರೋ' ಎನ್ನುವ ದಾಸರು ಹರಿಚರಣವೆಂಬುದು 'ಸುರಧೇನು' (ಹಸು) ಎಂದಿದ್ದಾರೆ.

ಹರಿಯ ಚರಣವೆಂಬ ಸುರಧೇನುವನು
ಗುರುಬೋಧೆಯೆಂಬ ಕಣ್ಣಿಯಲಿ ಕಟ್ಟಿರಯ್ಯ ಪ।

ಭಕುತಿಯೆಂಬ ಕರುವನೆ ಬಿಟ್ಟು ನಿರುತ ವಿ
ರಕುತಿಯೆಂಬ ಬೆನ್ನದಳಿಯ ಹಾಕಿ
ಯುಕುತವಾದ ನಿತ್ಯಕಾಯ ಚರಿಗೆಯೊಳು
ಮುಕುತಿ ನಾಮಾಮೃತವ ಕರೆದುಕೊಳ್ಳಿರಯ್ಯ ।೧।

ದಾಸರು ಗುರುವಿಗೆ ಅತ್ಯಂತ ಪ್ರಮುಖ ಸ್ಥಾನವನ್ನು ಕೊಟ್ಟಿದ್ದಾರೆ. ಹಾಗೆಯೇ ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕ್ತಿ ಎಂದಿದ್ದಾರೆ. ತಮ್ಮ ಗುರುಗಳಾದ ವ್ಯಾಸರಾಯರನ್ನು ಹೊಗಳುತ್ತಾ 'ವರಗುರು ಉಪದೇಶ ನೆರವಾಯಿತೆನಗೆ ಇನ್ನೇನಿನ್ನೇನು' ಎಂದಿದ್ದಾರೆ. 'ಮುಖ್ಯ ಪ್ರಾಣ ಮೂಲ ಗುರುವೆ' ಎಂಬಲ್ಲಿ 'ಗುರು' ಪ್ರತಿಮೆ ಪುರಂದರದಾಸರ ದೀಕ್ಷಾಗುರುಗಳಾದ ವ್ಯಾಸರಾಯ ಸ್ವಾಮಿಗಳ ಗುರುಪರಂಪರೆಗೆ ಮೂಲರಾದ ಮಧ್ವಾಚಾರ್ಯರೇ ತಮಗೂ ಮೂಲ ಗುರುಗಳು ಎಂದು ಬಣ್ಣಿಸಿದ್ದಾರೆ.

ಭಾಷಾ ಸಮುದಾಯವು ಸಾಮಾಜಿಕ ಸಂಬಂಧಗಳ ಬಲೆ, ಸಂಸ್ಕೃತಿಯು ಒಂದು ದೇಶದ ಆಯಾ ಕಾಲದಲ್ಲಿದ್ದ ಆಚಾರ–ವಿಚಾರಗಳು ಆಡು ಮಾತಿನ ಶೈಲಿ, ಭಾಷೆ ಮತ್ತು ಸಾಹಿತ್ಯವನ್ನು ಒಳಗೊಂಡಿರುತ್ತವೆ. ಅದೇ ರೀತಿ ಪುರಂದರದಾಸರ ಕೃತಿಗಳಲ್ಲಿಯೂ ಕೂಡ ಅವರು ಬಾಳಿ ಬದುಕಿದ್ದ ಸಮುದಾಯ ಜೀವನದಲ್ಲಿ ಬರುವ ಹಬ್ಬ ಆವರಣೆಗಳು, ದೇಶೀ ಭಾಷೆ, ಆಡುನುಡಿಗಳು, ಗಾದೆಮಾತುಗಳು, ಆಹಾರಕ್ರಮ ಉಡುಗೆ ತೊಡುಗೆಗಳು, ಆಭರಣಗಳು ವೈದ್ಯಪದ್ಧತಿ ಹಾಗೂ ಯೋಗಶಾಸ್ತ್ರ ಮುಂತಾದ ವಿಷಯಗಳು ಸ್ಪಷ್ಟವಾಗಿ ಅಭಿವ್ಯಕ್ತಿಗೊಂಡಿವೆ. ಈ ಎಲ್ಲ ವಿಷಯಗಳು ಒಂದು ಸಂಸ್ಕೃತಿಯನ್ನು ಸೂಕ್ಷ್ಮವಾಗಿ ತಿಳಿಯಲು ಸಹಾಯಕವಾಗುತ್ತವೆ ಎಂಬುದಂತೂ ಸತ್ಯದ ಸಂಗತಿ.

'ಊರದೇವರು' ಎಂಬ ಪ್ರತಿಮೆ ಗ್ರಾಮದೇವತೆಗೆ ಕುರಿ, ಕೋಣ ಮಂತಾದ ಪ್ರಾಣಿಗಳನ್ನು ಬಲಿಕೊಡುವುದರ ಬಗ್ಗೆ ತಿಳಿಸುತ್ತದೆ. 'ಹೂಯ್ಯೋ ಹೂಯ್ಯೋ ಡಂಗುರವ', 'ಹೊಡಿ ನಗಾರಿ ಮೇಲೆ ಕೈ ಗಡಗಡ' ಮುಂತಾದ ಕೀರ್ತನೆಗಳಲ್ಲಿ 'ಡಂಗುರ','ನಗಾರಿ' ಪ್ರತಿಮೆಗಳು ಜಾನಪದ ಭಾಷೆಯ ಬಗ್ಗೆ ತಿಳಿಸಿದರೆ 'ವಹವ್ವಾರೆ ಮೆಣಸಿನಕಾಯಿ' 'ಗುಮ್ಮನ ಕರೆಯದಿರೆ ಅಮ್ಮಾ ನೀನು' ಮುಂತಾದ ಕೃತಿಗಳು ಶಿಶು ಸಾಹಿತ್ಯದ ಬಗ್ಗೆ ತಿಳಿಸುತ್ತದೆ. ಹೀಗೆ 'ಪ್ರತಿಮೆಗಳು' ಆಚರಣೆಗಳನ್ನು ಮಾನವೀಯತೆಯೊಂದಿಗೆ ಬೆಸೆಯುವಲ್ಲಿ ಸಹಾಯಕವಾಗಿ ಸಾಂಸ್ಕೃತಿಕ ಮಹತ್ವ ಪಡೆದುಕೊಂಡಿವೆ.

ಸತ್ಯವೆಂಬುದೆ ಸ್ನಾನ, ಉಪವಾಸ, ಜಪನೇಮ ಎನ್ನುವುದು ಪುರಂದರದಾಸರ ಜೀವನ ಮಂತ್ರ. ಆದರೆ ಅವರು ಬೂಟಕತನ, ಡಾಂಬಿಕತೆಯನ್ನು ಕಟುವಾಗಿ ಟೀಕಿಸಿದ್ದಾರೆ.

ಬಿಡದೆ ಮದ ಮತ್ಸರಾಹಂಕಾರದಲ್ಲಿ ಮುಳುಗಿ
ಒಡನೆ ಬೆರಳುಗಳೆಣಿಸಿ ಮೌನದಿಂದ
ತಡೆಯದಲೆ ಪರಲೋಕ ಸೂರೆಗೊಂಬುವನೆಂಬೆ
ಬಡ ಬಕನು ಮಾಡಿದ ಅಪರಾಧವೇನಯ್ಯ

ಮದ ಮತ್ಸರಗಳನ್ನು ಬಿಡದೆ ಮಾಡುವ ಢಾಂಬಿಕ ಧ್ಯಾನವನ್ನು ಬಕಧ್ಯಾನಕ್ಕೆ ಸಾದೃಶ್ಯಗೋಳಿಸಿ, ಬದುಕಿನಲ್ಲಿ ಹೇಗಿರಬೇಕು ಎಂಬುದನ್ನು 'ಮೀನು' ಪ್ರತಿಮೆಯ ಮೂಲಕ ತಿಳಿಸುತ್ತಾರೆ.

ಬುದ್ಧಿಯಲಿ ತನು ಮನವ ತಿದ್ದಿಕೊಳ್ಳುತಿರಬೇಕು
ಮುದ್ದಾಗಿ ಇರಬೇಕು ಮುನಿ ಯೋಗಿಗಳಿಗೆ
ಮಧ್ವಮತಾಬ್ಧಿಯಲಿ ಮೀನಾಗಿ ಇರಬೇಕು
ಶುದ್ಧನಾಗಿರಬೇಕು ಕರಣ ಕ್ರಿಯಂಗಳಲಿ

ಪುರಂದರದಾಸರು ದೇಹ ವೈರಾಗ್ಯವನ್ನು ಹೇಳುತ್ತಾ 'ನಂಬದಿರು ಈ ದೇಹ ಅಂಬುಗುಳ್ಳೆಯಂತೆ ನಂಬಿ ನೀಕೆಡಬೇಡ ಎಂದಿದ್ದಾರೆ. 'ತನುವ ನಂಬಲಿ ಬೇಡೋ ಜೀವವೆ' ಎಂದ ದಾಸರು 'ಯಾರು ಬರುವರು ನಿನ್ನ ಹಿಂದೆ, ಇತ್ತ ಬಾರೆಂದು ಯಮ ಭಟರು ಸೆಳೆದೊಯ್ಯುವಾಗ' ಎಂದು ದೇಹದ ಅಶಾಶ್ವತೆಯನ್ನು ಒತ್ತಿ ಒತ್ತಿ ಹೇಳುತ್ತಾರೆ. ಸುಮಾರು ಇಪ್ಪತ್ತೈದು ಪ್ರತಿಮೆಗಳು 'ದೇಹ'ದ ಅಶಾಶ್ವತೆಯನ್ನು ವಿವರಿಸುತ್ತವೆ. ಶರೀರ ಕ್ಷಣಿಕವಾದರೂ ಅದು ಇದ್ದಷ್ಟುದಿನ ಇರುವ ಸಮಯ ಬಹಳ ಮುಖ್ಯವೆಂಬುದನ್ನು ಅವರು ಒತ್ತಿ ಹೇಳುತ್ತಾರೆ. ಮನುಷ್ಯ ಜನ್ಮದ ಮಹತ್ವವನ್ನು ತಿಳಿದು ಸಮಯವನ್ನು ವ್ಯರ್ಥವಿಷಯಗಳಿಗೆ ದುರುಪಯೋಗ ಮಾಡದೆ ಧಾರ್ಮಿಕ-ಆಧ್ಯಾತ್ಮಿಕ ಜೀವನದಲ್ಲಿ ಮುನ್ನಡೆಯಲು ಪ್ರೇರೆಪಿಸುತ್ತಾರೆ.

ದಾಸರಿಗೆ ಮಧ್ವಮತದಲ್ಲಿ ತುಂಬ ನಿಷ್ಠೆ, ಮಧ್ವ ಮತವನ್ನು ಎಷ್ಟು ಹೊಗಳಿದರೂ ಅವರಿಗೆ ತೃಪ್ತಿ ಯಿಲ್ಲ. ಮಧ್ವಮತದ ತತ್ವಗಳಾದ ಹರಿ ಸರ್ವೋತ್ತಮ ತತ್ವ, ಪಂಚಬೇಧ ಮುಂತಾದ ತತ್ವಗಳನ್ನೆಲ್ಲ ಕೀರ್ತನೆ ಗಳಲ್ಲಿ ಎರಕ ಹೊಯ್ದಿದ್ದಾರೆ. ಲೋಕಾನುಭವದಿಂದ, ಆಧ್ಯಾತ್ಮಿಕ ಅನುಭವದಿಂದ ಸಮೃದ್ಧವಾದ ಅವರಕೃತಿ ಗಳಲ್ಲಿನ ಧಾರ್ಮಿಕ, ಪೌರಾಣಿಕ, ಆಧ್ಯಾತ್ಮಿಕ ಪ್ರತಿಮೆಗಳಲ್ಲಿ ಆಧ್ಯಾತ್ಮಿಕ ಆನಂದವನ್ನು ನೀಡುವ ಶಕ್ತಿ ಇದೆ. ಪುರಂದರದಾಸರ ಕೀರ್ತನೆ ಗಳಲ್ಲಿ ತಾರತಮ್ಯ ತತ್ವವು ಸಮಗ್ರವಾಗಿ ನಿರೂಪಿತವಾಗಿಲ್ಲ. ಕೆಲವು ಕೀರ್ತನೆಗಳಲ್ಲಿ ದೇವತೆಗಳ ಉಲ್ಲೇಖವು ಕೆಲವು ಕಕ್ಷೆಗಳವರೆಗೆ ಬಂದು ಮುಂದೆ ನಿಂತು ಹೋಗಿದೆ ಅಥವಾ ಅಷ್ಟು ಭಾಗ ನಮಗೆ ಸಿಕ್ಕದೆ ಹೋಗಿದೆ. ದಾಸರು ಗಣಪತಿಯಿಂದ ಮೊದಲು ಮಾಡಿಕೊಂಡ ರಮಾದೇವಿಯವರವರೆಗಿನ ಅನೇಕ ಸ್ತೋತ್ರ ಗಳನ್ನು ರಚಿಸಿದ್ದಾರೆ. ಪೌರಾಣಿಕ ಪ್ರತಿಮೆಗಳು ಹೆಚ್ಚಾಗಿ ಕೃಷ್ಣನ ಬಾಲ್ಯ ಹಾಗೂ ದಶಾವತಾರಕ್ಕೆ ಕುರಿತಾಗಿವೆ. ಗೋಪಿಕಾಸ್ತ್ರೀಯರ ಒಡನಾಟ ಹಾಗೂ ಜೋಗುಳ ಪದಗಳು, ಆರತೀ ಪದಗಳಲ್ಲಿ ಪ್ರತಿಮೆಗಳು ಮೂಡಿಬಂದಿಲ್ಲ.

ಒಂದು ಕೀರ್ತನೆಯಲ್ಲಿ ಪ್ರತಿಪಾದಿತವಾಗುವ ವಿಚಾರ ಎಷ್ಟು ಮುಖ್ಯವೋ ಆ ವಿಚಾರವನ್ನು ಅನನ್ಯ ರೀತಿಯಲ್ಲಿ ಹೇಳುವ ರಚನಾ ಪ್ರತಿಭೆ ಕೂಡ ಅಷ್ಟೇ ಮುಖ್ಯವಾಗಿರುತ್ತದೆ. ಒಬ್ಬ ಉತ್ತಮ ಮಟ್ಟದ ಕವಿಯ ಸತ್ವಪರೀಕ್ಷೆ ನಡೆಯುವುದು ಈ ರಚನೆಯ ಚೌಕಟ್ಟಿನಲ್ಲೇ. ದಾಸರು ತಮ್ಮ ಕೃತಿಗಳಲ್ಲಿ ಸಾಂಕೇತಿಕತೆ ಅನ್ಯೋಕ್ತಿ, ವ್ಯಂಗ, ಶ್ಲೇಷೇ ಅಣಕಗಳಿಂದ ಶಬ್ದದ ಚೆಲುವನ್ನು ಹೆಚ್ಚಿಸಿ, ಅಲ್ಲಲ್ಲಿ ಆಡುನುಡಿ, ಗಾದೆಮಾತು ಗಳಿಂದ ವಿಚಾರಗಳ ಮಹತ್ವವನ್ನು ಹೆಚ್ಚಿಸಿದ್ದಾರೆ. ಉಪಮೆ ರೂಪಕಗಳ ನಿರ್ವಹಣೆಯಲ್ಲಿ ಅವರದು ಜಾಣ್ಮೆಯ ಅಭಿವ್ಯಕ್ತಿ. ಪುರಂದರದಾಸರ ಸಾಹಿತ್ಯದಲ್ಲಿ ಶ್ರೇಷ್ಠ ವಿಚಾರ ಕಲ್ಪನೆ, ಸೂಕ್ತಿ, ಗಾದೆ ಒಗಟಿನಂತಹ ಮಾತಿನ ಬಳಕೆ, ಶಬ್ದಶಕ್ತಿ, ಶಬ್ದಗಳ ಧ್ವನಿಶಕ್ತಿಯನ್ನು ಪೂರ್ಣವಾಗಿ ದುಡಿಸಿಕೊಳ್ಳುವ ಸಾಮರ್ಥ್ಯ, ಸಮಾಜದ ನ್ಯೂನತೆಗಳನ್ನು ತಿಳಿಯುವ ಸೂಕ್ಷ್ಮ ಅರಿವು ಜನ ಪ್ರೀತಿಸುವ ವಿನೋದ, ವಿಡಂಬನೆ ಅಣಕ, ವಾತ್ಸಲ್ಯ, ಭಕ್ತಿ, ಭಾವ, ರಾಮಾಯಣ, ಮಹಾಭಾರತ, ಭಾಗವತ ಗ್ರಂಥಗಳಲ್ಲಿನ ವಿಷಯದ ಬಳಕೆ ಮುಂತಾದುವುಗಳಲ್ಲಿ ಅವರ ಪ್ರತಿಮಾಲೋಕವು ಅದ್ಭುತವಾಗಿ ಪರಿಣಾಮಕಾರಿಯಾಗಿ, ಕೌಶಲ್ಯದಿಂದ ಮೂಡಿ ನಿಂತಿದೆ.

## ಅನುಬಂಧ

ಪುರಂದರದಾಸರ ಕೀರ್ತನೆಗಳಿಂದ ಆಯ್ಕೆಮಾಡಿಕೊಳ್ಳಲಾದ ಪ್ರತಿಮಾ ಭಾಗಗಳನ್ನು ಪ್ರಾಣಿಪ್ರತಿಮೆಗಳು, ಸಾಮಾಜಿಕಪ್ರತಿಮೆಗಳು, ಸಸ್ಯಪ್ರತಿಮೆಗಳು, ಮತ್ತು ಧಾರ್ಮಿಕಪ್ರತಿಮೆಗಳು ಎಂಬ ನಾಲ್ಕು ಮುಖ್ಯ ಶೀರ್ಷಿಕೆಗಳಲ್ಲಿ ವರ್ಗೀಕರಿಸಿಕೊಂಡು ಅವುಗಳಲ್ಲಿ ಮತ್ತೆ ಆಂತರೀಕವಾಗಿ ವಿವಿಧ ವಿಷಯಗಳ ಪುನರ್ವರ್ಗೀಕರಣ ಮಾಡಲಾಗಿದೆ. ಪ್ರತಿಮೆಗಳು ಹಾಗೂ ಅವುಗಳಿರುವ ಪುಟ ಸಂಖ್ಯೆಯನ್ನು ಇಲ್ಲಿ ಕೊಡಲಾಗಿದೆ.

## ೧. ಪ್ರಾಣಿಪ್ರತಿಮೆಗಳು

| ಕ್ರ.ಸಂ. | | ಪು.ಸಂ. |
|---|---|---|
| ೧. | **ಅರಗಿಣಿ:**<br>ಹರಿನಾಮದರಗಿಣಿಯು ಹಾರುತಿದೆ ಜಗದಿ<br>ಪರಮ ಭಾಗವತರು ಬಲೆಯ ಬೀಸುವರು | ೬೮ |
| ೨. | **ಆಕಳು:**<br>ನಾನಾ ವರ್ಣದ ಆಕಳು ಅದು<br>ನಾನಾ ವರ್ಣದ ಕ್ಷೀರವೇನೋ<br>ಹೀನ ಕರ್ಮಗಳನ್ನು ಬಿಟ್ಟು ಹಿಗ್ಗಿ<br>ಜ್ಞಾನ ಒಲಿಸಿರೋ | ೬೯ |
| ೩. | **ಆನೆ:**<br>ಆನೆ ಬಂದಿತಮ್ಮಮ್ಮ ಮರಿ<br>ಯಾನೆ ಬಂದಿತಮ್ಮಮ್ಮ | ೬೯ |
| ೪. | ಆನೆಯನು ಕಾಯ್ದಾಗ ಜ್ಞಾನವಿದ್ದುದು ಏನು<br>ನಾನು ಒದರಲು ಈಗ ಕೇಳದಿದ್ದುದು ಏನು | ೭೦ |
| ೫. | **ಮದ್ದಾನೆ:**<br>ಹಿಂದೆ ತಗರು ಮುಂದೆ ಬಾವಿ ಅದರ<br>ಸಂದಣಿಸುವ ಎಡಬಲದಿ ಮದ್ದಾನೆ<br>ಒಂದಕ್ಕೆ ಒಂದು ಸಾಧನವು ಅದರ<br>ಮುಂದೆ ನೋಡಿದರೆ ತಾನದ ಸೋನೆ. | ೭೦ |
| ೬ | **ಇಲಿ:**<br>ಎಳ್ಳು ಕಾಳೆಷ್ಟಾದರೆನಗಾಶ್ರಯವಿಲ್ಲ<br>ಅಲ್ಲವತಿಂದಿಲಿಯಂತೆ ಕೊರಗಿ<br>ಗಲ್ಲತಿವಿಸಿಕೊಂಡು ಗಾರು ಪಟ್ಟೆ ನೋ ಇಂಥ<br>ಸಲ್ಲದ ನಾಣ್ಯವ ಮಾಡುವರೋ ಹರಿಯೆ. | ೭೧ |
| ೭ | **ಎತ್ತು:**<br>ಗಾಣದೆತ್ತಿನಂತೆ ತಿರುಗಾಡಲಾರೆ<br>ದಂಡಿಗೆಯ ನೊಗದಂತೆ ನಾ ಬೀಳಲಾರೆ<br>ನವಿಲಂತೆ ನಾನಿನ್ನು ಕುಣಿದಾಡಲಾರೆ<br>ಗಿಳಿಯಂತೆ ನಾ ನಿನ್ನ ಕೂಗಾಡಲಾರೆ<br>ಪುರಂದರ ವಿಠಲನ ಕಾಣದೆಲೆ<br>ಮಾತನಾಡುವುದನು ಕೇಳಲಾರೆ. | ೭೨ |
| ೮. | **ಎಮ್ಮೆ:**<br>ಕಟ್ಟಬೇಕು ಕಾಟದೆಮ್ಮೆ ಅದರ ಹಯನ<br>ಎಷ್ಟಾದರೂ ಉಣಬೇಕು. | ೭೨ |

ಹಮ್ಮು ಎಂಬೋದೆ ಎಮ್ಮೆ ಗಮ್ಮುಯೇಂಬೋದೆ ಹಗ್ಗ
ಹೆಮ್ಮೆ ಎಂಬೋದೆ ಅದಕೆ ದಮ್ಮುಗುದ್ದಿ
ಸುಮ್ಮನ ಮನದಿಂದ ಹಾಲ್ಕರೆದು ಪರ
ಬೊಮ್ಮನಿಗರ್ಪಿಸಬೇಕು ನಿತ್ಯದಿ

೯. **ಕತ್ತೆ:**
ಕತ್ತೆಗೆ ಹೂರಣ ರುಚಿ ತಿಳಿಯಲಿಲ್ಲ
ತೊತ್ತಿಗೆ ಪತಿವ್ರತೆ ಗುಣಬರಲಿಲ್ಲ
ಮುತ್ತಿನ ಹಾರ ಕಪಿಗೆ ಹಾಕಸಲ್ಲ
ಕುತ್ತಿಗೆ ಕೊಯ್ವಗೆ ಕರುಣವೇ ಇಲ್ಲ.
೭೩

೧೦. ಲೆತ್ತ ಪಗಡೆ ಚದುರಂಗಗಳಾಡುತ
ಹೊತ್ತು ಕಳೆವುದೇತಕೆ ನೀನು
ಸುತ್ತಿ ತೊಳಲಿ ಬಳಲುತ ಮಾಡುವ ಗೃಹ
ಕೃತ್ಯದಿ ನೀನಿದ್ದು ಫಲವೇನು
ಕತ್ತೆಯಂದದಿ ಕಾಲವಕಳೆದು
ನ್ಮತ್ತನಾಗಿ ಬಾಳುವೆ ನೀನು
ಮೃತ್ಯುಭಯವನುತ್ತರಿಸುವಡೆ ಪುರು
ಷೋತ್ತಮ ನರಹರಿ ಶರಣೆನ್ನು
೭೪

೧೧. **ಕಪಿ:**
ಮೂಢನಾದೆನೋ ನಿನ್ನ ಬೇಡಿಕೊಳ್ಳದೆ ನಾನು
ಕಾಡೊಳಗಾಡುವ ಕಪಿಯಂತೆ ಜೀವಿಸಿ
ಗೂಡೊಳಗಿರುತಿಹ ಗೂಬೆಯ ತೆರನಂತೆ
ಮಾಡದೆ ನಿನ್ನಯ ಸ್ಮರಣೆಯ ಮರೆತೆನೋ
೭೪

೧೨. ಬಾರಮ್ಮ ನಾವಿಬ್ಬರಾಡುವ
ಮುಕ್ತಿ ಸಾಧನಂಗಳ ಬೇಗ ಬೇಡುವ
ಕಾಡುವ ಕಪಿ ಶಯನಂಗಳ
ಬೇಡುವ ಜ್ಞಾನಮಂಟಪದಲ್ಲಿ ಜೋಡಿಕಾಡುವ
೭೫

೧೩. ಲಿಪಿಯೊಳಖಿಳವ ಚಿಂತಿಸಿ ಕಡೆಗಡಗೆ
ಕಪಿಯಂತೆ ಎಡೆಗೊಡವೆ ಮನವೆ
ಗುಪಿತದೊಳಗಿದ್ದಾತ್ಮನ ಧ್ಯಾನಿಸಲು
ಅಪರಿಮಿತ ಸುಖ ಸುಖಿಸುವೆ ಮನವೆ.
೭೬

೧೪. **ಕರಿ (ಆನೆ):**
ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ
ನಿನ್ನ ಸುತ್ತಿಹುದೆಲ್ಲ ಎನ್ನ ಮನವಯ್ಯ
ಜಗವು ನಿನ್ನೊಳಗೆ ನೀನು ಎನೊಳಗೆ
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು
ಕರಿಯು ಕನ್ನಡಿಯೊಳು ಅಡಗಿಪ್ಪ ತೆರನಂತೆ ೭೬

ನೀನು ಎನ್ನೊಳಡಗಿಪ್ಪೆ ಪುರಂದರವಿಠಲ.

೧೫. **ಕಪ್ಪೆ:**
ಹೃದಯದ ಮಲವನ್ನು ತೊಳೆಯಲರಿಯದೆ ತಾವು
ಉದಯಲೆದ್ದು ಮಿಂದು ಗದಗದ ನಡುಗುತ್ತ
ಅದರಿಂದೇನು ಫಲ ಅದಕ್ಕಿಂತ ಉದಯಾಸ್ತಮಾನ
ನೀರೊಳಗಿಪ್ಪ ಮುದಿ **ಕಪ್ಪೆ** ಮಾಡಿದ ತಪ್ಪೇನಯ್ಯ
ಪುರಂದರವಿಠಲನ ನಾಮವ ನೆನೆಯದೆ
ದಿನಕಿನ್ನು ನೂರುಬಾರಿ ಮುಳುಗಿದರೇನಯ್ಯ

೭೭

೧೬. **ಕಾಗೆ:**
ನಾಗ ಸುರ ನರಲೋಕವ ತಿರುಗಿತಿರುಗಿ
ಕಾಗೆಯಂತೆಡೆಯಾಡದೆ
ರಾಗ ದ್ವೇಷವ ತೊಲಗಿಸಿ ಮನದಿ ಮಧು
ಸೂದನನ ಕಾಣು ಕಂಡ್ಯ ಮನವೆ

೭೮

೧೭. ಮಲವ ತೊಳೆಯಬಲ್ಲರಲ್ಲದೆ
ಮನವ ತೊಳೆಯ ಬಲ್ಲರೆ

೭೮

೧೮. ಕಾಗೆ ಕೂಗಿತಲ್ಲ ಈಗ ಬಂದು
ಕಾಗೆ ಕೂಗಿತಲ್ಲ

೭೮

೧೯. **ಕುರುಡುನಾಯಿ:**
ಕುರುಡು ನಾಯಿ ತಾ ಸಂತೆಗೆ ಬಂತಂತೆ
ಅದು ಏತಕೆ ಬಂತೋ

೭೯

೨೦. **ಕೊಂಡಕೋತಿ:**
ಹೆಂಡತಿ ಪ್ರಾಣ ಹಿಂಡುತಿ ದೊಡ್ಡ
ಕೊಂಡಕೋತಿಯಂತೆ ಕುಣಿ ಕುಣಿಸುತ್ತಿ

೮೦

೨೧. **ಕೋತಿ:**
ಮತಿಗೆಟ್ಟು ಕಾಲವ ಕಳೆಯಬೇಡ ಸ
ದ್ಗತಿ ಕೊಡುವ ಹರಿಯ ನಂಬಲೋ ಮೂಢ
ಕೋತಿಯಂತೆ ಕುಣಿದಾಡಬೇಡ ಸು
ನೀತಿ ಮಾರ್ಗವ ಪಿಡಿಯಲೋ ಗಾಢ

೮೧

೨೨. ಯಾಕೆ ಚಿಂತಿಸುತಿದ್ದಿ ಕೋತಿಮನವೆ
ಲೋಕನಾಥನ ನೆನೆದು ಸುಖಿಯಗು ಮನವೆ

೮೧

೨೩. ಏಳೇಳು ಶರಧಿಯು ಏಕವಾಗಿದೆ ಕಂಡ್ಯ
ಹ್ಯಾಗೆ ಬಂದೆ ಹೇಳೋ ಕೋತಿ
ಏಳು ಶರಧಿಯು ಎನಗೆ ಏಳು ಕಾಲುವೆಯು ೮೨

ತೂಳಿ ಲಂಘಿಸಿ ಬಂದೆ ಭೂತ

೨೪. **ಕೋಕಿಲ:(ಕೋಗಿಲೆ)**
ಗೋಪ ಗೋಪನೆಂಬೊ ಕೋಕಿಲ ನಮ್ಮ
ಶ್ರೀ ಪತಿಯ ಕಂಡರೆ ಬರಹೇಳು ಕೋಕಿಲ
ಗೋಪ ಗೋಪನೆಂಬೊ ಕೋಕಿಲ
೮೨

೨೫. **ಕೋಣ:**
ಮಡದಿ ಮಕ್ಕಳ ಪ್ರಪಂಚಕ್ಕಾಗಿ ದುಡಿ
ದುಡಿದು ಹಾಕಿದೆಯೊ ಮುದಿ **ಕೋಣ**ನಾಗಿ
೮೩

೨೬ **ಗಿಳಿ:**
ಗಿಳಿಯು ಪಂಜರದೊಳಿಲ್ಲ ಹರಹರಿಯೆ
ಬರಿಯ ಪಂಜರವಾಯಿತಲ್ಲ
೮೩

೨೭ ಹಸುರು ಬಣ್ಣದ ಗಿಳಿಯು
ಕುಶಲ ಬುದ್ಧಿಯ ಗಿಳಿಯು
ಅಸುವು ಗುಂದಿ ಮರಿಯು ತಾನು
ಹಸನ ಗೆಡಿಸಿ ಹೋಯಿತಯ್ಯೊ
೮೪

೨೮. **ಗುಬ್ಬಿ:**
ಇಬ್ಬರೊಡನೆ ಕೂಡೋತನಕ ಮುವ್ವ
ಹಬ್ಬಿದ ಬೆಟ್ಟವ ನೊಣ ನುಂಗೋತನಕ
ಒಬ್ಬಳೊಡನೆ ಸೇರೋತನಕ ಕೆಟ್ಟ
ಗುಬ್ಬಿಯ ರಾಜಹಂಸನ ಮಾಡೋತನಕ
೮೫

೨೯. **ನಾಯಿ:**
ಡೊಂಕು ಬಾಲದ ನಾಯಕರೆ ನಿವೇನೂಟವ ಮಾಡುವಿರಿ
ಕಣಕ ಕುಟ್ಟುವ ಅಲ್ಲಿಗೆ ಹೋಗಿ
ಹಣಿಕಿ ಇಣಿಕಿ ನೋಡುವಿರಿ
ಕಣಕ ಕುಟ್ಟೊ ಒಣಕೇಲಿ ಬಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ
೮೬

೩೦. **ನಾಯಿಕುನ್ನಿ:**
ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು
ನಾಯಿ ಕುನ್ನಿಗಳಂತೆ ಪರರ ಪೀಡಿಸುತ
೮೬

೩೧. **ನಾಯಿ:**
ಬಲೆಗೆ ಸಿಲುಕಿದ ಮೃಗದಂತೆ ಬಾಯ್ಬಿಡುತಲಿ
ಅಲಸಿ ಕೋಟಲೆ ಸಂಸಾರದಿಂದ
ತಲೆ ಹುಳುಕ ನಾಯಂತೆ ಬಯಲಾಸೆಗೆ ಸಿಲುಕಿದೆ
ಸಲಹೋ ಪುರಂದರವಿಠಲ ದೇವರ ದೇವ. ೮೭

೩೨. ನಾಯಿ ಬಂದದಪ್ಪ ಅಣ್ಣ ಅತ್ತಲಾಗಿರಿ
ನಾಯಿ ಅಂದರೆ ನಾಯಿಯಲ್ಲ
ಮಾನವ ಜನ್ಮದ ಹೀನ ನಾಯಿ

೮೭

೩೩. **ಶ್ವಾನ: (ನಾಯಿ):**
ಶ್ವಾನವ ಕಂಕುಳೊಳಿಟ್ಟು ವಾರಣಾಸಿಗೆ ಪೋದಂತೆ
ಮಾನವನೆ ಕೇಳೋ ಮದಮತ್ಸರಗಳ ಬಿಡದಲೆ

೮೮

೩೪. **ಪತಂಗ:**
ಪರವನಿತೆಯರ ಲಾವಣ್ಯಕೆ ಲೋಚನ
ಚರಿಸುತ್ತಲವರ ಕೂಟವ ಬಯಸಿ
ಉರಿವ ಕಿಚ್ಚು ತನಗೆ ಹಿತವೆಂದು ಅದರೊಳು
ಎರಗಿದ ಪತಂಗನಾದೆನಲ್ಲೋ ರಂಗ

೮೮

೩೫. **ಪಂಚಾನನ(ಸಿಂಹ):**
ದುರಿತ ಗಜಕೆ ಪಂಚಾನನ ನರ
ಹರಿಯೆ ದೇವರ ದೇವ ಗೋವಿಂದ

೮೮

೩೬ **ಪಕ್ಷಿ:**
ಜೋಡಾಗಿಪ್ಪ ಎರಡು ಪಕ್ಷಿ
ಗೂಡನಗಲಿ ಗೂಡತೊರೆದು
ಆಡುತಬಂದು ನುಂಗಿ ನೋಡುವ ಸೊಗಸು.

೮೯

೩೭ **ಪಕ್ಷಿ:**
ಎರಡೂ ಒಂದಾಗದು, ರಂಗ
ಎರಡೂ ಒಂದಾಗದು ಎಂದೆಂದಿಗೂ ರಂಗ
ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳು
ಒಂದೆ ಗೂಡಿನಲ್ಲಿ ಇರುತಿಹವು
ಒಂದು ಪಕ್ಷಿ ಫಲಗಳನುಂಬುದು
ಮತ್ತೊಂದು ಫಲಗಳನುಣ್ಣದು ರಂಗ.

೮೯

೩೮. **ಬಕ:**
ಬಿಡದೆ ಮದಮತ್ಸರಾಹಂಕಾರದಲ್ಲಿ ಮುಳುಗಿ
ಒಡನೆ ಬೆರಳುಗಳೆಣಿಸಿ ಮೌನದಿಂದ
ತಡೆಯದಲೆ ಪರಲೋಕ ಸೂರೆಗೊಂಬುವನೆಂಬ
ಬಡ ಬಕನು ಮಾಡಿದ ಅಪರಾಧವೇನಯ್ಯ

೯೦

೩೯. ಪರರ ಕೇಡು ಬಯಸಿ ಗುರುಹಿರಿಯರನ್ನ ನಿಂದಿಸುತ್ತಾ
ಪರಮ ಸೌಖ್ಯವೆಂದು ಪರಸ್ತ್ರೀಯರನ್ನು ಬಯಸುತ್ತಾ
ಪರಮ ನಿಷ್ಠೆ ಮೌನಿಯಂತೆ ಧರೆಯ ಮೇಲೆ ಢಂಬ ತೋರಿ
ಹರಿವ ನೀರಿನ ತೀರದಿ ಕುಳಿತರೇನು ಬಕಧ್ಯಾನದಿ. ೯೦

೪೦. **ಬೆಕ್ಕು:**
ನೆಚ್ಚದಿರು ಬೆಕ್ಕ ನೆವನೋಡುತಿದೆ
ಎಚ್ಚೆತ್ತಿರೆಚ್ಚೆತ್ತಿರಲೋ ರಾಮುಗ ೯೦

೪೧. **ಭೇರುಂಡ:**
ಮಕ್ಕಳು ಮತಿವಂತರಾದರೆ ಮನೆಯಲ್ಲಿ
ಅಕ್ಕರೆಯಿಂದಲಿ ಕೂಡಿರಬೇಕು
ಚಿಕ್ಕತನದಿಂದ ಬುದ್ಧಿ ಭೇರುಂಡನಾದರೆ
ಗಕ್ಕನೆ ಅಲ್ಲಿಂದ ಹೊರಗಾಗಬೇಕು. ೯೧

೪೨. **ಮೀನು:**
ಮಾಂಸದಾಸೆಗೆ ಮತ್ಸ್ಯ ಸಿಲುಕಿ
ಹಿಂಸೆ ಪಟ್ಟ ಪರಿಯಂತೆ
ಮೋಸ ಹೋಗದ ಹಾಗೆ ಜಗ
ದೀಶ ಪುರಂದರವಿಠಲನ ನೆನೆದು. ೯೨

೪೩. ಸಲೆ ನಿಜವೃತ್ತಿಯನುಳಿದು ದುರಾನ್ನವ
ನಲಿದುಂಡು ಹೊಟ್ಟೆಯ ಹೊರೆಯುತಲಿ
ಗಳೆಯ ತುದಿಯ ಮೌಂಸಕೆ ಬಂದೆರಗುತ್ತ
ಸಿಲುಕಿದ ಮೀನಿನಂತಾದೆನಲ್ಲೋ ರಂಗ. ೯೨

೪೪. ಬುದ್ಧಿಯಲಿ ತನು ಮನವ ತಿದ್ದಿಕೊಳ್ಳುತಿರಬೇಕು
ಮುದ್ದಾಗಿ ಇರಬೇಕು ಮುನಿ ಯೋಗಿಗಳಿಗೆ
ಮಧ್ವ ಮತಾಬ್ಧಿಯಲಿ ಮೀನಾಗಿ ಇರಬೇಕು
ಶುದ್ಧನಾಗಿರಬೇಕು ಕರಣತ್ರಯಂಗಳಲಿ ೯೨

೪೫. **ಮೂಷಕ: (ಇಲಿ)**
ತಡೆಯಲಾರದೆ ಗುಹ್ಯೇಂದ್ರಿಯ ಚಪಲವ
ಮಡದಿಯರ ಸಂಗವ ಬಯಸಿ
ಒಡಲ ಕಿಚ್ಚಿಗೆ ಮೇಲೆ ಬಡಿಗಲ್ಲುಕೆಡಹಿ
ಕೊಂಡು ಬಿದ್ದ ಮೂಷಕನಂತಾದೆನಲ್ಲೋ ಕೃಷ್ಣ ೯೩

೪೬. ಸೂಸಲಾಸೆಗೆ ಪೋಗಿ ಬಡಿಗಲ್ಲಿನೊಳು ಸಿಕ್ಕಿದ
ಮೂಷಕನತೆರನಾದೆನೋ ಎಲೆ ದೇವ
ಹೇಸಿಕೆ ವಿಷಯಂಗಳಿಗೆ ಎರಗುತ್ತಿದೆ ಎನ್ನಮನ
ಘಾಸಿಯಾದೆನೋ ಹೃಷಿಕೇಶ ನೀ ಸಲಹಯ್ಯ
ವಾಸವಾರ್ಚಿಗ ಸಿರಿ ಪುರಂದರ ವಿಠಲ ನಿನ್ನ
ದಾಸರ ಸಂಗದೊಳು ಇರಿಸೆನ್ನ ಅನವರತ
ಕ್ಲೇಶವ ಕಳೆಯಯ್ಯ ಧೊರೆಯೇ. ೯೩

೪೭. **ಸರ್ಪ(ಉರಗ):** ೯೩

ಗುರುವುಪದೇಶವಿಲ್ಲದಾ ಮಂತ್ರ
ಗುರುವುಪದೇಶವಿಲ್ಲದಾ ಭಕ್ತಿ
ಗುರುವುಪದೇಶವಿಲ್ಲದಾ ಕ್ರಿಯೆಗಳು
ಉರಗನ ಉಪವಾಸದಂತೆ ಕಾಣಿರೋ

೪೮. ಅಪ್ಪಳಿಸಿ ಪರರ ಒಡವೆಗಳ ತಂದುಂಡು
ಒಪ್ಪದಿಂದುಪವಾಸ ವ್ರತವ ಮಾಡಿ
ತಪ್ಪದಲೆ ಸ್ವರ್ಗವನು ಸೂರೆಗೊಂಬುವೆನೆಂಬೆ
ಸರ್ಪಗಳು ಮಾಡಿದ ಅಪರಾಧವೇನಯ್ಯ

೯೪

೪೯. **ಸಿಂಹ:**
ವಾಸುದೇವನ ಚರಣವನಜ ವಂದಿಪನೆ
ಸನ್ಯಾಸಿ ರತ್ನಾಕರನೆ ವ್ಯಾಸಮುನಿರಾಯ
ವಾದಿಗಜ ಸಿಂಹ ದುರ್ವಾದಿ ಮೃಗ ಭೇರುಂಡ
ವಾದಿಫಣಿ ಗರುಡ ತತ್ವಾದಿ ರಚಿತ
ವಾದಿ ಭಯಂಕರ ದುರ್ವಾದಿ ಕೋಲಾಹಲ
ವಾದಿ ಮಸ್ತಕ ಶೂಲ ಮಧುರ ಗುಣಶೀಲ

೯೪

೫೦. **ಶುಕ(ಗಿಳಿ):**
ಜಯ ಜಯವದೆ ಈ ಮನೆತನಕೆ
ಬಿಡು ಬಿಡು ಬಿಡು ಮನ ಸಂಶಯವ
ಶುಕನೆಂಬಕ್ಕಿ ಹೇಳುತದಪ್ಪ
ಜಗವೆಂಬೋ ಗಿಡ ಹುಟ್ಟೈತಣ್ಣ
ಹಣ್ಣುಗಳೆರಡೂ ಐದಾವಪ್ಪ
ಮೂರು ಬುಡದ ಗಿಡ ಕೇಳಣ್ಣ

೯೪

೫೧. **ಶುನಕ(ನಾಯಿ):**
ಕೊಡಬೇಡ ನಮ್ಮೊಡಲಿಗೆ ತುಸುವನು ಇಡಬೇಡ
ಈಯಲು ಬೇಡ ನಮ್ಮ **ಶುನಕ**ನೆ ತಳಗಿಯ
ಆನೆಯ ಮೇಲೆ ಬಪ್ಪನ ಶ್ವಾನ ಕಚ್ಚಬಲ್ಲುದೆ
ದೀನನಾಥ ಪುರಂದರ ವಿಠಲನಮಗುಳ್ಳತನಕ.

೯೬

೫೨. **ಸುರಧೇನು:**
ಸುರ ತರುವು ನೀನು ಫಲ ಬಯಸುವನು ನಾನು
ಸುರಧೇನು ನೀನು ಕರೆದುಂಚಿ ನಾನು
ವರಚಿಂತಾಮಣಿ ನೀನು ಪರಿಚಿಂತಿಸುವೆನು ನಾನುಸ
ಶರಧಿಕ್ಷೀರನು ನೀನು ತರಳನು ನಾನು.

೯೬

೫೩. ಹರಿಯ ಚರಣವೆಂಬ ಸುರಧೇನುವನು
ಗುರುಭೋಧೆಯೆಂಬ ಕಣ್ಣಿಯಲಿ ಕಟ್ಟಿರಯ್ಯ

೯೭

೫೪. **ಹರಿಣ(ಜಿಂಕೆ):**
ಅಂಕದೊಳಾಡುವ ಶಿಶುಗಳ ಮುದ್ದಿನ
ಬಿಂಕದ ಸವಿನುಡಿಗಳ ಕೇಳುತ
ಕಿಂಕಿಣಿ ಧ್ವನಿಗೆ ಕಿವಿಗೊಟ್ಟು ಕೇಳುತ
ಮಂಕಾದ ಹರಿಣನಂತಾದೆನಲ್ಲೊ ರಂಗ
೯೭

೫೫. **ಹುಚ್ಚು ಕುನ್ನಿ:**
ಹುಚ್ಚು ಕುನ್ನಿಮನವೆ ನೀ
ಹುಚ್ಚುಗೊಂಬುದು ಘನವೇ
ಕಚ್ಚು ಕದತನವ ಬಿಟ್ಟು
ಅಚ್ಯುತನ ಪದವ ಮುಟ್ಟು
೯೭

೫೬ **ಹಂದಿ:**
ತಂದು ಬಂದರೆ ತನ್ನ ಪುರುಷನ
ಕಾಣದೆ ನಿಲ್ಲಲಾರಳು
ಒಂದು ದಿವಸ ತಾರದಿದ್ದರೆ
ಹಂದಿ ನಾಯಂತೆ ಬೊಗಳುವಳು.
೯೮

೫೭ ಮತಿಗೆಟ್ಟು ಕಾಲವ ಕಳೆಯಬೇಡ
ಸದ್ಗತಿಕೊಡುವ ಹರಿಯ ನಂಬೆಲೋ ಮೂಢ
ಹಾಳು ಕೇರಿಯೊಳು ತಿರುಗುವ ಹಂದಿಯಂತೆ
ಬಳಲುತ್ತ ನಾನಾ ಜನ್ಮವೆತ್ತಿ ಬಂದೆ
ಬಾಳುವ ಕಾಲಕ್ಕೆ ಮದವೇರಿ ನಿಂದಿ, ಮುಂದೆ
ಮೂಳ ಮುಪ್ಪಿನಲ್ಲಿ ಅವಿಚಾರಗೊಂಡಿ
೯೮

೫೮. ನಿಂದಕರಿರಬೇಕಿರಬೇಕು
ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ ೯೯

## ೨. ಸಾಮಾಜಿಕ ಪ್ರತಿಮೆಗಳು

ಕ್ರಸಂ. ಪುಸಂ.

೫೯. **ಅಡುಗೆ :**

ಅನುಭವದಡುಗೆಯ ಮಾಡಿ ಅದ
ಕ್ಕನುಭವಿಗಳು ಬಂದು ನೀವೆಲ್ಲಕೂಡಿ

೧೦೧

೬೦ **ಅಪಮಾನ :**

ಅಪಮಾನವಾದರೆ ಒಳಿತು
ಅಪರೂಪ ಹರಿನಾಮ ಜಪಿಸುವ ಮನುಜರಿಗೆ

೧೦೨

೬೧. **ಅಳು :**

ಕಣ್ಣಲ್ಲಿ ನೀರಿಲ್ಲ ಮನದಲ್ಲಿ ಕೊರಗಿಲ್ಲ
ಅತ್ತೆ ಸತ್ತರೆ ಸೊಸೆ ಅಳುವಂತೆ
ಅತ್ತೆ ಅತ್ತೆ ಎಂತಂದು ನಾನತ್ತೆ
ಅತ್ತೆ ಸತ್ತರೆ ಎದೆ ಎರಡಾಯಿತೆಂದು
ಅತ್ತೆ ಅತ್ತೆ ಎಂದು ಪುರಂದರವಿಠಲನ
ದಾಸರೆಲ್ಲರ ಮುಂದೆ ಹಾಡಿ ಹಾಡಿ ನಾನತ್ತೆ.

೧೦೨

೬೨. **ಆಶೆ :**

ಮನೆಯಾಶೆ ಮನ್ನಣೆ ಕೆಡಿಸುತಲಿದೆ
ಎನ್ನಮನ ಮನೆವಾರುತೆಯಾಶೇ ಬಲು ಬಾಧಿಸುತಿದೆ
ಧನದಾಸೆ ದೈನ್ಯಬಡಿಸುತಿದೆ
ಇನಿತಾಶೆಯ ಬಿಡಿಸು ಬುದ್ಧಿಯಲಿ ನಿನ್ನ
ನೆನೆವಂತೆ ಮಾಡೆನಗೆ ಪುರಂದರ ವಿಠಲ.

೧೦೩

೬೩. **ಎಚ್ಚರಿಕೆ :**

ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ
ನಿಶ್ಚಯವೆಚ್ಚರಿಕೆ
ಹೆಚ್ಚದೆ ಹಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು
ಕೇಳಚ್ಚರಿಕೆ

೧೦೪

೬೪. **ಉರಿ :**

ವನಸುತ್ತಿ ಸುಡುವಾಗ ವಾಯು ಬೀಸಲು ಉರಿಯು
ಘನ ಪ್ರಜ್ವಲಿಸುತಿಹುದು ಗಗನ ಕಡರಿ
ಮನೆಯೊಳಿಹ ದೀಪಕೆ ಮಾರುತನು ಸೊಂಕಿದರು
ಘನಶಕ್ತಿಯುಡುಗಿ ತಾನಂದಿ ಹೋಗುವುದು.

೧೦೫

೬೫. **ಊಟ :**

ತುಂಡು ತುತ್ತು ಕೂಳಿಗಾಗಿ ಕಂಡವರ ಕಾಡಿ
ಹಿಂಡಿ ಹಿಪ್ಪೆ ಮಾಡಿ ಮನವ
ಹೀನಗೊಳಿಸಿದೆ
ಉಣ್ಣಬಾರದ ಊಟವನ್ನು ೧೦೫

ಕಾಣಬಾರದ ಕರ್ಮವನ್ನು
ಗುಂಡೆಕಾರರ ಕೇರಿಗೆ ಸಿಕ್ಕಿ
ಚೆಂಡಿಗಿಂತ ಹಗುರವಾದೆ

೬೬. **ಒಗೆತನ :**
ಸಾಕು ಸಂಸಾರ ನಮಗಿನ್ನೇತರ ಒಗೆತನ
ಲೋಕದೊಳಗೆ ಎನ್ನ ಬೇಕೆಂಬುವರಿಲ್ಲ ವಿ
ವೇಕಿ ಪುರುಷ ಪರವಶನಾದರೆ ಎತರ ಸಂಸಾರ

೧೦೭

೬೭. **ಔಷಧ :**
ಇದಕೊಳ್ಳಿ ಭವರೋಗ ಔಷಧವನು
ಇಂದ್ರಿಯವ ಜಯಿಸುವುದು ಇದಕೆ ಇಚ್ಛಾಪಥ್ಯ

೧೦೮

೬೮. **ಅಂಗಿ :**
ವ್ಯಾಪಾರ ನಮಗಾಯಿತು
ಶ್ರೀಪತಿ ಪಾದಾರವಿಂದ ಸೇವೆಯೆಂಬೋ
ಹರಿಕರುಣವೇ ಅಂಗಿ ಗುರುಕರುಣ ಮುಂಡಾಸು
ಹರಿದಾಸರ ದಯವೆಂಬೊ ವಲ್ಲಿ
ಪರಮ ಪಾಪಿ ಕಲಿ ಎಂಬೋ ಪಾಪಾಸು ಮೆಟ್ಟಿ
ದುರಾತ್ಮರಾದವರ ಎದೆಮೇಲೆ ನಡೆವಂಥ

೧೦೯

೬೯. **ಬಂಧು:**
ನೀನೆ ಅನಾಥ ಬಂಧು ಕಾರುಣ್ಯಸಿಂಧು
ಮದಗಜವೆಲ್ಲ ಕೂಡಿದರೇನು ಅವರ ವ್ಯಾಳೆಕೆ ಒದಗಲಿಲ್ಲ
ಮದನನಯ್ಯ ಮದು ಸೂದನ ಎನು
ಮುದದಿಂದಲಿ ಬಂದೊದಗಿದೆ ಕೃಷ್ಣಾ

೧೧೦

೭೦. **ಅಂಜಿಕೆ:**
ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ
ಹಾವಿಗಂಜೆ ಚೇಳಿಗಂಜೆ ಕತ್ತಿಯ ಧಾರೆಗಂಜೆ
ಇನ್ನೊಂದಕ್ಕಂಜುವೆ ಇನ್ನೊದಕ್ಕಳುಕುವೆ
ಪರಧನ ಪರಸತಿ ಗೆರಡಕ್ಕಂಜುವೆನಯ್ಯ
ಹಿಂದೆ ಕೌರವ ರಾವಣರೇನಾಗಿ ಹೋದರು
ಮುಂದೆ ಸಲಹೋ ಪುರಂದರವಿಠಲ

೧೧೦

೭೧. **ಕದ :**
ಕದವ ಮುಚ್ಚಿದಳೀದೆಕೊ ಗಯ್ಯಾಳಿ ಮೂಳಿ
ಕದವ ಮುಚ್ಚಿದಳಿದೆಕೋ ಚಿಲಕ ಅಲ್ಲಾಡುತಿದೆ
ಒಳಗಿದ್ದ ಪಾಪವು ಹೋದಿತು ಹೊರಗೆಂದು

೧೧೦

೭೨. **ಕಡುಬು :**
ಹೂರಣ ಕಡಬನು ಮಾಡಿದೆ ನಾ ೧೧೧

ಕರಿದಾ ಹೂರಣ ಕಡುಬನು ಮಾಡಿದೆ ನಾ

೭೩. **ಕಟಪಟಿ (ಹಿಂಸೆ ತೊಂದರೆ):–**
ಏತರ ಕಟಪಟಿ ಒಂದಿನ ಹೋಗುತಿ ಲಟಪಟಿ
ಬರುವಾಗ ಏನು ತಂದೆ
ಬರುತಲೇ ಎಲ್ಲಾನು ನನ್ನದೆಂದೆ
ದುಡ್ಡು ಕೂಡಿಟ್ಟು ಬಳಿದು ಹೋಗುವಾಗ
ಬಳಲಿ ಬಳಲಿ ಅಳಮಾರಿಗೆ ಬಂದೆ

೧೧೨

೭೪. **ಕರ್ಮ :**
ಆರೇನು ಮಾಡುವರು ಅವನಿಯೊಳಗೆ
ಪೂರ್ವ ಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ

೧೧೩

೭೫. **ಕಲ್ಲು :**
ಕಲ್ಲಾಗಿ ಇರಬೇಕು ಕಠಿಣ ಭವ ತೊರೆಯೊಳಗೆ
ಬಿಲ್ಲಾಗಿ ಇರಬೇಕು ಬಲ್ಲವರೊಳಗೆ
ಮೆಲ್ಲನೆ ಮಾಧವನ ಮನದಿ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಂಧು ಜನರೊಳಗೆ.

೧೧೫

೭೬ ಕಲ್ಲು ಕರಗಿಸಬಹುದು ಹುರಿಗಡಲೆಯೊಳು ಅದರ
ತೈಲವನ್ನು ತೆಗೆದಾದರುಣ್ಣಲುಬಹುದು
ಒಲ್ಲದವರ ಮನಸು ಮೆಚ್ಚಿಸಲರಿಯೆನೈ
ಹಲ್ಲು ಕಿರಿಯುತ ಹಂಬಲಿಸಿ ಬಾಯಿಬಿಡುತ

೧೧೫

೭೭ ಎಲ್ಲಮ್ಮ ಯಕಲಾತಿ ಉಡ್ಡಿ ಮೈಲಾರ ದೇವರ
ಕಲ್ಲೆಂದು ಭಜಿಪಾಗ ಕ್ಷೇಮವಿತ್ತೆ
ಬಲ್ಲಿದ ಪುರಂದರವಿಠಲನ ಭಜಿಸಲು
ಸಲ್ಲದ ವೈಕುಂಠ ಸಲ್ಲುವಂತಾಯಿತು.

೧೧೬

೭೮. **ಕಾಗದ :**
ಬಿಳಿಯ ಕಾಗದ ಹೃದಯ ಬಾಯಿ ಕಲಮದಾಗಿ
ನಾಲಗೆ ಎಂಬೋದು ಲೇಖನಿಯು
ಶ್ರೀ ಲೋಲನ ಕಥೆ ದಿವ್ಯನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ

೧೧೬

೭೯. **ಕಾಲ :**
ಕಾಲ ಕಳೆದೆನಲ್ಲಾ ಜ್ಞಾನ ಬರಲಿಲ್ಲವಲ್ಲಾ
ಕಾಲನವರು ಕರೆಯಬಂದರೆ ಏನು ಹೇಳಲಿ ಸೊಲ್ಲಾ

೧೧೭

೮೦.
ದಂಡ ದ್ರೋಹಕೆ ಉಂಟು, ಮುಂದು ಮೋಕರಿಗುಂಟು
ಹೆಂಡತಿ ಮಕ್ಕಳಿಗಿಲ್ಲೀ ಕಾಲ ೧೧೮

ದಿಂಡೇರಿಗುಂಟು ಜಗಭಂಡರಿಗುಂಟು
ಅಂಡಲೆವರಿಗಿಲ್ಲವೀ ಕಾಲ

೮೧. ಸತ್ಯವಂತರಿಗಿದು ಕಾಲವಲ್ಲ
ದುಷ್ಟಜನರಿಗೆ ಸುಭಿಕ್ಷ ಕಾಲ

೧೧೮

೮೨. **ಕುಲ:**
ಕುಲದ ಮೇಲೆ ಹೋಗ ಬೇಡ ಮನುಜಾ
ಕುಲವಿಲ್ಲ ಜ್ಞಾನಿಗಳಿಗೆ
ವರದ ಪುರಂದರವಿಠಲನ ಪಾದವ
ಸೇರಿ ಮುಕ್ತನಾಗೂ

೧೧೯

೮೩. **ಕುಂಬಾರನ ತಿಮಿರಿ :**
ಅಸ್ಥಿ ಮಲಮಾಂಸಾದಿ ಮೂತ್ರ ಅದರ
ಸುತ್ತಿಕೊಂಡಿರುವೋದು ಆ ಮರದ ಬಳ್ಳಿ
ಇಟ್ಟೆಡೆಯಲಿ ಬಾಹೋ ರಭಸ ಅದರ
ಹುಟ್ಟು ನೋಡಿದರೆ ಕುಂಬಾರನ ತಿಮಿರಿ

೧೨೦

೮೪. **ಕೂಪ (ಭಾವಿ):**
ಗುರುಗಳ ಸೇವೆ ಮಾಡಿದಿರಲ್ಲ ಗುರುತಾಗಲಿಲ್ಲ
ಪರಿ ಪರಿ ದೇಶವ ತಿರುಗಿದಿರಲ್ಲ ಪೊರೆಯುವರಿನ್ನಿಲ್ಲ
ಅರಿವೊಂದರಿಯದೆ ಆಗಮ ತಿಳಿಯದೆ
ನರಕ ಕೂಪದಲಿ ಬೀಳುವಿರಲ್ಲ

೧೨೦

೮೫. **ಕೆಟ್ಟ :**
ಅಲ್ಲದ ಕರ್ಮವ ಆಚರಿಸಿದವ ಕೆಟ್ಟ
ಲಲ್ಲೆ ಮಾತಿನ ಸತಿಯ ನಂಬಿದವ ಕೆಟ್ಟ
ಎಲ್ಲರೊಳಗೆ ವಿರೋಧಿಸಿದವ ಕೆಟ್ಟ
ಬಲ್ಲಿದವರೊಡನೆ ಸೆಣಸಾಡುವವ ಕೆಟ್ಟ
ಪುಲ್ಲನಾಭ ಶ್ರೀ ಪುರಂದರವಿಠಲನ
ಮೆಲ್ಲಡಿಗಳನ್ನು ನಂಬದವನು ಕೆಟ್ಟ ನರಗೇಡಿ.

೧೨೦

೮೬ **ಕೆರೆ :**
ಕೆರೆಯ ನೀರನು ಕೆರೆಗೆ ಚೆಲ್ಲಿ
ವರವ ಪಡೆದವರಂತೆ ಕಾಣಿರೊ
ಹರಿಯ ಕರುಣದೊಳಾದ ಭಾಗ್ಯವ
ಹರಿಸಮರ್ಪಣೆ ಮಾಡಿ ಬದುಕಿರೊ
ಸಿರಿ ಪುರಂದರ ವಿಠಲ ರಾಯನ
ಚರಣ ಕಮಲವ ನಂಬಿ ಬದುಕಿರೋ.

೧೨೧

೮೭ **ಗುಡಿಗುಡಿ :**
ಗುಡುಗುಡಿಯನು ಸೇದಿ ನೋಡೋ ೧೨೨

ಒಡಲ ಪಾಪಂಗಳೆಲ್ಲ ಈಡಾಡೊ

೮೮. **ಗೂಡು** :
ಗೂಡು ಸಿಕ್ಕಲಿಲ್ಲಾ ಗೂಡಿನ
ಜಾಡು ತಿಳಿಯಲಿಲ್ಲಾ
ಜೋಡು ಹೆಂಡಿರು ಓಡಿ ಹೋದರು
ಗೋಡೆ ಬಿದ್ದು ಬಯಾಲಾಯಿತಲ್ಲ

೧೨೨

೮೯. **ಚಿಂತೆ** :
ತನುವಿನ ಚಿಂತೆ ತನಯರ ಚಿಂತೆ ಧನಧಾನ್ಯದ ಚಿಂತೆ ವನಿತೆಯರ
ಚಿಂತೆ ಉದರದ ಚಿಂತೆ ಅನುದಿನದಲಿ ತನುವ ನೆನಸುತ ಕನಗಿನಂತೆ

೧೨೩

೯೦. **ಚಿಂತೆ** :
ಯಾಕೆ ಚಿಂತಿಸುತ್ತದ್ದಿ ಕೋತಿ ಮನವೆ
ಲೋಕನಾಥನ ನೆನೆದು ಸುಖಿಯಾಗು ಮನವೆ

೧೨೪

೯೧. **ಜಂಗಮರು** :
ಜಂಗಮರು ನಾವು ಜಗದೊಳು
ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರು ಭವಿಗಳೆಂತಂಬಿರಿ

೧೨೫

೯೨. **ತುರುಕರು** :
ತುರುಕರು ಕರೆದರೆ ಉಣಬಹುದಣ್ಣ
ತುರುಕರು ಕರೆದರೆ ಅತಿ ಪುಣ್ಯವಯ್ಯ

೧೨೬

೯೩. **ದುಗ್ಗಾಣಿ** :
ದುಗ್ಗಾಣಿ ಎಂಬುದು ದುರ್ಜನ ಸಂಗ
ದುಗ್ಗಾಣಿ ಬಲು ಕೆಟ್ಟದಣ್ಣ

೧೨೭

೯೪. **ದೇಹ** :
ನಂಬದಿರು ಈ ದೇಹ ಅಂಬುಗುಳ್ಳೆಯಂತೆ
ನಂಬಿ ನೀ ಕೆಡಲಿಬೇಡ
ಕೊಂಬುದವರು ಬಂದರೆ ಕೊಡರೊಂದು ರುವ್ವಿಯನು
ಅಂಬುಜಾಕ್ಷ ಪುರಂದರವಿಠಲನ್ನು ನೆನೆ ಮನವೆ.

೧೨೮

೯೫. **ದೇಹ**:
ಜನನ ಮರಣ ಮಲದಾ ಕೂಪದಲ್ಲಿದ್ದು
ಅನುಭವಿಸುವುದು ಇದೇನು ಸುಖ
ತನುವಿದ್ದಾಗಲೇ ಹೃದಯ ಶೌಚದ
ಸ್ತನಗಳೆಂಬುವುದೇನು ಸುಖ

೧೨೮

೯೬ **ದೇಹ :**

ನೆಲೆಯಿಲ್ಲದೀ ಕಾಯ ಎಲುವಿನಹಂದರ
ಬಲಿದು ಹೊದ್ದಿಸಿದ ಚರ್ಮದ ಹೊದ್ದಿಕೆ
ಮಲಮೂತ್ರಗಳು ಮಾಂಸ ರಕ್ತದ ರಾಶಿಯು
ಹೊಲಸು ದೇಹವ ನೆಚ್ಚಿಕೆಡಬೇಡಿರೋ

೧೨೮

೯೭ **ದೇಹ :**

ನೀರ ಬೊಬ್ಬುಳಿಯಂತೆ ನಿತ್ಯವಲ್ಲವೋ ದೇಹ
ಧಾರುಣಿ ಧನ ಸ್ತ್ರೀಗೆ ಮರುಳಾಗ ಬೇಡ
ನೀರಜನಾಭ ಶ್ರೀ ಪುರಂದರವಿಠಲನ
ಬಾರಿ ಬಾರಿಗೆ ನೆನೆದು ಸುಖಿಯಾಗೋ ಮನುಜ

೧೩೦

೯೮. **ದೇಹ :**

ಕೂಳಿನ ಬಲದಲಿ ಬೆಳೆದ ಕಾಯದ
ಬಾಳುವೆಯೆಂಬುದು ಸ್ಥಿರವಲ್ಲ
ಮಾಳಿಗೆ ಮನೆಯುಪ್ಪರಿಗೆಯು ಕೋಣೆಯು
ಪೌಳಿಗಳಲ್ಲಲ್ಲಿಹುದಲ್ಲ

೧೩೦

೯೯. **ದೇಹ:**

ಈ ದೇಹ ನೀ ಬಿಟ್ಟ ಬಳಿಕ ನಿನ್ನವರು
ಬೀದಿಯಲಿ ನಿಂತು ಬೊಬ್ಬೆ ಹಾಕುವರು
ಬಾಧೆಗೋಸ್ಕರ ಬೆಂಕಿ ಹಾಕಿ ಸುಡುವರು ನಿಂತ
ಭೂದಿಯ ನೀರೊಳು ಬೆರೆಸಿ ಚೆಲ್ಲುವರು

೧೩೦

೧೦೦. **ದೇಹ :**

ಈ ತನುವ ನಂಬಲು ಬೇಡೊ ಜೀವವ
ಅನುವಾಗಿ ನಿನ್ನಂಗಕೆ ಕೆಲಕಾಲ ತೋರುವುದೊ
ಅನುವಿಲ್ಲದಾಗ ಈ ತನುವೆ ನಿನಗೆ ವೈರಿ

೧೩೨

೧೦೧.

ಖಂಡ ಮೌಂಸಗಳು ತುಂಬಿದ ದೇಹವ ಕಂಡು ಸಂತೋಷದಿ ಉಬ್ಬುತಿ
ಕಂಡ ಕಂಡುದಾಪೇಕ್ಷಿಸಿ ಮನದಲಿ ಉಂಡೇನೆನ್ನುತ ಹಿಗ್ಗುತಿ
ಕಂಡುಕೊಳ್ಳದೆ ಮುಂದಿನ ಮಾರ್ಗವ ಪುಂಡಾಟಗಳನು ಮಾಡುತಿ
ಕಂಡ್ಯಮದೂತರು ಕೊಂಡೊಯ್ದು ನಿನ್ನನ್ನು ದಂಡೀಸುವಾಗ ಕಣ್ಣಿಕ್ಬಿಡುತ್ತಿ

೧೩೩

೧೦೨. ತನುವೆಂಬ ದೊಡ್ಡ ದೋಣಿಯಲಿ
ಹರಿನಾಮವೆಂಬ ಬಂಡವ ತುಂಬಿ
ವ್ಯವಹಾರವನು ಮಾಡುವೆಯಯ್ಯ
ಇಂದ್ರಿಯಗಳೆಂಬ ಸುಂಕದವರಡ್ಡಾಗಲು
ಮುಕುಂದನ ಮುದ್ರೆಯನೆ ತೋರಿ
ಹೊಳೆಯ ದಾಟುವೆನಯ್ಯ
ಪುರಂದರವಿಠಲನಲ್ಲಿಗೆ ಪೋಗಿ ೧೩೪

ಮುಕುತಿ ಸುಖವೆಂಬ ಲಾಭಗಳಿಸುವೆನಯ್ಯ

೧೦೩. ನೀರಮೇಲಣ ಗುಳ್ಳೆಯಂತೆ ಈ ದೇಹ
ನಿಮಿಷವೋ ನಿಮಿಷಾರ್ಧವೂ ಕಾಣಬಾರದು

೧೩೪

೧೦೪. ನಂಬದಿರು ಈ ದೇಹ ನಿತ್ಯವಲ್ಲ
ಅಂಬುಜಾಕ್ಷನ ಭಜಿಸಿ ಸುಖಿಯಾಗೊ ಮನವೆ

೧೩೬

೧೦೫. ನಾರಾಯಣನೆಂಬ ನಾಮವ ಮನದಲಿ ನೆನೆಯತಿರೆಚ್ಚರಿಕೆ
ನೀರ ಮೇಲಣ ಗುಳ್ಳೆಯಂತಿಹ ಡೀಂಬವ ನಂಬದಿರೆಚ್ಚರಿಕೆ

೧೩೬

೧೦೬. ಇಂದ್ರಿಯಗಳ ಸುಖವ ನೆಚ್ಚದಿರು ಕಂಡ್ಯ
ಇಂದ್ರಾದಿ ಲೋಕವೆಲ್ಲವು ಕಾಲ ಕಂಡ್ಯ
ಎಂದಿನಂತಲ್ಲ ಈ ದೇಹ ಕಳೆ ಕಂಡ್ಯ
ಹಿಂದು ಮುಂದಣ ಗತಿಯ ಅರಿತಿಹುದು ಕಂಡ್ಯ

೧೩೬

೧೦೭. ತನುವೆಂಬ ಮಂಟಪದಿ
ಮನವೆಂಬ ಹಸೆಮಂಚ
ಘನವಾದ ಸುಜ್ಞಾನ ದೀಪದಬೆಳಕಲ್ಲಿ
ಸನಕಾದಿ ವಂದ್ಯನೀ ಬೇಗನೆ ಬಾರೊ.

೧೩೭

೧೦೮. ಅರುಣ ಉದಯದಲೆದ್ದು ಹರಿಯ ಸ್ಮರಣೆಯ ಮಾಡಿ
ಗುರು ಹಿರಿಯರನು ಮನದಿ ನೆನೆದು ನೆನೆದು
ಪರಮ ಸುಖಿಯಾಗಿ ನದಿಯೊಲುಮಿಂದು ರವಿಗರ್ಘ್ಯ
ವೆರೆಯದ ಕಡು ಪಾಪಿಯಾದ ಈ ತನುವಿನಲಿ

೧೩೭

೧೦೯. ಮಲಮೂತ್ರ ದೇಹದೊಳ್ ಬಂದು ಬಲು
ಅರಸಿದೆ ನಿನ್ನ ಕಾಣದೆ ದೇಹ ನೊಂದು
ಲಲನೆಗಕ್ಷಯವಿತ್ತೆ ಎಂದು ನಿನ್ನ
ಒಳಗಿನ ಕರುಣದ ಕಂದ ನಾನೆಂದು

೧೩೮

೧೧೦. ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ
ಮತ್ತೆ ಮುರಾರಿ ಕೃಷ್ಣನ ನೆನೆಯಲು
ಮುಕ್ತಿಗೆ ಸಾದನವಣ್ಣ ದೇಹ

೧೩೮

೧೧೧. ಎಳು ಸುತ್ತಿನ ಕೋಟೆ ಘನ ದುರ್ಗವನ್ನು
ಕಾಲನವರು ಬಂದು ಕರೆಯುವ ಮುನ್ನನೀ

೧೩೯

೧೧೨. ಹರಿಭಕುತಿ ಉಳ್ಳವರ ಶರೀರವೇ ಕುರುಕ್ಷೇತ್ರ
ಅವರು ನರರೆಂದು ಬಗೆವವರೆ ನರಕವಾಸಿಗಳು

೧೪೦

೧೧೩. **ದುಗ್ಗಾಣಿ :**
ದುಗ್ಗಾಣಿ ಎಂಬುದು ದುರ್ಜನ ಸಂಗ
ದುಗ್ಗಾಣಿ ಬಲು ಕೆಟ್ಟದಣ್ಣಾ

೧೪೧

೧೧೪. **ದುಃಖ :**
ಒಂದಲ್ಲ ಎರಡಲ್ಲ ನೊಂದ ಜೀವಕ್ಕೆ ದುಃಖ
ಒಂದೊಂದೂ ಕ್ಷಣಕೆ ಅನಂತ ದುಃಖ

೧೪೧

೧೧೫. **ನಗೆ :**
ನಗೆಯು ಬರುತಿದೆ ಎನಗೆ ನಗೆಯು ಬರುತಿದೆ
ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು

೧೪೨

೧೧೬. **ನಡತೆ :**
ಜನರ ನಡತೆ ಕೇಳಿರಯ್ಯ ಇಂಥ
ಜನರ ನೋಡಿ ನೀವು ಏನೆಂಬಿರಯ್ಯ

೧೪೩

೧೧೭. **ನಾಟಕಸ್ತ್ರೀ :**
ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟ ನೀತ ಸರಿಯಾರಿಲ್ಲೆನಿಸಿ
ನಾಟಕಸ್ತ್ರೀಯಂತೆ ಬಯಲಢಂಬವ ತೋರಿ
ಊಟದ ಮಾರ್ಗವ ಜ್ಞಾನವಿಲ್ಲದೆ.

೧೪೩

೧೧೮. **ನಾಲಿಗೆ :**
ಆಚಾರವಿಲ್ಲದ ನಾಲಿಗೆ ನಿನ್ನ
ನೀಚ ಬುದ್ಧಿಯ ಬಿಡು ನಾಲಿಗೆ
ವಿಚಾರವಿಲ್ಲದೆ ಪರರ ದೂಷಿಸುದಕ್ಕೆ
ಚಾಚಿ ಕೊಂಡಿರುವಂಥ ನಾಲಿಗೆ

೧೪೪

೧೧೯. **ನಾಲಿಗೆ :**
ಒಡವೆ ಅರಸಿಗೆ ಒಡಲು ಅಗ್ನಿಗೆ
ಮಡದಿ ಮತ್ತೊಬ್ಬ ಚೆಲುವಿಗೆ
ಬಡಿದು ಹೊಡೆದು ಯಮನವರೆಳೆವಾಗ
ಎಡವಿ ಬಿದ್ದಿತು ನಾಲಿಗೆ

೧೪೫

೧೨೦. **ನಾರಿ :**
ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ
ಪಡೆದವಳ ಎದೆಗೊರಳ ಕೊಯ್ವಂಥ ಚೂರಿ

೧೪೫

೧೨೧. **ಪಾಶ :**
ಸಾಕು ಸಂಸಾರ ತೆರೆಯ ನೂಕಲಾರೆನು
ಬೇಕು ನಿನ್ನ ಚರಣ ಕಮಲ ಬೇರೆ ಅನ್ಯತ್ರ ಗತಿಯಕಾಣೆ

೧೪೬

೧೨೨. **ಪಾಶ:**

ತಂದೆ ತಾಯಿ ಬಂಧು ಬಳಗ
ವೆಂದು ಪಾಶಕ್ಕೆಸಿಕ್ಕು
ಒಂದು ದಿನದ ಸುಖವನು ಇಂದು ಕಾಣೆನೋ
ಕಂದರ್ಪಜನಕ ಕಾಯದಿರೆ
ಕುಂದುನಿಂದೆ ಬಂದರೆ ದೂರು ತಂದು
ಕೊಡುವರು ಲಕ್ಷ್ಮೀರಮಣ

೧೪೬

೧೨೩ **ಪಾಯಸ :**

ಬರಿದೆ ನೀ ಬಯಸದಿರಿಹಲೋಕ ಸುಖವೆಂಬೊ
ಅರಗಿನ ಪಾಯಸವ

೧೪೬

೧೨೪. **ಬೇರ (ವ್ಯಾಪಾರ):**

ನಾನು ಬೇರ ಮಾಡುವೆ
ಎನ್ನ ನಾಲಿಗೆಯೆಂಬ ಎತ್ತನೇರಿಕೊಂಡು
ತನುವೆಂಬೋ ಒಂದು ಗೋಣಿಯಲ್ಲಿ
ರಾಮನಾಮವೆಂಬೊ ಸರಕು ತುಂಬಿಕೊಂಡು

೧೪೭

೧೨೫. **ಬೈಗುಳ :**

ಬೈಯಿರೋ ಬೈಯಿರೋ
ಮನಮುಟ್ಟ ಬೈಯಿರೋ
ಚೆನ್ನಾಗಿ ಬೈದೆನ್ನ ಧನ್ಯನ ಮಾಡಿರೋ
ಅವರು ಇವರು ಬೈವರೆಂಬೊ
ಹೀನಬುದ್ಧಿ ನನಗಿಲ್ಲ
ನಾ ಮಾಡಿದಷ್ಟು ಪಾಪವನ್ನು
ಅಳೆದು ಹಾಕಿ ಹಂಚಿಕೊಳ್ಳಿರೋ

೧೪೮

೧೨೬ **ಮಾರಿ :**

ಒಂದು ತಂದರೆ ಮನೆಗೆ ಹತ್ತಾಗಿ ಭಾವಿಸದೆ
ತಂದರೆ ಹತ್ತು ಮನೆಯೊಳಗೊಂದು ಮಾಡಿ
ಇಂದೇನಿಲ್ಲವು ಎಂದು ಮುಖ ಮೂರು ಕಡೆ ತಿರುವಿ
ಕೊಂದು ಹೋಗುವನಾರಿ ಬಹುದೊಡ್ಡ ಮಾರಿ

೧೪೮

೧೨೭ **ಮಣ್ಣು :**

ಮಣ್ಣಿಂದ ಕಾಯ ಮಣ್ಣಿಂದ
ಮಣ್ಣಿಂದ ಸಕಲ ದೇಶಗಳಲ್ಲಿ
ಮಣ್ಣಿಂದ ಸಕಲ ವಸ್ತುಗಳಲ್ಲಿ
ಮಣ್ಣು ಬಿಟ್ಟವರಿಗೆ ಆಧಾರವಿಲ್ಲ
ಅಣ್ಣಗಳಿರೆಲ್ಲರೂ ಕೇಳಿರಯ್ಯ

೧೪೯

೧೨೮. **ಮಾಯಾಪಾಶ :**

ಮಡದಿ ಮಕ್ಕಳ ಮಮಕಾರಕೆ ಮನ ೧೪೯

ಒಡಂಬಡುತ ನಗುತ್ತಲಿರಬೇಡ
ಬಿಡಲಾರದೆ ಮಾಯಾಪಾಶಕೆ ಸಿಲುಕಿ
ಕಡೆಗಾಣದೆ ನೀ ಕೆಡಬೇಡ

೧೨೯. **ಮುರ್ಖ :**
ಯಾಕೆ ಮೂರ್ಖನಾದ್ಯೋ ನೀನು
ಯಾಕೆ ಮೂರ್ಖನಾದ್ಯೋ

೧೫೦

೧೩೦. **ಮೂಢ :**
ಮಾಡಿಟ್ಟ ಮನೆಯಲ್ಲಿ ಕೂಡಿಟ್ಟ ಧನವಿಲ್ಲ
ಆಡಿಸಿಕೊಳ್ಳಲು ಮಕ್ಕಳಿಲ್ಲ
ಪಾಡಿ ನಿನ್ನನು ಸ್ತುತಿ ಮಾಡುವೆನೆಂದರೆ
ಮೂಢರೊಳಗೆ ಬಲು ಮೂಢನಾಗಿಹೆನೆಂದು

೧೫೧

೧೩೧. **ರೊಕ್ಕ :**
ರೊಕ್ಕ ಎರಡಕ್ಕೂ ದುಃಖ ಕಾಣಕ್ಕ
ನೆಂಟರ ಇಷ್ಟರ ಮರೆಸೋದು ರೊಕ್ಕ
ಕಂಟಕಗಳ ಪರಿಹರಿಸೋದು ರೊಕ್ಕ
ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ
ತುಂಟತನಗಳನು ಬಲಿಸೋದು ರೊಕ್ಕ

೧೫೧

೧೩೨. **ಲೊಳಲೊಟ್ಟೆ :**
ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ
ಆನೆ ಕುದುರೆ ಒಂಟೆ ಲೊಳಲೊಟ್ಟೆ ಬಹು
ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ, ದೊಡ್ಡ
ಕ್ಷೋಣೀಶನೆಂಬುದು ಲೊಳಲೊಟ್ಟೆ

೧೫೨

೧೩೩. **ವಾರಿಧಿ : (ಸಮುದ್ರ)**
ಘೋರತನದ ಸಂಸಾರ ದುಃಖದ
ವಾರಿಧಿ ಇದರೊಳಗೇನುಂಟು
ಮೂರುದಿವಸ ನೀ ಬಾಳುವ ಬಾಳಿಗೆ
ಹಾರೈಸುವುದೇತರ ನಂಟು

೧೫೨

೧೩೪. **ಶುದ್ಧಿ :**
ಮನಶುದ್ಧಿಯಿಲ್ಲನವಗೆ ಮಂತ್ರದ ಫಲವೇನು
ತನುಶುದ್ಧಿಯಿಲ್ಲದವಗೆ ತೀರ್ಥದ ಫಲವೇನು

೧೫೩

೧೩೫. **ಶ್ವಾನನಕುಳಿ :**
ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ
ನೇಮನಿಷ್ಠಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ
ತಾವೊಂದರಿಯದೆ ಆಗಮತಿಳಿಯದೆ ೧೫೩

ಶ್ವಾನನ ಕುಳಿಯಲಿ ಬೀಳುವಿರಲ್ಲ

೧೩೬ **ಸಂಗ :**
ಭಾಷೆ ಹೀನರ ಸಂಗದಭಿಮಾನ ಭಂಗ
ಬೇಸತ್ತು ಬೇಲಿಯ ಮೆಲೊರಗಿದಂತೆ

೧೫೪

೧೩೭ **ಸ್ನಾನ :**
ಸ್ನಾನ ಮಾಡಿರಯ್ಯ ಜ್ಞಾನತೀರ್ಥದಲಿ
ನಾನು ನೀನೆಂಬಹಂಕಾರವ ಬಿಟ್ಟು

೧೫೪

೧೩೮. **ಸಂಬಳ :**
ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ
ಪೆರ್ಮೆಯಿಂದ ದೇಹವ ನಂಬಬೇಡಿ ಕಾಣಿರೊ

೧೫೫

೧೩೯. **ಸಂಸಾರ:**
ಸಂಸಾರವೆಂಬಂಥ ಭಾಗ್ಯವಿರಲಿ
ಕರಿಸಾರಿ ನೆನೆವೆಂಬ ಸೌಭಾಗ್ಯವಿರಲಿ

೧೫೬

೧೪೦. **ಸಂಸಾರ:**
ಬಾಲ್ಯದಲ್ಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನ ಮದದಿ ಮುಂದರಿಯದಿದ್ದೆ
ಜಾಲ ಸಂಸಾರದಲ್ಲಿ ಸಿಲುಕಿ ಬಳಲಿದೆನಯ್ಯ
ಪಾಲಿಸೋ ಪರಮಾತ್ಮ ಭಕ್ತಿಯ ಕೊಟ್ಟ

೧೫೬

೧೪೧. ನೆಚ್ಚಬೇಡ ಪ್ರಾಣಿ ಸಂಸಾರ ಸ್ಥಿರವೆಂದು
ಹುಚ್ಚು ಬುದ್ಧಿಲಿ ನೀನು ಕೆಡಬೇಡ ಕಂಡ್ಯ
ಸ್ವೇಚ್ಛೆಯಿಂದಿರದೆ ಧರ್ಮದಿ ನೀನು ನಡೆ ಕಣ್ಣ
ಮುಚ್ಚಿದ ಮೇಲುಂಟೆ ನರ ಜನ್ಮ ಸ್ಥಿರವೆಂದ

೧೫೭

೧೪೨. ಎನು ಇಲ್ಲವೋ ಎರಡು ದಿನದ ಸಂಸಾರ
ದಾನ ಧರ್ಮವ ಮಾಡು ಇದನರಿತು ಮನುಜ

೧೫೭

೧೪೩. ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗೆತನದ
ಆರು ಮಂದಿ ಗಂಡರಾಳುವರು ಎನ್ನ
ಆರು ಮಂದಿಗೆ ಮಾರು ಸುತರೆನಗೆ
ಆರು ಮೂರೇಳವರು ಭಾವ ಮೈದುನರೆಲ್ಲ
ಆರೇನೆಂದರೆ ಬಿಡರು ಆರಿಗುಸಿರಲಮ್ಮ

೧೫೭

೧೪೪. ಒಂಬತ್ತು ಬಾಗುಲೊಳು ಒಂದೇ ದೀವಿಗೆ ಹಚ್ಚಿ
ನಂಬಿಕಿಲ್ಲದ ಸಂಸಾರ ಮಾಡಿದೆನೆ ಸೂವಿಯಾ ಬೀಬಿ

೧೫೮

೧೪೫. ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು ೧೫೮

ತೋಯಜಾಕ್ಷನ ದಯ ನಮಗೀಗ ದೊರೆಯಿತು ಇನ್ನೇನಿನ್ನೇನು

೧೪೬. **ಸ್ನೇಹ:**
ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡ ಜಗಳವೆ ಲೇಸು
೧೫೮

೧೪೭. **ಹಡಗು :**
ಎಡೆಬಿಡದೆ ಅನುದಿನದಿ ಪಾಪದ ಕಡಲೊಳಗೆ ನಾ ಬಿದ್ದನೋ
ದಡವ ಕಾಣದೆ ದುಃಖದೊಳು ಬೆಂದೊಡಲೊಳಗೆ ನಾ ನೊಂದೆನೋ
ಬಿಡದೆ ನಿನ್ನಯ ಧ್ಯಾನವೆಂದೆಂಬ ಹಡಗವೇರಿಸು ಎಂದೆನೋ
ದೃಢದಿ ನಿನ್ನಯ ಪಾದ ಸೇರಿಸೊ ಒಡೆಯ ಪುರಂದರವಿಠಲ
೧೫೯

೧೪೮. **ಹಮ್ಮು (ಅಹಂಕಾರ) :**
ಹಮ್ಮು ಮಾಡಲಿಬೇಡಿ ಹಮ್ಮು ಈಡ್ಯಾಡುವುದು
ಹಮ್ಮಿನಿಂದಲಿ ನಿವು ಕೆಡಬೇಡಿರಯ್ಯ
೧೫೯

೧೪೯. **ಹಾಲು–ನೀರು :**
ದುರ್ಜನರ ಮನೆಯೊಳಿಹ ಹಾಲ ಸವಿಗಿಂತ
ಸಜ್ಜನರ ಮನೆಯೊಳಿಹ ನೀರು ಲೇಸು
ದುರ್ಜನರ ಸಂಗದೆಡೆ ಕೂಡಿಯಾಟದಕಿಂತ
ಸಜ್ಜನರ ಕೂಡೆ ಕಾದಾಡುವುದೆ ಲೇಸು
೧೫೯

೧೫೦. **ಹೆಣ್ಣು :**
ತಾಯಾಗಿ ಮೊದಲೆ ಪಡೆದಿಹುದು ಮತ್ತು
ಜಾಯೆ ಎಂದೆನಿಸಿ ಕಾಮದಿ ಕೆಡಹುವುದು
ಕಾಯದೊಳು ಜನಿಸುತ್ತಲಿಹುದು ಇಂತು
ಮಾಯೆಯಂ ನಿನ್ನ ಬಹು ವಿಧದಿ ಕಾಡುತಲಿಹುದು
೧೬೦

೧೫೧. **ಹೊಲೆಯ :**
ಹೊಲೆಯ ಹೊರಗಿಹನೆ ಊರೊಳಗಿಲ್ಲವೆ
ಹರಿಯ ಭಕ್ತರು ಪೇಳಿ ಮತ್ತಿದನು
ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ
ಹೇಳಿದ ಹರಿಕತೆಯ ಕೇಳದವ ಹೊಲೆಯ
ಆಳಾಗಿ ಅರಸಂಗೆ ಕೇಡುಬಗೆವವ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ
೧೬೧

೧೫೨. ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ
ಫಣ ಫಣ ಘಂಟೆ ಬಾರಿಸುತ
ತನುವಿನ ಕೋಪ ಹೊಲೆಯಲ್ಲವೇನಯ್ಯ
ಮನಸಿನ ವಂಚನೆ ಹೊಲೆಯಲ್ಲವೇನಯ್ಯ
ಇಂಥಾ ಹೊರಗಿದ್ದ ಹೊಲೆಯನ್ನ ಒಳಗೆ
ತುಂಬಿಟ್ಟು ಕೊಂಡರೆ
ಇದಕೇನು ಮದ್ದೋ ಪುರಂದರವಿಠಲ. ೧೬೨

## ೩ ಸಸ್ಯ ಪ್ರತಿಮೆಗಳು

ಕ್ರಸಂ. ಪುಸಂ.

೧೫೩. **ಕಮಲ:**

ಕಮಲ ಅರ್ಕನಲ್ಲಿರುವ ಕಡುನಂಟತನದಿಂದ
ವಿಮಲ ಜಲದೊಳಗೆ ಓಲಾಡುತಿಹುದು
ಕ್ರಮಗೆಟ್ಟು ನೀರಿಂದ ಕಡೆಗೆ ಬೀಳಲು ರವಿಯ
ಅಮಿತ ಕಿರಣಗಳಿಂದ ಕುಂದಿ ಹೋಗುವುದು.

೧೬೪

೧೫೪. **ಕಬ್ಬು:**

ಹಸಿ ಕಬ್ಬು ಡೊಂಕೇನೊ ಅದರ
ರಸ ತಾ ಡೊಂಕೇನೋ
ವಿಷಯಾಸೆಗಳ ಬಿಟ್ಟು
ಹಸನಾದ ಗುರು ಭಕ್ತಿ ಮಾಡೊ

೧೬೫

೧೫೫. **ಕಾನನ (ಕಾಡು):**

ಹೀನ ಮಾನಿನಿಯರ ಧ್ಯಾನ ಕಾನನದೊಳು
ನರಳದಿರೆಚ್ಚರಿಕೆ
ನಾನೆಂಬ ಅಹಂಕಾರ ಮಾಡಿ ನರಕದೊಳು
ನರಳದಿರೆಚ್ಚರಿಕೆ

೧೬೫

೧೫೬. **ಕಲ್ಪವೃಕ್ಷ:**

ನರವೃಂದವೆಂಬೋ ಕಾನನದಲಿ ಶ್ರೀ
ಹರಿನಾಮವೆಂಬಂಥ ಕಲ್ಪವೃಕ್ಷ ಹುಟ್ಟಿತಯ್ಯ
ನೆರಳು ಸೇರಲುಂಟು ಫಲವು ಮೆಲ್ಲಲುಂಟು
ಒರೆವ ನಾಲಿಗೆಯಲಿ ನಾಮತ್ರಯಗಳುಂಟು
ಇದೇ ಮುನಿಜನರ ಮನೆಯ ಕೊನೆಯ ಠಾವು
ಇದೇ ಬ್ರಹ್ಮಾದಿಗಳ ಸದಮಲಹೃದಯಪೀಠ
ಇದೇ ದ್ವಾರಾವತಿ ಇದೇ ಕ್ಷೀರಾಂಬುಧಿ
ಇದೇ ಪುರಂದರವಿಠಲನ ವೈಕುಂಠಮಂದಿರ

೧೬೬

೧೫೭. ಕಲ್ಪವೃಕ್ಷ ನೋಡಿರೈ ಕಲ್ಪಭೂರುಹರ
ನಾಡೊಳಗಚ್ಯುತದಾಸರು ನರರೇ

೧೬೬

೧೫೮. **ಕುಮುದನೈದಿಲೆ:**

ವೈಷ್ಣವೋತ್ತಮನೆ ಸದ್ವೈಷ್ಣವಪ್ರವ್ರಜಾನಂದ
ವೈಷ್ಣವಾಗಮಭರಿತ ವೈಷ್ಣವಸುಪ್ರೀತ
ವೈಷ್ಣವಕಮಲಸೂರ್ಯ ವೈಷ್ಣವಕುಮುದಚಂದ್ರ
ವೈಷ್ಣವಕುಲೋತ್ಕೃಷ್ಟ ವೈಷ್ಣವವಿಶಿಷ್ಟ

೧೬೭

೧೫೯. **ಗೇರುಹಣ್ಣು:**

ದಾರಿ ಯಾವುದಯ್ಯಾ ವೈಕುಂಠಕೆ ದಾರಿ ತೋರಿಸಯ್ಯ
ಗೇರುಹಣ್ಣಿನಲ್ಲಿ ಬೀಜ ೧೬೮

ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ
ಧೀರ ಕೃಷ್ಣನ ಭಕುತರೆಲ್ಲ

೧೬೦. **ಗೋಪಾಳಬುಟ್ಟಿ:**
ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತ್ತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳಬುಟ್ಟಿ ಹಿಡಿಸಿದಳಯ್ಯ
೧೬೮

೧೬೧. **ಜಾಲಿಮರ:**
ಜಾಲಿಯ ಮರದಂತೆ ಧರೆಯೊಳು ದುರ್ಜನರು
ಮೂಲಾಗ್ರ ಪರಿಯಂತ ಮುಳ್ಳುಕೂಡಿಪ್ಪಂತೆ
೧೬೮

೧೬೨. **ತಾವರೆ ಎಲೆ:**
ತಾಮರಸ ಜಲದಂತೆ
ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮ ಎನುತ ಪಾಡಿ
ಕಾಮಿತ ಕೈಗೊಂಬರೆಲ್ಲ
೧೬೯

೧೬೩ **ತಾವರೆ:**
ಇತ್ತ ಬಾರೆಂಬರಿಲ್ಲ ಇರವು ಕೇಳುವರಿಲ್ಲ
ಹತ್ತಿರ ಕುಳ್ಳಿರಿಸಿ ಆದರಿಪರಿಲ್ಲ
ತತ್ತರ ಪಡುತ್ತೇನೆ ತಾವರೆ ಜಲದಂತೆ
ಚಿತ್ತ ಭ್ರಮಿಸಿ ಕಣ್ಣು ಕತ್ತಲಾಯಿತು ಹರಿಯೆ.
೧೭೦

೧೬೪. **ತೃಣ(ಹುಲ್ಲು):**
ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದೆ ಭವದಿ ನೊಂದಿಹೆ ನಾನು
ಸನಕಾದಿ ಮುನಿವಂದ್ಯ ವನಜ ಸಂಭವನಕ
ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀ ಕೃಷ್ಣ
೧೭೦

೧೬೫. ವಿಷಯ ಭೋಗದ ತೃಣಕ್ಕೆ ಉರಿಯಾಗಿ ಇರಬೇಕು
ನಿಶೆಹಗಲು ಶ್ರೀ ಹರಿಯ ಭಜಿಸಬೇಕು
ವಸುಧೆಯೊಳು ಪುರಂದರ ವಿಠಲನ ನಾಮವ
ಹಸನಾಗಿ ನೆನೆ ನೆನೆದು ಸುಖಿಯಾಗಬೇಕು.
೧೭೦

೧೬೬ **ತುಳಸಿ:**
ಇರುವುದಾದರೆ ಮುಗುಳು ತೆನೆ
ಅದಿಲ್ಲದಿದ್ದರೆ ಚಿಗುರೆಲೆ
ಅದೂ ಇಲ್ಲದಿದ್ದರೆ ಬರಲು ಕಟ್ಟಿಗೆ
ಇಲ್ಲದಿದ್ದರೆ ಬೇರು ಮಣ್ಣು ೧೭೧

ಅದೊಂದು ಇರದಿರೆ ತುಳಸಿ ತುಳಸಿ
ಎಂದೊರಲಿದರೆ ಸಾಕು
ಎಲ್ಲ ವಸ್ತುಗಳನೀಡಾಡುವ ಪುರಂದರವಿಠಲ

೧೬೭ **ತುಳಸಿಮಾಲೆ:**
ತುಳಸಿಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸಿಮಾಲೆ ಹಾಕಿಸಿದನು.

೧೭೧

೧೬೮. ಎಳೆ ತುಳಸಿ ವನಮಾಲೆ ಧರಿಸಿಕೊಳ್ಳಬೇಕು
ಫಳಿಲನೇ ಹರಿಯ ಪೂಜಿಸುತಿರಲುಬೇಕು
ಕಳಕಳನೆ ಏಕಮನ ಕರಗುತಿರಬೇಕು
ನಳಿನ ನಾಭನ ಪಾದ ಪೊಗಳುತಿರಬೇಕು.

೧೭೨

೧೬೯ **ದಂಡಿಗೆ ಬೆತ್ತ:**
ಆದದ್ದೆಲ್ಲಾ ಒಳಿತೆ ಆಯಿತು ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು
ದಂಡಿಗೆ ಬೆತ್ತ ಹಿಡಿಯುವುದಕ್ಕೆ ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ

೧೭೨

೧೭೦ **ನವ ಬೆಳೆ:**
ತನುವೆಂಬ ಕಲ್ಲಿನೊಳು ಮನವೆಂಬ ಧಾನ್ಯವ ತುಂಬಿ
ವನವನದು ನವಬೇಳೆ ಬೀಸಿದೆನೆ
ಅಷ್ಟಕರ್ತಗಳೆಂಬೋ ಅಷ್ಟನವಧಾನ್ಯವ ತಂದು
ಕುಟ್ಟಿ ಕುಟ್ಟಿ ಕಜ್ಜಾಯ ಕರೆದೇನೆ.

೧೭೩

೧೭೧. **ಬೀಜ:**
ನಾರಾಯಣನೆಂಬ ನಾಮದ ಬೀಜವ
ನಾಲಿಗೆ ತುದಿಯಲಿ ಬಿತ್ತಿರಯ್ಯ
ಹೃದಯ ಹೊಲವ ಮಾಡಿ ಮನವನೇಗಿಲ ಮಾಡಿ
ಶ್ವಾಸೋಚ್ಛಾಸ ಎರಡೆತ್ತು ಮಾಡಿ
ಜ್ಞಾನವೆಂಬ ಹಗ್ಗ ಕಣ್ಣಿಯ ಮಾಡಿ
ನಿರ್ಮಮವೆಂಬ ಗುಂಟೆಲಿ ಹರವಿರಯ್ಯ

೧೭೪

೧೭೨. ನಾರಾಯಣನೆಂಬ ನಾಮದ ಬೀಜವ
ನಾರದ ಬಿತ್ತಿದ ಧರೆಯೊಳಗೆ

೧೭೫

೧೭೩. **ಬೇವು:**
ಬೇವಿನಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ
ಜೇನ ಮಳೆಗೆರೆದರೆ ವಿಷ ಹೋಹುದೇನಯ್ಯ
ಏನು ಓದಿದರೇನು, ಏನು ಕೇಳಿದರೇನು ೧೭೫

ಮನದೊಳಗಿನ ತಾಮಸ ಮಾಣದನಕ
ಕೊಳಲದನಿಗೆ ಸರ್ಪ ತಲೆದೂಗು ವಂದದಿ
ಎನ್ನೊಡೆಯ ಕೇಳಯ್ಯ ಶ್ರೀಪತಿ ಪುರಂದರವಿಠಲ

೧೭೪. **ಮರ:**
ಮರ ವಿದ್ದರೇನಯ್ಯ ನೆರಳಿಲ್ಲದನಕ
ನೆರಳಿದ್ದರೇನಯ್ಯ ನೀರಿಲ್ಲದನಕ
ನೀರಿದ್ದು ಫಲವೇನು ಒರೆತಿಲ್ಲತನಕ
ಧನವಿದ್ದು ಫಲವೇನು ಕೊಡುವ ಮನವಿಲ್ಲದನಕ
೧೭೫

೧೭೫. **ಮರದ ಬಳ್ಳಿ:**
ಮಲ ಮಾಂಸಾದಿ ಮೂತ್ರ ಅದರ
ಸುತ್ತಿಕೊಂಡಿರುವೋದು ಆ ಮರದ ಬಳ್ಳಿ
ಇಟ್ಟೆಡೆಯಲಿ ಬಾಹೊ ರಭಸ ಅದರ
ಹುಟ್ಟು ನೋಡಿದರೆ ಕುಂಬಾರನ ತಿಮಿರಿ
೧೭೫

೧೭೬ **ವೀಳ್ಯ:**
ಕಂಡ ಕಂಡವರಿಗೆ ಕಾರ್ಪಣ್ಯವ ಬಿಟ್ಟು
ಮುಂದೆ ಅಡ್ಡಾಗಿ ನಾ ಬೀಳಲಿಲ್ಲ
ಪುಂಡರೀ ಕಾಕ್ಷ ಶ್ರೀ ಪುರಂದರ ವಿಠಲನು
ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ೧೭೬
೧೭೭ **ಸರಸಿಜ(ಕಮಲ):**
ಸಿರಿಯರಸನ ಕರುಣಾಳುವ ಸರಸಿಜ ಸಂಭವನ ಪಿತನ
ಸುರರೊಡೆಯನ ಸಕಲವೇದ ಒರಲೊ ಹರಿಯ
ಪರದೇವತೆ ಇದೆ ಇದೆ ಎಂದು ಕರಕಮಲದೊಳಿಟ್ಟು ಮೆರೆವ
ಪರಮ ಹಂಸರಾದ ವ್ಯಾಸರಾಯರ ೧೭೬
೧೭೮. **ಸೊಂಪಳಿದಳಿ(ದುಂಬಿ):**
ಲಂಪಟನಾಗಿ ನಾರೇರ ಮುಖಾಬ್ಜದ
ಸೊಂಪಿನ ಕಂಪನಾಘ್ರಾಣಿಸುತ
ಸಂಪಿಗೆ ಯೆಸಳಿನ ಮೇಲೆ ಕುಳಿತಿರ್ದು
ಸೊಂಪಳಿದಳಿಯಂತೆ ಆದನಲ್ಲೋ ಕೃಷ್ಣ ೧೭೭
೧೭೯. **ಹಣ್ಣು:**
ಹುಟ್ಟಿದಂದಿನಿಂದ ಕಷ್ಟ
ಪಟ್ಟು ಕಂಗೆಟ್ಟು ಮನದಿ
ಗುಟ್ಟು ಪಳ್ವೆನಯ್ಯ ಒಂದಿಷ್ಟು
ಲಾಲಿಸೊ ಕಳಿತ ಹಣ್ಣುನೆಲಕೆ
ತಟ್ಟದಲ್ಲದೆ ಬಿಡದು ಮೊರೆಯಿಟ್ಟೆ
ಕಾಯದಿರೆ ದೂರು ಮುಟ್ಟುವುದು ಶ್ರೀ ಲಕ್ಷ್ಮೀರಮಣ
೧೭೭

೧೮೦. **ಹೂವು:**
ಹೂವ ತರುವರ ಮನೆಗೆ ಹುಲ್ಲ ತರುವ
ಅವ್ವೆ ಲಕುಮಿ ರಮಣ ಇವಗಿಲ್ಲ ಗರುವ ೧೭೭

## ೪. ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಪೌರಾಣಿಕ ಪ್ರತಿಮೆಗಳು

ಕ್ರಸಂ ಪುಸಂ.

೧೮೧. **ಮಧುಕರ (ಜೇನು ನೊಣ):**
ಮಧುಕರ ವೃತ್ತಿ ಎನ್ನದು ಅದು ಬಲು ಚೆನ್ನದು
ಪದುಮನಾಭನ ಪಾದಪದುಮ ಮಧುಪವೆಂಬ
೧೮೦

೧೮೨. **ಇನ್ನೇನು:**
ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು
ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು
೧೮೦

೧೮೩. **ಸನ್ಯಾಸಿ:**
ಮಂಡೆ ಬೋಳಾದ ಸನ್ಯಾಸಿಯು ಮನೆ ಬಂದ್ಹೊಕ್ಕನಮ್ಮ ಎನ್ನ
ಗಂಡನ ಕಿವಿಯೂದಿ ಮರುಳು ಮಾಡಿ ಮನಗೊಂಡನಮ್ಮ
೧೮೧

೧೮೪. **ಭಾಗ್ಯ:**
ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ
ಸಮ್ಮತಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ
೧೮೧

೧೮೫. **ರಂಗ:**
ರಂಗ ಬಂದ ಮನೆಗೆ ಶೃಂಗಾರ ನೋಡಿರೊ
ಹಿಂಗದಂಥ ಬಡತನ ಭಂಗವಾಗಿ ಹೋಯಿತೊ
೧೮೨

೧೮೬. **ಸುಖ:**
ಭಳಿರೆ ಭಳಿರೆ ಎನ್ನ ಸುಖವೆಂಬುದೇ ಸುಖವು
ಹಲಕಾಲಕಿದೆ ಇರಲೊ ಕಾವೇರಿರಂಗ
೧೮೨

೧೮೭. **ಮನದ ಡೊಂಕ:**
ಎನ್ನ ಮನದ ಡೊಂಕ ತಿದ್ದಿಸೋ ಹೇ ಶ್ರೀನಿವಾಸ
ಇನ್ನು ಸಂಶಯವೇಕೆ ನಿನ್ನ ಚರಣದಲ್ಲಿ ಸೇರಸೊ
೧೮೩

೧೮೮. **ಭ್ರಷ್ಟ :**
ಮಡದಿ ಮಾತನು ಕೇಳಿ ನಡೆದುಕೊಂಬನು ಭ್ರಷ್ಟ
ಪಡೆದ ಜನನಿಯನು ಬೈಯುವನು ಭ್ರಷ್ಟ
ಕಡವ ಕೊಟ್ಟವರೊಡನೆ ಧಡಿತನ ಮಾಡುವ ಭ್ರಷ್ಟ
ಬಡವರಿಗೆ ಕೊಟ್ಟ ನುಡಿ ನಡೆಸದವ ಭ್ರಷ್ಟ
೧೮೪

೧೮೯. **ಮರುಳೆ:**
ಕಾಮಕ್ರೋಧ ಬಿಡದನ್ನಕ ಪರ
ಬೊಮ್ಮ ನೊಲಿಮೆಯೆತ್ತ ನೀನೆತ್ತ ಮರುಳೆ
ಕಾಮ ಅಹಂಕಾರ ಮಮಕಾರವಳಿಯದೆ ೧೮೪

ಶರಧಿಶಯನ ದೊರಕೊಂಬೋನೆ ಮರುಳೆ
ವಿಹಂಗವಾಹನ ದೊರಕೊಂಬೋನೆ ಮರುಳೆ
ಆ ಹರಿದಾಸರ ಪದ ಪದ್ಮಕ್ಕೆರಗದೆ
ಪುರಂದರವಿಠಲನು ಸುಲಭನೆ ಮರುಳೆ.

೧೯೦. **ವ್ರತ:**
ಏನು ವ್ರತವೇನು ಸಾಧನಗಳೇನೊ
ಸ್ವಾನುಭವದ ಜ್ಞಾನಿ ಹೀನ ಮಾನವನೆ
ಶಾಕವ್ರತವೆನುತ ಫಲ ಶಾಕಗಳ ಬಿಡುವಂತೆ
ಬೇಕಾದ ಆಕಾಂಕ್ಷೆ ಬಿಡಬಾರದೆ
ಸಾಕೆನಿಸದೆ ರತಿಗೆ ಸತತ ಮನ ಕೊಡುವಂತೆ
ಶ್ರೀಕಾಂತನೊಳು ಮನವನಿಡಬಾರದೆ

೧೮೪

೧೯೧. **ಸಾಧನ:**
ಸಕಲ ಸಾಧನಕ್ಕೆಲ್ಲ ಸಿದ್ಧಿಗೊಳಿಸುವುದು
ಭಕುತಿ ಕಾರಣವಲ್ಲದೆ ಬೇರೆ ಸಾಧನ ವುಂಟೆ

೧೮೬

೧೯೨. **ಭಕ್ತಿ:**
ಸುಮ್ಮನೆ ಬರುವುದೆ ಮುಕ್ತಿ
ನಮ್ಮ ಅಚ್ಯುತಾನಂತನ ನೆನೆಯದೆ ಭಕ್ತಿ
ಮನದಲ್ಲಿ ಧೃಡವಿರಬೇಕು ಪಾಪಿ
ಜನರ ಸಂಸರ್ಗವ ನೀಗಲಿ ಬೇಕು
ಅನುಮಾನವನು ಬಿಡಬೇಕು ತನ್ನ
ತನುಮನ ಧನವನೊಪ್ಪಿಸಿಕೊಡಬೇಕು

೧೮೬

೧೯೩. **ಆಣೆ:**
ಎನಗು ಆಣೆ ರಂಗ ನಿನಗೂ ಆಣೆ
ಎನಗು ನಿನಗೂ ಇಬ್ಬರಿಗೂ ಭಕ್ತರಾಣೆ

೧೮೬

೧೯೪. **ಸ್ಮರಣೆ:**
ಹರಿ ಸ್ಮರಣೆ ಮಾಡೋ ನಿರಂತರ
ಪರಗತಿಗೆ ಇದು ನಿಧಾನ

೧೮೭

೧೯೫. **ಸಾರಾಮೃತ:**
ನಾರಾಯಣ ನಿನ್ನ ನಾಮದ ಸ್ಮರಣೆಯ
ಸಾರಾಮೃತವೆನ್ನ ನಾಲಿಗೆ ಬರಲಿ

೧೮೮

೧೯೬. **ನಾಮಾಮೃತ:**
ಹರಿಯೆಂಬ ನಾಮಾಮೃತದ ಸುರುಚಿಯು ಪರಮ ಭಕ್ತರಿಗಲ್ಲದೆ
ಅರಿಯದ ಕಡುಮೂರ್ಖ ನೀಚ ಜನರಿಗೆಲ್ಲ ಹರುಷವಾಗಬಲ್ಲದೆ

೧೮೮

೧೯೭ **ನಾಮ:**
ಗಂಗಾಧಿಸಕಲ ತೀರ್ಥಗಳಧಿಕ ಶ್ರೀ ಹರಿಯನಾಮ
ಹಿಂಗದೆ ನೆನೆವರಿಗೆ ಮಂಗಳ ಫಲವೀವ ಹರಿಯನಾಮ

೧೮೯

೧೯೮. ನೀನ್ಯಾಕೋ, ನಿನ್ನ ಹಂಗ್ಯಾಕೋ
ನಿನ್ನ ನಾಮದ ಬಲವೊಂದಿದ್ದರೆ ಸಾಕೋ

೧೮೯

೧೯೯. ಒಂದೇ ನಾಮವು ಸಾಲದೆ ಶ್ರೀ ಹರಿಯೆಂಬ
ಒಂದೇ ನಾಮವು ಸಾಲದೆ
ಒಂದೇ ನಾಮವು ಭವ ಬಂಧನ ಬಿಡಿಸುವುದೆಂದು
ಶ್ರುತಿಗಳು ಆನಂದದಿ ಸ್ತುತಿಸುವ

೧೮೯

೨೦೦. **ಹಣ್ಣು:**
ಹಣ್ಣು ಬಂದಿದೆ ಜನರು ಹಣ್ಣು ಕೊಳ್ಳಿರೋ
ಹಣ್ಣು ಎಂಬೊ ಹರಿನಾಮ ಎಂಬೋ ಶ್ರುತಿಯ ನಿಂಬೆಯ

೧೮೯

೨೦೧. ಹಣ್ಣು ಬಂದಿದೆ ಕೊಳ್ಳಿರೋ ನೀವಿಗ
ಹಣ್ಣು ಬಂದಿದೆ ಕೊಳ್ಳಿರೋ
ಚೆನ್ನ ಬಾಲಕೃಷ್ಣನೆಂಬೋ ಚೆನ್ನಾದ ಬಾಳೆಯ

೧೯೦

೨೦೨. **ಮಿಠಾಯಿ:**
ನಂದನ ತನಯ ಗೋವಿಂದನ ಭಜಿಪುದಾ
ನಂದವಾದ ಮಿಠಾಯಿ
ಬಂಧುಗಳನು ಭವರೋಗಗಳಲ್ಲವ
ನಿಂದಿಪುದೀ ಮಿಠಾಯಿ

೧೯೦

೨೦೩. **ಪಾಯಸ:**
ರಾಮನಾಮ ಪಾಯಸಕ್ಕೆ
ಕೃಷ್ಣನಾಮ ಸಕ್ಕರೆ
ವಿಠಲನಾಮ ತುಪ್ಪವ ಬೆರೆಸಿ
ಬಾಯಿ ಚಪ್ಪರಿಸಿರೋ

೧೯೦

೨೦೪. **ಕಲ್ಲುಸಕ್ಕರೆ:**
ಕಲ್ಲು ಸಕ್ಕರೆ ಕೊಳ್ಳಿರೋ ನೀವೆಲ್ಲರು
ಕಲ್ಲು ಸಕ್ಕರೆ ಕೊಳ್ಳಿರೋ
ಕಲ್ಲು ಸಕ್ಕರೆ ಸವಿ ಬಲ್ಲವರೆ ಬಲ್ಲರು
ಫುಲ್ಲಲೋಚನ ಶ್ರೀ ಕೃಷ್ಣ ನಾಮವೆಂಬ

೧೯೧

೨೦೫. **ಮುತ್ತು:**
ಜ್ಞಾನವೆಂಬೋ ದಾರದಲಿ
ಪೋಣಿಸಿದ ದಿವ್ಯ ಮುತ್ತು
ಜ್ಞಾನದಿಂದ ಕೊಂಬುದಿದನು ೧೯೨

ದೀನರಾದ ಭಕ್ತ ಜನರು

೨೦೬ **ಬೀಜ:**
ನಾರಾಯಣನೆಂಬ ನಾಮದ ಬೀಜವ ನಿಮ್ಮ
ನಾಲಿಗೆ ತುದಿಯಲಿ ಬಿತ್ತಿರಯ್ಯ
ಹೃದಯ ಹೊಲವ ಮಾಡಿ, ಮನವ ನೇಗಿಲ ಮಾಡಿ
ಶ್ವಾಸೋಚ್ಛ್ವಾಸ ಎರಡೆತ್ತು ಮಾಡಿ
ಜ್ಞಾನವೆಂಬ ಹಗ್ಗಕಣ್ಣಿಯ ಮಾಡಿ
ನಿರ್ಮಮವೆಂಬ ಗುಂಟಿಲಿ ಹರವಿರಯ್ಯ

೧೯೨

೨೦೭ **ಬಂಗಾರ:**
ರಂಗನಾಥನ ದಿವ್ಯ ಮಂಗಳನಾಮ
ವೆಂಬ ಬಂಗಾರವಿಡಬಾರೆ.
ಮುತ್ತೈದೆತನವೆಂಬ ಮುಖದಲಿ ಕುಂಕುಮದ
ಕಸ್ತೂರಿಯ ಬೊಟ್ಟನಿಡೆ ನಿನ್ನ ಫಣೆಗೆ
ಹೆತ್ತವರ ಕುಲಕೆ ಕುಂದು ಬಾರದ ಹಾಗೆ
ಮುತ್ತಿನ ಮೂಗುತಿಯನಿಡೆ

೧೯೩

೨೦೮. **ಅಮೃತಾನ್ನ:**
ನಿನ್ನ ನಾಮವೆ ಎನಗೆ ಅಮೃತಾನ್ನವು
ಇನ್ನು ಹಸಿದಿರಲೇಕೆ ಎನಗೆ ನೀನೊಲಿದಿರಲು
ಓಂಕಾರವೆಂಬ ನಿನ್ನ ನಾಮ ಉಪ್ಪಿನಕಾಯಿ
ಶಂಖಪಾನಿಯ ನಾಮ ಶಾಕಾದಿ ಸೂಪ
ಸಂಕರುಷಣ ಎಂಬನಾಮ ದಿವ್ಯ ಶಾಲ್ಯಾನ್ನವು
ಪಂಕಜಾಕ್ಷ ನಿನ್ನ ನಾಮ ಪಳ್ಳದ ಸಾರು

೧೯೪

೨೦೯. **ಯಂತ್ರ:**
ಯಂತ್ರ ದೊರಕಿತು ಎನಗೆ
ಯಂತ್ರ ದೊರಕಿತು
ಯಂತ್ರ ವಾಹಕ ನಾರಾಯಣನ
ಅಂತರಂಗದಿ ನೆನೆಸುವಂಥ

೧೯೫

೨೧೦. **ರಾಗಿ:**
ರಾಗಿ ತಂದಿರಾ ಭಿಕ್ಷಕೆ ರಾಗಿ ತಂದಿರಾ
ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ ನೀವು

೧೯೫

೨೧೧. **ರತ್ನಹಾರ:**
ರಾಮನಾಮ ರತ್ನಹಾರ ದೊರಕಿತೆನಗೆ
ಪೂರ್ವ ಪುಣ್ಯದ ಫಲಕೆ
ಮಚ್ಛನೆಂಬೋ ಮಾಣಿಕ್ಯದ ಹರಳು
ಕೂರ್ಮನೆಂಬೋ ಕುಸುರಿಗಳು
ವರಹನೆಂಬೊ ಹೊಸ ಮೋಹನದ ಚಿನ್ನ ೧೯೬

ನರಹರಿಯೆಂಬೋ ನಾಮದ ಸರ ಮುತ್ತು

೨೧೨. **ಭಂಡಾರ (ಖಜಾನೆ):**

ನಿನ್ನ ನಾಮ ಭಂಡಾರ ಕದ್ದ ಕಳ್ಳ ನಾನು
ನಿನ್ನ ಭಕುತಿಯೆಂಬ ಸಂಕೋಲೆಯನಿಕ್ಕಿ
ನಿನ್ನ ದಾಸರ ಕೈಯಲ್ಲಿ ಒಪ್ಪಿಸಿಕೊಟ್ಟು
ನಿನ್ನ ಮುದ್ರಿಕೆಯಿಂದ ಕಾಸಿ ಬಡಿಸು ದೇವ
ನಿನ್ನ ವೈಕುಂಠ ದುರ್ಗದೊಳು
ಎನ್ನ ಸೆರೆಯನಿಟ್ಟು ಸಲಹೋ ಶ್ರೀ ಪುರಂದರವಿಠಲ.

೧೯೬

೨೧೩ **ವಜ್ರ:**

ಹರಿಯೆಂದು ಮನದಲಿ ಮರೆದೊಮ್ಮೆ ನೆನೆದರೆ
ದುರಿತ ಪರ್ವತಗಳ ಖಂಡಿಪುದು ವಜ್ರದಂತೆ
ಮೇರು ಸುವರ್ಣದಾನವ ಮಾಡಲು ಪುಣ್ಯ
ನೂರು ಕನ್ಯಾದಾನವ ಮಾಡಲು
ದಾರುಣಿಯೆಲ್ಲವ ಧಾರೆಯನೆರೆಯಲು
ನಾರಾಯಣ ಸ್ಮರಣೆಗೆ ಸರಿಯೆಹುದೆ

೧೯೬

೨೧೪. **ಕಿಡಿ:**

ಬೆಟ್ಟದಂಥ ದುರಿತಮ ಸುತ್ತಮುತ್ತಲೊಟ್ಟಿರೆ
ಕೃಷ್ಣನಾಮದ ಕಿಡಿ ಬಿದ್ದು ಬೆಂದು ಹೋದದ್ದು ಕಂಡೆ
ಎಲೆ ಎಲೆ ದುರಿತವೆ ತಿರುಗಿ ನೋಡದೆ ಹೋಗು
ಎಲೆ ಎಲೆ ದುರಿತವೆ ಮರಳಿ ನೋಡದೆ ಹೋಗು
ನಿನ್ನ ಕಂಡರೆ ಶಿಕ್ಷಿಸದೆ ಬಿಡ
ಇನ್ನೊಮ್ಮೆ ಕಂಡರೆ ಶಿರವ ಚೆಂಡಾಡುವನು
ಪುಂಡರೀಕಾಕ್ಷ ನಮ ಪುರಂದರವಿಠಲ.

೧೯೭

೨೧೫. **ತಾಸು:**

ತಾಸುಬಾರಿಸುತಿದೆ ಕೇಳಿ ಹಿರಿದಾಸರೆಲ್ಲ
ಶ್ರೀಶನ ಭಜನೆಯ ಮಾಡದ ಮನುಜನ
ಆಯುಷ್ಯ ವೃಥಾ ಹೋಯಿತು ಎಂದು

೧೯೭

೨೧೬ **ಬಲ:**

ಜಯ ಜಯ ಹರಿಯೆಂಬುವುದೇ ಸುದಿನವು
ಜಯ ಜಯ ಹರಿಯೆಂಬುದೇ ತಾರಾಬಲವು
ಜಯ ಜಯ ಹರಿಯೆಂಬುದೇ ಚಂದ್ರಬಲವು
ಜಯ ಜಯ ಹರಿಯೆಂಬುದೇ ವಿದ್ಯಾಬಲವು
ಜಯ ಜಯ ಹರಿಯೆಂಬುವುದೇ ದೈವಬಲವು
ಜಯ ಹರಿ ಪುರುಂದರ ವಿಠಲನ ಬಲವಯ್ಯ ಸುಜನರಿಗೆ ೧೯೭

೨೧೭ **ನಾಮ:**

ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯನಾಮವು
ಜನ್ಮ ಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ ೧೯೮

೨೧೮. ಮೂಕ ತಾಮಾತಿನ ಸವಿ ಏನು ಬಲ್ಲ
ಲೌಕಿಕ ಬೇನೆ ಸನ್ಯಾಸೇನು ಬಲ್ಲ
ಕಾಕು ಮಾನವ ಪುಣ್ಯ ಪಾಪೇನು ಬಲ್ಲ
ಶ್ರೀ ಕೃಷ್ಣನ ನೆನೆಯದವ ಮಾನವನಲ್ಲ

೧೯೮

೨೧೯. **ಪಾದ:**
ಬಿಡೆ ನಿನ್ನ ಪಾದ ಬಿಂಕವಿನ್ನೇಕೋ
ಕೊಡು ಮನದಿಷ್ಟವ ಕೋಪವಿದೇಕೋ
ನೀರ ಪೊಕ್ಕರು ಬಿಡೆ ಬೆನ್ನಿನೊಳಗೆ ಬಹು
ಭಾರ ಪೊತ್ತನೆಂದರು ಬಿಡೆನು
ಕೋರೆಯ ಮಸೆಯುತ ಕೋಸರಿಕೊಂಡರು ಬಿಡೆ
ಘೋರ ರೂಪವ ತಾಳಿ ಘುರುಘುರಿಸಲು ನಾನು

೧೯೮

೨೨೦. **ಪೂಜೆ:**
ಸುಲಭ ಪೂಜೆಯ ಮಾಡಿ ಬಲವಿಲ್ಲದವರು
ಮರೆ ಮಾಡುವ ವಸ್ತ್ರ ಪರಮ ಮಡಿಯು
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು
ಹೊರಳಿ ಮಲಗುವದೆಲ್ಲ ಹರಿಗೆ ವಂದನೆಯು

೧೯೯

೨೨೧. ಪೂಜೆ ಯಾತಕೋ ಮನುಜ ಪೂಜೆ ಯಾತಕೋ
ಪೂಜೆಯಲಿ ನಿನ್ನ ಮನ ನಿಲ್ಲದಿದ್ದ ಮೇಲೆ ನಿನಗೆ

೨೦೦

೨೨೨. ಉದರ ವೈರಾಗ್ಯವಿದು, ನಮ್ಮ
ಪದಮನಾಭನಲಿ ಲೇಶ ಭಕುತಿಯಿಲ್ಲ
ಕಂಚುಗಾರನ ಬಿಡಾರದಿಂದದಿ
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ
ಮಿಂಚಬೇಕೆಂದು ಬಲು ಜ್ಯೋತಿಗಳನ್ನು ಹಚ್ಚಿ
ವಂಚನೆಯಿಂದಲಿ ಪೂಜೆ ಮಾಡುವುದು

೨೦೦

೨೨೩. **ಲಂಗೋಟಿ:**
ಲಂಗೋಟಿ ಬಲು ಒಳ್ಳೆದಣ್ಣ, ಒಬ್ಬರ
ಹಂಗಿಲ್ಲದಂತೆ ಆಚಾರಕ್ಕೆ ಒದಗುವ
ಬಡವರಿಗಾಧಾರವಣ್ಣ ಈ ಲಂಗೋಟಿ
ಬೈರಾಗಿಗಳ ಭಾಗ್ಯವಣ್ಣ
ಕಡು ಕಳ್ಳರಿಗೆ ಗಂಡ, ಮಡಿ ಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ

೨೦೦

೨೨೪. **ಗಜವದನ :**
ಗಜವದನ ಬೇಡುವೆ ಗೌರೀತನಯ
ತ್ರಿಜಗ ವಂದಿತನೆ ಸುಜನರ ಪೊರೆವನೆ

೨೦೧

೨೨೫. ದಾಸ:
ದಾಸನೆಂತಾಗುವನು ಧರೆಯೊಳಗೆ ನಾನು
ವಾಸುದೇವನಲಿ ಲೇಶಭಕುತಿ ಕಾಣೆ
೨೦೨

೨೨೬. ಒಡೆಯ ನೀನಡಿಯಿಡೆ ಹಾವಿಗೆಯವನಾಮ
ಒಡೆಯ ಮೆಲ್ಲಡಿಯಿಡಲು ಕಟ್ಟೆಗೆಯವ ನಾನು
ಒಡೆಯ ತಾಂಬೂಲವನುಗುಳುವೆಡೆಯಲ್ಲಿ
ಪಡಿಗ ಕಾಳಂಜಿ ಪಿಡಿಯುವವ ನಾನು
ಒಡೆಯನೊಡ್ಡೊಲಗದಿ ಒಪ್ಪುತಲಿರೆ ಕನ್ನಡಿ
ಛತ್ರ ಚಾಮರ ಪಿಡಿಯುವವ ನಾನು
ಒಡೆಯ ಪುರಂದರವಿಠಲರಾಯನ
ಉಗುರು ಇಟ್ಟಲ್ಲಿ ಶಿರವ ಕೊಡುವೆ ನಾನು
೨೦೨

೨೨೭. ಒಡೆಯ ನೀನೆನಗೆ ಅನಾದಿ ಕಾಲದಿಂದ
ಬಡವನು ನಾ ನಿನ್ನ ದಾಸನು ಸತ್ಯ
ಕಡುಕರುಣದಿಂದ ಬರಲಿಬೇಕೋ ಗ
ರುಡಗಮನ ವೆಂಕಟೇಶ ಎನ್ನಮನೆಗೆ
೨೦೨

೨೨೮. ದಾಸನ್ನ ಮಾಡಿಕೊ ಎನ್ನ, ಇಷ್ಟು
ಘಾಸಿ ಮಾಡುವರೇನೊ ಕರುಣಾಸಂಪನ್ನ
೨೦೨

೨೨೯. ಯಾರು ಒಲಿದರೇನು ನಮಗಿನ್ನಾರು ಮುನಿದರೇನು
ಕ್ಷೀರಸಾಗರ ಶಾಯಿಯಾದವನ ಸೇರಿದಂತೆ ಹರಿದಾಸರಿಗೆ
೨೦೩

೨೩೦. ಸಖ:
ಹೂವತರುವರ ಮನೆಗೆ ಹುಲ್ಲ ತರುವ
ಅವ್ವೆ ಲಕುಮಿ ರಮಣ ಇವಗಿಲ್ಲ ಗರುವ
೨೦೩

೨೩೧. ಬಲೆ:
ನಾ ನಿನ್ನ ಮನಕೆ ಬಾರನೆ, ಬಂದರೆ ಈ ಭವದ
ಬಲೆಯೊಳು ಸಿಲುಕುವೆನೆ, ಜಯ ಪಾಂಡುರಂಗ
೨೦೩

೨೩೨. ತೆರೆ:
ಸಾಕು ಸಂಸಾರ ತೆರೆಯ ನೂಕಲಾರೆನು
ಬೇಕು ನಿನ್ನಚರಣ ಕಮಲ ಬೇರೆ ಅನ್ಯತ್ರಗತಿಯೆ ಕಾಣೆ
೨೦೪

೨೩೩. ಸಿಕ್ಕು:
ಮರ್ಕಟನ ಕೈನೂಲ ಕುಕ್ಕಡಿಯ ತೆರನಂತೆ
ಸಿಕ್ಕಿಕೊಂಡು ಕಾಮಕ್ರೋಧ ಮೋಹಗಳನ್ನ
ಹಕ್ಕಿ ಹೀರುತಲಿವೆ ಏಕೆ ನೋಡತಲಿರುವೆ
ಅಕ್ಕಟಕ್ಕಟ ನಿನ್ನ ದಾಸನೋ ನಾನು
ಸಿಕ್ಕ ಬಿಡಿಸಿ ನಿನ್ನ ಭಕ್ತಿಯ ತೋರೊ ೨೦೪

ಪಕ್ಷಿವಾಹನ ನಮ್ಮ ಪುರಂದರವಿಠಲ

೨೩೪. **ಒಡೆಯ:**
ಮಡದಿ ಮಕ್ಕಳು ಇಲ್ಲಿ ಒಡವೆ ವಸ್ತುಗಳಿಲ್ಲ
ಪಡೆದ ತಾಯಿತಂದೆಯೊಬ್ಬರಿಲ್ಲ
ಎಡಹಿ ಬೀಳುತಲಿರೆ ಎತ್ತಿಕೊಂಬುವರಿಲ್ಲ
ಒಡೆಯನೆ ಕೈಬಿಡಬೇಡವೆಂದೆನುತಲಿ

೨೦೪

೨೩೫. **ಕೂಸು:**
ಕೂಸನು ಕಂಡಿರಾ ಜ್ಞಾನಿಗಳೆಲ್ಲ ಕೂಸನು ಕಂಡೀರಾ
ಸಾಸಿರಾ ನಾಮದ ಶತಕೋಟಿ ತೇಜದ
ಸೂಸುವ ಸುಖಮಯ ಜ್ಞಾನದ ಕೂಸು

೨೦೫

೨೩೬ ಕೂಸಿನ ಕಂಡೀರಾ ಗೋಪಾಲಕೃಷ್ಣನ ಕಂಡೀರಾ
ಅಂದಿಗೆ ಅರಳೆಲೆ ಇಟ್ಟಿತ್ತು ಕೂಸು
ಮುಂಗೈ ಬಾಪುರಿ ಇಟ್ಟಿತ್ತು ಕೂಸು
ಬಿಂದಲಿ ಸರಪಳಿ ಹಾಕಿತ್ತು ಕೂಸು
ಅಂಗಳದೊಳಗಿಂದ ಹೋಗ್ಯದೆ ಕೂಸು

೨೦೫

೨೩೭ ಅಂಜನೆ ಉದರದಿ ಜನಿಸಿತು ಕೂಸು
ರಾಮರ ಪಾದಕ್ಕೆರಗಿತು ಕೂಸು
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು

೨೦೬

೨೩೮. **ಸೇವಕ:**
ಸೇವಕ ತನದ ರುಚಿಯೇನರಿದ್ಯೋ
ದೇವ ಹನುಮರಾಯ ವೈರಾಗ್ಯ ಬೇಡಿ

೨೦೬

೨೩೯. ಈತ ಮುಖ್ಯ ಪ್ರಾಣನಾಥ
ಈತ ಶ್ರೀ ರಾಮ ಸೇವಕನೆನಿಸಿದಾತ
ವಾರಿಧಿಯ ನೆಗೆದಾತ ವನಚರಾಗ್ರೇಸರನೀತ
ವಾರಿಜಾಕ್ಷಿಗೆ ಮುದ್ರಿಕೆ ವಹಿಸಿ ಇತ್ತಾತ

೨೦೭

೨೪೦. **ಗುರು:**
ಗುರುವಿನ ಗುಲಾಮನಾಗುವ ತನಕ
ದೊರೆಯದಣ್ಣ ಮುಕುತಿ
ಪರಿಪರಿ ಶಾಸ್ತ್ರವನೇಕನೋದಿ
ವ್ಯರ್ಥವಾಯಿತು ಭಕುತಿ

೨೦೭

೨೪೧. ಗುರುಗಳೆನಿಸಿಕೊಂಬ ಭರದಲನ್ಯೋನ್ಯ
ಮತ್ಸರದ ಶಾಸ್ತ್ರವಿರಚಿಪ ಸಡಗರೆಲ್ಲ
ಸಿರಿ ಪುರಂದರವಿಠಲ ಪರಿತುಷ್ಟಿಗಾಗಿ ೨೦೭

ಸುಜನರ ಪೊರೆದ ಗುರುನಂದತೀರ್ಥರಿಗೆಣೆಯ

೨೪೨. ಮಾರುತವತಾರನೀತ ನಮ್ಮ ಗುರುಕಾಣಿರೋ
ಭಾರತಿಯ ರಮಣನೇ ಮೂಲಗುರು ಕಾಣಿರೋ

೨೦೮

೨೪೩. ಗುರುರಾಯರ ನಂಬಿರೊ ಮಾರುತಿಯೆಂಬ
ಗುರುರಾಯರ ನಂಬಿರೊ
ಗುರುರಾಯರ ನಂಬಿ ಬಿಡದೆ ಯಾವಾಗಲು
ದುರಿತವ ಕಳೆದು ಸದ್ಗತಿಯ ಪಡೆವರೆಲ್ಲ

೨೦೮

೨೪೪. ಇದಿರ್ಯಾರೋ ಗುರುವೆ ಸಮರ್ಥ್ಯಾರೋ
ಮದನಜನಕ ಪ್ರಿಯ ಗುರು ಮಧ್ವರಾಯ

೨೦೮

೨೪೫. ಮುಖ್ಯ ಪ್ರಾಣ ಎನ್ನ ಮೂಲಗುರುವೆ
ರಕ್ಕಸಾಂತಕ ಶ್ರೀ ರಾಮನ ನಿಜ ದಾಸ

೨೦೯

೨೪೬. **ಸರ್ವೋತ್ತಮ:**
ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿ ಸರ್ವ ವಿಶ್ವಮಯಂ ಜಗತು

೨೦೯

೨೪೭. **ಪಂಚಬೇಧ:**
ಸತ್ಯ ಜಗಕಿದು ಪಂಚಬೇಧವು ನಿತ್ಯ ಶ್ರೀ ಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕವೆಂದು ಸಾರಿರೈ
ಜೀವ ಈಶಗೆ ಬೇಧ ಸರ್ವತ್ರ ಜೀವ ಜೀವಕೆ ಬೇಧವು
ಜೀವ ಜಡಕೆ ಜಡ ಜಡಕೆ ಬೇಧ ಜಡ ಪರಮಾತ್ಮಗೆ

೨೧೦

೨೪೮. **ನಗಾರಿ:**
ಹೊಡಿನಗಾರಿ ಮೇಲೆ ಕೈಯ ಘಡಘಡ
ಹೊಡಿ ನಗಾರಿ ಮೇಲೆ ಕೈಯ

೨೧೧

೨೪೯. **ಠಾವು (ಸ್ಥಳ):**
ಹೊರಗಿಪ್ಪ ಒಳಗಿಪ್ಪ
ಹೊರಗಿರಲರಿಯ ಒಳಗಿಪ್ಪ
ಹೊರಗಿಪ್ಪ ಒಳಗಿರಲರಿಯ
ಒಳಗೆ ಹೊರಗೆ ತುಂಬಿಕೊಂಡಿಹ
ತಾನಿಲ್ಲದ ಠಾವು ಎಳ್ಳಿನಷ್ಟಿಲ್ಲ
ಸರ್ವವಿಷ್ಣು ವಾಸುದೇವ ಪರಿ
ಪೂರ್ಣಪುರಂದರವಿಠಲ

೨೧೩

೨೫೦. **ಒಡೆಯ:**
ಎನಗೊಬ್ಬ ಒಡೆಯ ದೊರಕಿದ ದೊರಕಿದ
ಸುನಾಯಕ ದೇವ ಕಟ್ಟಲೆ ಕಂದಾಯವೀವ ೨೧೩

ಬೇಡಿದ ಉಚಿತವ ನಮಗವನೀವ
ಕಷ್ಟನಷ್ಟಗಳಿಲ್ಲ ಒದೆ ಜಡಿತಗಳಿಲ್ಲ
ಎನ್ನ ಮನ ಬಂದಂತೆ ಓಲೈಸುವನು ನಾನು
ಎನ್ನ ಮನ ಬಂದಾಗ ಓಲೈಸಿಕೊಂಬ
ಕೇಡಿಲ್ಲದೊಡೆಯ ಪುರಂದರವಿಠಲ

೨೫೧. **ದೇವ:**
ದೇವ ಬಂದನಮ್ಮ ಸ್ವಾಮಿಬಂದನೊ
ದೇವರ ದೇವ ಶಿಖಾಮಣಿ ಬಂದಾನೋ
ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ
೨೧೩

೨೫೨. **ಮೂರ್ಖ:**
ಮೂರ್ಖರಾದರು ಲೋಕದೊಳಗೆ
ಏಕದೈವವ ಬಿಟ್ಟು ಕಾಕು ದೈವವ ಭಜಿಸಿ
೨೧೪

೨೫೩. **ಕನಸು:**
ಕಂಡೆ ನಾ ಕನಸಿನಲಿ ಗೋವಿಂದನ
ಕಂಡೆ ನಾ ಕನಸಿನಲಿ ಕನಕ ರತ್ನದ ಖಣಿಯ
ನಂದನ ಕಂದ ಮುಕುಂದನ ಚರಣವ
೨೧೪

೨೫೪. **ಬಂಧು:**
ಅನಾಥನು ನಾನು ಎನಗೆ ಬಂಧು ನೀನು
ಹೀನನು ನಾನು ದಯವಂತ ನೀನು
ಧ್ಯಾನಮಂತ್ರನು ನೀನು ಧ್ಯಾನಿಸುವೆನು ನಾನು
ಜ್ಞಾನಗಮ್ಯನು ನೀನು ಅಜ್ಞಾನಿ ನಾನು
೨೧೫

೨೫೫. **ವೈದ್ಯ:**
ಗುಣವಾಯಿ ತನ್ನ ಭವರೋಗ
ಕೃಷ್ಣನೆಂಬ ವೈದ್ಯನು ದೊರಕಿದನು
ಗುಣವಾಗುವವರೆಗೆ ಎಣೆಯಿಲ್ಲ
ಗುಣವಂತರಾಗುವರು ಭವವೆಲ್ಲ
೨೧೫

೨೫೬ **ಫಕೀರ:**
ಮಾಡಿದ ಎನ್ನನು ಫಕೀರನ ಸದ್ಗುರು
ಮಾಡಿದ ಎನ್ನ ಫಕೀರ
ಅನುಭವ ಖಪ್ಪರಿ ಹೃದಯದ ಜೋಳಿಗೆ ಎನ್ನಯ ಕಂಕುಳಲಿಟ್ಟ
ಆಮಿಷ ದಟ್ಟಿ ಅರಗಿನ ರೊಟ್ಟಿ ಎನ್ನಯ ಕೈಯಲಿಟ್ಟ
೨೧೬

೨೫೭ **ಶಕುನಫಲ:**
ಒಳಿತೀ ಶಕುನ ಫಲವಿಂದೆಮಗೆ
ಜಲಜಾಕ್ಷನೊಲುಮೆಯಾಗುವುದು ಕೇಳ್ಕೆಳದಿ ೨೧೬

ವಾಮ ಗರುಡನೋಡು ವಾಯಸ ಬಲನೋಡು
ಕೋಮಲಾಂಗೇರ ಉದಕುಂಭ ನೋಡು
ಸಾಮಾನ್ಯವಲ್ಲ ಗೌಳಿ ಬಲಕೆ ನುಡಿಯುತಿದೆ
ಪ್ರೇಮದಿ ಮಧುರ ವಚನ ಕೇಳಿ ಕೆಳದಿ

೨೫೮. **ಡಂಗುರ** :
ಹೊಯ್ಯೊಲೊ ಡಂಗುರವ, ಜಗ
ದಯ್ಯನಯ್ಯ ಶ್ರೀ ಹರಿಯಲ್ಲದಿಲ್ಲವೆಂದು

೨೧೭

೨೫೯. **ಆನಂದ:**
ಗೋವಿಂದಾ ನಿನ್ನಾನಂದ ಸಕಲ ಸಾಧನವೋ
ಅಣುರೇಣು ತೃಣಕಾಷ್ಠ ಪರಿಪೂರ್ಣ ಗೋವಿಂದ
ನಿರ್ಮಲಾತ್ಮಕನಾಗಿ ಇರುವುದೆ ಆನಂದ

೨೧೭

೨೬೦. **ಬಿತ್ತುವಿಕೆ** :
ಶರಧಿ ಸಡ್ಡೆಯ ಮಾಡಿ ಧರೆಯ ಕೂರಿಗೆ ಮಾಡಿ
ಹರಬೊಮ್ಮರೆಂಬ ಎರಡೆತ್ತುಗಳ ಹೂಡಿ
ನರ ಜೀವರಾಶಿಗಳೆಂಬ ಬೀಜವನೆ ಎತ್ತಿ
ಧರೆಯಲ್ಲಿ ಬಿತ್ತುವಾತ ಇಂದ್ರ ಬೆಳೆಸುವಾತ ಚಂದ್ರ
ಕಳೆಯ ಕೀಳುವಾತ ಯಮಧರ್ಮನಯ್ಯ
ಬಿತ್ತಿದಾತನು ಬೆಳೆಯನು ಒಕ್ಕಿಕೊಂಡೊಯ್ಯೆ
ದುಃಖವೇತಕೆ ಸಿರಿ ಪುರಂದರವಿಠಲ

೨೧೭

೨೬೧. **ಕರ್ತ:**
ಕೊಡುವ ಕರ್ತ ಬೇರೆ ಇರುತಿರೆ
ಬಿಡು ಬಿಡು ಚಿಂತೆಯನು
ಒಡೆಯನಾಗಿ ಮೂರ್ಜಗವನ್ನು ಪಾಲಿಪ
ಬಡವರುದ್ಧಾರಕ ಭಕ್ತರ ಪ್ರಿಯನು

೨೧೮

೨೬೨. **ಗ್ರಹಬಲ:**
ಸಕಲಗ್ರಹಬಲ ನೀನೆ ಸರಸಿಜಾಕ್ಷ
ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ

೨೧೮

೨೬೩. **ಅರಿವು** :
ಅರಿಯರು ಮನುಜರರಿಯರು
ಅರಿಯರು ಮನುಜರು ಅರಿತೂ ಅರಿಯರು
ಧರೆ ಈರೇಳಕ್ಕೆ ಹರಿಯಲ್ಲದಿಲ್ಲವೆಂದು

೨೧೯

೨೬೪. **ಧೊರೆ** :
ಎನಗೊಬ್ಬ ಧೊರೆ ಧೊರಕಿದನು
ವನಜ ಸಂಭವನಯ್ಯ ಹನುಮಂತರ್ಯಾಮಿ

೨೧೯

೨೬೫. **ಸೂತ್ರಧಾರಿ :**
ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೆ
೨೧೯

೨೬೬. **ಸಂಗ:**
ಹರಿಸರ್ವೋತ್ತಮನೆಂದು ಸ್ಮರಿಸದ ಜನರ ಸಂಗ ಬೇಡ
ಸಿರಿ ವಾಯು ಮತ ಪೊಂದಿ ಹರುಷ ಪಡದವರ ಸಂಗ ಬೇಡ
೨೨೦

೨೬೭. **ಹಬ್ಬ:**
ಸಾಧು ಸಜ್ಜನರೊಳಗಿರುವೋದೆ ಹಬ್ಬ
ವೇದಾಂತದರ್ಥವ ತಿಳಿವೋದೆ ಹಬ್ಬ
ಭೇದ ಬುದ್ಧಿಗಳೆಲ್ಲ ಬಿಡುವೋದೆ ಹಬ್ಬ
ಭಾಗೀರಥಿಲಿ ಲೋಲಾಡುವುದೆ ಹಬ್ಬ
೨೨೦

೨೬೮. **ಶಾಸ್ತ್ರ:**
ಏಡಿ ಕಡಗವಿಟ್ಟು ಫಲವೇನಿಲ್ಲ
ಬೇಡ ತಾ ಮುತ್ತಿನ ಬೆಲೆ ಏನು ಬಲ್ಲ
ಕಾಡ್ಹಳ್ಳಿಗೌಡ ತಾ ಅರಸಾಗಲಿಲ್ಲ
ವೇದ ಶಾಸ್ತ್ರಕೆ ಮೂಢ ತಲೆದೂಗಲಿಲ್ಲ
೨೨೧

೨೬೯. **ಧರ್ಮ:**
ಧರ್ಮವೇ ಜಯವೆಂಬ ದಿವ್ಯಮಂತ್ರ
ಮರ್ಮವನರಿತು ಮಾಡಲಿಬೇಕು ತಂತ್ರ
೨೨೧

೨೭೦. ಮಂಚಬಾರದು ಮಡದಿ ಬಾರಳು
ಕಂಚು ಕನ್ನಡಿ ಬಾರವು
ಸಂಚಿತಾರ್ಥದ ದ್ರವ್ಯ ಬಾರದು
ಮುಂಚೆ ಮಾಡಿರೋ ಧರ್ಮವ
೨೨೨

೨೭೧. **ಬೇಹಾರಿಗ (ವ್ಯಾಪಾರಿ):**
ವೇದಗಳೆಂಬೋ ದಾವಣಿಗಳಲ್ಲಿ
ನಾಮಗಳೆಂಬೋ ಮೂಗುನೇಣಿಗಳಿಂದ
ಜೀವರುಗಳೆಂಬ ಎತ್ತುಗಳನೆ ಕಟ್ಟಿ
ಭಕುತಿ ರಸವೆಂಬೋ ಮುಟ್ಟುಗಳನೆ ಹಾಕಿ
ಕರ್ಮವೆಂಬೋ ಭಾರವನು ಹೇರಿ
ಆಡುವ ಪುರಂದರ ವಿಠಲನೆಂಬ
ದೊಡ್ಡ ಬೇಹಾರಿಗ ಕಾಣಿರೋ.
೨೨೩

೨೭೨. **ಪಾತಕ:**
ಋಣವೆಂಬ ಪಾತಕವು ಬಹುಬಾಧೆಪಡಿಸುತಿದೆ
ಗುಣನಿಧಿಯ ನೀನೆನ್ನ ಋಣವ ಪರಿಹರಿಸೋ
೨೨೩

೨೭೩. **ನಾಮಸ್ಮರಣೆ:**
ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು
ಭೂತದಯಾಪರನಾಗಿರಬೇಕು
ಪಾತಕವೆಲ್ಲ ಕಳೆಯಲಿಬೇಕು
ಮಾತು ಮಾತಿಗೆ ಹರಿಯೆನ್ನಬೇಕು

೨೨೪

೨೭೪. **ಪಾಪೋಸು:**
ಪಾಪೋಸು ಹೋದುವಲ್ಲ ಸ್ವಾಮಿ ಎನ್ನ
ಪಾಪೋಸು ಹೋದುವಲ್ಲ
ಅಪಾರ ದಿನಗಳಿಂದ ಅರ್ಜನೆ ಮಾಡಿದ

೨೨೪

೨೭೫. **ಭೀತಿ:**
ಹುಟ್ಟುವ ಭೀತಿ, ಹೊಂದುವ ಭೀತಿ
ವಿಠಲನಪ್ರಿಯ ನೆನೆಯದವಗೆ
ಕಾಲದ ಭೀತಿ ಕರ್ಮದ ಭೀತಿ ಗೋ
ಪಾಲನ ದಾಸನಾಗದವಗೆ
ಅರಷಡ್ವರ್ಗದ ಮಹಾಭೀತಿ ಶ್ರೀ
ಹರಿನಾಮ ಉಚ್ಚರಿಸದವಗೆ
ಹಲವು ಮಾತಿನ್ನೇನು ಹಲವು ಭೀತಿ
ಶ್ರೀ ಪುರಂದರವಿಠಲನ ಭಜಿಸದವಗೆ.

೨೨೪

೨೭೬ **ಸಂಸಾರ:**
ಹ್ಯಾಂಗೆ ಬರೆದಿತ್ತೋ ಪ್ರಾಚೀನದಲ್ಲಿ
ಹಾಂಗೆ ಇರಬೇಕು ಸಂಸಾರದಲ್ಲಿ
ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ
ಆ ಕ್ಷಣದಲ್ಲಿ ಹಾರಿ ಹೋದಂತೆ

೨೨೫

೨೭೭ **ಕೊಳಗ:**
ಉದಯ ಅಸ್ತಮಾನವೆಂಬ ಎರಡು ಕೊಳಗವಿಟ್ಟು
ಆಯುಸ್ಸು ಎಂಬ ರಾಸಿ ಅಳೆದು ಹೋಗದ ಮುನ್ನ
ಹರಿಯ ಭಜಿಸಬೇಕು ಮನಮುಟ್ಟಿ
ಭಜಿಸಿದರೆ ತನ್ನ ಕಾರ್ಯವು ಘಟ್ಟಿ
ಹಾಗಲ್ಲದಿದ್ದರೆ ತಾಪತ್ರಯ ಬೆನ್ನಟ್ಟಿ
ವಿಧಿಯೊಳು ಗೆಯ್ವಾಗ ಹೋಗದಯ್ಯ ಕಟ್ಟಿ
ಪುರಂದರವಿಠಲನ ಕರುಣಾದೃಷ್ಟಿ
ಅವನ ಮೇಲಿದ್ದರೆ ಅವ ಜಗಜಟ್ಟಿ.

೨೨೫

೨೭೮. **ಪೈರು:**
ಸಲ್ಲದೋ ಕೃಷ್ಣ ಸಲ್ಲದೋ
ಸಿರಿ ವಲ್ಲಭ ಇದ ನೋಡಿ ಪಾಲಿಸಬೇಕೋ
ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನು
ಮತ್ತೆ ತುರುವಿಂಡು ಬಿಟ್ಟು ಮೆಲ್ಲಿಸುವುದು ೨೨೬

೨೭೯. **ದಾರಿ:**

ದಾರಿಯೇನಿದಕೆ ಮುರಾರಿ ನೀ
ಕರುಣದಿ ಕೈ ಹಿಡಿಯದಿದ್ದರೆ
ಕಷ್ಟ ಕರ್ಮಂಗಳು ಎಷ್ಟಾದರೂ ಮಾಳ್ಪೆ
ಇಷ್ಟೂ ಲಕ್ಷಿಪನಲ್ಲ ಗುರುಹಿರಿಯರ
ದುಷ್ಟರ ಸಂಗವ ಬಹಳ ಮಾಡಿದರಿಂದ
ಶ್ರೇಷ್ಟರ ಸೇವೆಯೆಂದರೆ ಆಗದೆನಗೆ

೨೨೬

೨೮೦. **ನಂಬಿಕೆ:**

ನಂಬು ಕಂಡ್ಯ ಮನವೆ
ನಂಬು ಶ್ರೀಕೃಷ್ಣನ ಚರಣ ಕಮಲದ
ಒಂಬತ್ತೂ ಬಾಗಿಲ ಪಟ್ಟಣದೊಳಗೆ
ಸಂಭ್ರಮದಿಂದ ಬೈಲಾಗುವ ಮುನ್ನ ನೀ

೨೨೭

೨೮೧. **ಅಂಬಿಗ:**

ಅಂಬಿಗ ನಾ ನಿನ್ನ ನಂಬಿದೆ ಜಗ
ದಂಬಾರಮಣ ನಿನ್ನ ನಂಬಿದೆ
ತುಂಬಿದ ಹರಿಗೋಲಂಬಿಗ ಅದ
ಕೊಂಬತ್ತು ಛಿದ್ರ ನೋಡಂಬಿಗ
ಸಂಭ್ರಮದಿಂದ ನೀ ನಂಬಿಗ ಅದ
ರಿಂಬು ನೋಡಿ ನಡೆಸಂಬಿಗ

೨೨೭

೨೮೨. **ಕಾಲ:**

ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ
ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವೆಯಲ್ಲೊ ಪ್ರಾಣಿ

೨೨೮

೨೮೩ **ಕಾಗದ:**

ಕಾಮ ಕ್ರೋಧ ಬಿಡಿರೆಂಬೊ ಕಾಗದ ಬಂದಿದೆ
ನೇಮ ನಿಷ್ಠೆಯೊಳಿರಿರೆಂಬೊ ಕಾಗದ ಬಂದಿದೆ
ತಾಮಸ ಜನರ ಕೂಡದಿರೆಂಬೊ ಕಾಗದ ಬಂದಿದೆ
ನಮ್ಮ ಕಾಮನಯ್ಯನು ತಾನೆ ಬರೆದ ಕಾಗದ ಬಂದಿದೆ

೨೨೯

೨೮೪. **ಧ್ಯಾನ:**

ನಾ ನಿನ್ನ ಧ್ಯಾನದೊಳಿರಲು ಮಿಕ್ಕ
ಹೀನ ಮಾನವರೇನ ಮಾಡಬಲ್ಲರೊ ರಂಗ

೨೩೦

೨೮೫. **ಮೂರುತಿ:**

ಮೂರುತಿಯನು ನಿಲ್ಲಿಸೋಮಾಧವ ನಿನ್ನ
ಎಳೆತುಳಸಿಯ ವನಮಾಲೆಯು ಕೊರಳೊಳು
ಪೊಳೆವ ಪೀತಾಂಬರದಿಂದಲೊಪ್ಪುವ ನಿನ್ನ

೨೩೦

೨೮೬ **ಧ್ಯಾನ:**
ಮನವ ನಿಲಿಸುವುದು ಬಹುಕಷ್ಟ
ಹರಿದಾಡುವಂಥ
ಕಾಶಿಗೆ ಹೋಗಲಿಬಹುದು ದೇಶ ತಿರುಗಲಿಬಹುದು
ಆಸೆ ಸುಟ್ಟಂತೆ ಇರಬಹುದು
ಹರಿದಾಡುವಂಥ
೨೩೧

೨೮೭ **ಶೋಧನೆ:**
ಮನವ ಶೋಧಿಸಬೇಕು ನಿಚ್ಚ ದಿನ
ದಿನ ಮಾಡುವ ಪಾಪ ಪುಣ್ಯದ ವೆಚ್ಚ
೨೩೧

೨೮೮. **ಧ್ಯಾನ:**
ಕಣ್ಣಿನೊಳಗೆ ನೋಡೋ ಹರಿಯ ಒಳ
ಗಣ್ಣಿನಿಂದಲಿ ನೋಡೊ ಮೂಜಗದ ಧೊರೆಯ
೨೩೨

೨೮೯. **ಕದ :**
ಎಂಟೊಂದು ಕದಗಳ ಮುಚ್ಚೋ ಮೇಲೆ
ತಂಟೆಯಿಲ್ಲದ ಮನವ ಅವನಲಿ ಇರಿಸೊ
ಕುಂಡಲಿ ಮಧ್ಯದಿ ನೋಡೊ ದಿವ್ಯ
ಮಂಟಪದಲಿ ಜ್ಯೋತಿ ಥಳಥಳಿಸುವುದೋ
೨೩೩

೨೯೦. **ಗಂಡ :**
ಪಿಂಡಾಂಡದೊಳಗಿನ ಗಂಡನ ಕಾಣದೆ
ಮುಂಡೆಯರಾದರು ಪಂಡಿತರೆಲ್ಲ
ಆಧಾರ ಮೊದಲಾದ ಆರು ಚಕ್ರವ ಮೀರಿ
ನಾದಬಿಂದು ಕಳೆಯುಳಿದ ಬಳಿಕ
ಶೋಧಿಸಿ ಸುಧೆಯ ಪ್ರಸಾದವನುಣ್ಣದೆ
ಓದುತ ಮನದೊಳು ಒಂದನು ತಿಳಿಯದೆ
೨೩೪

೨೯೧. **ಹಂಸ :**
ಹಂಸ ನಿನ್ನಲ್ಲಿ ನೀ ನೋಡೋ ಭವ
ಪಾಶ ಮುಕ್ತನಾಗಿ ಹರಿಯನ್ನು ಕೂಡೊ
೨೩೪

೨೯೨. **ಮಂಟಪ :**
ಮನವೆಂಬ ಮಂಟಪ ನಿನಗೆ ಹಾಕಿ ಎನ್ನ
ತನುವನೊಪ್ಪಿಸಿ ಕೈಯ ಮುಗಿವೆನಯ್ಯ
ವನಜಭವ ಸುರಮುನಿಗಳು ಭಜಿಸಲು
ಘನ ಮಹಿಮನೆ ಪಾದಕ್ಕೆರಗಲಿ ಎನ್ನಶಿರ
೨೩೪

೨೯೩. **ಮುಕ್ತಿ :**
ಜ್ಞಾನವೊಂದೇ ಸಾಕು ಮುಕ್ತಿಗೆ
ಇನ್ನೇನು ಬೇಕು ಹುಚ್ಚು ಮರುಳೆ ೨೩೫

೨೯೪. **ಮುಸುಕು:**
ಮುಸುಕು ತೆಗೆದರೆ ಬೆನ್ನಿಲಿ ನಾಲಗೆ ಇದರ
ಹೆಸರು ಬಲ್ಲವರುಂಟೆ ಪೇಳಿರಿ ನರರೆ
೨೩೫

೨೯೫. **ಮನೆ :**
ಅಲ್ಲಿದೆ ನಮ್ಮಮನೆ, ಇಲ್ಲಿ ಬಂದೆ ಸುಮ್ಮನೆ
ಕದ ಬಾಗಿಲಿರಿಸಿದ ಕಳಮನೆ, ಇದು
ಮುದದಿಂದಲೋಲ್ಯಾಡೊ ಸುಳ್ಳುಮನೆ
ಇದಿರಾಗಿ ವೈಕುಂಠವಾಸ ಮಾಡುವಂಥ
ಪದುಮನಾಭನ ದಿವ್ಯ ಬದುಕು ಮನೆ
೨೩೬

೨೯೬ **ನಮ್ಮೂರು :**
ಬ್ರಹ್ಮಾಂಡದೊಳಗೆ ಅರಸಿ ನೋಡಲು ನಮ್ಮೂರೇ ವಾಸಿ
ರಮೆಯ ಅರಸನು ಸರ್ವದಾ ವಾಸಿಪ ಸುಮ್ಮಾನದಿತಾನು
೨೩೭

೨೯೭ **ವೈಕುಂಠ :**
ಒಂದೇ ಕೂಗಳತೆ ವೈಕುಂಠ
ಸಂದೇಹವಿಲ್ಲವೋ ಸಾಧು ಸಜ್ಜನರಿಗೆ
೨೩೭

೨೯೮. ಇಲ್ಲೇ ವೈಕುಂಠ, ನಮ್ಮ ಶ್ರೀ ಲಕುಮಿ
ವಲ್ಲಭ ಪರಿಪೂರ್ಣನೆಂದು ಭಜಿಪರಿಗೆ ೨೩೭

೨೯೯. **ಮಂಚ:**
ಶೃಂಗಾರವಾಗಿಹದು ಶ್ರೀ ಹರಿಯೆ ಮಂಚ
ಅಂಗನೆ ಮಹಲಕುಮಿಯರಸ ಮಲಗುವ ಮಂಚ
೨೩೮

೩೦೦. **ಅನಾಥಬಂಧು:**
ನೀನೇ ಅನಾಥಬಂಧು ಕಾರಣ್ಯ ಸಿಂಧು
ಮದಗಜವೆಲ್ಲ ಕೂಡಿದರೇನು ಅವರ ವ್ಯಾಳಕ್ಕೆ ಒದಗಲಿಲ್ಲ
ಮದನನಯ್ಯ ಮಧುಸೂದನ ಎನ್ನಲು
ಮುದದಿಂದಲಿ ಬಂದೊದಗಿದೆ ಕೃಷ್ಣಾ
೨೩೯

೩೦೧. **ವರಾಹ (ಹಂದಿ):**
ಆದಿವರಾಹನ ಚೆಲುವಪಾದವ ಕಾಣದೆ ಕಣ್ಣು
ವೇದನೆಯಾಗಿ ಒಳ ಭಾದಿಸುತಲಿದೆ ಎನ್ನ
ಈ ಧರಣಿ ಮುಳುಗೆ ಶುಕ್ಲನದಿಯ ದಕ್ಷಿಣದಲ್ಲಿದ್ದ
ಮೇದಿನಿ ಕೋರೆದಾಡೆಲೆತ್ತಿದಂಥ
೨೩೯

೩೦೨. **ಧಣಿ:**
ದಣಿಯ ನೋಡಿದೆನೋ ವೆಂಕಟನ ಮನ
ದಣಿಯ ನೋಡಿದೆ, ಶಿಖಾಮಣಿಯ ನಿರ್ಮಲನ
ಕೇಸಕ್ಕಿ ಅನ್ನತಿಂಬುವನ, ಬಡ್ಡಿ, ಕಾಸುಬಿಡದೆ ಹೊನ್ನು
ಬಳಸಿಕೊಂಬುವನ ೨೪೦

ದೋಸೆ ಅನ್ನ ಮಾರಿಸುವನ ತನ್ನ
ದಾಸರ ಮೇಳದಿ ಕುಣಿದಾಡುತಿಹನ

೩೦೩ **ಯಮ:**
ಯಮನೆಲ್ಲೊ ಕಾಣೆನೆಂದ್ಹೇಳಬೇಡ
ಯಮನೆ ಶ್ರೀ ರಾಮನು ಸಂದೇಹಬೇಡ
ನಂಬಿದ ವಿಭೀಷಣಗೆ ರಾಮನಾದ
ನಂಬದಿದ್ದ ರಾವಣಗೆ ಯಮನಾದ
೨೪೦

೩೦೪. **ಮಾಯಾದೇವಿ:**
ಮರುಳು ಮಾಡಿದೆಯಲ್ಲೆ ಮಾಯಾದೇವಿಯೆ
ಇರಳು ಹಗಲು ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ
೨೪೧

೩೦೫. **ದೊರೆ:**
ಕಾರುಣ್ಯ ಮೂರುತಿಯೆ ಕಂಗಳು ಮೂರುಳ್ಳದೊರೆಯೆ
ಧಾರಿಣಿಯೊಳು ನಿನಗೆಣೆಯೆ ಗುರುದೇವ ಶಿಖಾಮಣಿಯ
೨೪೧

೩೦೬ **ಚೆಲುವ:**
ಎಂಥಾ ಚೆಲುವಗೆ ಮಗಳನು ಕೊಟ್ಟನು
ಗಿರಿರಾಜನು ನೋಡಮ್ಮಮ್ಮಾ
ಕಂತುಹರಶಿವ ಚೆಲುವನೆನ್ನುತ
ಮೆಚ್ಚಿದನು ನೋಡಮ್ಮಮ್ಮಾ
೨೪೨

೩೦೭ **ಮಗು:**
ಎನು ಮಾಡಲಿ ಈ ಮಗುವಿಗೆನಾಯಿತೋ ಇದ
ರಾಗಮ ಬಲ್ಲವರು ತಿಳಿದು ಹೇಳಿ
ಕಣ್ಣ ಮುಚ್ಚನು ಯಾರು ದೃಷ್ಟಿಗೊಂಡರೊ ಮೊಲೆಯ
ನುಣ್ಣನು ಇನ್ನಿರುಳು ಎರೆದ ನೀರು
ತಣ್ಣಗಾದುದೋ ಎನೊ ಘುರುಘುರನ್ನುತಲಿದೆ
ಚಿಣ್ಣನು ಆಯೆಂದ ಬಾಯ್ಮುಚ್ಚನಮ್ಮ
೨೪೨

೩೦೮. **ಅಣ್ಣ :**
ಎನಣ್ಣ ನಿನಗೇನಣ್ಣ
ಕಣ್ಣೇ ಕಣ್ಣ ಮಚ್ಚವೊಲ್ಲಣ್ಣ
ಎನಣ್ಣ ನಿನ್ನ ಗೋಳಣ್ಣ
ಕಣ್ಣಿಂದ ನೋಡವೊಲ್ಲ್ಯಣ್ಣ
೨೪೩

೩೦೯. **ಸಾಲ:**
ಭರದಿ ಕೇಳಲು ಜಲದಿ ಕಣ್ಣು ಬಾಯಿಬಿಡುತಾನೆ
ಕರುಬಿ ಕೇಳಲು ಕಲ್ಲು ಹೊತ್ತೈದಾನೆ
ಉರುಬಿ ಕೇಳಲು ಊರು ಅಡವಿಯೊಳಗಿರುತಾನೆ
ಇರುಳು ಹಗಲಲ್ಲಿ ಕಾಣಿಸಿಕೊಳ್ಳುತಾನೆ ೨೪೪

೩೧೦. **ಹೆಣ್ಣು:**
ಏನು ಮೆಚ್ಚಿದೆ ಎಲೆ ಹೆಣ್ಣೆ ಏನು ಮರುಳಾದೆಯೆ
ಏನು ಮೆಚ್ಚಿದೆಯಲೆ ಹೆಣ್ಣೆ
೨೪೫

೩೧೧. **ಧೊರೆ:**
ಕಾಡಿಬೇಡುವರಿಗೆ ಕೊಡಲಾರದೆ ಅಂಜಿ
ಓಡಿ ನೀರೊಳು ಸೇರಿಕೊಂಡೆ ಬೇಗ
ಹೇಡಿಯ ತೆರದಲಿ ಮೋರೆಯ ತೋರದೆ
ಓಡಿ ಅರಣ್ಯದಿ ಮೃಗಗಳ ಸೇರ್ದೆ
೨೪೫

೩೧೨. **ನಂಬಿಕೆ:**
ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಜಗದೊಳಗೆ ಒಬ್ಬರನು ಕಾಣೆ
೨೪೬

೩೧೩. **ಅಳು:**
ಅಳುವುದ್ಯಾತಕೊ ರಂಗ, ಅತ್ತರಂಜಿಪಗುಮ್ಮ
ಪುಟ್ಟಿದೇಳು ದಿವಸದಲಿ ದುಷ್ಟ ಪೂತನಿಯಕೊಂದೆ
ಮುಟ್ಟ ವಿಷದ ಮೊಲೆಯುಂಡ ಕಾರಣ
ದೃಷ್ಟಿ ತಾಕಿತೆ ನಿನಗೆ ರಂಗಯ್ಯ
೨೪೭

೩೧೪. **ಗುಮ್ಮ:**
ಗುಮ್ಮನ ಕರೆಯದಿರೆ ಅಮ್ಮ ನೀನು
ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು
ಮಮ್ಮು ಉಣ್ಣುತೆನೆ ಅಮ್ಮ ಅಳುವುದಿಲ್ಲ
೨೪೮

೩೧೫. **ಬೂಚಿ:**
ಬೂಚಿ ಬಂದಿದೆ ರಂಗ ಬೂಚಿಬಂದಿದೆ
ಚಾಚಿ ಕುಡಿದು ಸುಮ್ಮನೆ ನೀ
ಪಾಚಿಕೊಳ್ಳೊ ಕೃಷ್ಣಯ್ಯ
೨೪೮

೩೧೬ **ಬವ್ವ:**
ಬವ್ವ ಬಂದಿತಲ್ಲ ರಂಗಯ್ಯ, ಬವ್ವ ಬಂದಿತಲ್ಲ
ಬವ್ವ ನಿನ್ನ ಕಾಲು ಕಚ್ಚೀತೊ ಕೃಷ್ಣ
೨೪೯

೩೧೭ **ಕುಂದಣದರಗಿಣಿ:**
ಕಂದನ ಕಾಣಿರೇನೆ ಗೋಪಿಯ ಕಂದ
ಕಂದನಲ್ಲವೆ ಎನ್ನ ಕುಂದಣದರಗಿಣೆಯೆ
೨೫೦

೩೧೮. **ಗಜುಗ:**
ಗಜುಗವನಾಡುತಲಿರ್ದನು ನಮ್ಮ ರಂಗ
ವ್ರಜದ ಮಕ್ಕಳ ಕೂಡ ಹರುಷದಿಂದಲಿ ಬಲು
ಒಂದನ್ನೆ ಹಾಸಿದ ವೇಗದಿ ಮ ೨೫೦

ತ್ತೊಂದರಿಂದ ತಾ ಬಡೆದ
ಒಂದೆ ಬಾರಿಗೆ ಎಲ್ಲ ಗಜುಗವ ಗೆದ್ದನು.

೩೧೯. **ಪುಂಡ:**
ಇವನ ಹಿಡಿದುಕೊಂಡು ಹೋಗೆಲೊ ಜೋಗಿ
ಇವ ನಮ್ಮ ಮಾತು ಕೇಳದೆ ಪುಂಡನಾದ
೨೫೦

೩೨೦. **ಗಾಡಿಕಾರ:**
ಎಂಥ ಗಾಡಿಕಾರನೆ
ಕೃಷ್ಣಯ್ಯ ಇನ್ನೆಂಥ ಗಾಡಿಕಾರನೆ
ಕಂತು ಪಿತನು ವೇಲಾಪುರದ ಚೆನ್ನಿಗರಾಯ
ಎಂಥ ಗಾಡಿಕಾರನೆ
೨೫೧

೩೨೧. **ಚಂದ್ರಮ:**
ತಾರಮ್ಮಯ್ಯ ಯದುಕುಲ ವಾರಿಧಿ ಚಂದ್ರಮನ
ಮಾರಜನಕನ ಮೋಹನಾಂಗನ ಸೇರಿ ಸುಖಿಸಲು ಹಾರೈಸಿ
೨೫೨

೩೨೨. **ಹೆಣ್ಣು:**
ಇಂಥಾ ಹೆಣ್ಣಿನ ನಾನೆಲ್ಲಿ ಕಾಣೆನು ಹೊಂತಕಾರಿ ಕಾಣಿರೋ
ಸಂತತ ಸುರರಿಗೆ ಪಿಯೂಷ ಉಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ
೨೫೨

೩೨೩. **ಕನ್ನಿಕೆ:**
ಹೆಂಡಿರ ನಾಳುವಳೀ ಕನ್ನಿಕೆ
ಗಂಡನಿಲ್ಲದ ಹೆಂಗಸೀ ಕನ್ನಿಕೆ ೨೫೩

## ೫. ಸಾಂಸ್ಕೃತಿಕ ಮಹತ್ವ ಬೀರುವ ಪ್ರತಿಮೆಗಳು

ಕ್ರಸಂ ಪುಸಂ.

೩೨೪. **ಊರ ದೇವರು:**

ಊರದೇವರ ಮಾಡಬೇಕಣ್ಣ ತನ್ನೊಳಗೆ ತಾನೆ
ಊರದೇವರ ಮಾಡಿರೆಂದು ಸಾರುತಿದೆ ಶ್ರುತಿ ಇರುಳು ಹಗಲು
ದ್ವಾರಗಳೊಂಬತ್ತು ಮುಚ್ಚಿ ನಿಲ್ಲಿಸಿ ಭ್ರೂಮಧ್ಯದಲ್ಲಿ
ಎಷ್ಟು ಯುಗಗಳು ತಿರಿಹೋಯ್ತಣ್ಣ ದೇವರ ಮಾಡದೆ
ಕಷ್ಟದಿಂದೆ ನೊಂದೆ ಕಾಣಣ್ಣ.
ಅಷ್ಟ ದಳದ ಕಂಭ ನಿಲ್ಲಿಸಿ ಕಟ್ಟಿ ಚಕ್ರಂಗಳನ್ನು ಹಾಕಿ
ಸೃಷ್ಟಿದೇವರ ತಂದು ನಿಲ್ಲಿಸಿ ದುಷ್ಟ ಕೋಣನ ಶಿರವ ತಂದು

೨೫೭

೩೨೫. **ನಗಾರಿ:**

ಹೊಡಿ ನಗಾರಿ ಮೇಲೆ ಕೈಯ ಫಡ ಫಡ
ಹೊಡಿ ನಗಾರಿ ಮೇಲೆ ಕೈಯ

೨೫೮

೩೨೬ **ಡಂಗುರ:**

ಹೊಯ್ಯೋ ಹೊಯ್ಯೋ ಹೊಯ್ಯೋ ಡಂಗುರವ, ಜಗ
ದಯ್ಯನಯ್ಯ ಶ್ರೀ ಹರಿಯಲ್ಲದಿಲ್ಲವೆಂದು

೨೫೮

೩೨೭ **ಬುದ್ದಿಮಾತು:**

ಬುದ್ದಿ ಮಾತು ಹೇಳಿದರೆ ಕೇಳಬೇಕಮ್ಮ, ಮಗಳೆ
ಮನಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ

೨೬೦

೩೨೮. **ಧ್ಯಾನ:**

ಯಾಕೆನ್ನ ಎಬ್ಬಿಸಿದೆ ಶ್ರೀಹರಿಯ ಸೇವೆ ಧ್ಯಾನದ ಒಳಗಿದ್ದನೆ
ಉದಯಕಾಲಕೆ ಎದ್ದು ನದಿಯ ತೀರಕೆ ಹೋಗಿ ಮಲಮೂತ್ರಗಳನೆ ಮಾಡಿ
ಮೃತ್ತಿಕೆ ಶೌಚದಿಂ ಆತ್ಮ ಶುದ್ಧಿಯನೆ ಮಾಡಿ
ನದಿಯಲಿ ನಿಂತು ಸ್ತೋತ್ರಂಗಳನೆ ಮಾಡಿ
ಅರ್ಥಾಭಿಮಾನಿ ಪ್ರಾರ್ಥನಂಗಳನೆ ಮಾಡಿ
ಸ್ನಾನ ಸಂಧ್ಯಾನ ಜಪತಪಗಂಳನೆ ಮಾಡಿ
ಶ್ರೀ ಹರಿಯ ದ್ಯಾನದಲಿ ನಾ ಮನೆಗೆ ಬರುತಲಿದ್ದೆ.

೨೬೪

೩೨೯. **ಮುತ್ತೈದೆ:**

ಮುತ್ತೈದೆಯಾಗಿರಬೇಕು ಮುದದಿಂದಲಿ
ಗುರುವಿಂದ ಶಾಸ್ತ್ರವನು ಓದುವುದೇ ಮಾಂಗಲ್ಯ
ವೈರಾಗ್ಯವೆಂಬುದೆ ಒಪ್ಪುವ ಮೂಗುತಿ
ತಾರತಮ್ಯ ಜ್ಞಾನ ತಾಯಿತ್ತು ಮುತ್ತು ಸರ
ಕರುಣ ರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು

೨೬೬

೩೩೦. **ಅಳಿಯ:**

ಬಂದ ಮೊದಲ ಇತ್ತ ಬನ್ನಿ ಕುಳ್ಳಿರೆಂದು ಬಲು ಉಪಚರಿಸುವರು
ಅಂದಿನ ಮರುದಿನ ಬಂದ ಸ್ನೇಹಿತರನ್ನ ಕಂಡಂತೆ ಕಾಣುವರೊ ೨೬೬

ಬಂದ ಮೂವರಲ್ಲಿ ಪರದೇಶಿಯ ಕಂಡಂತೆ ಸಡ್ಡಮಾಡದೆ ಇಹರೊ
ಮುದದಿಂದ ನಾಲ್ಕು ದಿವಸ ಇದ್ದರೆ ಮಾನಭಂಗ ಮಾಡಿ ಮಾತಾಡುವರೋ

೩೩೧. **ವೈದಿಕ ಗಂಡ:**

ಒಲ್ಲೆನೆ ವೈದಿಕ ಗಂಡನ ನಾ
ನೆಲ್ಲಾದರು ನೀರು ಧುಮುಕುವೆನಮ್ಮ
ಉಟ್ಟೆನೆಂದರೆ ಇಲ್ಲ ತೊಟ್ಟನೆಂದರೆ ಇಲ್ಲ
ಕೆಟ್ಟ ಸೀರೆಯ ನಾ ಉಡಲಾರೆನೆ
ಹಿಟ್ಟು ತೊಳೆಸಿ ಎನ್ನರಟ್ಟೆಲ್ಲ ನೊಂದವು
ಎಷ್ಟಂತ ಹೇಳಲಿ ಕಷ್ಟದ ಒಗೆತನ

೨೬೭

೩೩೨. **ಮುಪ್ಪಿನ ಗಂಡ:**

ಮುಪ್ಪಿನ ಗಂಡನ ಒಲ್ಲೆನೆ
ತಪ್ಪದೆ ಪಡಿಪಾಟ ಪಡಿಲಾರೆನಮ್ಮ
ಉದಯಲೇಳಬೇಕು ಉದಕ ಕಾಸಲು ಬೇಕು
ಹದನಾಗಿ ಬಜೆಯನು ಅರೆಗಿಡಬೇಕು
ಬದಿಯಲಿ ಎಲೆ ಅಡಿಕೆ ಕುಟ್ಟಡಬೇಕು
ಬಿದರ ಕೋಲು ತಂದು ಮುಂದಿಡಬೇಕು ೨೬೭

## ಗ್ರಂಥ ಋಣ


೧. ಅಂಗಡಿ.ಎಸ್.ಎಸ್, ದಾಸ ಸಾಹಿತ್ಯ ಶಬ್ದಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ ೨೦೦೫.

೨. ಅಂಗಡಿ ಎಸ್.ಎಸ್, ಜನಪದ ಸಾಹಿತ್ಯ ಭಾಷೆ, ವಿಕಾಸ ಪ್ರಕಾಶನ, ಹೊಸಪೇಟೆ ೨೦೦೮.

೩. ಅಂಗಡಿ ಎಸ್.ಎಸ್, ವಚನ ಸಾಹಿತ್ಯ ಛಂದೋಲಯ, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ ೨೦೦೮.

೪. ಅಪ್ಪಣ್ಣಾಚಾರ್ಯ.ಕೆ, ಕನಕದಾಸರು ಅವರ ಸಾಹಿತ್ಯ ಸಮೀಕ್ಷೆ, ತಿರುಪತಿ–ತಿರುಮಲೆ, ದೇವಸ್ಥಾನಗಳ ಸಮಿತಿ, ತಿರುಪತಿ ೧೯೯೩.

೫. ಅಮರೇಶ ನುಗಡೋಣಿ, ಕನ್ನಡ ಅಧ್ಯಯನ ಸಂ–೧೨, ಸಂಚಿಕೆ–೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೦೭

೬ ಅರಳು ಮಲ್ಲಿಗೆ ಪಾರ್ಥಸಾರಥಿ, ಪುರಂದರ ಸಾಹಿತ್ಯ ಸಂಪುಟ–೨, ಹರಿದಾಸ ಅಕಾಡೆಮಿ, ಬೆಂಗಳೂರು–೨೦೦೦.

೭ ಕುಲಕರ್ಣಿ ಆರ್.ಎಚ್, ಪುರಂದರ ಪರಿಮಳ, ಸಮಾಜ ಪುಸ್ತಕಾಲಯ ಧಾರವಾಡ.

೮. ಕುವೆಂಪು, ತಪೋನಂದನ, ಉದಯರವಿ ಪ್ರಕಾಶನ, ಮೈಸೂರು ೨೦೦೫.

೯. ಕುವೆಂಪು ರಸೋವೈಸಃ , ಉದಯರವಿ ಪ್ರಕಾಶನ ಮೈಸೂರು ೧೯೯೨.

೧೦. ಕೃಷ್ಣ ಕೋಲ್ಹಾರ ಕುಲಕರ್ಣಿ ಕಾಖಂಡಕಿ ಶ್ರೀ. ಮಹಿಪತಿದಾಸರು [ಚರಿತ್ರೆ ಮತ್ತು ಕೃತಿಗಳ ಅಧ್ಯಾಯನ], ಮರಾಠಿ–ಕನ್ನಡ ಸ್ನೇಹವರ್ಧನ ಕೇಂದ್ರ ಪುಣೆ–೧೯೮೯.

೧೧. ಕೃಷ್ಣನ್‌ನಾಯರ.ಪಿವಿ ಆಧುನಿಕ ಭಾವಭೋಧ, ಲೋಕಭಾರತ ಪ್ರಕಾಶನ, ಇಲಾಹಾಬಾದ–೨೦೦೮.

೧೨. ಗುಡಿ.ಆರ್.ಜಿ., ದಾಸಸಾಹಿತ್ಯ ಒಂದು ಸೈದ್ಧಾಂತಿಕ ಆಧ್ಯಯನ ಶ್ರೀನಿಧಿ ಪ್ರಕಾಶನ, ಅಥಣಿ–೧೯೯೪.

೧೩ ಗುಂಡೂರಾವ್. ಮು. ಶ್ರೀ. ಶ್ರೀಮನ್ಮಧ್ವ ಮತತತ್ವ ಸುಧಾ, ಶ್ರೀಹರಿವಿಠಲ ಪ್ರಕಾಶನ, ಬೆಂಗಳೂರು–೧೯೮೪.

೧೪. ಗೋಕುಲನಾಥ.ಕೆ ಶ್ರೀ.ವಿಜಯದಾಸರು, ಸಿಂಧುಶಯನ ಪ್ರಕಾಶನ, ಬೆಂಗಳೂರು–೧೯೭೮.

೧೫. ಗೋಕುಲನಾಥ.ಕೆ.ಶ್ರೀ. ವ್ಯಾಸರಾಯರು, ಜೀವನ ಮತ್ತು ಕೃತಿಗಳ ಸಮೀಕ್ಷೆ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ–೨೦೦೨.

೧೬ ಚನ್ನವೀರಪ್ಪ.ಎಸ್.ಆರ್, ಮುಕ್ತಿಯ ಪರಿಕಲ್ಪನೆ, ಪ್ರ.ಕ.ವಿ.ವಿ ಹಂಪಿ–೨೦೦೬

೧೭ ಚಂದ್ರ ಪೂಜಾರಿ.ಎಂ. ಸಮಾಜ ಸಂಶೋಧನೆ, ಪ್ರ.ಕ.ವಿ.ವಿ. ಹಂಪಿ–೨೦೦೫.

೧೮. ಚಿದಂಬರ ದೀಕ್ಷಿತ್, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–೧೯೯೯.

೧೯. ಜಯಲಕ್ಷ್ಮೀಮಂಗಳಮೂರ್ತಿ, ಹೈದರಾಬಾದ್ ಕರ್ನಾಟಕದ ಆಧುನಿಕ ದಾಸಸಾಹಿತ್ಯ, ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾ ಸಂಸ್ಥಾನ, ಶ್ರೀರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ–೨೦೦೪.

೨೦. ಜಕಬಾಳ.ಎಸ್.ಎಸ್. ಕನಕದಾಸರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ದಿವಾಣಜಿ.ವಿ.ಎ ಪ್ರಸಾದಯೋಗ ಉಷಾಸಾಹಿತ್ಯ ಮಾಲೆ, ಮೈಸೂರು–೧೯೭೨.

೨೨. ದೊಡ್ಡರಂಗೇಗೌಡ, ನವೋದಯ ಕಾವ್ಯ, ಅಖಿಲು ಸೇವಾ ಸಂಸ್ಥೆ, ಬೆಂಗಳೂರು –೨೦೦೦.

೨೩. ನರಸಿಂಹಮೂರ್ತಿ.ಕೆ, ಪಾಶ್ಚಾತ್ಯ ಸಾಹಿತ್ಯ ವಿಚಾರ, ವಸಂತ ಪ್ರಕಾಶನ, ಬೆಂಗಳೂರು–೨೦೦೦.

೨೪. ನರಸಿಂಹಮೂರ್ತಿ.ಎಚ್.ವಿ. ಸಂಸ್ಕೃತಸಂಪದ, ಪ್ರಚೇತ ಬುಕ್ ಹೌಸ್, ಬೆಂಗಳೂರು–೨೦೦೬

೨೫. ನಾಗರತ್ನಟಿ.ಎನ್. ಹರಿದಾಸ ವಾಙ್ಮಯ, ಪ್ರಬಂಧಸಂಕಲನ ಗಾನಭಾರತಿ, ಮೈಸೂರು–೧೯೮೫.

೨೬ ನಾಗರತ್ನ ಟಿ.ಎನ್. ಹರಿದಾಸರ ಭಕ್ತಿಸ್ವರೂಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು–೧೯೮೯

೭೭ ನಾವಡ.ಎ.ವಿ ಹರಿದಾಸರ ಪಾಂಡುರಂಗ ವಿಠಲ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೫.

೨೮. ನಾವಡ.ಎ.ಬಿ, ವಾದಿರಾಜರ ಶ್ರೀ.ಕೃಷ್ಣಬಾಲಲೀಲೆ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೫.

೨೯. ನಾವಡ.ಎ.ಬಿ, ದಾಸಮಾರ್ಗ ಜಗದ್ಗುರು, ಶ್ರೀ.ಮನ್ಮಧ್ವಾಚಾರ್ಯ ಮೂಲಸಂಸ್ಥಾನ, ಶ್ರೀ. ರಾಘವೇಂದ್ರ ಸ್ವಾಮಿಗಳರವರ ಮಠ, ಮಂತ್ರಾಲಯ–೨೦೦೪.

೩೦. ಪಂಢರಿನಾಥಾಚಾರ್ಯ ಗಲಗಲಿ: ಶ್ರೀ. ಹರಿವಂಶ ಮಹಾಪುರಾಣ, ಪ್ರಕಾಶಕರು ಪಂ.ಕೂ.ಗಲಗಲಿ, ಹುಬ್ಬಳ್ಳಿ.

೩೧. ಬಸವರಾಜ ಸಬರದ, ಬಸವೇಶ್ವರ ಮತ್ತು ಪುರಂದರದಾಸ, ಶ್ರೀತರಳಬಾಳು ಜಗದ್ಗುರು ಬ್ರಹನ್ಮಠ, ಸಿರಿಗೇರೆ, ಚಿತ್ರದುರ್ಗ ಜಿಲ್ಲೆ–೧೯೯೩.

೩೨. ಬಸವರಾಜ ಸಬರದ, ಸಾಹಿತ್ಯ ಸಂಗತಿ, ಪಲ್ಲವಿ ಪ್ರಕಾಶನ, ಗುಲಬರ್ಗಾ.

೩೩. ಬುರ್ಲಿ ಬಿಂದುಮಾಧವ (ಸಂ) ಶ್ರೀ. ಪುರಂದರದಾಸರು, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ–೧೯೯೪.

೩೪. ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚೂರಾಯ (ಸಂ) ಶ್ರೀ. ಪುರಂದರ ಸಾಹಿತ್ಯ ೬ ಸಂಪುಟಗಳು. ಶ್ರೀ. ಪುರಂದರದಾಸರ ೪೦೦ ನೇ ವರ್ಷದ ಉತ್ಸವ ಮಂಡಲ, ಧಾರವಾಡ ೧೯೬೪ ರಿಂದ ೧೯೬೬

೩೫. ಬೇಲೂರು ಕೇಶವದಾಸರು, ಕರ್ನಾಟಕ ಭಕ್ತ ವಿಜಯ, ನವಭಾರತಿ ಪ್ರಕಾಶನ, ಮೈಸೂರು–೨೦೦೭

೩೬ ಬೇಂದ್ರೆ.ದ.ರಾ, ಸಖೀಗೀತ, ಶ್ರೀ. ಮಾತಾ ಪ್ರಕಾಶನ, ಹುಬ್ಬಳ್ಳಿ–೨೦೦೩

೩೭ ಭೈರಪ್ಪ.ಎಸ್.ಎಲ್, ಸಾಹಿತ್ಯ ಮತ್ತು ಪ್ರತೀಕ, ಸಾಹಿತ್ಯ ಭಂಡಾರದ ಪ್ರಕಾಶನ, ಬೊಂಗಳೂರು–೨೦೦೫.

೩೮. ಮಧುಕರ ಯಕ್ಕುಂಡಿ(ಸಂ)–ಪುರಂದರದಾಸ ಕೀರ್ತನ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು–೨೦೦೪.

೩೯. ಮಳಗಿ ಜಯತೀರ್ಥಾಚಾರ್ಯ; ಹರಿದಾಸರ ಮುಂಡಿಗೆಗಳು ಭಾಗ–೧. ಶ್ರೀ. ಪುರಂದೋತ್ಸವ ಸಮಿತಿ,

ಧಾರವಾಡ–೨೦೦೩

೪೦. ಮಾನಕರಿ ಶ್ರೀನಿವಾಸಾಚಾರ್ಯ, ಹರಿದಾಸ ಸಾಹಿತ್ಯ ಶ್ರೀಮದ್ಭಾಗವತ, (ಋಣಮತ್ತು ವೃದ್ಧಿ) ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಸಂಸ್ಥಾನ ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ–೨೦೦೬

೪೧. ಮಾನಕರಿ ಶ್ರೀನಿವಾಸಾಚಾರ್ಯ, ಈಸಬೇಕು ಇದ್ದು ಜಯಿಸಬೇಕು, ಅಧ್ಯಯನ ವಿಭಾಗ ಶ್ರೀಹರಿದಾಸ ವಿಧ್ಯಾನಿಲಯ, ಬಳ್ಳಾರಿ–೨೦೦೪.

೪೨. ಮಿತ್ರ ಅ.ರಾ., ಪುರಂದರದಾಸರ ಪದಗಳಲ್ಲಿ ಸಾಹಿತ್ಯ ವಿಮರ್ಶೆ, ಪುರಂದರ ಸಾಹಿತ್ಯದರ್ಶನ, ಸಂ–೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–೧೯೮೫.

೪೩ ಮಿತ್ರ ಅ.ರಾ. ವಚನಕಾರರು ಮತ್ತು ಶಬ್ದಶಿಲ್ಪ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೨೦೦೪.

೪೪. ಮುಗಳಿ ರಂ. ಶ್ರೀ. ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು–೨೦೦೯.

೪೫. ಮುಗಳಿ ರಂ. ಶ್ರೀ ಕನ್ನಡ ಸಾಹಿತ್ಯ ಚರಿತ್ರೆ ಮುಂದುವರಿಕೆ (ಸಂ) ಡಾ: ಶೀನಿವಾಸ, ಹಾವನೂರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೬

೪೬ ಮುರಳಿಧರ. ಎಚ್.ಎನ್ ತಂಬೂರಿ ಮೀಟಿದವ', ಅಂಕಿತ ಪುಸ್ತಕ, ಬೆಂಗಳೂರು–೨೦೦೫.

೪೭ ರಾಜಗೋಪಾಲಾಚಾರ್ಯ ಎಂ. ಹರಿದಾಸರ ಸಂಪ್ರದಾಯದ ಹಾಡುಗಳು ಸ್ವರ ಸಂಚಾರ, ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ ಎಮ್.ಸಿ.ಎಮ್ ಕಾಲೇಜ್, ಉಡುಪಿ–೧೯೯೨.

೪೮. ರಾಮಚಂದ್ರರಾವ್.ಎಸ್.ಕೆ, ದಾಸ ಸಾಹಿತ್ಯ ಮತ್ತು ಸಂಸ್ಕೃತಿ, ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೩.

೪೯. ರಾಮಚಂದ್ರರಾವ್.ಎಸ್.ಕೆ., ಪುರಂದರ ಸಾಹಿತ್ಯ ದರ್ಶನ (ನಾಲ್ಕು ಸಂಪುಟಗಳು) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೫೦. ರಾಜಶ್ರೀ ರಾಮಕೃಷ್ಣರಾವ್ ಹರಿದಾಸರ ಬಯಲಾಟಗಳು ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ–೨೦೦೫.

೫೧. ಲಕ್ಕಪ್ಪಗೌಡ.ಎಚ್.ಕೆ., ಸಾಹಿತ್ಯ ಬಹುಮುಖಿ ಚಿಂತನೆ, ಸಿ.ವಿ.ಜಿ ಪ್ರಕಾಶನ, ಬೆಂಗಳೂರು–೨೦೦೩.

೫೨. ವರದರಾಜರಾವ್.ಜಿ. ಪುರಂದರದಾಸರು, ಸಾಹಿತ್ಯ ಅಕಾಡೆಮಿ, ಹೊಸದೇಹಲಿ–೧೯೮೩.

೫೩. ವಾಸುದೇವ ಅಗ್ನಿಹೋತ್ರಿ, ಶ್ರೀ. ಪುರಂದರದಾಸರು ಮತ್ತು ಶ್ರೀಮದ್ಭಾಗವತ ಸಂಸ್ಕೃತಿ ಪ್ರಕಾಶನ, ಸೇಡಮ್–೨೦೦೪.

೫೪. ವಾಸುದೇವ ಅಗ್ನಿಹೋತ್ರಿ, ಅನ್ವಯಿಕ ದಾಸಸಾಹಿತ್ಯ, ಸಂಸ್ಕೃತಿ ಪ್ರಕಾಶನ, ಸೇಡಂ, ಗುಲಬರ್ಗಾ–೨೦೦೫.

೫೫. ವಿವಿಧ ವಿದ್ವಾಂಸರು (ಸಂ) ಸಮಗ್ರದಾಸ ಸಾಹಿತ್ಯ (೧ ರಿಂದ ೩೫ ಸಂಪುಟಗಳು) ಕನ್ನಡ ಮತ್ತು

ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೫೬. ವಿಜಯೀಂದ್ರಾಚಾರ್ಯ (ಸಂ) ದಾಸಭಾರತಿ, ಶ್ರೀ. ಹರಿಭಜನಾ ಸಂಸತ್, ಶ್ರೀ.ಪೇಜಾವರ ಅದೋಕ್ಷಜ ಮಠ, ಉಡುಪಿ–೨೦೦೦.

೫೭ ವಿಠಲ ಗಾಯಕ್ವಾಡ, ವಿಠಲ ಸಂಪ್ರದಾಯ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ–೨೦೦೫.

೫೮. ವಿಜಯ ಸಿಂಹಾಚಾರ್ಯ.ಆರ್. ಭಾರತ ತತ್ವದರ್ಶನಗಳ ಸಮೀಕ್ಷಾ ಶ್ರೀ.ಪಾದರಾಜ ಮಠ, ಮುಳಬಾಗಿಲು–೨೦೦೨.

೫೯. ವೇದವ್ಯಾಸಾಚಾರ್ಯ.ಎಚ್.ಕೆ. ಕರ್ನಾಟಕದ ಹರಿದಾಸರು, ಶ್ರೀ.ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು–೧೯೬೫.

೬೦. ವೆಂಕಟೇಶ ಮೂರ್ತಿ.ಎಚ್.ಎಸ್. ಕೀರ್ತನಕಾರರು (ಸಂ–೮) ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೧೯೭೫.

೬೧. ಶಿವರುದ್ರಪ್ಪ ಜಿ.ಎಸ್.ಕಾವ್ಯಾರ್ಥಚಿಂತನ, ಪ್ರೀಯದರ್ಶಿನಿ ಪ್ರಕಾಶನ, ಬೆಂಗಳೂರು–೨೦೦೫.

೬೨. ಶಿವರುದ್ರಪ್ಪ.ಜಿ.ಎಸ್., ಕನ್ನಡ ಕಾವ್ಯತತ್ವ ಚಿಂತನೆ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೭

೬೩. ಶಿವಕುಮಾರ ಸ್ವಾಮಿಗಳು ಸಿದ್ದಗಂಗಾಮಠ ಮತ್ತು ಇತರರು (ಸಂ) ಶ್ರೀಬಸವೇಶ್ವರರು, ಶ್ರೀಬಸವೇಶ್ವರ, ೮ನೇ ಶತಮಾನೋತ್ಸವ ಸಮಿತಿ, ಬೆಂಗಳೂರು–೧೯೬೭

೬೪. ಶ್ರೀನಿವಾಸರಾವ್ ಕೊರಟಿ ಶ್ರೀ.ಪುರಂದರದಾಸರು ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು–೨೦೦೩.

೬೫. ಶೈಲಜಾಕೊಪ್ಪರ, ಶ್ರೀ. ಜಗನ್ನಾಥದಾಸರು, ಹೈದ್ರಾಬಾದ ಕರ್ನಾಟಕ ಅಭಿವೃದ್ಧಿ ವಿಭಾಗ ಶ್ರೀ. ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಂ–೨೦೦೬

೬೬ ಶ್ರೀ.ಶ್ರೀ. ಸತ್ಯಧ್ಯಾನತೀರ್ಥರು, ದ್ವೈತ ಸಿದ್ಧಾಂತ ವೈಜಂತೀ ಸತ್ಯಧ್ಯಾನ ವಿದ್ಯಾ ಪೀಠ, ಭೀಮಾನೀ ಸ್ಟ್ರೀಟ್, ಮಾತುಂಗಾ ಬಾಂಬೇ–೧೯೩೨.

೬೭ ಸೀತಾರಾಮಯ್ಯ.ವಿ., ಶ್ರೀ ಪುರಂದರದಾಸರು, ನ್ಯಾಷನಲ್ ಬುಕ್ ಟ್ರಸ್ಟ, ಇಂಡಿಯಾ–೧೯೯೫.

೬೮. ಸಿದ್ದಲಿಂಗಯ್ಯ.ಜಿ.ಎಸ್., ಹರಿದಾಸ ಸಾಹಿತ್ಯ ಪರಂಪರೆ, ಭಾರತೀಯ ವಿಧ್ಯಾಭವನ, ಬೆಂಗಳೂರು–೧೯೭೨.

೬೯. ಸುಮನ್ ಯೆಜರ್ವೇದಿ, ಶ್ರೀ. ಪ್ರಾಣೇಶದಾಸರು' ಸಂಸ್ಕೃತಿ ಪ್ರಕಾಶನ, ಗುಲಬರ್ಗಾ–೨೦೦೫.

೭೦ A comparative study of Sharana & Dasa Dr. P.S. Srinivas, University of Madras-1981.

**ಲೇಖನಗಳು:**

೧) ಡಾ: ಶೀಲಾದಾಸ್: 'ಉಗಾಬೋಗಗಳು' ರಾಯಚೂರವಾಣಿ ಪತ್ರಿಕೆ, ರಾಯಚೂರು-೨೦೦೭

೨) ಸುಪ್ರಿಯಾ ಕಾಡ್ಲೂರ್: ಶ್ರೀ ಪುರಂದರದಾಸರು, ಧರ್ಮಸಂದೇಶ, ಡಿಸೆಂಬರ ೨೦೦೮ ಸರ್ವಜ್ಞ ಪಿದ್ಯಾಪೀಠ ವಿರಾರ, ಠಾಣೆ, ಬಾಂಬೆ.

೩) ಸುಪ್ರಿಯಾ ಕಾಡ್ಲೂರ್: ಹರಿದಾಸ ಸಾಹಿತ್ಯದಲ್ಲಿ ನೀತಿ ವಾಕ್ಯಗಳು ವಿಜಯ ಸಂಪದ ಅಗಷ್ಟ-೨೦೦೯. ಶ್ರೀ.ರಾಘವೇಂದ್ರ ಸ್ವಾಮಿಗಳವರ ಮಠ, ಬೆಂಗಳೂರು.

೪) ಡಾ: ಸ್ವಾಮಿರಾವ ಕುಲಕರ್ಣಿ, ಕೀರ್ತನೆಗಳಲ್ಲಿ ಅನುಭಾವ ವಿಜಯ ಸಂಪದ, ಮಾರ್ಚ ೨೦೧೦ ಶ್ರೀ ರಾಘವೇಂದ್ರಸ್ವಾಮಿಗಳವರ ಮಠ, ಬೆಂಗಳೂರು.

**ನಿಘಂಟುಗಳು:**

೧. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೧.

೨. ಸಂಸ್ಕೃತ-ಕನ್ನಡ ನಿಘಂಟು, ಜಿ.ಎನ್ ಚಕ್ರವರ್ತಿ ಗೀತಾಬುಕ್ ಹೌಸ್, ಮೈಸೂರು.

